# ಆಧುನಿಕ ಸಾಹಿತ್ಯದಲ್ಲಿ ಕನ್ನಡ ರಾಷ್ಟ್ರೀಯತಾ ಚಿಂತನೆಯ ಆಯಾಮಗಳು

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ

ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕ

ವೆಂಕಟೇಶಯ್ಯ ನೆಲ್ಲುಕುಂಟೆ

ಮಾರ್ಗದರ್ಶಕರು

ಡಾ. ರಹಮತ್ ತರೀಕೆರೆ

ಪ್ರಾಧ್ಯಾಪಕರು



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೮

# ಆಧುನಿಕ ಸಾಹಿತ್ಯದಲ್ಲಿ ಕನ್ನಡ ರಾಷ್ಟ್ರೀಯತಾ ಚಿಂತನೆಯ ಆಯಾಮಗಳು

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ


ಸಂಶೋಧಕ

ವೆಂಕಟೇಶಯ್ಯ ನೆಲ್ಲುಕುಂಟೆ

ಮಾರ್ಗದರ್ಶಕರು

ಡಾ. ರಹಮತ್ ತರೀಕೆರೆ

ಪ್ರಾಧ್ಯಾಪಕರು








ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩ ೨೭೬

೨೦೦೮

## ಸಂಶೋಧಕರ ಪ್ರಮಾಣ ಪತ್ರ

'ಆಧುನಿಕ ಸಾಹಿತ್ಯದಲ್ಲಿ ಕನ್ನಡ ರಾಷ್ಟ್ರೀಯತಾ ಚಿಂತನೆಯ ಆಯಾಮಗಳು' ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ. ಪದವಿಗಾಗಿ ಡಾ.ರಹಮತ್ ತರೀಕೆರೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ವೆಂಕಟೇಶಯ್ಯ ನೆಲ್ಲುಕುಂಟೆ
ಸಂಶೋಧಕ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ :

ಸ್ಥಳ : ವಿದ್ಯಾರಣ್ಯ

## ಮಾರ್ಗದರ್ಶಕರ ಪ್ರಮಾಣ ಪತ್ರ

ವೆಂಕಟೇಶಯ್ಯ ನೆಲ್ಲುಕುಂಟೆ ಇವರು 'ಆಧುನಿಕ ಸಾಹಿತ್ಯದಲ್ಲಿ ಕನ್ನಡ ರಾಷ್ಟ್ರೀಯತಾ ಚಿಂತನೆಯ ಆಯಾಮಗಳು' ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ರಹಮತ್ ತರೀಕೆರೆ
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ :

ಸ್ಥಳ : ವಿದ್ಯಾರಣ್ಯ

ಪರಿವಿಡಿ

ಅಧ್ಯಾಯ ೧

ಅಧ್ಯಯನದ ಉದ್ದೇಶ ಮತ್ತು ಮಹತ್ವ ಪುಟ ೧ ರಿಂದ ೨೪

೧.೧ ಪ್ರಸ್ತಾವನೆ
೧.೨ ಅಧ್ಯಯನದ ಉದ್ದೇಶ ಮತ್ತು ಮಹತ್ವ
೧.೩ ಅಧ್ಯಯನದ ವ್ಯಾಪ್ತಿ ಮತ್ತು ಆಕರಗಳು
೧.೪ ಅಧ್ಯಯನ ವಿಧಾನ
೧.೫ ಹಿಂದಿನ ಅಧ್ಯಯನಗಳ ಸಮೀಕ್ಷೆ
೧.೬ ಪರಿಕಲ್ಪನಾತ್ಮಕ ಚರ್ಚೆ

ಅಧ್ಯಾಯ ೨ ಪುಟ ೨೫ ರಿಂದ ೫೭

ಕನ್ನಡ ರಾಷ್ಟ್ರೀಯತೆ : ಭೂಪ್ರದೇಶ ಕುರಿತ ಚಿಂತನೆ

೨.೧ ಪೀಠಿಕೆ
೨.೨ ಆಲೂರರ ಚಿಂತನೆಗಳು
೨.೩ ಬಿ.ಎಂ.ಶ್ರೀಯವರ ಚಿಂತನೆಗಳು
೨.೪ ಶಂಬಾ ಜೋಶಿಯವರ ಚಿಂತನೆಗಳು
೨.೫ ಕುವೆಂಪುರವರ ಚಿಂತನೆಗಳು
೨.೬ ಚಿದಾನಂದ ಮೂರ್ತಿಯವರ ಚಿಂತನೆಗಳು
೨.೭ ಕರ್ನಾಟಕ ವಿಮೋಚನಾ ರಂಗದ ನಿಲುವುಗಳು
೨.೮ ಚಿಂತನೆಗಳ ತೌಲನಿಕ ಸಮೀಕ್ಷೆ

ಅಧ್ಯಾಯ ೩ ಪುಟ ೫೮ ರಿಂದ ೮೯

ಕನ್ನಡ ರಾಷ್ಟ್ರೀಯತೆ : ಭಾಷಾಚಿಂತನೆ

೩.೧ ಪೀಠಿಕೆ
೩.೨ ಆಲೂರು ವೆಂಕಟರಾಯರ ಚಿಂತನೆಗಳು
೩.೩ ಬಿ.ಎಂ.ಶ್ರೀಯವರ ಚಿಂತನೆಗಳು
೩.೪ ಶಂಬಾ ಜೋಶಿಯವರ ಚಿಂತನೆಗಳು
೩.೫ ಕುವೆಂಪುರವರ ಚಿಂತನೆಗಳು
೩.೬ ಚಿದಾನಂದ ಮೂರ್ತಿಯವರ ಚಿಂತನೆಗಳು
೩.೭ ಕರ್ನಾಟಕ ವಿಮೋಚನಾ ರಂಗದ ನಿಲುವುಗಳು
೩.೮ ಚಿಂತನೆಗಳ ತೌಲನಿಕ ಸಮೀಕ್ಷೆ

ಅಧ್ಯಾಯ ೪ ಪುಟ ೯೦ ರಿಂದ ೧೨೮

ಕನ್ನಡ ರಾಷ್ಟ್ರೀಯತೆ : ಚರಿತ್ರೆ ಕುರಿತ ಚಿಂತನೆ

೪.೧ ಪೀಠಿಕೆ
೪.೨ ಆಲೂರು ವೆಂಕಟರಾಯರ ಚಿಂತನೆಗಳು

೪.೩ ಬಿ.ಎಂ.ಶ್ರೀಯವರ ಚಿಂತನೆಗಳು
೪.೪ ಶಂಬಾ ಜೋಶಿಯವರ ಚಿಂತನೆಗಳು
೪.೫ ಕುವೆಂಪುರವರ ಚಿಂತನೆಗಳು
೪.೬ ಚಿದಾನಂದ ಮೂರ್ತಿಯವರ ಚಿಂತನೆಗಳು
೪.೭ ಕರ್ನಾಟಕ ವಿಮೋಚನಾ ರಂಗದ ನಿಲುವುಗಳು
೪.೮ ಚಿಂತನೆಗಳ ತೌಲನಿಕ ಸಮೀಕ್ಷೆ

ಅಧ್ಯಾಯ ೫ ಪುಟ ೧೨೯ ರಿಂದ ೧೬೨
ಕನ್ನಡ ರಾಷ್ಟ್ರೀಯತೆ : ಧರ್ಮ ಕುರಿತ ಚಿಂತನೆ
೫.೧ ಪೀಠಿಕೆ
೫.೨ ಧರ್ಮ ಕುರಿತಂತೆ ಆಲೂರು ವೆಂಕಟರಾಯರ ಚಿಂತನೆಗಳು
೫.೩ ಧರ್ಮ ಕುರಿತಂತೆ ಬಿ.ಎಂ.ಶ್ರೀಯವರ ಚಿಂತನೆಗಳು
೫.೪ ಧರ್ಮ ಕುರಿತಂತೆ ಶಂಬಾ ಜೋಶಿಯವರ ಚಿಂತನೆಗಳು
೫.೫ ಧರ್ಮ ಕುರಿತಂತೆ ಕುವೆಂಪುರವರ ಚಿಂತನೆಗಳು
೫.೬ ಧರ್ಮ ಕುರಿತಂತೆ ಚಿದಾನಂದ ಮೂರ್ತಿಯವರ ಚಿಂತನೆಗಳು
೫.೭ ಧರ್ಮ ಕುರಿತಂತೆ ಕರ್ನಾಟಕ ವಿಮೋಚನಾ ರಂಗದ ನಿಲುವುಗಳು
೫.೮ ಚಿಂತನೆಗಳ ತೌಲನಿಕ ಸಮೀಕ್ಷೆ

ಅಧ್ಯಾಯ ೬ ಪುಟ ೧೬೩ ರಿಂದ ೧೯೯
ಕನ್ನಡ ರಾಷ್ಟ್ರೀಯತೆ : ಸಂಸ್ಕೃತಿ ಚಿಂತನೆ
೬.೧ ಪೀಠಿಕೆ
೬.೨ ಆಲೂರು ವೆಂಕಟರಾಯರ ಚಿಂತನೆಗಳು
೬.೩ ಬಿ.ಎಂ.ಶ್ರೀಯವರ ಚಿಂತನೆಗಳು
೬.೪ ಶಂಬಾ ಜೋಶಿಯವರ ಚಿಂತನೆಗಳು
೬.೫ ಕುವೆಂಪುರವರ ಚಿಂತನೆಗಳು
೬.೬ ಚಿದಾನಂದ ಮೂರ್ತಿಯವರ ಚಿಂತನೆಗಳು
೬.೭ ಕರ್ನಾಟಕ ವಿಮೋಚನಾ ರಂಗದ ನಿಲುವುಗಳು
೬.೮ ಚಿಂತನೆಗಳ ತೌಲನಿಕ ಸಮೀಕ್ಷೆ

ಅಧ್ಯಾಯ ೭ ಸಮಾರೋಪ ಪುಟ ೨೦೦ ರಿಂದ ೨೧೧
೭.೧ ಅಧ್ಯಯನದ ಮುಖ್ಯ ಫಲಿತಗಳು
೭.೨ ಅಧ್ಯಯನದ ಸಂದರ್ಭದಲ್ಲಿ ಎದುರಾದ ತೊಡಕು ಮತ್ತು ಬಿಡಿಸಿಕೊಂಡ ಬಗೆ
೭.೩ ಉಳಿದಿರುವ ಅಧ್ಯಯನ ಸಾಧ್ಯತೆಗಳು
ಗ್ರಂಥ ಸೂಚಿ ಪುಟ ೨೧೨ ರಿಂದ ೨೧೯
ಅನುಬಂಧ - ನಕ್ಷೆಗಳು ಪುಟ ೨೨೦ ರಿಂದ ೨೨೬

ಅಧ್ಯಾಯ ೧

## ಅಧ್ಯಯನದ ಉದ್ದೇಶ ಮತ್ತು ಮಹತ್ವ

೧.೧ ಪ್ರಸ್ತಾವನೆ

೧.೨ ಅಧ್ಯಯನದ ಉದ್ದೇಶ ಮತ್ತು ಮಹತ್ವ

೧.೩ ಅಧ್ಯಯನದ ವ್ಯಾಪ್ತಿ ಮತ್ತು ಆಕರಗಳು

೧.೪ ಅಧ್ಯಯನ ವಿಧಾನ

೧.೫ ಹಿಂದಿನ ಅಧ್ಯಯನಗಳ ಸಮೀಕ್ಷೆ

೧.೬ ಪರಿಕಲ್ಪನಾತ್ಮಕ ಚರ್ಚೆ

ಅಧ್ಯಾಯ ೧

# ಅಧ್ಯಯನದ ಉದ್ದೇಶ ಮತ್ತು ಮಹತ್ವ

## ೧.೧ ಪ್ರಸ್ತಾವನೆ

ರಾಷ್ಟ್ರ, ರಾಷ್ಟ್ರಪ್ರಭುತ್ವ, ರಾಷ್ಟ್ರೀಯತೆ, ರಾಷ್ಟ್ರೀಯವಾದಗಳೆಂಬ ಪರಿಕಲ್ಪನೆಗಳು ಜಗತ್ತಿನ ಚಿಂತನೆಗಳನ್ನು ದಟ್ಟವಾಗಿ ಆಕ್ರಮಿಸಿವೆ ಮತ್ತು ಸಂಕೀರ್ಣಗೊಳಿಸಿವೆ. ಒಂದಲ್ಲ ಒಂದು ರೀತಿಯಲ್ಲಿ ತನ್ನ ಸದಸ್ಯರ ಬದುಕನ್ನು ಈ ಪರಿಕಲ್ಪನೆಗಳು ನಿಯಂತ್ರಿಸುತ್ತಿವೆ. ಮನುಷ್ಯನ ರಾಜಕೀಯ ಇತಿಹಾಸದಲ್ಲಿ ಆಧುನಿಕ ಆವಿಷ್ಕಾರವಾದ ಈ ಚಿಂತನೆಗಳು ವಿಭಿನ್ನ ರೀತಿಯಲ್ಲಿ ಸಮುದಾಯಗಳನ್ನು ಒಂದು ಗೂಡಿಸಿವೆ. ಆದರೆ ಈ ಚಿಂತನೆಗಳನ್ನು ಕುರಿತು ಸಾರ್ವತ್ರಿಕ ಅಥವಾ ಸಾರ್ವಕಾಲಿಕವಾದ ವ್ಯಾಖ್ಯಾನ ಮಾಡಲು ಸಾಧ್ಯವಿಲ್ಲ. ರಚನಾತ್ಮಕವಾಗಿ ಆಂತರ್ಯದಲ್ಲಿ ಒಂದೇ ಆಗಿರುವಂತೆ ಕಂಡರೂ ಯೂರೋಪಿನ ಅನುಭವಗಳು ಮತ್ತು ಭಾರತದ ಅನುಭವಗಳು ಒಂದೇ ಅಲ್ಲ. ಪ್ರಜಾಪ್ರಭುತ್ವ, ರಾಜಪ್ರಭುತ್ವ, ರಾಜಪ್ರತಿನಿಧಿತ್ವ, ಫೆಡರಲ್‌ವಾದ, ಸಮಾಜವಾದ, ಸಮತಾವಾದ, ಮಾರ್ಕ್ಸ್‌ವಾದ, ಬಂಡವಾಳವಾದ, ವೈಚಾರಿಕವಾದ ಇತ್ಯಾದಿಯಾಗಿ ಸೈದ್ಧಾಂತಿಕ ತಳಹದಿಗಳ ಮೇಲೆ ಈ ಸಂರಚನೆಗಳು ನಿಂತಿವೆ. ಈ ಕಾರಣಕ್ಕೆ ಇವುಗಳ ನಡುವೆ ವೈವಿಧ್ಯತೆ ಇದೆ. ಇದಿಷ್ಟೇ ಅಲ್ಲದೆ ರಾಜಕೀಯಾರ್ಥಿಕ ಮತ್ತು ಸಮಾಜೋಧಾರ್ಮಿಕ ಆಯಾಮಗಳು ಸಹ ಸಮ್ಮಿಳನಗೊಂಡು ಈ ಚಿಂತನೆಗಳು ಇನ್ನಷ್ಟು ಸಂಕೀರ್ಣಗೊಂಡಿವೆ. ಈ ಪರಿಕಲ್ಪನೆಗಳನ್ನು ಆಯಾ ಸಮಾಜಗಳ ಸದಸ್ಯರೆಲ್ಲರೂ ಸಂಪೂರ್ಣ ಒಪ್ಪಿಕೊಂಡಿದ್ದಾರೆಂದು ಹೇಳಲು ಸಾಧ್ಯವಿಲ್ಲ. ಹತ್ತೊಂಬತ್ತನೆಯ ಶತಮಾನದ ಆರಂಭದಿಂದಲೂ ಜಾಗೃತಗೊಂಡ ಸಮಾಜಗಳಲ್ಲಿ ಅನೇಕ ವಿಚಾರವಂತ ಬುದ್ಧಿಜೀವಿಗಳುಈ ಪರಿಕಲ್ಪನೆಗಳನ್ನು ಹಿಂಸ್ರಕವೆಂದೂ ಜನಪೀಡಕವೆಂದೂ ಭಾವಿಸಿ ವಿರೋಧಿಸಿದ್ದಾರೆ. ಆದರೆ ಸದ್ಯದಲ್ಲಿ ಈ ಪರಿಕಲ್ಪನೆಗಳಿಗಿಂತ ಉತ್ತಮವಾದ ವ್ಯವಸ್ಥೆಗಳು ರೂಪುಗೊಳ್ಳದ ಕಾರಣಗಳಿಗಾಗಿ ಇವುಗಳೇ ಅಸ್ತಿತ್ವದಲ್ಲಿವೆ.

ಇಷ್ಟೇ ಅಲ್ಲದೆ ಅನೇಕ ರಾಷ್ಟ್ರೀಯತೆಗಳು ತಮ್ಮ ಚಹರೆ ಕಳೆದು ಹೋಗುತ್ತಿವೆಯೆಂದೂ, ತಾನು ಇನ್ನೊಂದರ ಅಧೀನ ತನ್ನ ಅನನ್ಯತೆಯನ್ನು ಒತ್ತೆ ಇಟ್ಟು ಗುಲಾಮಿ ಸದೃಶ ಜೀವನ ನಡೆಸುತ್ತಿದ್ದೇನೆ ಎಂದು ಭಾವಿಸಿ ಪ್ರತ್ಯೇಕತೆಗಾಗಿ ಒತ್ತಾಯಿಸುತ್ತಿವೆ. ಇಂಥ ಸಂಕೀರ್ಣ ಸಮಸ್ಯಾತ್ಮಕ ಪರಿಸ್ಥಿತಿಯಲ್ಲಿ, ರಾಷ್ಟ್ರ-ರಾಷ್ಟ್ರೀಯತೆಗಳನ್ನು ಕುರಿತಂತೆ ಕನ್ನಡ ಚಿಂತನೆಗಳು ಹೇಗೆ ಪ್ರತಿಕ್ರಿಯಿಸಿವೆ, ಎಂದು ತಿಳಿಯುವ ಆಸಕ್ತಿಯಿಂದ ಪ್ರಸ್ತುತ ಅಧ್ಯಯನವನ್ನು ಮಾಡಲಾಗಿದೆ.

## ೧.೨ ಅಧ್ಯಯನದ ಉದ್ದೇಶ ಮತ್ತು ಮಹತ್ವ

ಅಧ್ಯಯನದ ಮಹತ್ವ ಮತ್ತು ಉದ್ದೇಶಗಳನ್ನು ಹೀಗೆ ಗುರುತಿಸಬಹುದಾಗಿದೆ.

೧. ರಾಷ್ಟ್ರ ಮತ್ತು ರಾಷ್ಟ್ರೀಯತೆ ಕುರಿತಂತೆ ಅಪವ್ಯಾಖ್ಯಾನಗಳು, ತಾತ್ವಿಕ ಗೊಂದಲಗಳು,ತಮ್ಮ ಸಂಕುಚಿತ

ವ್ಯಾಖ್ಯಾನಗಳಿಂದ್ಲಾಗಿ ವಿದ್ವೇಷಕ್ಕೂ, ಹಿಂಸೆಗೂ ರಕ್ತ ಪಾತಕ್ಕೂ, ಅವಮಾನಗಳಿಗೂ ಕಾರಣವಾಗುತ್ತಿವೆ. ಈ ಸಂದರ್ಭದಲ್ಲಿ, ಕನ್ನಡದ ದೊಡ್ಡ ಚಿಂತಕರು ಹೇಗೆ ಗ್ರಹಿಸಿದ್ದಾರೆ ಎಂಬುದನ್ನು ಅರಿಯುವುದು ಹಾಗೂ ವಿಶ್ಲೇಷಿಸುವುದು ಈಗ ಒಂದು ಬೌದ್ಧಿಕ, ಸಾಮಾಜಿಕ, ಸಾಂಸ್ಕೃತಿಕ ಅಗತ್ಯವಾಗಿದೆ.

೨. ಮತೀಯವಾದಿ, ಜನಾಂಗವಾದಿ, ಮೂಲಭೂತವಾದಿ ರಾಷ್ಟ್ರೀಯತಾ ಚಿಂತನೆಗಳು ಜಾಗತೀಕರಣದ ಹೊತ್ತಿನಲ್ಲಿ ಜನರ ಬದುಕನ್ನು ತೀವ್ರವಾಗಿ ಕಲಕುತ್ತಿವೆ. ಅವುಗಳಿಂದ ಜನಸಮುದಾಯಗಳ ಬದುಕು ಅತಿದುರ್ಬರವಾಗುತ್ತಿದೆ. ಈ ಕುರಿತು ಸಮುದಾಯಗಳ ನೆಲೆಯಿಂದ ಕನ್ನಡದ ಚಿಂತಕರು ಈ 'ಧರ್ಮ', 'ಸಂಸ್ಕೃತಿ', 'ಭಾಷೆ', 'ಚರಿತ್ರೆ', 'ಭೂಪ್ರದೇಶ'ಗಳೆಂಬ ಈ ಪರಿಕಲ್ಪನೆಗಳಿಗೆ ಹೇಗೆ ಅನುಸಂಧಾನ ನಡೆಸಿದ್ದಾರೆ ಎನ್ನುವುದನ್ನು ಅರಿಯುವ ಪ್ರಯತ್ನವನ್ನು ಈಗ ಸಾಂಸ್ಕೃತಿಕವಾಗಿ ಮಾಡಬೇಕಾಗಿದೆ.

೩. ೧೯೪೭ರ ಭಾರತದ 'ಬಿಡುಗಡೆ'ಯನ್ನು ಒಂದು 'ಮಹಾಬಿಡುಗಡೆ' ಅಥವಾ 'ವಿಮೋಚನೆ'ಯೆಂದು ಭಾವಿಸುವುದಾದಲ್ಲಿ, ಅದು ಎಲ್ಲ ಬಗೆಯ ಬಿಡುಗಡೆ ಹೋರಾಟಗಳಿಗೆ ಪೂರ್ಣ ವಿರಾಮ ಬೀಳಬೇಕಿತ್ತು. ಆದರೆ ಹಾಗಾಗಲಿಲ್ಲ. ಅಂಬೇಡ್ಕರ್ ತನಗೆ ಮಾತೃಭೂಮಿಯಿಲ್ಲವೆಂದು ಬೌದ್ಧಧರ್ಮದ ಕಡೆಗೆ ನಡೆದರು. ಇದನ್ನು ಧಾರ್ಮಿಕ ವಿಮೋಚನೆ ಎಂದು ಕರೆಯಬಹುದಾದರೂ, ಅದು ಅನೇಕ ರಾಜಕೀಯ ಪ್ರಶ್ನೆಗಳನ್ನು ಒಳಗೊಂಡಿತು. ಅದು ಆಧುನಿಕ ಭಾರತದ ಧರ್ಮಗಳಲ್ಲಿ ತನಗೆ ಸ್ವಾತಂತ್ರ್ಯವಿಲ್ಲ ಎಂದು ಭಾವಿಸಿ ನಡೆದ ಬಿಡುಗಡೆಯಾಗಿತ್ತು.

ಆನಂತರ ಈ ರಾಷ್ಟ್ರ ನಡೆಸಿದ ಅಭಿವೃದ್ಧಿಯ ಮಹಾರಥವು ಆದಿವಾಸಿಗಳನ್ನು, ಮಹಿಳೆಯರನ್ನು, ದಲಿತ ದಮನಿತ ಸಮುದಾಯಗಳನ್ನು ಅನಾಥರನ್ನಾಗಿಸಿತು ಎಂದು ಭಾವಿಸಿ, ಇಲ್ಲಿ ತಮ್ಮ ಅಭಿವ್ಯಕ್ತಿಗೆ ಅವಕಾಶವಿಲ್ಲ, ತಮ್ಮನ್ನು ಬಂಧಿಸಲಾಗಿದೆ ಎನ್ನುವ ಉದ್ದೇಶದಿಂದ 'ವಿಮೋಚನೆ'ಯ ಚಳುವಳಿಗಳು ಹುಟ್ಟಿದವು. ಕಾಶ್ಮೀರ, ಅಸ್ಸಾಮ್ ಮತ್ತು ಈಶಾನ್ಯ ಭಾರತದ ರಾಷ್ಟ್ರೀಯತೆಗಳು ಮಂಡಿಸುತ್ತಿರುವ ವಿಮೋಚನೆ ಚಳುವಳಿಗಳು ಭಾರತದ ದೊಡ್ಡ ಕಕ್ಷೆಯಲ್ಲಿ ನಡೆಯುತ್ತಿವೆ. ಕರ್ನಾಟಕದಂತಹ ಚಿಕ್ಕ ಕಕ್ಷೆಗಳಲ್ಲಿ ಕೂಡ ಕೊಡವ, ತುಳುವಿನ ಅನನ್ಯತೆಯ ಪ್ರತಿಪಾದನೆ ನಡೆಯುತ್ತಿದೆ. ಇವನ್ನು ಪರಿಭಾವಿಸಿ ಕನ್ನಡ ಚಿಂತನೆಗಳ ಮೂಲಕ ಅರ್ಥಮಾಡಿಕೊಳ್ಳುವುದು ಪ್ರಸ್ತುತ ಪ್ರಬಂಧದ ಉದ್ದೇಶವಾಗಿದೆ.

೪. ಕನ್ನಡದಲ್ಲಿ ವಿಶ್ವಮಟ್ಟಕ್ಕೆ ನಿಂತು ಸಂವಾದಿಸಬಹುದಾದ ದೊಡ್ಡ ಚಿಂತನ ಪರಂಪರೆ ಇದೆ. ಆದರೆ ಅದನ್ನು ಸಾಹಿತ್ಯದ ವ್ಯಾಖ್ಯಾನಗಳಿಗೆ ಮಾತ್ರ ಸೀಮಿತಗೊಳಿಸಿ, ಸಂಕುಚಿತಗೊಳಿಸಿ ನೋಡಲಾಗಿದೆ. ಅದಕ್ಕಿರುವ ಅಗಾಧ ಸಾಧ್ಯತೆ ಕುರಿತು ನಿರ್ಲಕ್ಷ್ಯವನ್ನು ಬಹುಶಃ ಉದ್ದೇಶಪೂರ್ವಕವಾಗಿಯೇ ಬೆಳೆಸಲಾಗಿದೆ. ಈ ಕೊರತೆಯನ್ನು ಹೋಗಲಾಡಿಸಲು ಸ್ವಲ್ಪ ಮಟ್ಟಿಗಾದರೂ ಪ್ರಯತ್ನಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

೫. ಕನ್ನಡದ ಚಿಂತಕರು, ಅಂತರಾಷ್ಟ್ರೀಯ ಪ್ರಶ್ನೆಯನ್ನು ಬಿಟ್ಟುಕೊಡದೆ, ಮನುಕುಲದ ಕಲ್ಯಾಣವನ್ನು ಬಯಸುವ ಆಶಯ ಹೊತ್ತು ತಮ್ಮ ಚಿಂತನೆಗಳನ್ನು ರೂಪಿಸಿದ್ದಾರೆ. ಈ ಚಿಂತನೆಗಳ ಜ್ಯೋತಿ ಹಿಡಿದು ಉರಿಯುವ ಕುಂಡಗಳಂತೆ ಕಾಣುತ್ತಿರುವ ಚೆಚೆನ್ಯಾ, ಕೊಸೊವೊ, ಪ್ಯಾಲಸ್ಟೈನ್, ಖುರ್ದಿಸ್ತಾನ, ಶ್ರೀಲಂಕಾ,

ಕಾಶ್ಮೀರದ ಸಮಸ್ಯೆಗಳನ್ನು ಅರಿಯಲು ಸಾಧ್ಯವೇ ಎಂದು ನೋಡುವುದರ ಅಗತ್ಯವಿದೆ. ಹೀಗೆ ಕನ್ನಡ ಚಿಂತನೆಗಳ ಮೂಲಕ ವಿಶ್ವ ಪರಿಕಲ್ಪನೆಗಳನ್ನು ಚರ್ಚಿಸುವ ಆಶಯ ಈ ಸಂಪ್ರಬಂಧದಲ್ಲಿದೆ.

೬. ರಾಷ್ಟ್ರೀಯತಾ ಚರ್ಚೆಗಳು ಬರೀ ಬೌದ್ಧಿಕ ಮತ್ತು ವೈಚಾರಿಕ ಸಂಗತಿಗಳಷ್ಟೇ ಆಗಿಲ್ಲ. ಅವು ಸಾಮಾಜಿಕವಾಗಿ ಮೂರ್ತ ಪರಿಣಾಮಗಳನ್ನೂ ಬೀರುವ ಮತ್ತು ತಲ್ಲಣಗಳನ್ನು ಹುಟ್ಟಿಸುವ ಸಂಗತಿಗಳೂ ಆಗಿವೆ. ಈ ಸಂಗತಿಗಳನ್ನು ಮರೆತು ಮುನ್ನಡೆಯಲಾಗದು ಎನ್ನುವ ಉದ್ದೇಶ ಈ ಅಧ್ಯಯನಕ್ಕೆ ಇದೆ.

೭. ವರ್ತಮಾನದ ಬದುಕಿನಲ್ಲಿ, ರಾಷ್ಟ್ರೀಯತಾ ವ್ಯಾಖ್ಯಾನಗಳು ಕುರೂಪಗೊಂಡು ವ್ಯಕ್ತವಾಗುತ್ತಿವೆ. ಅವಕ್ಕೆ ಪರ್ಯಾಯವಾದ ಪ್ರೀತಿಯ, ಸಾಮರಸ್ಯದ ಚಿಂತನೆಯ ಜೀವಪರ ನೆಲೆಗಳಿವೆ ಎಂದು ಪ್ರತಿಪಾದಿಸುವ ಉದ್ದೇಶವನ್ನು ಈ ಅಧ್ಯಯನವು ಒಳಗೊಂಡಿದೆ.

೮. ರಾಷ್ಟ್ರ-ರಾಷ್ಟ್ರೀಯತೆಗಳ ವ್ಯಾಖ್ಯಾನವು 'ಭಾವನಾತ್ಮಕ' ವಿಚಾರಗಳಾಗಿ ಬಿಂಬಿಸುವ ಪ್ರಯತ್ನ ನಡೆಯುತ್ತಿದೆ. ಮೇಲ್ನೋಟಕ್ಕೆ ಭಾವನಾತ್ಮಕ ಎನ್ನಿಸಿದರೂ, ಅಂತರ್ಯದಲ್ಲಿ ರಾಜಕೀಯ ಅಧಿಕಾರವನ್ನು ಹಿಡಿಯುವವರು ಯಾರು, ಸಮಾಜವನ್ನು ಯಾರು ನಿಯಂತ್ರಿಸುತ್ತಾರೆ. ಸಂಪತ್ತಿನ ವಿತರಣೆ ಮಾಡುವವರು ಯಾರು, ಸಂಪತ್ತು ಯಾರ ಒಡೆತನದಲ್ಲಿರುತ್ತದೆ. ಬರಲಿರುವ ಸಮಾಜ ಯಾರ ನಿಯಂತ್ರಣದಲ್ಲಿರುತ್ತದೆ ಎನ್ನುವ ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಪ್ರಶ್ನೆಗಳನ್ನು ಒಳಗೊಂಡಿರುತ್ತವೆ. ಈ ಪ್ರಶ್ನೆಗಳು ಸಮುದಾಯಗಳನ್ನು ಅದನ್ನು ಕುರಿತು ಚಿಂತನೆಗಳನ್ನು ಯಾವ ದಿಕ್ಕಿಗೆ ಮುನ್ನಡೆಸಬಯಸುತ್ತದೆ ಎಂಬುದನ್ನು ಅಧ್ಯಯನ ಮಾಡುವುದರ ಅಗತ್ಯ ಈಗಿದೆ.

೯. ರೂಪಿತಗೊಂಡ ರಾಷ್ಟ್ರವೊಂದು ತನಗೆ ಬೇಕಾದ ಚಿಂತನೆಗಳನ್ನೂ ಸಮುದಾಯಗಳನ್ನೂ ಒಳಗೊಳ್ಳುವ ಮತ್ತು ಹೊರಗಿಡುವ ರಾಜಕಾರಣ ಮಾಡುತ್ತಿರುತ್ತದೆ. ರಾಷ್ಟ್ರರೂಪಿ ವ್ಯಾಖ್ಯಾನವೇ, ದುರ್ಬಲರು ತಮ್ಮ ಬದುಕನ್ನು, ಚಹರೆಯನ್ನು ಗಳಿಸಿಕೊಳ್ಳುವುದಷ್ಟೆ ಅಲ್ಲ. ಬಲಾಢ್ಯರ ಜೊತೆಯಲ್ಲಿ ಸೇರಿಕೊಳ್ಳುವ ಸುಪ್ತ ಹಂಬಲವನ್ನು ಒಳಗೊಂಡಿರುತ್ತದೆ. ಅದು ದಮನಿತರು ಅಧಿಕಾರಕ್ಕಾಗಿ ಒತ್ತಾಯಿಸುವ ಪ್ರಯತ್ನವೂ ಆಗಿರುತ್ತದೆ. ಅಂಚಿನಲ್ಲಿರುವ ಸಮುದಾಯಗಳು ಕೇಂದ್ರಕ್ಕೆ ಪ್ರವೇಶಿಸಲು ಪ್ರಯತ್ನಿಸುತ್ತಿರುತ್ತದೆ. ಆದರೆ ಈಗಾಗಲೆ ಕೇಂದ್ರದಲ್ಲಿದ್ದು ಯಜಮಾನಿಕೆ ಸ್ಥಾಪಿಸಿಕೊಂಡಿರುವ ಅಧಿಕಾರಸ್ಥ ನೆಲೆಯು, ಅಂಚನ್ನು ಇನ್ನಷ್ಟು ಅಂಚಿಗೆ ತಳ್ಳಲು ಪ್ರಯತ್ನಿಸುತ್ತದೆ. ಈ ಒಳಗೊಳ್ಳುವ ಮತ್ತು ಹೊರಗೆ ತಳ್ಳುವ ನಿರಂತರ ಸಂಘರ್ಷದ ಭಾಗವೇ ರಾಷ್ಟ್ರೀಯತಾ ಚಿಂತನೆಗಳ ಸಂಕಥನಗಳು ರೂಪುಗೊಳ್ಳಲು ಬಲವಾದ ಕಾರಣ. ಈಚೆಗೆ ಅಮೆರಿಕ, ಯುರೋಪುಗಳಲ್ಲಿ ನಿರ್ದಿಷ್ಟ ಧರ್ಮಿಯರನ್ನು ಹೊರಗೆ ತಳ್ಳಲು ಪ್ರಯತ್ನಿಸಲಾಗುತ್ತಿದೆ. ಮಲೇಷ್ಯಾ ಮುಂತಾದ ದೇಶಗಳಲ್ಲಿ ಅನ್ಯದೇಶದವರನ್ನು ದೂರತಳ್ಳಲು ಪ್ರಯತ್ನ ನಡೆಯುತ್ತಿದೆ. ಭಾರತದಲ್ಲಿಯೆ ಬಲಪಂಥೀಯ ರಾಜಕಾರಣವು ಮುಸ್ಲಿಮ್ ಮತ್ತು ಹಿಂದುವೇತರ ಜನಾಂಗಗಳ ನಿಷ್ಠೆಯನ್ನು ಪ್ರಶ್ನಿಸುತ್ತಿದೆ. ದಲಿತರು ಮತ್ತು ಆದಿವಾಸಿಗಳನ್ನು ಅಧಿಕಾರ ಕೇಂದ್ರಗಳಾಚೆಗೆ ತಳ್ಳಲು ಪ್ರಯತ್ನಿಸಲಾಗುತ್ತಿದೆ. ವಿಮೋಚನೆ ಆಶಯ ವ್ಯಕ್ತಪಡಿಸುವ ರಾಷ್ಟ್ರೀಯತೆಗಳನ್ನು ದೇಶದ್ರೋಹದ ಹೆಸರಲ್ಲಿ ದಮನಿಸಲು ಪ್ರಯತ್ನಿಸಲಾಗುತ್ತಿದೆ. ಕರ್ನಾಟಕದಲ್ಲಿಯೇ ಕೊಡವ, ತುಳು, ಹೈದರಾಬಾದ್ ಕರ್ನಾಟಕಗಳ ಕೂಗುಗಳನ್ನು 'ಪ್ರತ್ಯೇಕತೆಯ ಪ್ರತಿಪಾದನೆಯೆಂದೂ, ವಿಚ್ಛಿದ್ರಕಾರರೆಂದೂ, ಅಖಂಡತೆಗೆ ಆತಂಕವೆಂದು ವ್ಯಾಖ್ಯಾನಿಸಿ ನಿರಾಕರಿಸುವ ಪ್ರಯತ್ನ

ನಡೆಸಲಾಗುತ್ತಿದೆ. ಜಾಗತಿಕ ವಿದ್ಯಮಾನವಾದ ಇಂಥ ವಿದ್ಯಮಾನಗಳಿಗೆ ಕನ್ನಡ ಸಾಹಿತ್ಯ ಹೇಗೆ ಪ್ರತಿಕ್ರಿಯಿಸಿದೆ ಎಂದು ತಿಳಿಯುವ ಉದ್ದೇಶ ಈ ಅಧ್ಯಯನದ್ದಾಗಿದೆ.

ಸ್ವಭಾವದಲ್ಲಿ ಅಮೂರ್ತವಾಗಿರುವಂತೆ ಕಾಣುವ ರಾಷ್ಟ್ರೀಯತೆ ಪರಿಕಲ್ಪನೆ ವಾಸ್ತವದಲ್ಲಿ ತೀವ್ರವಾಗಿ ಕ್ರಿಯಾಶೀಲವಾಗಿದೆ. ರಾಷ್ಟ್ರ ಹಾಗೆಂದರೇನು ಎಂದು ಸಾಮಾನ್ಯನಿರಲಿ ವಿದ್ವಾಂಸರೂ ತಕ್ಷಣಕ್ಕೆ ಹೇಳಲಾಗದ ಪರಿಸ್ಥಿತಿ ಇದೆ. ಆದರೆ ಅನ್ಯ ಭಾಷಿಕನೊಬ್ಬ ಅವನ ಮಾತೃಭಾಷೆಯಲ್ಲಿ ಮಾತನಾಡಿದರೆ, ಅದು ತನ್ನ ಭಾಷೆಗೆ ಅವಮಾನವೆಂದೂ, ಅನ್ಯ ಧಾರ್ಮಿಕನೊಬ್ಬನ ಧಾರ್ಮಿಕ ಆಚರಣೆಗಳು, ದೇಶ ಪ್ರೇಮಕ್ಕೆ ವಿರುದ್ಧವಾದವುಗಳೆಂದೂ ಈ ಪ್ರಜ್ಞೆ ಭಾವಿಸತೊಡಗುತ್ತದೆ. ಇಷ್ಟೊಂದು ಪ್ರಭಾವ ಶಾಲಿಯಾದ ಪರಿಕಲ್ಪನೆಯನ್ನು ಬಿಟ್ಟು ನಡೆಸುವ ಚಿಂತನೆಗಳು ಅಪೂರ್ಣವಾಗುತ್ತವೆ. ಇದು ಪ್ರಸ್ತುತ ಅಧ್ಯಯನದ ನಂಬಿಕೆಯಾಗಿದೆ.

## ೧.೩ ಅಧ್ಯಯನದ ವ್ಯಾಪ್ತಿ ಮತ್ತು ಆಕರಗಳು

### ಲೇಖಕ ವ್ಯಾಪ್ತಿ

ರಾಜಪ್ರಭುತ್ವದ ಪ್ರಜೆಯೇ ಪ್ರಭುವಾಗುವ ಆಧುನಿಕ ರಾಜಕೀಯ ವ್ಯವಸ್ಥೆಯೊಂದಕ್ಕೆ, ಜನಮಾನಸವನ್ನು ಸಿದ್ಧಗೊಳಿಸುವ, ಜಾತ್ಯತೀತತೆ ಮುಂತಾದ ಆಧುನಿಕ ಜೀವನ ಕ್ರಮಗಳನ್ನು ಕಸಿಗೊಳಿಸುವ ಕೆಲಸವು ೨೦ನೇ ಶತಮಾನದ ಆರಂಭದಿಂದಲೇ ಪ್ರಾರಂಭವಾಯಿತು. ಕನ್ನಡ ಚಿಂತಕರೂ ಸಹ ಈ ರಾಷ್ಟ್ರ ನಿರ್ಮಾಣದ ಪ್ರಕ್ರಿಯೆಯಲ್ಲಿ ಭಿನ್ನಭಿನ್ನವಾದ ಸಂವಹನ ಸಾಧ್ಯತೆಗಳನ್ನು ಬಳಸಿ ಮೇಲಿನ ಅಂಶಗಳನ್ನು ಕ್ರಿಯಾಶೀಲಗೊಳಿಸಲು ಪ್ರಯತ್ನಪಟ್ಟರು. ಸಾಹಿತಿ ಚಿಂತಕರೆಲ್ಲರೂ ಈ ಕ್ರಿಯೆಯಲ್ಲಿ ತೊಡಗಿಸಿಕೊಂಡರು. ಆದರೆ ಪ್ರಾತಿನಿಧಿಕವಾಗಿ ಕೆಲವು ಮುಖ್ಯ ಚಿಂತಕರನ್ನು ಇಲ್ಲಿ ಆರಿಸಿಕೊಳ್ಳಲಾಗಿದೆ. ವಿಷಯದ ವ್ಯಾಪ್ತಿ ಅಗಾಧವಾದುದರಿಂದ ಈ ಕ್ರಮಕ್ಕೆ ಒತ್ತು ನೀಡಲಾಗಿದೆ. ಆ ಚಿಂತಕರ ವಿವರ ಹೀಗಿದೆ :

ಕರ್ನಾಟಕ ಏಕೀಕರಣ ಚಳುವಳಿಯನ್ನು ಮುನ್ನಡೆಸಿದ ಆಲೂರು ವೆಂಕಟರಾಯರು ಉತ್ತರ ಕರ್ನಾಟಕದ ಧಾರವಾಡ, ಹಾಗೂ ಬಳ್ಳಾರಿಯನ್ನು ತಮ್ಮ ಕಾರ್ಯರಂಗ ಮಾಡಿಕೊಂಡವರು. ಸಾಹಿತ್ಯ, ಸಂಸ್ಕೃತಿ ಚಿಂತನೆಗಳ ದೃಷ್ಟಿಯಿಂದ ಬಿ.ಎಂ.ಶ್ರೀಯವರು ಆಲೂರರಿಗಿಂತ ಮೊದಲೇ ಅನುವಾದ ಮೊದಲಾದ ಕೃತಿರಚನೆ ಆರಂಭ ಮಾಡಿದಂತೆ ಕಂಡರೂ ಕಾಲದ ದೃಷ್ಟಿಯಿಂದ ಆಲೂರರನ್ನು ಪ್ರಾರಂಭದ ಪ್ರಾತಿನಿಧಿಕ ಚಿಂತಕರೆಂದು ಸ್ವೀಕರಿಸಲಾಗಿದೆ.

ಬಿ.ಎಂ.ಶ್ರೀಯವರು ಮೈಸೂರು ಕರ್ನಾಟಕಕ್ಕೆ ಸೇರಿದವರು; ಇಂಗ್ಲೀಷ್ ಅಧ್ಯಾಪಕರಾಗಿದ್ದವರು; ಅರಸರಿಗೆ ಹತ್ತಿರವಿದ್ದವರು; ಪ್ರಭಾವಗಳನ್ನು ಮುಕ್ತವಾಗಿ ಸ್ವೀಕರಿಸಿದವರು; ಸಂಕರಶೀಲ ಸಂಸ್ಕೃತಿಯನ್ನು ಪ್ರತಿಪಾದಿಸಿದವರು; ಮೈಸೂರು ವಿಶ್ವವಿದ್ಯಾಲಯ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ತಮ್ಮ ತಿರುಗಾಟಗಳಿಂದ ಕನ್ನಡತನವನ್ನು ಕಟ್ಟಲು ಪ್ರಯತ್ನಿಸಿದವರು.

ಶಂಬಾ ಜೋಶಿಯವರು ಮರಾಠಿ ಮೂಲದವರು; ಕನ್ನಡ ಜನಸಮುದಾಯಗಳನ್ನು ಚರಿತ್ರೆಗೆ ದಕ್ಕದ ಪುರಾತನ ಕ್ರಮಗಳಿಂದ ಅಧ್ಯಯನ ಮಾಡಿದವರು. ಮರಾಠಿ ಅಧಿಪತ್ಯವನ್ನು ವಿರೋಧಿಸುತ್ತಲೇ 'ಕರ್ನಾಟಕ ಸಂಸ್ಕೃತಿ' ಕುರಿತು ಚಿಂತಿಸಿದವರು; ಧಾರವಾಡವನ್ನು ಕಾರ್ಯರಂಗ ಮಾಡಿಕೊಂಡಿದ್ದವರು.

ಕುವೆಂಪುರವರು ಮಲೆನಾಡಿನವರು. ಮೈಸೂರನ್ನು ಕಾರ್ಯರಂಗವನ್ನಾಗಿಸಿಕೊಂಡಿದ್ದವರು. ಕನ್ನಡದ ಮೂಲಕವೇ ವಿಶ್ವಚೈತನ್ಯ ವ್ಯಾಖ್ಯಾನಿಸಲು ಪ್ರಯತ್ನ ಪಟ್ಟವರು; ಭಾಷೆ, ಕಾವ್ಯ, ಸಂಸ್ಕೃತಿ, ಧರ್ಮ, ಶಿಕ್ಷಣ, ಆಧುನಿಕ ವೈಚಾರಿಕತೆ, ದರ್ಶನ, ಮೀಮಾಂಸೆ, ಆಡಳಿತ, ಭಾಷಣ, ಮಹಾಕಾವ್ಯ ಮುಂತಾದ ಅಗಾಧ ಚಿಂತನೆಯಿಂದ ಕನ್ನಡತನವನ್ನು ಕಟ್ಟಿ ಬೆಳೆಸಲು ಪ್ರಯತ್ನಿಸಿದವರು.

ಡಾ.ಎಂ.ಚಿದಾನಂದ ಮೂರ್ತಿಯವರು ದಾವಣಗೆರೆ ಜಿಲ್ಲೆಯ ಚನ್ನಗಿರಿಯವರು; ವೀರಶೈವ ಜಂಗಮ ಹಿನ್ನೆಲೆಯವರಾದ ಶ್ರೀಯುತರು ಕುವೆಂಪುರವರ ಶಿಷ್ಯರು. ಶಾಸನಗಳ ಅಧ್ಯಯನವನ್ನು ಮಾಡಿದವರು; ತಮ್ಮ ಕನ್ನಡ ಪರ ಚಿಂತನೆಗಳಿಂದ ಕನ್ನಡ ಹಠಪೂರ್ವಕ ಆಗ್ರಹಗಳ ಮೂಲಕ ಕನ್ನಡ ಸಂಸ್ಕೃತಿಯನ್ನು ಪ್ರತಿಪಾದಿಸುವವರು; ಇವರನ್ನು ಪ್ರಸ್ತುತ ಅಧ್ಯಯನಕ್ಕೆ ಆರಿಸಿಕೊಳ್ಳಲಾದ ಎರಡನೇ ತಲೆಮಾನ ಪ್ರಾತಿನಿಧಿಕ ಚಿಂತಕರೆಂದು ಪರಿಭಾವಿಸಲಾಗಿದೆ.

ಕರ್ನಾಟಕ ವಿಮೋಚನಾ ರಂಗ ಎಂಬ ಸಂಘಟನೆಯು ಕಳೆದ ಶತಮಾನದ ಕಡೆಯ ದಶಕದಲ್ಲಿ ಆರಂಭಗೊಂಡಿತು. ಇದು ಎಡಪಂಥೀಯ ಚಿಂತನೆಗಳ ಮೂಲಕ ರಾಷ್ಟ್ರೀಯತೆಗೆ ಹೊಸದೊಂದು ವ್ಯಾಖ್ಯಾನ ನೀಡಲು ಪ್ರಯತ್ನಿಸಿತು. ವಚನ ಚಳುವಳಿಯನ್ನು ತನ್ನ ಆಪ್ತ ನೆನಪಾಗಿಯೂ, ಕುವೆಂಪುರನ್ನು ತನ್ನ ಸ್ಫೂರ್ತಿಯ ಚಿಂತಕರಾಗಿಯೂ ಭಾವಿಸಿತು.

ಮೇಲಿನ ಐದು ಜನ ಚಿಂತಕರನ್ನು ಮತ್ತು ಒಂದು ಸಂಘಟನೆಯನ್ನು ಪ್ರಾತಿನಿಧಿಕವಾಗಿರಿಸಿಕೊಂಡು ಈ ಪರಿಕಲ್ಪನಾತ್ಮಕ ಅಧ್ಯಯನವನ್ನು ನಡೆಸಲಾಗಿದೆ.

**ಆಕರ ವ್ಯಾಪ್ತಿ**

ಪ್ರಧಾನವಾಗಿ ಚಿಂತನಶೀಲ ಬರಹಗಳನ್ನು ಆಧರಿಸಿ ಪ್ರಸ್ತುತ ಅಧ್ಯಯನ ಮಾಡಲಾಗಿದೆ. ಇವುಗಳ ಜತೆಗೆ ಪ್ರಾಸಂಗಿಕವಾಗಿ ಪ್ರಸ್ತಾವಗಳಾಗಿ ಕವಿತೆಗಳನ್ನು ಮತ್ತು ಕಥನ ಸಾಹಿತ್ಯವನ್ನು ಬಳಸಲಾಗಿದೆ. ಆಲೂರರ 'ಕರ್ನಾಟಕತ್ವದ ವಿಕಾಸ' ಪ್ರಣಾಳಿಕಾ ರೂಪದ ಬರಹವಾದ್ದರಿಂದ ಅದನ್ನು ಪ್ರಾತಿನಿಧಿಕ ಪಠ್ಯವಾಗಿರಿಸಿಕೊಳ್ಳಲಾಗಿದೆ. ಬಿ.ಎಂ.ಶ್ರೀಯವರ ಭಾಷಣಗಳು, 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ',ಹಾಗೂ 'ಹೊಂಗನಸುಗಳು' ಸಂಕಲನದ ಕೆಲವು ಕವಿತೆಗಳನ್ನು ಆರಿಸಿಕೊಳ್ಳಲಾಗಿದೆ. ಶಂಬಾ ಜೋಶಿಯವರ 'ಹಾಲುಮತದರ್ಶನ', 'ಕರ್ಣಾಟ ಸಂಸ್ಕೃತಿಯ ಪೂರ್ವಪೀಠಿಕೆ' ಭಾಗ -೨, 'ಕರ್ಣಾಟಕ ವೀರಕ್ಷತ್ರಿಯರು' ಹಾಗೂ 'ಎಡೆಗಳು ಹೇಳುವ ಕಂನಾಡ ಕತೆ'ಕೃತಿಗಳನ್ನು ಮುಖ್ಯವಾಗಿ ಆಧರಿಸಲಾಗಿದೆ. ಕುವೆಂಪುರವರ ಕೆಲವು ಕವಿತೆಗಳು ಮತ್ತು ಭಾಷಣಗಳು, ವೈಚಾರಿಕ ಲೇಖನಗಳು, ಇನ್ನಿತರೆ ಲೇಖನಗಳನ್ನು ಮುಖ್ಯವಾಗಿ ಇಲ್ಲಿ ಆಧಾರವಾಗಿಟ್ಟುಕೊಳ್ಳಲಾಗಿದೆ. ಚಿದಾನಂದ ಮೂರ್ತಿಯವರ 'ಕನ್ನಡ ಸಂಸ್ಕೃತಿ ನಮ್ಮ ಹೆಮ್ಮೆ' 'ವೀರಶೈವ ಧರ್ಮ', ಭಾರತೀಯ ಸಂಸ್ಕೃತಿ (ಹಿಂದೂ-ಲಿಂಗಾಯತ) ಕೃತಿಗಳನ್ನು ಮುಖ್ಯವಾಗಿ ಆಧಾರವಾಗಿಟ್ಟುಕೊಳ್ಳಲಾಗಿದೆ. ಕರ್ನಾಟಕ ವಿಮೋಚನಾ ರಂಗದ ಪ್ರಣಾಳಿಕೆ ಹಾಗೂ ಸಂವಿಧಾನ ಕೃತಿಯನ್ನು ಪ್ರಾತಿನಿಧಿಕವಾಗಿ ಆಧರಿಸಿದೆ.

ಇವು ಪ್ರಾತಿನಿಧಿಕ ಕೃತಿಗಳಾಗಿದ್ದು, ಇವಕ್ಕೆ ಪೂರಕವಾಗಿ ಇನ್ನಿತರೆ ಚಿಂತಕರ ಚಿಂತನೆಗಳು, ಕೃತಿಗಳು, ಲೇಖನಗಳು, ಪತ್ರಿಕೆಗಳು, ಚರ್ಚೆಗಳು ಇತ್ಯಾದಿಗಳ ಮೂಲಕ ಈ ಅಧ್ಯಯನವನ್ನು ನಡೆಸಲಾಗಿದೆ.

**ಕಾಲವ್ಯಾಪ್ತಿ**

ಪ್ರಸ್ತುತ ಅಧ್ಯಯನದ ಕಾಲಘಟ್ಟ ೨೦ನೇ ಶತಮಾನವನ್ನು ಆಧರಿಸಿದೆ. ವರ್ತಮಾನದ ತಲ್ಲಣಗಳಿಗೆ ಕನ್ನಡದ ಚಿಂತಕರು ಹೇಗೆ ಪ್ರತಿಕ್ರಿಯಿಸುತ್ತಾರೆ ಎಂಬ ಬೌದ್ಧಿಕ ಯಾನವಿದು. ಈ ಅಧ್ಯಯನದಲ್ಲಿ ಅನುಕ್ರಮಣಿಕೆಯು ಚರಿತ್ರೆಯಾಗುವ ಅಪಾಯವನ್ನು ತಪ್ಪಿಸಿಕೊಳ್ಳಲು ವರ್ತಮಾನ ಮತ್ತು ಗತವನ್ನು ಬೆಸೆದು ನೋಡಲಾಗಿದೆ.

**೧.೪ ಅಧ್ಯಯನ ವಿಧಾನ**

ಅಧ್ಯಯನ ವಿಧಾನಗಳು ಸಿದ್ಧಸೂತ್ರಗಳಲ್ಲ, ಪ್ರತಿ ಅಧ್ಯಯನಕ್ಕೂ ಬೇರೆಯದೇ ಆದ ವಿಧಾನವನ್ನು ರೂಪಿಸಿಕೊಳ್ಳಬೇಕಾಗಬಹುದು. ಇದು ಅಧ್ಯಯನಕ್ಕೆ ಬೌದ್ಧಿಕ ಶಿಸ್ತು ಮತ್ತು ಚೌಕಟ್ಟನ್ನು ಒದಗಿಸುವುದು ಮಾತ್ರವಲ್ಲ. ಅಧ್ಯಯನದ ಕೊನೆಗೆ ಸಿದ್ಧಗೊಳ್ಳುವ ಈ ವಿಶ್ಲೇಷಣಾತ್ಮಕ ಸಮರ್ಥನೆಯ ನಕ್ಷೆಯಂತೆಯೂ ಕೆಲಸ ಮಾಡುತ್ತದೆ. ಪ್ರಸ್ತುತ ಅಧ್ಯಯನಕ್ಕಾಗಿ ರೂಪಿಸಿಕೊಂಡ ವಿಧಾನಗಳಿವು;

೧. ಅಧ್ಯಯನದ ಸಂದರ್ಭದಲ್ಲಿ, ಒಬ್ಬನೇ ಲೇಖಕನಲ್ಲಿ ವಿವಿಧ ಕಾಲಘಟ್ಟಗಳಿಗೆ ಸಂಬಂಧಿಸಿದ ಹಾಗೆ ಪ್ರಗತಿಪರ ಅಥವಾ ಪ್ರತಿಗಾಮಿಯಾದ ನಿಲುವು ಕಂಡು ಬರಲು ಸಾಧ್ಯವಿದೆ. ಈ ರೀತಿಯ ಪರಸ್ಪರ ಎದುರುಬದುರು ನಿಲ್ಲುವ ಚಿಂತನೆಗಳು ರೂಪುಗೊಳ್ಳಲು ಕಾರಣಗಳೇನು? ಅವುಗಳ ಹಿಂದೆ ಕೆಲಸ ಮಾಡಿರುವ ಚಾರಿತ್ರಿಕ, ವೈಯಕ್ತಿಕ ಒತ್ತಡಗಳೇನು? 'ಐಡಿಯಾಲಜಿ'ಗಳು ಯಾವುವು? ಇತ್ಯಾದಿಗಳನ್ನು ಅಧ್ಯಯನ ಮಾಡಲು, ದ್ವಂದ್ವಾತ್ಮಕ ಅಧ್ಯಯನ ವಿಧಾನ ರೂಪಿಸಿಕೊಳ್ಳಲಾಗಿದೆ. ವೈರುಧ್ಯಗಳನ್ನು ಬಿಟ್ಟುಕೊಡದೆ ಆದಷ್ಟೂ ಸಮಗ್ರವಾಗಿ ಗ್ರಹಿಸಬೇಕೆಂಬ ಉದ್ದೇಶದಿಂದ ಈ ವಿಧಾನವನ್ನು ರೂಪಿಸಿಕೊಳ್ಳಲಾಗಿದೆ.

೨. ಈ ರೀತಿಯ ಅಧ್ಯಯನಗಳಲ್ಲಿ ಸಾಮಾನ್ಯವಾಗಿ ಮೂರು ವಿಧಾನಗಳನ್ನು ಅನುಸರಿಸಲಾಗುತ್ತದೆ.

ಮೊದಲನೆಯದಾಗಿ ಅಧ್ಯಯನ ಪೂರ್ವದಲ್ಲೆ ಸಿದ್ಧ ಚೌಕಟ್ಟೊಂದನ್ನು ರೂಪಿಸಿಕೊಂಡು ಅದಕ್ಕೆ ಪೂರಕವಾದ ಮಾಹಿತಿಯನ್ನು ಆರಿಸಿ ವಿಶ್ಲೇಷಿಸುವುದು. ಎರಡನೆಯದಾಗಿ, ತನಗೆ ವಿರೋಧಿಸುವ ಸಂಗತಿಗಳನ್ನು ಬೈಪಾಸು ಮಾಡಿ ಅಧ್ಯಯನ ಮಾಡುವುದು. ಇದನ್ನು ಸಿದ್ಧ ಮಾದರಿಯ ಅನ್ವಯೀಕರಣ ಎಂದು ಭಾವಿಸಬಹುದು. ಮೂರನೇ ವಿಧಾನದಲ್ಲಿ ಪರಿಕಲ್ಪನೆಗಳನ್ನು ಮೊದಲೇ ಆರಿಸಿಕೊಳ್ಳಲಾಗುತ್ತದೆ. ತನಗೆ ಪೂರಕವಾದದ್ದನ್ನಷ್ಟೇ ಅಲ್ಲದೆ ವಿರುದ್ಧವಾದುದನ್ನೂ ಒಟ್ಟಿಗೆ ಹಿಡಿದು ವಿಶ್ಲೇಷಣೆ ಮಾಡಲಾಗುತ್ತದೆ. ಇದನ್ನು 'ಅನುಸಂಧಾನದ' ಮಾರ್ಗ ಎಂದು ಭಾವಿಸಬಹುದು. ಈ ಅಧ್ಯಯನದಲ್ಲಿ ಮೂರನೆ ವಿಧಾನವನ್ನು ಅನುಸರಿಸಲಾಗಿದೆ. ಅಧ್ಯಯನದ ಬಹುಮುಖೀ ಆಯಾಮಗಳನ್ನು ಬಲಿಕೊಡಬಾರದು ಎನ್ನುವ ಹಠಪೂರ್ವಕ ತಾತ್ವಿಕ ವ್ಯವಧಾನವನ್ನು ರೂಪಿಸಿಕೊಳ್ಳಲು ಪ್ರಯತ್ನಿಸಲಾಗಿದೆ.

೩. ಈ ರೀತಿಯ ಅಧ್ಯಯನಗಳು ಸುಲಭದಲ್ಲಿ ಮಾಹಿತಿಯನ್ನು ಕ್ರೋಢೀಕರಿಸುವ 'ಚರಿತ್ರೆಯ ಹಂಗಿಗೆ' ಬಿದ್ದು ಬಿಡುವ ಸಾಧ್ಯತೆಗಳಿವೆ. ಆದ್ದರಿಂದ ಗತದ ಚರ್ಚೆ ಮಾಡುತ್ತಲೇ ವರ್ತಮಾನದ ಜೊತೆಗೆ ಬೆಸೆಯುವ

ವಿಧಾನ ರೂಪಿಸಲಾಗಿದೆ. ಇಲ್ಲಿ ಕರ್ನಾಟಕ ಭಾರತ, ಜಾಗತಿಕ ಬಿಕ್ಕಟ್ಟುಗಳನ್ನು (ರಾಷ್ಟ್ರ-ರಾಷ್ಟ್ರೀಯತೆಗಳ ಸಂರಚನೆ ಕುರಿತಂತೆ) ವರ್ತಮಾನದ ತಲ್ಲಣಗಳೆಂದೇ ಪರಿಭಾವಿಸಲಾಗಿದೆ.

೪. 'ರಾಷ್ಟ್ರೀಯತೆ'ಯೆಂಬ ವಿಚಾರವೇ ಸಂಕುಚಿತವಾದಿ, ಮೂಲಭೂತವಾದಿ ಹಾಗೂ ಪ್ರಾಂತೀಯವಾದಿ ಆಗಿಬಿಡಬಹುದಾದ ಅಪಾಯಗಳಿವೆ. ಇದನ್ನು ಮೀರುವುದಕ್ಕೆ 'ಅಖಂಡ'ವಾದಿಯೆಂಬ ಹುಸಿ ನೆಲೆಗಟ್ಟಿಗೂ ತಲುಪಿಬಿಡಬಹುದು. ಆದರೆ ಕನ್ನಡ ಚಿಂತನೆಯ ಬಹುದೊಡ್ಡ ಶಕ್ತಿಯಾದ 'ಕರ್ನಾಟಕಾಂತರ್ಗತ ಭಾರತ' ಅಥವಾ 'ವಿಶಿಷ್ಟವಾಗದೆ ವಿಶ್ವಾತ್ಮಕ' ವಾಗಬಾರದು ಎಂಬ ಉಪಯುಕ್ತತಾವಾದಿ ಅನನ್ಯತಾವಾದಿ ಚಿಂತನೆಯ ವಿಧಾನವನ್ನೇ ಇಲ್ಲಿ ಬಳಸಿಕೊಳ್ಳಲಾಗಿದೆ.

೫. ಸದರಿ ಅಧ್ಯಯನದಲ್ಲಿ ರೂಪಿಸಿಕೊಂಡಿರುವ ಪರಿಕಲ್ಪನೆಗಳನ್ನು ನೇರವಾಗಿ ನಿರ್ವಚಿಸುವುದಕ್ಕೆ ಮೊದಲು, ಪೀಠಿಕಾ ಭಾಗಗಳನ್ನು ರೂಪಿಸಲಾಗಿದೆ. ವಿಷಯಕ್ಕೆ ಪೂರಕವಾದ ಚರ್ಚೆ ಮಾಡುವುದು ಇದರ ಉದ್ದೇಶ. ಏಕೆಂದರೆ ಭಾಷೆ, ಚರಿತ್ರೆ, ಧರ್ಮ, ಸಂಸ್ಕೃತಿ, ಭೂಪ್ರದೇಶ ಇವುಗಳ ಚರ್ಚೆಗಳು ಸುಲಭದಲ್ಲಿ ಸಾಮಾನ್ಯ ಗ್ರಹಿಕೆಗಳತ್ತ ವಾಲಿಬಿಡುತ್ತವೆ. ರಾಷ್ಟ್ರೀಯತೆಯ ಚರ್ಚೆಗೆ ಅಗತ್ಯವಾಗುವ ವಿವರಣೆಯನ್ನು ಈ ಪರಿಕಲ್ಪನೆಗಳು ಒತ್ತಾಯಪಡಿಸುತ್ತವೆ. ಆದ್ದರಿಂದ ಅಗತ್ಯವಿರುವ ಕಡೆ ಸಾಮಾನ್ಯ ಗ್ರಹಿಕೆಗಳನ್ನು ಸೇರಿಸಿ ಚರ್ಚಿಸಲಾಗಿದೆ.

೬. ಸಂಪ್ರಬಂಧದಲ್ಲಿ ಮಾಡಿಕೊಂಡಿರುವ ಪರಿಕಲ್ಪನಾತ್ಮಕ ಘಟಕಗಳು, ಅಧ್ಯಯನದ ಅನುಕೂಲಕ್ಕಾಗಿ ಅಷ್ಟೇ ಆಗಿವೆ. ಅಧ್ಯಯನದ ಒಳಗೆ ಅವು ಆಂತರಿಕವಾಗಿ ಬೆಸೆಯುವ ವಿದ್ಯುತ್ತಿನಂತೆ ಪೂರಕವಾಗಿ ಒಂದರೊಳಗೊಂದು ಹೆಣೆದುಕೊಳ್ಳುತ್ತವೆ. ಈ ಹೆಣಿಗೆಗಳನ್ನು ಏಕಕಟ್ಟಿಗೆ ತಂದು ಬೆಸೆದು ಏಕಾಕೃತಿಯಾಗಿಸುವ ವಿಧಾನವನ್ನು ಇಲ್ಲಿ ಬಳಸಲಾಗಿದೆ.

೭. ಚಿಂತಕರ ಚಿಂತನೆಗಳನ್ನು ತೌಲನಿಕವಾಗಿ ವಿಶ್ಲೇಷಣೆಗೆ ಒಳಗುಮಾಡುವ ಉದ್ದೇಶವಿದ್ದಾಗ, ಅನಿವಾರ್ಯವಾಗಿ ಚಿಂತಕರ ನಿಲುವುಗಳ ವಿಶಿಷ್ಟತೆ ಅಥವಾ ಅಸ್ಮಿತೆಯನ್ನು ಬಿಂಬಿಸಲು ಪ್ರಯತ್ನಿಸಲಾಗಿದೆ. ಸಾಧ್ಯವಿದ್ದ ಕಡೆಗಳಲ್ಲೆಲ್ಲ ತೌಲನಿಕ ವಿಧಾನವನ್ನು ಬಳಸಲಾಗಿದೆ.

೮. ಅಧ್ಯಯನದ ಅನುಕೂಲಕ್ಕಾಗಿ ಆದಷ್ಟು 'ಕಥನ' ಸ್ವರೂಪವಲ್ಲದ ಚೇತನಶೀಲ ಬರಹಗಳನ್ನು ಬಳಸಿಕೊಳ್ಳಲಾಗಿದೆ. ಹಾಗೆಂದು ಇದು ಕಡ್ಡಾಯವಾಗಿಲ್ಲ. ಅನೇಕ ಕಡೆ ಆನುಷಂಗಿಕ ಪ್ರಸ್ತಾವಗಳಾಗಿ 'ಕವಿತೆ'ಗಳನ್ನು ಮತ್ತು ಇತರೆ ಬರೆಹಗಳನ್ನು ಬಳಸಿಕೊಳ್ಳಲಾಗಿದೆ.

೯. ಅಧ್ಯಯನಕ್ಕೆ ಆರಿಸಿಕೊಂಡಿರುವ ಎಲ್ಲ ಚಿಂತನೆಗಳಲ್ಲಿ ಕನ್ನಡ ರಾಷ್ಟ್ರ-ರಾಷ್ಟ್ರೀಯತೆಯೆಂದು ನೇರ ಪ್ರಸ್ತಾವ ಇಲ್ಲದೆ ಇರಬಹುದು. ಅವರ ಚಿಂತನೆಗಳಲ್ಲಿ, ಅಧ್ಯಯನಕ್ಕೆ ಬಳಸಿಕೊಂಡ ಪರಿಕಲ್ಪನೆಗಳಲ್ಲಿ 'ರಾಷ್ಟ್ರತ್ವ' ಕುರಿತ ತುರ್ತಿನ ಕಾರಣಗಳೂ ಇಲ್ಲದಿರಬಹುದು. ಆದರೆ ಇವು ಆಂತರ್ಯದಲ್ಲಿ ರಾಷ್ಟ್ರ ಕಟ್ಟುವ ಮಹಾಕ್ರಿಯೆಯಲ್ಲಿ ತೊಡಗಿರುತ್ತವೆ ಎನ್ನುವುದನ್ನು ಗುರುತಿಸಿ ಅಧ್ಯಯನದ ಮೂಲ ಶಿಸ್ತಿಗೆ ಮತ್ತು ತರ್ಕದ ಹರಿಯುವಿಕೆಗೆ ತೊಡಕಾಗದಂತೆ ಬಳಸಿಕೊಳ್ಳುವ ಕ್ರಮವೊಂದನ್ನು ಇಲ್ಲಿ ರೂಪಿಸಿಕೊಳ್ಳಲಾಗಿದೆ.

೧೦. ಸಂಪ್ರಬಂಧದ ಉದ್ದಕ್ಕೂ ಚಿಂತಕರ ಏಕರೀತಿಯ ವಿವರಣೆಗೆ ಆಶಿಸದ ಅಥವಾ ಏಕರೀತಿಯ ನಿಲುವುಗಳಿರುವುದು ಸಾಧ್ಯವಿಲ್ಲ ಎನ್ನುವ ಮತ್ತು ಬಹುಮುಖಿ ಆಶಯಗಳನ್ನು ಬಿಟ್ಟುಕೊಡದ ಕ್ರಮವನ್ನು ಎಚ್ಚರಿಕೆಯಿಂದ ಬಳಸಲಾಗಿದೆ.

೧೧. ವೈಯಕ್ತಿಕ ಇಷ್ಟಾನಿಷ್ಟಗಳ ಆಚೆಗೆ ನಿಂತು, ಅವಸರದ ತೀರ್ಮಾನಗಳಿಗೆ ಹೋಗದೆ ಚಾರಿತ್ರಿಕ ಸಂದರ್ಭದಲ್ಲಿ ಈ ರೀತಿಯ ಸಿದ್ಧಾಂತ ಹುಟ್ಟಲು ಕಾರಣಗಳೇನು ಅವುಗಳ ಪರಿಣಾಮವೇನಾಗಿದೆ? ಎಂದು ಪರಿಶೀಲನೆ ಮಾಡುವ ವಿಧಾನಕ್ಕೆ ಒತ್ತು ನೀಡಲಾಗಿದೆ.

೧೨. ಅಧ್ಯಯನದಲ್ಲಿ ಮತ್ತು ಈ ರೀತಿಯ ಚಿಂತನೆಗಳಲ್ಲಿ ಆಪ್ತರನ್ನು ಮತ್ತು ಅನ್ಯರನ್ನು ಗುರುತಿಸುವ ಕೆಲಸ ತೀವ್ರವಾಗಿ ಕ್ರಿಯಾಶೀಲವಾಗಿರುತ್ತದೆ. ಯಾವ ಸ್ವರೂಪದ ಚಿಂತನೆ ಯಾರನ್ನು ಹೊರಗೆ ತಳ್ಳಲು ಪ್ರಯತ್ನಿಸುತ್ತದೆ ಮತ್ತು ಒಳಗೊಳ್ಳಬಯಸುತ್ತದೆ ಎನ್ನುವುದರ ಆಧಾರದ ಮೇಲೆಯೇ ಆ ರಾಷ್ಟ್ರದ ಸ್ವರೂಪ ಹೇಗಿರುತ್ತದೆಂದು ನಿರ್ಧರಿಸಬಹುದು. ಹಾಗಾಗಿ 'ಹೊರಗಿಡುವ' (politics of exclusion) ಮತ್ತು ಒಳಗೊಳ್ಳುವ (politics of inclusion) ರಾಜಕಾರಣಗಳ ಸಿದ್ಧಾಂತವೆಂಬ ಪರಿಭಾಷೆಯೊಂದನ್ನು ಇಲ್ಲಿ ರೂಪಿಸಿಕೊಂಡು ಅಧ್ಯಯನ ಮಾಡಲಾಗಿದೆ.

೧೩. ಅಧ್ಯಯನಕ್ಕೆ ಐದು ಜನ ಚಿಂತಕರನ್ನು ಮತ್ತು ಒಂದು ಸಂಘಟನೆಯನ್ನು ಪ್ರಾತಿನಿಧಿಕವಾಗಿ ಆರಿಸಿಕೊಳ್ಳಲಾಗಿದೆ. ಆದರೆ ಇವರಿಗೆ ಪೂರಕವಾಗಿ ಪರಿಕಲ್ಪನೆಯನ್ನು ಅರ್ಥಮಾಡಿಕೊಳ್ಳಲು ಬೇರೆ ಬೇರೆ ಚಿಂತಕರನ್ನು ಹಾಗೂ ಚಿಂತನಾ ಆಕೃತಿಗಳನ್ನು ಸಹ ಆಧರಿಸಲಾಗಿದೆ. ಈ ಮೂಲಕ ಇಡೀ ಅಧ್ಯಯನವನ್ನು ಅನೇಕ ವಿದ್ವಾಂಸರ ಜೊತೆ ಚರ್ಚಿಸುವ ಮೂಲಕ ಸ್ಪಷ್ಟತೆಯನ್ನು ಪಡೆದು ರೂಪಿಸಲಾಗಿದೆ.

### ೧.೫ ಹಿಂದಿನ ಅಧ್ಯಯನಗಳ ಸಮೀಕ್ಷೆ

/ಕರ್ನಾಟಕ ಏಕೀಕರಣ ಪೂರ್ವದ ಚಿಂತನೆಗಳೆಲ್ಲ, ಕಟ್ಟುವ ನಾಡು ಹೇಗಿರಬೇಕು ಎನ್ನುವುದರ ಕುರಿತೇ ಹೆಚ್ಚು ಧ್ಯಾನಿಸಿದಂತಿವೆ. ಆಗ ದೊಡ್ಡ ಶತ್ರುವೂ ಆಗಿದ್ದ ವಸಾಹತುಶಾಹಿಯನ್ನು ಹಿಮ್ಮೆಟ್ಟಿಸುವುದರ ಜೊತೆಯಲ್ಲಿ ಕರ್ನಾಟಕವನ್ನು ಒಂದುಗೂಡಿಸುವ ಕೆಲಸವನ್ನೂ ಮಾಡಬೇಕಿತ್ತು. ಈ ಎರಡೂ ಕೆಲಸಗಳನ್ನು ಕನ್ನಡದ ಚಿಂತಕರು ಹೋರಾಟಗಾರರು ತಾರತಮ್ಯ ಮಾಡದೆ ಸಮಾನ ಶ್ರದ್ಧೆಯಿಂದ ಮಾಡಿದ್ದಾರೆ. ನಾಡಿನ ದೃಷ್ಟಿಯಿಂದ ಎರಡೂ ವಿಚಾರಗಳು ಜೀವನ್ಮರಣದ ವಿಚಾರಗಳೇ. ಈ ಸಂದರ್ಭದಲ್ಲಿ ಹುಟ್ಟಿರುವ ಚಿಂತನೆಗಳು ಭವಿಷ್ಯದಲ್ಲಿ ಉದಯಿಸಲಿರುವ ನಾಡಿನ ಪ್ರಣಾಳಿಕೆಯಂತೆ, ಸಂವಿಧಾನದಂತೆ ಭಾವಿಸಿ ಕೆಲಸ ಮಾಡಿದಂತಿದ್ದರೂ, ಅವುಗಳ ಪ್ರಸ್ತುತತೆ ಇಂದಿಗೂ ಹೆಚ್ಚುತ್ತಲೇ ಇದೆ. ಈ ಸಂದರ್ಭದಲ್ಲಿ ಹುಟ್ಟಿದ ಚಿಂತನೆಗಳನ್ನು ಸ್ಥೂಲವಾಗಿ ಪರಿಶೀಲಿಸಿದಾಗ, ಕನ್ನಡದ ಅಸ್ಮಿತೆಯನ್ನು ಬಲಿಕೊಟ್ಟು ಕಟ್ಟುವ ಭಾರತದ ಕುರಿತಂತೆ ಆತಂಕ ಕಾಣುತ್ತದೆ. ಕರ್ನಾಟಕ-ಭಾರತಗಳು ತಾಯಿ-ಮಗಳಾಗಿ ಪರಿಪೂರ್ಣ ಘಟಕಗಳಾಗಿ ಪರಿಭಾವಿಸಿದ್ದಾರೆ. ಹಂಚಿ ಹೋಗಿರುವ ನಾಡನ್ನು ಒಗ್ಗೂಡಿಸುವುದನ್ನೇ ಧ್ಯಾನಿಸಿದಂತೆ ಈ ಚಿಂತನೆಗಳು ಕಾಣುತ್ತವೆ. ಇಲ್ಲಿಯೂ ಕೂಡ 'ಕರ್ನಾಟಕ ರಾಷ್ಟ್ರ'ವೆಂಬ ಪರಿಕಲ್ಪನೆ ಅನೇಕ ಕಡೆ ಬಳಕೆಯಾಗಿದೆ. ಸ್ಪಷ್ಟವಾಗಿ ಹೇಳಬಹುದಾದರೆ ಆದರ್ಶ ಮತ್ತು ಕನಸುಗಳ ಮಿಶ್ರರೂಪದಂತೆಯೂ ಈ ಚಿಂತನೆಗಳು ಕಾಣುತ್ತವೆ.

ಏಕೀಕರಣೋತ್ತರ ಕರ್ನಾಟಕದಲ್ಲಿ ಹುಟ್ಟಿದ ಕನ್ನಡ ಚಿಂತನೆಗಳ ಸ್ವರೂಪ ಭಿನ್ನ ರೀತಿಯದು. ಇಲ್ಲಿ ಪ್ರಧಾನವಾಗಿ ಮೌಲ್ಯ ಮಾಪನದ ಮಾದರಿಯ ಚಿಂತನೆಯ ಜೊತೆಗೆ ಕೇಂದ್ರದ ವಿರುದ್ಧದ ಅಸಹನೆ ತೀವ್ರವಾಗುತ್ತದೆ. ಭಾಷಾ ಹೇರಿಕೆ, ಮಲತಾಯಿ ಧೋರಣೆ, ಹೆಚ್ಚಿದ ಕೇಂದ್ರೀಕರಣಗಳ ಕುರಿತು ಸಿಟ್ಟು ನಿರಂತರ ಮುಂದುವರಿದಿದೆ. ಕನ್ನಡನಾಡು-ನುಡಿ, ಜಲ ಮುಂತಾದವುಗಳ ರಕ್ಷಣೆಗೆಂದು ಅನೇಕ ಸಂಘಟನೆಗಳು ಚಳುವಳಿಗಳು ತೀವ್ರಗೊಂಡಿವೆ. ಈ ಪರಿಸ್ಥಿತಿಯೇ ಕನ್ನಡದ ಜಾಗೃತಗೊಂಡ ಪ್ರಜ್ಞೆಯನ್ನು ಸೂಚಿಸುತ್ತದೆ. ಈ ಸಂದರ್ಭದಲ್ಲಿ ನಾಡು ಮತ್ತು ನುಡಿ ಕುರಿತಂತೆ ಅನೇಕ ಅಧ್ಯಯನಗಳು ನಡೆದಿವೆ. ಆದರೆ ಇಲ್ಲಿ ಭಾರತ ಮತ್ತು ಕರ್ನಾಟಕತ್ವಗಳ ಕುರಿತಂತೆ ಗ್ರಹೀತವಾಗಿರುವ ರೀತಿ ಮೊದಲ ಹಂತದ ಗ್ರಹಿಕೆಗಿಂತ ಸ್ವಲ್ಪ ಭಿನ್ನ. ಇಲ್ಲಿ ಭಾರತವನ್ನು ರಾಷ್ಟ್ರೀಯತೆ ಎಂದು ಒಪ್ಪಿಕೊಂಡು ಕರ್ನಾಟಕವನ್ನು ಉಪ ರಾಷ್ಟ್ರೀಯತೆ ಎನ್ನುವ ಪ್ರಜ್ಞೆಯಲ್ಲಿಯೇ ಪ್ರತಿಕ್ರಿಯಿಸಿದಂತಿದೆ. ಈ ಸಂದರ್ಭದಲ್ಲಿ ಹುಟ್ಟಿಕೊಂಡ ಚಳುವಳಿಗಳೂ ಸಹ ಮುಖ್ಯವಾಗಿ ಭಾರತದ ಸಾರ್ವಭೌಮತೆಯನ್ನು ಪ್ರಶ್ನಿಸುವ ಗೋಜಿಗೆ ಹೋಗುವುದಿಲ್ಲ. ಆದರೆ ಹಿಂದಿ ಭಾಷೆಯ ಹೇರಿಕೆಯನ್ನು ವಿರೋಧಿಸುತ್ತವೆ. ಆದರೆ ಅವೆಲ್ಲಕ್ಕಿಂತ ಮುಖ್ಯವಾಗಿ ಕರ್ನಾಟಕದೊಳಗೆ ಅಲ್ಪಸಂಖ್ಯಾತರ (ಭಾಷಾ/ ಧಾರ್ಮಿಕ) ವಿರುದ್ಧದ ಅಸಹನೆ ತೀವ್ರವಾಗಿ ಹೆಚ್ಚಿದಂತೆ ಕಾಣುತ್ತದೆ. ಕುವೆಂಪು ರೀತಿಯ ಚಿಂತಕರು : ಇಂಗ್ಲೀಷ್', ಹಿಂದಿ ಭಾಷೆಯ ಯಜಮಾನಿಕೆಯನ್ನು ರಚನಾತ್ಮಕವಾಗಿ ವಿವರಿಸಿದ್ದಾರೆ. ಗೋಕಾಕ್ ಚಳುವಳಿಯು ಕರ್ನಾಟಕದ ನಾಡುನುಡಿ ಕುರಿತಂತೆ ಇನ್ನಷ್ಟು ಇತ್ಯಾತ್ಮಕವಾದ ಜಾಗೃತಿಗೆ ಹಚ್ಚಿತು. ೮೦ರ ದಶಕದ ಹೊತ್ತಿಗೆ ಬೆಂಗಳೂರಿನಲ್ಲಾದ ವಾಣಿಜ್ಯ, ಕೈಗಾರಿಕೆ ಮುಂತಾದ ಬದಲಾವಣೆಗಳು ಸಮುದಾಯಗಳಲ್ಲಿ ವಲಸೆ ಮುಂತಾದ ಸಮಸ್ಯೆಗಳನ್ನು ಹೆಚ್ಚಿಸಿತು. ಕೇಂದ್ರದ ನೀತಿಗಳು ರಾಜ್ಯಗಳ ಹಿತಾಸಕ್ತಿಯನ್ನು ಕಾಪಾಡುತ್ತವೆಂಬ ಭರವಸೆಗಳು ಭ್ರಮೆಗಳಂತೆ ಗೋಚರಿಸತೊಡಗಿದವು. ಚಿದಾನಂದ ಮೂರ್ತಿಯವರಂತಹ ಚಿಂತಕರು ಈ ಬೆಳವಣಿಗೆಗಳ ಕುರಿತಂತೆ ಆತಂಕಿತರಾದಂತೆ ವರ್ತಿಸುತ್ತಾರೆ. ಅವರ 'ಕನ್ನಡ ಸಂಸ್ಕೃತಿ: ನಮ್ಮ ಹೆಮ್ಮೆ' ಪುಸ್ತಿಕೆಯಲ್ಲಿ ಕನ್ನಡದ ಅನನ್ಯತೆಯನ್ನು ಪ್ರತಿಪಾದಿಸುವುದರ ಜೊತೆಗೆ ಅನ್ಯರ ಕುರಿತಾದ ಅಸಹನೆ ಮತ್ತು ಆತಂಕಗಳನ್ನು ವ್ಯಕ್ತಪಡಿಸಿರುವುದು ಇದೇ ಘಟ್ಟದಲ್ಲಿಯೇ. ೧೯೮೮ ರಲ್ಲಿ ಡಾ.ಡಿ.ಆರ್.ನಾಗರಾಜ ಅವರು 'ರಾಷ್ಟ್ರೀಯತೆಯ ಸ್ವರೂಪ'ವೆಂಬ ಲೇಖನ ಬರೆದರು. ಈ ಬರೆಹದಲ್ಲಿಕೂಡ ಡಿ.ಆರ್.ನಾಗರಾಜರು 'ಭಾರತ ರಾಷ್ಟ್ರೀಯತೆ'ಯನ್ನು ಪ್ರಶ್ನಿಸುವುದಿಲ್ಲ. ರಾಷ್ಟ್ರೀಯತೆಯ ವ್ಯಾಖ್ಯಾನಕ್ಕೆ ತೊಡಗುತ್ತಾರೆ. ಪಶ್ಚಿಮದ ಅನೇಕ ಚಿಂತಕರ ರಾಷ್ಟ್ರ ವಿರೋಧಿ ವ್ಯಾಖ್ಯಾನಗಳನ್ನು ಪರಿಶೀಲಿಸುತ್ತಾರೆ. ಭಾರತದಲ್ಲಿ ಗಾಂಧಿ- ತಿಲಕ್ ಮುಂತಾದವರ ಕ್ಲೈಬ್ಯ-ಕ್ಷಾತ್ರ ಆಧಾರಿತ ರಾಷ್ಟ್ರೀಯತೆಗಳ ಸ್ವರೂಪವನ್ನು ವಿವರಿಸುವುದರಲ್ಲಿ ತೊಡಗುತ್ತಾರೆ. ಡಿ.ಆರ್.ನಾಗರಾಜರ ಈ ಲೇಖನವನ್ನು ಪರಿಶೀಲಿಸಿದಾಗ ಅವರಿಗೆ 'ರಾಷ್ಟ್ರೀಯತೆ'ಗಿಂತ 'ವಿಶ್ವಾತ್ಮಕತೆ'ಯ ಮೌಲ್ಯಗಳು ಈ ಸಂದರ್ಭದಲ್ಲಿ ಹೆಚ್ಚು ಆಕರ್ಷಕವಾಗಿರುವಂತೆ ಕಾಣುತ್ತದೆ. ಒಟ್ಟಾರೆ ೮೦ರ ದಶಕವನ್ನು ಕರ್ನಾಟಕದ ಚರಿತ್ರೆಯಲ್ಲಿ ಪರ್ವಕಾಲವೆಂದು ಕರೆಯಬಹುದು. ಅದೇ ದಶಕದ ಕಡೆಯ ವರ್ಷದಲ್ಲಿ ಹುಟ್ಟಿದ ಕರ್ನಾಟಕ ವಿಮೋಚನಾರಂಗವೆಂಬ ಸಂಘಟನೆ ರಾಷ್ಟ್ರೀಯತಾ ಚಿಂತನೆಗೆ ರಚನಾತ್ಮಕವಾದ ಚರ್ಚೆಯನ್ನು ಹುಟ್ಟುಹಾಕಿದಂತಿದೆ. ಅಷ್ಟು ಹೊತ್ತಿಗಾಗಲೇ ಪಂಜಾಬಿನ ಘಟನೆಗಳು ನಡೆದು ಹೋಗಿದ್ದವು. ಅನೇಕ ಕಡೆ

ಹೊಸ ರಾಜ್ಯಗಳಿಗಾಗಿ ಚಳುವಳಿಗಳು ತೀವ್ರವಾಗಿ ನಡೆಯುತ್ತಿದ್ದವು. ಈಶಾನ್ಯ ಮತ್ತು ವಾಯುವ್ಯ ಭಾರತದಲ್ಲಿ ಸ್ವತಂತ್ರ ಅಸ್ಮಿತೆಗಾಗಿ ಚಳುವಳಿಗಳು ನಡೆಯುತ್ತಿದ್ದವು. ಈ ಸಂದರ್ಭದಲ್ಲಿ ಹುಟ್ಟಿದ ಈ ಸಂಘಟನೆ ತನ್ನ ಎಡಪಂಥೀಯ ಚಿಂತನೆಗಳ ಮೂಲಕ ಕನ್ನಡಕ್ಕೂ ರಾಷ್ಟ್ರೀಯತೆಯ ಅರ್ಹತೆಗಳಿವೆ ಮತ್ತು ಸ್ವತಂತ್ರ ಸಂರಚನೆಯಾಗಲು ಅರ್ಹ ಎಂದು ಪ್ರತಿಪಾದಿಸಿತು. ಈ ಸಂಘಟನೆಯು ಕನ್ನಡ ರಾಷ್ಟ್ರೀಯತಾ ಚಿಂತನೆಯ ಸ್ವರೂಪವನ್ನು ನಂತರದ ದಿನಗಳಲ್ಲಿ ಗಮನಾರ್ಹವಾಗಿ ಬದಲಿಸಿದಂತಿದೆ. ಕನ್ನಡದ ಅನೇಕ ಚಿಂತಕರು ಈ ವಿಚಾರಗಳಿಗೆ ಇತ್ಯಾತ್ಮಕವಾಗಿ ಸ್ಪಂದಿಸಿದ್ದಾರೆ. ಸಾಮ್ರಾಜ್ಯಶಾಹಿ ವ್ಯವಸ್ಥೆಯಲ್ಲಿ ಭಾರತವೂ ಸ್ವತಂತ್ರವಲ್ಲ ಎನ್ನುವ ವ್ಯಾಖ್ಯಾನ ಇಲ್ಲಿ ಕ್ರಿಯಾಶೀಲಗೊಂಡಂತಿದೆ. ಭಾಷಿಕವಾಗಿ ಇಂಗ್ಲೀಷ್ ಮತ್ತು ಹಿಂದಿಗಳೆರಡೂ ಸಾಮ್ರಾಜ್ಯಶಾಹಿ ಭಾಷೆಗಳಾಗಿ ಕನ್ನಡಕ್ಕೆ ಕಂಟಕಗಳಾಗಿ ಪರಿಣಮಿಸಿವೆ. ಇದರ ಜೊತೆಗೆ ಜನಭಾಷೆಯಲ್ಲದ ಸಂಸ್ಕೃತವೂ ಸೇರುತ್ತದೆ ಎಂದು ಈ ಸಂಘಟನೆ ವ್ಯಾಖ್ಯಾನಿಸಿತು. ಅನ್ಯ ರಾಷ್ಟ್ರೀಯತೆಗಳಿಂದ ಬಂದಿರುವ ದುಡಿಯುವ ವರ್ಗ ತನ್ನ ಶತ್ರುವಲ್ಲ ಎಂದು ವ್ಯಾಖ್ಯಾನಿಸುವುದರ ಮೂಲಕ ಚಿದಾನಂದ ಮೂರ್ತಿಯವರ ಚಿಂತನೆಗೆ ದೊಡ್ಡ ಸವಾಲೊಂದನ್ನು ಅದು ಹುಟ್ಟುಹಾಕಿತು. ನಂತರದ ದಶಕದಲ್ಲಿ ಕನ್ನಡ ರಾಷ್ಟ್ರೀಯತಾ ಚಿಂತನೆಯಲ್ಲಿ ರಾಷ್ಟ್ರೀಯತೆ ಕುರಿತಂತೆ ವಿಭಿನ್ನವಾದ ಪ್ರತಿಕ್ರಿಯೆಗಳನ್ನು ಕಾಣಬಹುದಾಗಿದೆ.

೨

ನೇರವಾಗಿ ಕನ್ನಡ ರಾಷ್ಟ್ರೀಯತೆ ಎಂಬ ಪರಿಕಲ್ಪನೆಯನ್ನು ಕನ್ನಡದಲ್ಲಿ ಮಂಡಿಸಿದ್ದು ಕರ್ನಾಟಕ ವಿಮೋಚನಾರಂಗವೆಂಬ ಸಂಘಟನೆ. ಆದರೆ ಅದರ ಜೊತೆಯಲ್ಲಿಯೆ ಈ ಪರಿಕಲ್ಪನೆಗೆ ಸೈದ್ಧಾಂತಿಕ ಸಮರ್ಥನೆಯನ್ನು ಒದಗಿಸಿದ ಚಿಂತಕರು ಮುಖ್ಯವಾಗಿ ಇಬ್ಬರು. ೧. ಡಿ.ಆರ್.ನಾಗರಾಜ ಅವರು ೧೯೮೨ರಲ್ಲಿ ರೂಪಿಸಿದ 'ಕನ್ನಡ ರಾಷ್ಟ್ರೀಯತೆಯ ಸ್ವರೂಪ' ಎನ್ನುವ ಚಿಂತನೆ ಮೂಲಕ. ೨. ಡಾ.ಬಂಜಗೆರೆ ಜಯಪ್ರಕಾಶ್ ಇವರು ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ೧೯೯೯ರಲ್ಲಿ ಮಂಡಿಸಿ ಡಿ.ಲಿಟ್ ಪದವಿ ಪಡೆದ "ಕನ್ನಡ ರಾಷ್ಟ್ರೀಯತೆ" ಸಾಮಾಜಿಕ, ಸಾಂಸ್ಕೃತಿಕ ಬೇರುಗಳ ರಾಜಕೀಯಾರ್ಥಿಕ ಅಧ್ಯಯನ", ಎನ್ನುವ ಚಿಂತನೆ ಮೂಲಕ. ಈ ಎರಡೂ ಪಠ್ಯಗಳೂ ಮತ್ತು ಚಿಂತಕರು ಪ್ರಧಾನವಾಗಿ ಈ ಅಧ್ಯಯನಕ್ಕೆ ಪ್ರೇರಣೆಯನ್ನೊದಗಿಸಿದ ಪೂರ್ವಸೂರಿಗಳು.

ಡಿ.ಆರ್.ನಾಗರಾಜರ "ಕನ್ನಡ ರಾಷ್ಟ್ರೀಯತೆಯ ಸ್ವರೂಪ" ಎಂಬ ಭಾಷಣದ ತಮ್ಮ ಪರಿಷ್ಕೃತ ರೂಪಕ್ಕೆ ನಾಲ್ಕು ವರ್ಷ ಮೊದಲೆ "ರಾಷ್ಟ್ರೀಯತೆ ಪರಿಕಲ್ಪನೆ" ಎನ್ನುವ ಲೇಖನ ಬರೆದಿದ್ದರು. ಆದರೆ ನಾಲ್ಕು ವರ್ಷಗಳ ನಂತರ ಬರೆದ 'ಕನ್ನಡ ರಾಷ್ಟ್ರೀಯತೆಯ ಸ್ವರೂಪ' ಎಂಬ ಚಿಂತನೆಯಲ್ಲಿ, ಕನ್ನಡ ರಾಷ್ಟ್ರೀಯತೆಯು ಉಪರಾಷ್ಟ್ರೀಯತೆಯಲ್ಲ, ಬದಲಾಗಿ ರಾಷ್ಟ್ರೀಯತೆಯಾಗುವ ಎಲ್ಲ ಅರ್ಹತೆಗಳನ್ನು ಹೊಂದಿದೆಯೆನ್ನುವಂತೆ ಮಾತನಾಡುತ್ತಾರೆ. ಈ ಗಮನಾರ್ಹ ಬದಲಾವಣೆಯ ಹಿಂದೆ ಬಹುಶಃ ಕರ್ನಾಟಕ ವಿಮೋಚನಾ ರಂಗ ಹುಟ್ಟು ಹಾಕಿದ್ದ ವಾಗ್ವಾದಗಳಿರಬಹುದು. ಮೂಲತಃ ಸಾಹಿತ್ಯ ವಿದ್ಯಾರ್ಥಿಯಾಗಿದ್ದ ಡಿ.ಆರ್.ನಾಗರಾಜರು ತಮ್ಮ ಚಿಂತನೆಗೆ ವಿವಿಧ ಘಟ್ಟಗಳಲ್ಲಿ ಪ್ರತಿಕ್ರಿಯಿಸಿದ ಇಬ್ಬರು ಕನ್ನಡದ ಚಿಂತಕರನ್ನು ತೌಲನಿಕವಾಗಿಟ್ಟುಕೊಂಡು ಚರ್ಚಿಸುತ್ತಾರೆ. ಏಕೀಕರಣಕ್ಕೆ ಮೊದಲು ಭವಿಷ್ಯದಲ್ಲಿ ಉದಯಿಸಲಿರುವ

ಕರ್ನಾಟಕ ಹೇಗಿರಬೇಕು ಎಂಬ ಚಿಂತನೆಗಳು ಪ್ರಧಾನವಾಗಿದ್ದವು. ಆದರೆ ಡಿ.ಆರ್.ನಾಗರಾಜರು ಕನ್ನಡ ರಾಷ್ಟ್ರೀಯತೆಗೆ ಯಾವುದು ಆರೋಗ್ಯಕರ ಎನ್ನುವ ನೆಲೆಗಟ್ಟಿನ ಮೇಲೆ ಚಿಂತನೆ ಮಂಡಿಸಿದ್ದಾರೆ. ೧೯೫೭ರಲ್ಲಿ ಆಲೂರರು ಮಂಡಿಸಿದ 'ಕರ್ನಾಟಕತ್ವದ ವಿಕಾಸ' ಮತ್ತು ಸರಿ ಸುಮಾರು ಮೂವತ್ತು ವರ್ಷಗಳ ನಂತರ ಪ್ರಕಟಗೊಂಡ 'ಕನ್ನಡ ಸಂಸ್ಕೃತಿ: ನಮ್ಮ ಹೆಮ್ಮೆ' ಎಂಬ ಚಿಂತನೆಗಳನ್ನು ತೌಲನಿಕವಾಗಿಟ್ಟುಕೊಂಡು ಮೌಲ್ಯಮಾಪನ ಮಾಡುತ್ತಾರೆ. ಚಿದಾನಂದ ಮೂರ್ತಿಯವರ ಚಿಂತನೆಗಳು ಕನ್ನಡಕ್ಕೆ ಅಪಾಯಕರವೆಂದು ಪ್ರತಿಪಾದಿಸುತ್ತಾರೆ. ಆಲೂರರ ಚಿಂತನೆ ಕನ್ನಡದ ಮೂಲ ಸತ್ವ ಹೀರಿ ಬೆಳೆದಂತಹುದು ಎನ್ನುವ ತೀರ್ಮಾನಕ್ಕೆ ಬರುತ್ತಾರೆ. ಕನ್ನಡ ರಾಷ್ಟ್ರೀಯತೆಗೆ ಅಗತ್ಯವಿರುವ ಸಹನಶೀಲತೆ ಮತ್ತು ಔದಾರ್ಯ ಗುಣಗಳು ಅವರಲ್ಲಿವೆ ಎಂದು ವ್ಯಾಖ್ಯಾನಿಸುತ್ತಾರೆ. ಚಿದಾನಂದಮೂರ್ತಿಯವರದು 'ಆತಂಕ ಕೇಂದ್ರಿತ' ರಾಷ್ಟ್ರೀಯತಾ ಚಿಂತನೆ ಎನ್ನುವ ನೇತ್ಯಾತ್ಮಕ ನಿಲುವಿನಿಂದಲೇ ಆರಂಭಿಸುತ್ತಾರೆ. ಆಶ್ಚರ್ಯವೆಂದರೆ, ಯಾವ ಕಾಲದ, ಯಾವ ಚಾರಿತ್ರಿಕ ಒತ್ತಡದಲ್ಲಿ ಚಿದಾನಂದಮೂರ್ತಿಯವರ ಚಿಂತನೆಗಳು ಹುಟ್ಟುತ್ತವೆ ಎನ್ನುವ ಹಿನ್ನೆಲೆಯನ್ನು ಡಿ.ಆರ್.ನಾಗರಾಜರು ಗಮನಿಸಿದಂತೆ ಕಾಣುವುದಿಲ್ಲ. ತೌಲನಿಕ ಚಿಂತನೆಯ ಮೂಲಭೂತ ಸಮಸ್ಯೆ ಇಲ್ಲಿಯೂ ಕಾಣಿಸುವಂತಿದೆ. ಎರಡರಲ್ಲಿ ಒಂದು ಉತ್ತಮ ಎನ್ನುವ ನಿಲುವಿನೊಂದಿಗೇ ವೈರುಧ್ಯಗಳಿಲ್ಲದೆ ಏಕಮುಖವಾಗಿ ಈ ಬರಹ ಸಾಗುತ್ತದೆ.

ಕನ್ನಡ ರಾಷ್ಟ್ರೀಯತೆಯ ಮೂಲ ಸತ್ವವೇ ಜಾತ್ಯಾತೀತ ನಿಲುವು ಎನ್ನುವ ಅಂಶವನ್ನು ಕರ್ನಾಟಕದ ವಿವಿಧ ಪ್ರದೇಶಗಳ ಸಾಂಸ್ಕೃತಿಕ ಚಲನೆಗಳ ಉದಾಹರಣೆಗಳ ಮೂಲಕ ವಿವರಿಸುತ್ತಾರೆ. ಈ ಬರಹದಲ್ಲಿ ಪ್ರತಿಪಾದಿಸಿರುವ ಎರಡು ವ್ಯಾಖ್ಯಾನಗಳು ಚಿಂತನೆಗೆ ಹಚ್ಚುತ್ತವೆ.

೧. ರಾಷ್ಟ್ರೀಯತೆ ಎನ್ನುವುದು ನೆನಪುಗಳ ನಿರ್ಮಿತಿ

೨. ವಿಶಿಷ್ಟವಾಗದೆ ವಿಶ್ವಾತ್ಮಕವಾಗುವುದು ಸುಳ್ಳು.

ತನಗೆ ಬೇಕಾದ ಹಾಗೆ ಚರಿತ್ರೆಯನ್ನು ಕಟ್ಟಿಕೊಳ್ಳುವ, ಆ ಮೂಲಕ ಇತರರಿಂದ ತಾನು ಭಿನ್ನ ಎಂದು ಹೆಮ್ಮೆ ಪಡುವ ಪ್ರಕ್ರಿಯೆಯಲ್ಲಿಯೇ ರಾಷ್ಟ್ರೀಯತೆಗಳು ಉದಯಿಸುತ್ತವೆ ಎನ್ನುವ ವ್ಯಾಖ್ಯಾನವಿದು. ಎರಡನೆಯದು ಅಸ್ಮಿತೆ ಮರೆತು ರಾಷ್ಟ್ರವೊಂದು ನಿರ್ಮಾಣಗೊಂಡರೆ ಅದು ತನ್ನ ಅಸ್ತಿತ್ವಕ್ಕೆ ಎರವಾಗಬಹುದು ಎನ್ನುವ ವ್ಯಾಖ್ಯಾನ. ರಾಷ್ಟ್ರೀಯತಾ ಚಿಂತನೆ ಎನ್ನುವುದು ಏನೇ ಆದರೂ ಯುರೋಪಿನಿಂದ ಆಮದುಗೊಂಡದ್ದು, ಅದು ಬಂಡವಾಳವಾದಿ ಯುಗದ ಸೃಷ್ಟಿ ಎನ್ನುವ ಚಿಂತನೆಯನ್ನು ಸಮರ್ಥಿಸುತ್ತಾರೆ. ಈ ಲೇಖನವು ತನ್ನ ಸಂಕ್ಷಿಪ್ತ ರೂಪದಲ್ಲಿಯೇ ಸಮಗ್ರ ಅರ್ಥಗಳನ್ನು ಒಳಗೊಳ್ಳಲು ಯತ್ನಿಸುತ್ತದೆ.

ಎರಡನೆಯದಾಗಿ, ಡಾ.ಬಂಜಗೆರೆ ಜಯಪ್ರಕಾಶರ 'ಕನ್ನಡ ರಾಷ್ಟ್ರೀಯತೆ' ಕೃತಿ ೨೦೦೦ನೇ ವರ್ಷದಲ್ಲಿ ಪ್ರಕಟಗೊಂಡಿತು. ಚಿಂತಕರೆ ಹೇಳಿಕೊಂಡ ಹಾಗೆ ಕನ್ನಡ ರಾಷ್ಟ್ರೀಯತೆಯ ಸಾಮಾಜಿಕ, ಸಾಂಸ್ಕೃತಿಕ ಬೇರುಗಳ ರಾಜಕೀಯಾರ್ಥಿಕ ಅಧ್ಯಯನವಿದು. ಒಂದೂವರೆ ಸಾವಿರ ವರ್ಷಗಳ ಸ್ಥೂಲ ವಿಶ್ಲೇಷಣೆಯ ಮೂಲಕ ಈ ಚಿಂತನೆ ರೂಪುತಳೆದಿದೆ. ಕನ್ನಡ ರಾಷ್ಟ್ರೀಯತೆಗೆ ಸೈದ್ಧಾಂತಿಕ ಸಮರ್ಥನೆಯನ್ನೊದಗಿಸಿದ ಕನ್ನಡದ ಪ್ರಥಮ ಕೃತಿ ಇದು ಎಂದು ಹೇಳಬಹುದು. ಕನ್ನಡ ರಾಷ್ಟ್ರೀಯತೆಗೆ ಪೂರಕವಾದ ಅಂಶಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

ಹನ್ನೆರಡನೆಯ ಶತಮಾನದ ಚಲನೆಗಳ ಕುರಿತಂತೆ ಕನ್ನಡ ಚಿಂತನ ಸಾಹಿತ್ಯ ಇದುವರೆವಿಗೂ ಪ್ರತಿಕ್ರಿಯಿಸಿರುವ ರೀತಿಗಿಂತ ಭಿನ್ನವಾದ ಆಯಾಮಗಳಲ್ಲಿ ಚರ್ಚಿಸಲಾಗಿದೆ. ಎಡಪಂಥೀಯ ಚಿಂತನೆಗಳ ಪ್ರಭಾವದಿಂದಾಗಿ ಬಂಜಗೆರೆ ಜಯಪ್ರಕಾಶರು, ಮೂಲತಃ ರಾಷ್ಟ್ರೀಯತೆಯು ಊಳಿಗಮಾನ್ಯತೆಯ ಕೆಸೆ ಕದಲುವುದರಿಂದಲೇ ಕ್ರಿಯಾಶೀಲವಾಗುತ್ತದೆಂದು ನಂಬಿದಂತಿದೆ. ಇದಕ್ಕೆ ಉದಾಹರಣೆಯಾಗಿ ವಚನ ಚಳುವಳಿಯನ್ನು ವಿಶ್ಲೇಷಿಸುತ್ತಾರೆ. ಸಣ್ಣ ಮಟ್ಟದಲ್ಲಾದರೂ ವಚನಕಾರರು ಊಳಿಗಮಾನ್ಯತೆಯನ್ನು ನಿವಾರಿಸಲೆತ್ನಿಸಿದರು ಮತ್ತು ಅವರೆಲ್ಲ ನಗರ ಕೇಂದ್ರಗಳಲ್ಲಿ ಸಂಘಟಿತಗೊಂಡ ಕುಶಲ ಕಾರ್ಮಿಕರಾಗಿದ್ದರು. ತಮ್ಮ ಶ್ರಮವನ್ನು ದೋಚುತ್ತಿದ್ದ ಸಂಸ್ಥೆಗಳ ವಿರುದ್ಧ ದನಿಯೆತ್ತಲಾರಂಭಿಸಿದರು. ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ವಚನಗಳೆಂಬ ಸಾಮಾನ್ಯರಿಗೂ ಅರ್ಥವಾಗುವ ಪ್ರಕಾರವೊಂದನ್ನು ಸೃಷ್ಟಿಸಿದರು ಎನ್ನುವುದು ಅವರ ನಿಲುವು. ತಮ್ಮ ಚಲನೆಗೆ ಅಡ್ಡಿಯಾಗಿದ್ದ ರಾಜಪ್ರಭುತ್ವ, ಪುರೋಹಿತಶಾಹಿ ಇತ್ಯಾದಿಗಳನ್ನು ಪ್ರಶ್ನಿಸಲಾಯಿತು ಎಂಬ ಅಂಶವನ್ನು ಗುರುತಿಸುತ್ತಾರೆ. ಅಂತಿಮವಾಗಿ ವಚನ ಚಳುವಳಿಯೇ ಕನ್ನಡ ರಾಷ್ಟ್ರೀಯತೆಯ ಇಂದಿನ ನೈಜ ನೆನಪು ಎನ್ನುವುದನ್ನು ಗುರುತಿಸುತ್ತಾರೆ. ಅಲ್ಲದೆ ವಚನ ಚಳುವಳಿಯನ್ನು 'ಪ್ರಜಾತಾಂತ್ರಿಕ ಆಶಯಗಳ ಪ್ರಕಟರೂಪ' ಎಂದು ವ್ಯಾಖ್ಯಾನಿಸುತ್ತಾರೆ.

ನಂತರ ವಿಜಯ ನಗರದ ಕಾಲ ಘಟ್ಟವನ್ನು ವಾಣಿಜ್ಯದ ಉತ್ಕರ್ಷ ಹಾಗೂ ವಸಾಹತು ಲೂಟಿಯ ಕಾಲಘಟ್ಟವೆನ್ನುವಂತೆ ವ್ಯಾಖ್ಯಾನ ಮಾಡುತ್ತಾರೆ. ಸಾಂಪ್ರದಾಯಕ ಎಡಪಂಥೀಯ ಚಿಂತಕರು ವಿಜಯನಗರದ ಕಾಲವನ್ನು ಊಳಿಗಮಾನ್ಯತೆಯ ತುರೀಯಾವಸ್ಥೆಯ ಕಾಲವೆನ್ನುವಂತೆ ಚಿತ್ರಿಸಲು ಪ್ರಯತ್ನಿಸಿದ್ದಾರೆ. ಆದರೆ ಇಲ್ಲಿ ಹನ್ನೆರಡನೆಯ ಶತಮಾನದಲ್ಲಿ ಆರಂಭಗೊಂಡಿದ್ದ ಬಂಡವಾಳದ ಚಲನೆಯಿಂದಾಗಿ ವಿವಿಧ ದೇಶಗಳ ಮಾರುಕಟ್ಟೆಗಳ ಸಂಪರ್ಕದಿಂದಾಗಿ ವಾಣಿಜ್ಯ ಚಟುವಟಿಕೆಗಳು ವಿಸ್ತರಿಸಿಕೊಂಡವು ಎನ್ನುವಂತೆ ಗ್ರಹಿಸುತ್ತಾರೆ. ವಚನ ಚಳುವಳಿಯ ಸಂದರ್ಭದಲ್ಲಿ ಜನಮುಖಿಯಾದ ಸಾಹಿತ್ಯದ ಬೆಳವಣಿಗೆ ಕಾಣಿಸಿದರೆ, ವಿಜಯನಗರ ಅರಸರ ಕಾಲದಲ್ಲಿ ಅಪಾರ ಪ್ರಮಾಣದ ಕೃತಿಗಳು ಪ್ರಕಟಗೊಂಡವು. ಅದರೊಟ್ಟಿಗೆ ಹರಿದಾಸರು ತಮ್ಮದೇ ಶೈಲಿಯಲ್ಲಿ ಜನರ ಕಡೆಗೆ ಮುಖಮಾಡಿ ಅರಿವು ಮೂಡಿಸತೊಡಗಿದರು ಎಂಬ ವ್ಯಾಖ್ಯಾನ ಇಲ್ಲಿದೆ. ಚರಿತ್ರೆಯ ಚಲನೆಯನ್ನು ಲಂಬ ಗತಿಯಲ್ಲಿ ವ್ಯಾಖ್ಯಾನಿಸುವ ಮಾರ್ಕ್ಸ್‌ವಾದಿ ಚಿಂತನ ಕ್ರಮ ಈ ಕೃತಿಯಲ್ಲಿ ಪ್ರಮುಖವಾಗಿ ಬಳಕೆಯಾಗಿದೆ. ವಿಜಯನಗರ ಸಾಮ್ರಾಜ್ಯದ ಅವಸಾನದ ನಂತರ ಪಾಳೇಗಾರಿ ಪ್ರಭುತ್ವಗಳು ಹೆಚ್ಚಳಗೊಂಡವು, ಇವು ಪ್ರಧಾನವಾಗಿ ಜನಪೀಡಕ ಸ್ವಭಾವವುಳ್ಳವಾಗಿದ್ದವು. ಊಳಿಗಮಾನ್ಯತೆಯನ್ನು ಪ್ರೋತ್ಸಾಹಿಸುತ್ತಿದ್ದವು, ಈ ಸಂದರ್ಭದಲ್ಲಿ ೧೭ ಮತ್ತು ೧೮ನೆಯ ಶತಮಾನದಲ್ಲಿ ಮೈಸೂರರಸರ ಪ್ರಾಬಲ್ಯದಿಂದಾಗಿ ಪಾಳೇಗಾರ ಸಂಸ್ಕೃತಿ ಅಂತ್ಯಗೊಂಡಿತು ಎನ್ನುವ ವಿವರ ಈ ಕೃತಿಯಲ್ಲಿದೆ. ಇದೇ ಅವಧಿಯಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲ ಕನ್ನಡ ರಾಷ್ಟ್ರೀಯತೆಯ ದೃಷ್ಟಿಯಿಂದ ಮಹತ್ವವಾದುದು. ಒಂದು ರಾಷ್ಟ್ರೀಯತೆಯ ದೃಷ್ಟಿಯಿಂದ ಈ ಕಾಲಾವಧಿ ಅತ್ಯಂತ ರಚನಾತ್ಮಕವಾದುದೆನ್ನುವ ಅಂಶಗಳನ್ನು ವಿವರಿಸಲಾಗಿದೆ. ಕೈಗಾರಿಕೆ, ಕೃಷಿ, ಶಿಕ್ಷಣ, ವ್ಯಾಪಾರ ಎಲ್ಲವೂ ಉನ್ನತಿಯನ್ನು ಸಾಧಿಸುವ ಹಂತ ತಲುಪಿದ್ದವು. ಆದರೆ ಟಿಪ್ಪುವಿನ ಮರಣಾನಂತರ ಹಾಗೂ ವಸಾಹತುಶಾಹಿಯ ಆಕ್ರಮಣದಿಂದಾಗಿ ಕನ್ನಡ ರಾಷ್ಟ್ರೀಯತೆಗೆ ಹಿನ್ನಡೆ ಉಂಟಾಯಿತು.

ವಸಾಹತುಶಾಹಿಯ ವಿರುದ್ಧದ ಹೋರಾಟದಲ್ಲಿ ಮತ್ತೆ ಕನ್ನಡ ಪ್ರಜ್ಞೆ ಜಾಗೃತಗೊಂಡು ಏಕೀಕೃತ ಕರ್ನಾಟಕ ನಿರ್ಮಾಣಕ್ಕೆ ಕಾರಣವಾಯಿತು ಎನ್ನುವುದು ಸ್ಥೂಲವಾಗಿ ಈ ಕೃತಿಯ ಕುರಿತಾದ ವಿವರ.

'ಕನ್ನಡ ರಾಷ್ಟ್ರೀಯತೆ' ಎಂಬ ಈ ಕೃತಿಯಲ್ಲಿ ಡಾ.ಬಂಜಗೆರೆ ಜಯಪ್ರಕಾಶರು ಬಹುದೊಡ್ಡ ಕಾಲಾವಧಿಯ ಚರಿತ್ರೆಯನ್ನು ಶೋಧಿಸಿ ತಮಗೆ ಬೇಕಾದ ಆಶಯಗಳನ್ನು ಆರಿಸಿಕೊಂಡು ವ್ಯಾಖ್ಯಾನಿಸಿದ್ದಾರೆ. ಕೃತಿಯ ಉದ್ದಕ್ಕೂ ಚರಿತ್ರೆಯ ಕುರಿತಾದ ಹೊಸ ಆಯಾಮಗಳು, ಸಮೃದ್ಧ ವಿವರಗಳು ಸಮರ್ಥ ವ್ಯಾಖ್ಯಾನ ಕಾಣಿಸುತ್ತದೆ. ಈ ಚಿಂತನೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ; ಆರ್ಥಿಕ-ರಾಜಕೀಯ ಚಟುವಟಿಕೆಗಳು ಮೂಲವಾಗಿದ್ದುಕೊಂಡು ಸಂಸ್ಕೃತಿ, ಸಾಹಿತ್ಯದಂತಹ ವಿಚಾರಗಳು ಮೇಲ್ಪದರದಲ್ಲಿ ಕ್ರಿಯಾಶೀಲವಾಗಿರುತ್ತವೆ ಎನ್ನುವ ಮಾರ್ಕ್ಸ್‌ವಾದಿ ನಿಲುವು ಇಲ್ಲಿಯೂ ಬಳಕೆಯಾಗಿರುವುದು ಅರಿವಾಗುತ್ತದೆ. ಚರಿತ್ರೆಯ 'ದ್ವಂದ್ವಾತ್ಮಕತೆ'ಯ ವ್ಯಾಖ್ಯಾನವಿದೆಯಾದರೂ, ಅನೇಕ ಕಡೆಗಳಲ್ಲಿ ವೈರುಧ್ಯಗಳನ್ನು ಬಿಟ್ಟುಕೊಟ್ಟು ಸರಳವಾದ ಮಾರ್ಗ ಚಿಂತನೆಯಲ್ಲಿ ಬಳಕೆಯಾದಂತೆ ಕಾಣುತ್ತದೆ. ಇದರಿಂದಾಗಿ ಹುಟ್ಟಬಹುದಾಗಿದ್ದ ಹೊಸ ದರ್ಶನಗಳು ಮರೆಯಾಗಿರಲೂಬಹುದು ಎನ್ನಿಸುತ್ತದೆ.

ಇದೆಲ್ಲದರ ನಡುವೆಯೇ ಕನ್ನಡ ರಾಷ್ಟ್ರೀಯತೆಗೆ ಸೈದ್ಧಾಂತಿಕ ಚೌಕಟ್ಟುಗಳನ್ನೂ ಮುಂದಿನ ಅಧ್ಯಯನಗಳಿಗೆ ನೀಲಿ ನಕಾಶೆಯನ್ನೂ ತೋರಿಸಿದ ಹೊಸ ಚಿಂತನೆಯಿದು ಎನ್ನಬಹುದು.

### ೧.೬ ರಾಷ್ಟ್ರ-ರಾಷ್ಟ್ರೀಯತೆ ಪರಿಕಲ್ಪನಾತ್ಮಕ ಚರ್ಚೆ

ರಾಷ್ಟ್ರ, ರಾಷ್ಟ್ರೀಯತೆ, ರಾಷ್ಟ್ರೀಯವಾದ, ರಾಷ್ಟ್ರ ಪ್ರಭುತ್ವಗಳೆಂಬ ಪರಿಕಲ್ಪನೆಗಳು ಜಗತ್ತಿನ ಚಿಂತನೆಗಳನ್ನು ದಟ್ಟವಾಗಿ ಆಕ್ರಮಿಸಿವೆ ಮತ್ತು ಸಂಕೀರ್ಣಗೊಳಿಸಿವೆ. ಆದರೆ ಇವು ಸಾರ್ವತ್ರಿಕವೂ, ಸಾರ್ವಕಾಲಿಕವೂ ಆದ ಅರ್ಥವನ್ನು ಪಡೆದಿಲ್ಲ. ಚರಿತ್ರೆಯಲ್ಲಿ ಈ ಕುರಿತು ಪ್ರಾಯೋಗಿಕವಾಗಿ ಅನೇಕ ಸಂರಚನೆಗಳು ಸೃಷ್ಟಿಗೊಂಡಿವೆ. ಈ ಕಾರಣಕ್ಕಾಗಿಯೇ ಯೂರೋಪಿನ ಅನುಭವಗಳು, ರಷ್ಯಾ, ಭಾರತ, ಆಫ್ರಿಕಾ, ಚೀನಾ ಹಾಗೂ ಅಮೇರಿಕಾ ದೇಶಗಳ ಅನುಭವಗಳು ಒಂದೇ ಅಲ್ಲ. ಇವುಗಳ ಸೈದ್ಧಾಂತಿಕ ರಚನಾತ್ಮಕತೆ ಕೂಡ ಬೇರೆ ಬೇರೆಯಾಗಿರುವಂತಿವೆ. ಅಲ್ಲದೆ ವ್ಯಕ್ತಿ ವಿಶಿಷ್ಟವಾದ, ಸಾಂಸ್ಕೃತಿಕವಾದ, ವರ್ಗವಾದ, ಸಮುದಾಯಾಧಾರಿತ ಬಹುತ್ವವಾದಗಳು ಇಂದು ರಾಷ್ಟ್ರ, ರಾಷ್ಟ್ರೀಯತೆಯ ಬಗೆಗಿನ ಚಿಂತನೆಯನ್ನು ಪ್ರಭಾವಿಸುತ್ತಿರುವಂತೆ ಕಾಣುತ್ತಿದೆ. ಈ ಎಲ್ಲ ಸಂಕೀರ್ಣತೆಗಳು ರಾಜಕೀಯ, ಆರ್ಥಿಕ ಮತ್ತು ಸಮಾಜೋಧಾರ್ಮಿಕ ಆಯಾಮಗಳ ಜೊತೆ ಬೆಸೆದುಕೊಂಡಿರುವುದರಿಂದ ಜಾಗತಿಕ ತಲ್ಲಣಗಳು ಉಂಟಾಗುತ್ತಿರುವಂತೆ ಕಾಣುತ್ತಿದೆ. ಈ ಪರಿಕಲ್ಪನೆಗಳು ತಲ್ಲಣಕಾರಿಯೆಂದೂ ಹಿಂಸ್ರಕವೆಂದೂ ಭಾವಿಸಿ ಈ ಪರಿಕಲ್ಪನೆಗಳನ್ನೇ ನೇತ್ಯಾತ್ಮಕವಾಗಿ ನೋಡಿದ ಅನೇಕ ಚಿಂತಕರೂ ಇದ್ದಾರೆ. ಆದರೆ ಇದುವರೆಗೂ ರಾಷ್ಟ್ರ, ರಾಷ್ಟ್ರೀಯತೆಗಳಿಗಿಂತ ಉತ್ತಮವಾದ ಸಂರಚನೆಗಳು ಸದ್ಯಕ್ಕೆ ಅಸ್ತಿತ್ವದಲ್ಲಿರದ ಕಾರಣಕ್ಕೋ ಏನೋ ಇವುಗಳನ್ನು ಕುರಿತಂತೆ ವ್ಯಾಖ್ಯಾನ ಮರು ವ್ಯಾಖ್ಯಾನಗಳು ನಿರಂತರವಾಗಿ ನಡೆಯುತ್ತಿವೆ.

ಹೀಗೆಂದ ತಕ್ಷಣಕ್ಕೆ ಯೂರೋಪಿಯನ್ ಒಕ್ಕೂಟ ನಮ್ಮ ಕಣ್ಣು ಮುಂದೆ ಬರುತ್ತದೆ. ಪೂರ್ವ ಮತ್ತು ಪಶ್ಚಿಮ ಜರ್ಮನಿಯು ಏಕೀಕರಣ ನೆನಪಾಗುತ್ತದೆ. ಆಧುನಿಕ ಜಗತ್ತಿನ ಚರಿತ್ರೆಯಲ್ಲಿ ರಾಷ್ಟ್ರದ ಸಂರಚನೆಯಲ್ಲಿ

ಯೂರೋಪು ಖಂಡವು ಉಳಿದೆಲ್ಲ ಖಂಡಗಳಿಗಿಂತ ಶತಮಾನಗಟ್ಟಲೆ ಮುಂದಿರುವಂತಹುದು. ಆಧುನಿಕ ಆವಿಷ್ಕಾರ, ಅಧಿಕ ಉತ್ಪಾದನೆ, ಮಾರುಕಟ್ಟೆಗಳ ಅನ್ವೇಷಣೆ, ಊಳಿಗಮಾನ್ಯತೆಯ ಅಂತ್ಯಗಳೊಂದಿಗೆ ಆರಂಭವಾದ ರಾಷ್ಟ್ರ ಸಂರಚನಾ ಪ್ರಕ್ರಿಯೆಯು ೨೦ನೇ ಶತಮಾನದ ಹೊತ್ತಿಗೆ ತುರೀಯಾವಸ್ಥೆಯನ್ನು ತಲುಪಿತು. ಮೂಲತಃ ಏಕ ಕೇಂದ್ರಿತ ಸ್ವರೂಪವುಳ್ಳ, ವಾಣಿಜ್ಯಾಧಾರಿತ ರಾಷ್ಟ್ರಗಳನ್ನೊಳಗೊಂಡ ಯೂರೋಪಿಗೆ ದೊಡ್ಡ ಸವಾಲಾಗಿದ್ದದ್ದು ಉತ್ತರ ಅಮೇರಿಕಾ ಖಂಡ. ೨೦ನೇ ಶತಮಾನದ ಕಡೆಯ ದಶಕದ ಹೊತ್ತಿಗೆ ಆರಂಭಗೊಂಡ ಜಾಗತೀಕರಣ ಪ್ರಕ್ರಿಯೆ ಸ್ವಭಾವದಲ್ಲಿ ಬೃಹತ್ತಾದುದನ್ನು ಆರಾಧಿಸುವಂತಹುದು. ಸಣ್ಣಪುಟ್ಟ ಸಂರಚನೆಗಳೆಲ್ಲ ನಾಶಗೊಳ್ಳುವ ಆತಂಕ ಎದುರಾದ ಸಂದರ್ಭವಿದು. ಈ ಕಾರಣಕ್ಕೋ ಏನೋ ಹೆಚ್ಚು ವೈವಿಧ್ಯಗಳಿಲ್ಲದ, ವೈರುಧ್ಯಗಳಿಲ್ಲದ ಯೂರೋಪಿನ ರಾಷ್ಟ್ರಗಳು ಒಂದು ನಾಣ್ಯ (ಯೂರೋ ಕರೆನ್ಸಿ) ಹಾಗೂ ಒಂದು ಒಕ್ಕೂಟ ವ್ಯವಸ್ಥೆಯನ್ನು ರೂಪಿಸಿಕೊಂಡಂತೆ ಕಾಣುತ್ತದೆ.

ಈ ಪ್ರಕ್ರಿಯೆಯನ್ನು ಕುರಿತಂತೆ ಜಗತ್ತಿನ ಅನೇಕ ಚಿಂತಕರು ಬಹು ದೊಡ್ಡ ವಿದ್ಯಮಾನವೆಂಬಂತೆ ಭಾವಿಸಿದರು. ಜೊತೆಗೆ ಇದನ್ನು ರಾಷ್ಟ್ರೀಯತಾವಾದೀ ಹೋರಾಟಗಳಿಗೆ ತೀವ್ರ ಹಿನ್ನಡೆಯೆಂದೂ ಭಾವಿಸಲಾಯಿತು. ವ್ಯಂಗ್ಯವೆಂದರೆ ಇದೇ ಹೊತ್ತಲ್ಲಿ ಸೋವಿಯತ್ ರಷ್ಯಾ ಒಕ್ಕೂಟ ಛಿದ್ರಗೊಂಡು ಅನೇಕ ಸ್ವತಂತ್ರ ಸಂರಚನೆಗಳಾದವು. ಪೂರ್ವ ತೈಮೂರ್ ಸ್ವತಂತ್ರ ರಾಷ್ಟ್ರವಾಗಿ ವಿಶ್ವಸಂಸ್ಥೆಯ ಪಟ್ಟಿಗೆ ಸೇರ್ಪಡೆಗೊಂಡಿತು. ಕೊಸಾವೊ-ಯುಗೊಸ್ಲಾವಿಯಾಗಳ ಅನನ್ಯತೆ ಕುರಿತಂತೆ ಬಿಕ್ಕಟ್ಟು ತೀವ್ರಗೊಂಡಿತು. ಭಾರತದಲ್ಲಿ ಅನೇಕ ಹೊಸ ರಾಜ್ಯಗಳು ಉದಯಿಸಿದವು. ಚೀನಾ-ಟಿಬೆಟ್ ಇಸ್ರೇಲ್-ಪ್ಯಾಲಸ್ತೈನುಗಳ ಸಮಸ್ಯೆ ಗಂಭೀರವಾಗತೊಡಗಿತು. ಚರಿತ್ರೆಯ ಚಲನೆಯ ಒಂದೇ ಬಿಂದುವಿನಲ್ಲಿ ನಡೆಯುತ್ತಿರುವ ಈ ವೈರುಧ್ಯಗಳಿಗೆ ಕಾರಣಗಳಾದರೂ ಏನು ಎನ್ನುವುದೇ ದೊಡ್ಡ ಪ್ರಶ್ನೆ.

೨೦ನೇ ಶತಮಾನದ ಆರಂಭದ ಕಾಲಕ್ಕೆ ಯೂರೋಪಿನಲ್ಲಿ ಅನೇಕ ಚಿಂತಕರು ಆಧುನಿಕ ರಾಷ್ಟ್ರ ಸಂರಚನೆಯನ್ನು ವಿರೋಧಿಸಿದ್ದಾರೆ. ಅದಕ್ಕೆ ಕಾರಣಗಳನ್ನು ಬಹುಶಃ ಈ ರೀತಿ ಪಟ್ಟಿ ಮಾಡಬಹುದು.

೧. ಏಕಕೇಂದ್ರಿತ ಸಂರಚನೆಗಳಾದ ಯೂರೋಪಿನ ರಾಷ್ಟ್ರಗಳಲ್ಲಿ ನಾಯಕ ಕೇಂದ್ರಿತ ಸಂಸ್ಕೃತಿ ಸುಲಭವಾಗಿ ಆರಂಭಗೊಂಡು ಅದು ಸರ್ವಾಧಿಕಾರತ್ವಕ್ಕೆ ದಾರಿ ಮಾಡಿಕೊಟ್ಟಿತು. ಅದನ್ನು ಟೀಕಿಸಿದವರನ್ನು, ಪ್ರಶ್ನಿಸಿದವರನ್ನು ಭೀಕರವಾಗಿ ದಮನಿಸಲಾಯಿತು.

೨. ಸ್ವಭಾವದಲ್ಲಿ ಮೂಲತಃ ವ್ಯಕ್ತಿ ವಿಶಿಷ್ಟವಾದವನ್ನು ವ್ಯಕ್ತಿ ಸ್ವಾತಂತ್ರ್ಯವನ್ನು ಬಯಸುವ ಯೂರೋಪಿಯನ್ನರಿಗೆ ಈ ಬೆಳವಣಿಗೆಗಳು ಆಘಾತಕರವಾಗಿದ್ದವು.

೩. ಏಕಕೇಂದ್ರಿತವಾದ ಯೂರೋಪಿನ ಸಂಸ್ಕೃತಿ ಎಲ್ಲ ಬಹುತ್ವಗಳನ್ನು ನಿರಾಕರಿಸಿ ಹುಟ್ಟಿತು. ಅನ್ಯದ ಕುರಿತು ಮಹಾ ಅಸಹನೆಯನ್ನು ವ್ಯಕ್ತಪಡಿಸತೊಡಗಿತು. ರಾಷ್ಟ್ರದ ಹೆಸರಲ್ಲಿ ಮಹಾಮಾನವ ಹತ್ಯೆಗಳು ನಡೆದವು.

೪. ಸಮುದಾಯದ ಪರವಾಗಿದ್ದ ಬ್ರೆಕ್ಟ್, ಗ್ರಾಮ್ಷಿ, ಲೋರ್ಕಾ ಮುಂತಾದ ಚಿಂತಕರು ಈ ಆಧುನಿಕ ರಾಷ್ಟ್ರಪ್ರಭುತ್ವಗಳಿಂದ ಅಪಾರ ಹಿಂಸೆ ಅನುಭವಿಸಿದರು.

ಪ್ರಮುಖವಾದ ಈ ಕಾರಣಗಳಿಂದಾಗಿ ಯೂರೋಪಿನ ಕೆಲ ಚಿಂತಕರು ರಾಷ್ಟ್ರ-ರಾಷ್ಟ್ರಪ್ರಭುತ್ವಗಳನ್ನು ಕುರಿತಂತೆ ನೇತ್ಯಾತ್ಮಕ ಧೋರಣೆ ತಳೆದಂತೆ ಕಾಣುತ್ತದೆ.

ಭಾರತವೂ ಒಳಗೊಂಡಂತೆ ಅನೇಕ ದೇಶಗಳ ಚಿಂತಕರು ಯೂರೋಪಿನ ಚಿಂತನೆಗಳಿಂದ ಪ್ರಭಾವಿತರಾದರು. ಬಹುಶಃ ಇದರ ಭಾಗವಾಗಿಯೇ ಕುವೆಂಪು, ರವೀಂದ್ರನಾಥ ಠಾಗೂರ್ ಮುಂತಾದವರು ವಿಶ್ವಾತ್ಮಕತೆ, ವಿಶ್ವಮಾನವತಾವಾದ ಇತ್ಯಾದಿಗಳನ್ನು ಪ್ರತಿಪಾದಿಸಿದಂತೆ ಕಾಣುತ್ತದೆ. ಈ ಚಿಂತಕರುಗಳು ತಮ್ಮ ಆಧುನಿಕ ಚಿಂತನೆಗಳಿಗೆ ವೈದಿಕ ಪಠ್ಯಗಳ ನೆರವನ್ನೂ ಪಡೆದರು. ಇದೇ ಸಂದರ್ಭದಲ್ಲಿ ಎಡಪಂಥೀಯ ಚಿಂತಕರು ಅಂತಾರಾಷ್ಟ್ರೀಯವಾದವನ್ನು ಪ್ರತಿಪಾದಿಸುತ್ತಿದ್ದರು.

ಕುವೆಂಪು, ಠಾಗೂರ್ ಮುಂತಾದ ಚಿಂತಕರು ತಾತ್ವಿಕವಾಗಿ ವಿಶ್ವಾತ್ಮಕತೆಯನ್ನು ಪ್ರತಿಪಾದಿಸುತ್ತಿದ್ದರೂ, ಸ್ವ ಅನನ್ಯತೆಯುಳ್ಳ ಸಂರಚನೆಗಳನ್ನು ನಿರಾಕರಿಸಲಿಲ್ಲ. ತನ್ನ ನೆಲದಲ್ಲಿ ಗಟ್ಟಿಯಾಗಿ ಬೇರು ಬಿಡದೆ ತಲೆಯೆತ್ತಲು ಸಾಧ್ಯವಿಲ್ಲ ಎನ್ನುವ ಅರಿವಿನಿಂದಲೇ ಅವರ ಚಿಂತನೆಗಳು ರೂಪುಗೊಂಡಂತಿವೆ. ರವೀಂದ್ರನಾಥ ಠಾಗೂರರ 'ನ್ಯಾಷನಲಿಸಂ' (೧೯೧೭) ಕೃತಿ ಮತ್ತು ಕುವೆಂಪುರ ಕನ್ನಡ ಕರ್ನಾಟಕ ಕುರಿತ ಖಚಿತ ನಿಲುವಿನ ಬರೆಹಗಳು ಇದಕ್ಕೆ ಉತ್ತಮ ಉದಾಹರಣೆಗಳು. ಅಷ್ಟೇ ಅಲ್ಲದೆ ಆಧುನಿಕ ಕರ್ನಾಟಕದ ಸಂವಿಧಾನದಂತಿರುವ ಆಲೂರು ವೆಂಕಟರಾಯರ ಕರ್ನಾಟಕತ್ವದ ವಿಕಾಸ ಕೃತಿ ಕೂಡ ವಿಶ್ವಾತ್ಮಕತೆಯ ಪ್ರತಿಪಾದನೆಯ ಜೊತೆಗೆ ತನ್ನೊಟ್ಟಿಗೆ ಬದುಕುತ್ತಿರುವ ಇತರ ಸಮುದಾಯಗಳೊಂದಿಗೆ ಹೇಗೆ ವರ್ತಿಸಬೇಕು, ಸಹನಶೀಲತೆ ಯಾಕೆ ಬೇಕು ಎನ್ನುವ ಅರಿವಿನೊಂದಿಗೆ ಆರಂಭಗೊಳ್ಳುತ್ತದೆ. ಈ ಚಿಂತನೆಗಳೆಲ್ಲ ಇಲ್ಲಿನ ನೆಲದಿಂದ ಹುಟ್ಟಿದ ಸಮುದಾಯ ಕೇಂದ್ರಿತ ಚಿಂತನೆಗಳು ಎನ್ನುವ ಅರಿವು ಇರಬೇಕಾಗುತ್ತದೆ. ಆಫ್ರಿಕ, ಏಷ್ಯಾ ರಾಷ್ಟ್ರಗಳ ಸಂರಚನೆಗಳಿಗಿಂತ ಶತಮಾನಗಟ್ಟಲೆ ಮುಂದಿದ್ದ ಯೂರೋಪು ತನ್ನ ವಾಣಿಜ್ಯ ಹಿತಾಸಕ್ತಿಯನ್ನು ಮುಖ್ಯವಾಗಿಟ್ಟುಕೊಂಡು ಒಕ್ಕೂಟ ವ್ಯವಸ್ಥೆಯತ್ತ ನಡೆಯುತ್ತಿದೆ. ಆದರೆ ಏಷ್ಯಾದ 'ಸಾರ್ಕ್' ಒಕ್ಕೂಟ 'ಆಸಿಯಾನ್' ಸಮ್ಮೇಳನಗಳು ಸಹಜವಾಗಿಯೇ ವಿಫಲವಾಗುತ್ತಿವೆ. ಏಕೆಂದರೆ ಭಾರತ, ಬಾಂಗ್ಲಾದೇಶ, ಬರ್ಮಾ, ಶ್ರೀಲಂಕಾ, ಪಾಕಿಸ್ತಾನ, ಭೂತಾನ್, ನೇಪಾಳದಂತಹ ರಾಷ್ಟ್ರಗಳು ಯೂರೋಪಿನಂತೆ ಒಂದೇ ವೇದಿಕೆಯಲ್ಲಿರಲು ಸಾಧ್ಯವಿಲ್ಲ. ಅತಿ ಬಲಿಷ್ಠ ಇಲ್ಲವೇ ಅತ್ಯಂತ ದುರ್ಬಲ ಸ್ಥಿತಿಯಲ್ಲಿ ಒಕ್ಕೂಟ ವ್ಯವಸ್ಥೆ ಸಾಧ್ಯವಿಲ್ಲವೆನ್ನುವುದೇ ಈ ಕೂಟಗಳ ವಿಫಲತೆಗೆ ಸಾಕ್ಷಿಯಾದಂತಿದೆ.

ಭಾರತದ ಸಂದರ್ಭದಲ್ಲಿ ಕೂಡ ಇದು ನಿಜವೆನ್ನುವಂತೆ ಕಾಣುತ್ತದೆ. ಭಾಷಿಕ, ಸಾಂಸ್ಕೃತಿಕ, ಧಾರ್ಮಿಕ ನೆಲೆಗಟ್ಟುಗಳಲ್ಲಿ ವಿಭಿನ್ನವಾಗಿರುವ ಸಂರಚನೆಗಳಿವೆ. ಕುವೆಂಪು ತಮ್ಮ ಕರ್ನಾಟಕ ರಾಷ್ಟ್ರ ಗೀತೆಯಲ್ಲಿ ಆಲೂರರು ಕರ್ನಾಟಕತ್ವದ ವಿಕಾಸದಲ್ಲಿ ಈ ಬಹುತ್ವಗಳನ್ನು ಆರೋಗ್ಯವಂತ ರಾಷ್ಟ್ರದ ಲಕ್ಷಣವೆನ್ನುವಂತೆ ಭಾವಿಸುತ್ತಾರೆ. ಆದರೆ ಕನ್ನಡದಲ್ಲೂ ಕುವೆಂಪು ಮುಂತಾದವರ ತತ್ವಗಳಿಗೆ ವಿರುದ್ಧವಾದ ಚಿಂತನೆಗಳೂ ಇವೆ. ಇವು ಯೂರೋಪಿನ ಚಿಂತನೆಗಳಿಂದ ಕಡ ಪಡೆದಂತೆ ಭಾಸವಾಗುವ ಈ ಚಿಂತನೆಗಳು 'ಬಹುತ್ವ'ವನ್ನು ದ್ವೇಷಿಸುತ್ತವೆ. ಅನೇಕತೆಯನ್ನು ತಿರಸ್ಕರಿಸುತ್ತವೆ. ಒಂದು ಧರ್ಮ, ಒಂದು ರಾಷ್ಟ್ರ, ಏಕರೂಪ ನಾಗರಿಕ ಸಂಹಿತೆ, ಒಂದು ಪ್ರಧಾನ ಭಾಷೆ ಇತ್ಯಾದಿಗಳನ್ನು ಪ್ರತಿಪಾದಿಸುತ್ತವೆ. ಈ ಚಿಂತನೆಗಳ ಪ್ರತಿಪಾದನೆಯ ಮಧ್ಯದಿಂದಲೇ ಹುಟ್ಟುವ 'ಫ್ಯಾಸಿಸ್ಟ್' ಗುಣ ಮೂಲತಃ ಯೂರೋಪಿನಲ್ಲಿ ರೂಪುಗೊಂಡಂತಹುದು ಎನ್ನುವುದು ಅರಿವಾಗುತ್ತದೆ.

ಕನ್ನಡದ ಚಿಂತನಾ ಪರಂಪರೆಯಲ್ಲಿ ಏಕ ಕೇಂದ್ರಿತವಾದ ರಾಷ್ಟ್ರ ಚಿಂತನೆ ಪ್ರಧಾನವಾದುದಲ್ಲವಾದರೂ ಸಮಸ್ಯಾತ್ಮಕವಂತೂ ಹೌದು.

ರಾಷ್ಟ್ರೀಯತೆಗಳು ರಾಜಕೀಯ ಸ್ವರೂಪದಲ್ಲಿ ಭಾರತ ಮತ್ತು ರಷ್ಯಾ ಸಮಾನ ನೆಲೆಗಟ್ಟಿನ ಮೇಲೆ ನಿಲ್ಲುತ್ತವೆ ಅನ್ನಿಸಿದರೂ ಆರಂಭದಲ್ಲಿಯೇ ದೊಡ್ಡ ವ್ಯತ್ಯಾಸವೊಂದು ತಟ್ಟನೆ ಉದ್ಭವಿಸುತ್ತದೆ. ಭಾರತದ ಬಹುತ್ವವಾದಿ ರಾಷ್ಟ್ರ ಚಿಂತನೆಗೆ ವರ್ಗ ಸ್ವಭಾವಗಳ ಅರಿವಿಲ್ಲದಿರುವುದು, ಅದನ್ನು ಕುವೆಂಪು ಮುಂತಾದವರು ತಮ್ಮ ಚಿಂತನೆಗಳಲ್ಲಿ ಈ ಕೊರತೆಯನ್ನು ಮೀರಲು ಪ್ರಯತ್ನಿಸುತ್ತಾರೆ. ಇದರ ಜೊತೆಗೆ ವರ್ಗ ಸಿದ್ಧಾಂತವನ್ನು ಪ್ರತಿಪಾದಿಸುವ ಚಿಂತನೆ ವ್ಯಕ್ತಿ ವಿಶಿಷ್ಟತೆಯನ್ನು ಗೌರವಿಸದಿರುವ ಸಮಸ್ಯೆಯಿದೆ. ಸಾಂಪ್ರದಾಯಕ ಎಡಪಂಥೀಯ ಚಿಂತನೆಗಳು ಈ ಸಮಸ್ಯೆಯ ಮಧ್ಯೆ ಸಿಲುಕಿರುವಂತೆ ಕಾಣುತ್ತವೆ. ರಾಮಮನೋಹರ ಲೋಹಿಯಾರ ಸಮಾಜವಾದಿ ಚಿಂತನೆ ಮಾರ್ಕ್ಸ್‌ವಾದದ ಈ ಸಮಸ್ಯೆಯನ್ನು ಗಮನಿಸಿ ಅದನ್ನು ಮೀರಲು ಯತ್ನಿಸಿದೆ. ಚೀನಾದಲ್ಲಿ ಮಾವೊತ್ಸೆತುಂಗ್ ಕೂಡ ಈ ಪ್ರಯತ್ನ ಮಾಡಿದ್ದಾರೆ

ಈ ಮೇಲಿನ ಅಂಶಗಳನ್ನು ಪರಿಶೀಲಿಸಿದಾಗ ಮತ್ತೊಮ್ಮೆ ಅನ್ನಿಸುವ ವಿಚಾರವೆಂದರೆ ರಾಷ್ಟ್ರ-ರಾಷ್ಟ್ರೀಯತೆಗಳೆಂಬ ಚಿಂತನೆ ನಿರ್ದಿಷ್ಟ ಚಾರಿತ್ರಿಕ ಕಾಲ ದೇಶಬದ್ಧವಾದುದು. ಅದು ಯಾವ ಕಾರಣಕ್ಕೂ ಸಾರ್ವತ್ರಿಕವಾದುದಲ್ಲ ಎನ್ನಿಸುತ್ತದೆ. ಹಾಗಾಗಿಯೇ ಏಷ್ಯಾದ ರಾಷ್ಟ್ರಗಳಲ್ಲಿ ಅನನ್ಯತೆಗಾಗಿ ಹೋರಾಟಗಳು ನಡೆಯುತ್ತಿದ್ದರೆ ಯೂರೋಪಿನಲ್ಲಿ ಒಕ್ಕೂಟದ ಆಸಕ್ತಿಗಳು ತೀವ್ರವಾಗಿವೆ. ಈ ಅರಿವು ಇಲ್ಲದ ಚಿಂತನೆಗಳು ಅಷ್ಟರಮಟ್ಟಿಗೆ ಆಯಾ ಸಮಾಜದ ಮಟ್ಟಿಗೆ ಸಮಸ್ಯಾತ್ಮಕವಾಗಿರುತ್ತದೆ ಎನ್ನಿಸುತ್ತದೆ.

೨

ಈ ಚರ್ಚೆಯಲ್ಲಿ ಮತ್ತೆ ಮತ್ತೆ ಬರುವ ಪರಿಕಲ್ಪನೆಗಳಾದ ರಾಷ್ಟ್ರ, ರಾಷ್ಟ್ರಪ್ರಭುತ್ವ, ರಾಷ್ಟ್ರೀಯತೆ ಮತ್ತು ರಾಷ್ಟ್ರೀಯವಾದ ಇವುಗಳು ತಾತ್ವಿಕ ಸ್ಪಷ್ಟತೆಯನ್ನಂತೂ ಬಯಸುತ್ತವೆ. ಈ ನಾಲ್ಕು ಪರಿಕಲ್ಪನೆಗಳು ಮಾತ್ರ ಭಾರತ ಮತ್ತು ಪಶ್ಚಿಮದ ಚಿಂತಕರ ಚಿಂತನೆಗಳಲ್ಲಿ ಕೂಡ ಅತ್ಯಂತ ಸಂಕೀರ್ಣವಾಗಿ ಅನೇಕ ಬಾರಿ ಗೊಂದಲಗಳಲ್ಲಿಯೇ ಮುಗಿಯುತ್ತವೆ. ಏಕೆಂದರೆ ಈ ನಾಲ್ಕು ಪರಿಕಲ್ಪನೆಗಳೂ ಸಹ ಅನೇಕ ಸಾರಿ ಸಣ್ಣ ಸಣ್ಣ ವ್ಯತ್ಯಾಸಗಳೊಂದಿಗೆ ಒಂದೇ ಎಂಬಂತೆಯೂ ಕಾಣುತ್ತವೆ.

ಕನ್ನಡದ ಇತಿಹಾಸ ಚಿಂತಕರಾದ ರಾಜಾರಾಮ ಹೆಗಡೆಯವರು ಈ ಪರಿಕಲ್ಪನೆಗಳನ್ನು ಕುರಿತಂತೆ ಹೀಗೆ ವಿವರಿಸುತ್ತಾರೆ.

"ರಾಷ್ಟ್ರ (ನೇಷನ್ ಸ್ಟೇಟ್) ಎಂಬುದು ಒಂದು ಆಧುನಿಕ ಸಂಗತಿಯಾಗಿದೆ. ರಾಷ್ಟ್ರ ಎಂಬ ಸಂಸ್ಕೃತ ಶಬ್ದಕ್ಕೆ ಒಂದು ಪ್ರಭುತ್ವ (ಸಾರ್ವಭೌಮತ್ವ)ಕ್ಕೆ ಒಳಪಟ್ಟ ಪ್ರದೇಶ ಎಂಬ ಅರ್ಥವಿದೆ. ಆದರೆ ಆಧುನಿಕ ರಾಷ್ಟ್ರ ಒಂದು ಸಾಂಸ್ಕೃತಿಕ ಗುರುತು ಆ ಗುರುತಿಗೆ ಆ ರಾಷ್ಟ್ರದ ಪ್ರಜೆಗಳೆಲ್ಲ ವಿಧೇಯರಾಗಿರಬೇಕಾಗುತ್ತದೆ. ಈ ತರದ ವಿಧೇಯತೆಯನ್ನು ರಾಷ್ಟ್ರೀಯತೆ (ನ್ಯಾಶನಾಲಿಟಿ) ಎಂದು ಸೂಚಿಸಲಾಗುತ್ತದೆ. ಈ ರೀತಿ ರಾಷ್ಟ್ರವೊಂದು ಏಕಕಾಲಕ್ಕೆ ರಾಜಕೀಯ ಹಾಗೂ ಸಾಂಸ್ಕೃತಿಕ ಪ್ರಭುತ್ವವಾಗಿದೆ. ಈ ರಾಷ್ಟ್ರೀಯತೆ ಸಂಸ್ಕೃತ ರಾಷ್ಟ್ರಕ್ಕೆ ಆಧುನಿಕ ಕಾಲದಲ್ಲಿ ದೊರೆತ ಹೊಸ ಆಯಾಮ. ಯುರೋಪಿನಲ್ಲಿ ಆಧುನಿಕ ಕಾಲದಲ್ಲಿ ಈ

ವಿಶಿಷ್ಟ ರೂಪದಲ್ಲಿ ಅಸ್ತಿತ್ವಕ್ಕೆ ಬಂದ ರಾಷ್ಟ್ರ ಒಂದು ಸಾಮಾಜಿಕ ಉದ್ಧಾರದ ಸಂಕೇತವಾಗಿ ಪ್ರಪಂಚದ ಉಳಿದ ಭಾಗಗಳಿಗೆ ಪಸರಿಸಿತು. ಆದರೆ 'ರಾಷ್ಟ್ರ' ಎಂಬುದೊಂದು ಕೇವಲ ಸರ್ಕಾರ ಆಗದೆ ಸಾಮಾಜಿಕ ಬದುಕು ಭವಿಷ್ಯಗಳ ಒಂದು ಭಾವಸಾತ್ಮಕ ಆಸರೆಯಾಗಬೇಕು ಎಂಬುದು ಈ 'ರಾಷ್ಟ್ರ' ಎಂಬ ಕಾರ್ಯಕ್ರಮದ ಉದ್ದೇಶ."೧

ರಾಜಾರಾಮ ಹೆಗಡೆಯವರು ಈ ಕೆಲವೇ ವಾಕ್ಯಗಳಲ್ಲಿ ಅತಿಮುಖ್ಯವಾದ ಅಂಶಗಳನ್ನು ಚರ್ಚಿಸಿದ್ದಾರೆ. ರಾಷ್ಟ್ರ (ಸಂಸ್ಕೃತ ರಾಷ್ಟ್ರ -ಆಧುನಿಕ ರಾಷ್ಟ್ರ), ರಾಷ್ಟ್ರ ಪ್ರಭುತ್ವ (ಇವೆರಡೂ ಭಿನ್ನವಲ್ಲವೆಂಬಂತೆ) ಮತ್ತು ರಾಷ್ಟ್ರೀಯತೆ ಈ ಮೂರು ಪರಿಕಲ್ಪನೆಗಳನ್ನು ಸೂಚ್ಯವಾಗಿ ವಿವರಿಸುವಾಗ ಅವರ ಮುಂದೆ ಪಶ್ಚಿಮದ ವ್ಯಾಖ್ಯಾನಗಳೇ ಇರುವಂತಿವೆ. ಈಗಾಗಲೇ ತೀರ್ಮಾನವಾದ ಅಥವಾ ರಚನೆಗೊಂಡ 'ಏಕ' ಮಾದರಿಯ ನಿಲುವು ಇದರ ಹಿಂದೆ ಇರುವಂತಿದೆ. ಆಶ್ಚರ್ಯವೆಂದರೆ ಸಂಸ್ಕೃತದ ರಾಷ್ಟ್ರವೇ ಆಧುನಿಕ ರಾಷ್ಟ್ರಕ್ಕಿಂತ ಹೆಚ್ಚು ರಾಜಕೀಯವಾದುದು ಎನ್ನುವ ನಿಲುವೂ ಇಲ್ಲಿ ಕಾಣಿಸುತ್ತದೆ. ಆಧುನಿಕ ರಾಷ್ಟ್ರದ ಮುಖ್ಯ ಚಹರೆಯೆ ಸಾಂಸ್ಕೃತಿಕವಾದುದು. ಈ ಸಾಂಸ್ಕೃತಿಕ ಚಹರೆಯ ಮೂಲಕವೇ ರಾಷ್ಟ್ರಕ್ಕೆ ವಿಧೇಯತೆಯನ್ನು ಸೃಷ್ಟಿಸುವ ವಿದ್ಯಮಾನವನ್ನು ರಾಷ್ಟ್ರೀಯತೆ ಎಂದು ಅವರು ಕರೆಯುತ್ತಾರೆ. ಮತ್ತು ಸ್ಪಷ್ಟವಾಗಿ ಈ ಆಧುನಿಕ ರಾಷ್ಟ್ರಕ್ಕೆ ಕಲ್ಯಾಣಕಾರಕ ಆಶಯವೂ ಇರುತ್ತದೆ ಎನ್ನುವುದನ್ನು ಗುರುತಿಸುತ್ತಾರೆ. ಇಲ್ಲಿ ಸಂಸ್ಕೃತಿ ಎನ್ನುವುದು ಸಮಗ್ರವನ್ನು ಒಳಗೊಳ್ಳುವ ರಾಜಕೀಯ ಸಂಗತಿ ಎನ್ನುವ ಅರಿವು ಆಳದಲ್ಲಿ ಇರುವಂತಿದೆ.

ಭಾರತದಂತಹ ಬಹುತ್ವವಾದಿ ರಾಷ್ಟ್ರಗಳಿಗೆ ಈ ವ್ಯಾಖ್ಯಾನವನ್ನು ಸಾಮಾಜಿಕ ರಾಜಕೀಯ ವಾಸ್ತವಗಳಿಗೆ ಅನ್ವಯಮಾಡಿ ನೋಡಲು ಹೊರಟ ಕೂಡಲೇ ವೈರುಧ್ಯಗಳು ಎದ್ದು ನಿಲ್ಲತೊಡಗುತ್ತವೆ. ಅನೇಕ ಸಂಸ್ಕೃತಿಗಳು, ಭಾಷೆಗಳು, ಭೂಪ್ರದೇಶಗಳು, ಧರ್ಮಗಳು, ಸಮುದಾಯಗಳು ನೆಲೆಸಿರುವ ಇಲ್ಲಿ ಮೇಲಿನ ವ್ಯಾಖ್ಯಾನವನ್ನು ಅನ್ವಯಿಸುವುದು ಹೇಗೆ ಎನ್ನುವ ಸಮಸ್ಯೆ ಸಹಜವಾಗಿ ಎದುರಾಗುತ್ತದೆ.

ರಾಜರಾಮ ಹೆಗಡೆಯವರು 'ರಾಷ್ಟ್ರೀಯತೆ' ಎಂದು ಕರೆದಿರುವ ಪರಿಕಲ್ಪನೆಯನ್ನು ರವೀಂದ್ರನಾಥ ಠಾಗೂರರು 'ರಾಷ್ಟ್ರೀಯವಾದ' ಎಂಬ ಪರಿಕಲ್ಪನೆಯ ಮೂಲಕ ವಿವರಿಸಿದ್ದಾರೆ. ಠಾಗೂರರ 'ರಾಷ್ಟ್ರೀಯವಾದ' ಸಾಂಸ್ಕೃತಿಕ ನೆಲೆಗಟ್ಟಿನ ಮೇಲೆ ನಿಂತಿದೆಯೆನಿಸುತ್ತದೆ. ಆದರೆ ೧೯೧೭ರಲ್ಲಿ ಪ್ರಕಟಗೊಂಡಿರುವ 'ರಾಷ್ಟ್ರೀಯವಾದ'ವೆಂಬ ಮೂರು ಬರಹಗಳನ್ನುಳ್ಳ ಚಿಕ್ಕ ಪುಸ್ತಕ ಸಾರಾಂಶದಲ್ಲಿ ರಾಷ್ಟ್ರೀಯತೆ ಕುರಿತು ನೇತ್ಯಾತ್ಮಕ ಧೋರಣೆಯ ಧಾಟಿಯದು. ಠಾಗೂರರು ತಮ್ಮ ಚಿಂತನೆಯ ಆತ್ಯಂತಿಕತೆಯಲ್ಲಿ "ರಾಷ್ಟ್ರೀಯತೆ ಎನ್ನುವುದೇ ದೊಡ್ಡ ಪಿಡುಗು"೨ ಎಂದು ಬಿಡುತ್ತಾರೆ.

ಯುರೋಪಿನ ವ್ಯಕ್ತಿ ವಿಶಿಷ್ಟವಾದವನ್ನು ಒಪ್ಪಿಕೊಂಡಿದ್ದ ಠಾಗೂರರು ವ್ಯಕ್ತಿ ರಾಷ್ಟ್ರಕ್ಕಾಗಿ ತ್ಯಾಗಮಾಡುವ ಪ್ರಸ್ತಾಪವನ್ನೇ ವಿರೋಧಿಸುತ್ತಾರೆ.

"ರಾಷ್ಟ್ರೀಯವಾದ ನಿಂತಿರುವುದೇ ಬೆದರಿಕೆಯ ಮೇಲೆ, ಅದು ಅನ್ಯರ ವಿರುದ್ಧ ಒಗ್ಗೂಡುವುದನ್ನು ಒತ್ತಾಯಿಸುತ್ತದೆ"೩ ಮತ್ತು "ಸಮಾಜದ ಸದಸ್ಯರು ಒಗ್ಗೂಡುವುದು ಅಧಿಕಾರಕ್ಕಾಗಿ........ ಅದು ವ್ಯಕ್ತಿತ್ವವನ್ನು ಸಂಕುಚಿತಗೊಳಿಸಿ ದುರಾಶ ಪೀಡಿತರನ್ನಾಗಿಸುತ್ತದೆ. ಅದಕ್ಕಾಗಿ ನಾನು ನಿರ್ದಿಷ್ಟವಾಗಿ ಒಂದು ರಾಷ್ಟ್ರವನ್ನು ವಿರೋಧಿಸದಿದ್ದರೂ, ರಾಷ್ಟ್ರಗಳ ಸಾಮಾನ್ಯ ನಿಲುವುಗಳನ್ನು ವಿರೋಧಿಸುತ್ತೇನೆ"೪ ಎನ್ನುತ್ತಾರೆ.

ತನ್ನ ಕಾಲದ ಭಾರತದ ರಾಜಕೀಯ ತುರ್ತುಗಳ ನಡುವೆಯೂ ಠಾಕೂರರು ರಾಷ್ಟ್ರೀಯವಾದವನ್ನು ನಿರಾಕರಣೆಯ ಧಾಟಿಯಲ್ಲಿ ನೋಡುವುದು ಆಶ್ಚರ್ಯ ಹುಟ್ಟಿಸುತ್ತದೆ. ತನ್ನ ರಾಷ್ಟ್ರದಲ್ಲಿನ ಅತ್ಯುನ್ನತವಾದುದನ್ನು ಆಯ್ದು ವಿಶ್ವಾತ್ಮಕ ನಿಲುವುಗಳನ್ನು ಪ್ರತಿಪಾದಿಸುವ ಕೆಲಸವನ್ನು ಠಾಕೂರರು ಮಾಡುತ್ತಾರೆ. ಇದು ಪಶ್ಚಿಮದ ರಿನೇಸಾನ್ಸ್ ಚಿಂತನೆಗಳ ಪ್ರಭಾವದಿಂದಾಗಿರಬಹುದು.

ಬಂಕಿಮಚಂದ್ರ ಚಟರ್ಜಿಯವರು 'ಆನಂದಮಠ' ಕಾದಂಬರಿಯನ್ನು ಒಳಗೊಂಡು ಅನೇಕ ಬರೆಹಗಳಲ್ಲಿ ವ್ಯಕ್ತಿಯ 'ತ್ಯಾಗ' ಬಲಿದಾನಗಳನ್ನು ಆರಾಧನಾ ಭಾವದಿಂದ ವಿವರಿಸುವ ನಿಲುವಿಗೆ ಠಾಗೂರರು ವಿರುದ್ಧವಾಗಿ ನಿಂತು ಯೋಚಿಸುವಂತೆ ಕಾಣಿಸುತ್ತಾರೆ. ಚಟರ್ಜಿಯವರು ಅನ್ಯ ಸಂಸ್ಕೃತಿಗಳನ್ನು ಕುರಿತಂತೆ ಮಾಡಿರುವ ಆಕ್ಷೇಪಣಾಕಾರಿ ಧಾಟಿ ಬಲಪಂಥೀಯ ಚಿಂತಕರಿಗೆ ಹಿತವೆನ್ನಿಸುತ್ತವೆ. ಆದರೆ ಬಹುಶಃ ರಾಷ್ಟ್ರಕವಿ ಎನ್ನಿಸಿಕೊಂಡ ಠಾಕೂರರು ಚಟರ್ಜಿಯವರ ನಿಲುವನ್ನು ಮನುಷ್ಯ ವಿರೋಧಿ ನಿಲುವು ಎನ್ನುವಂತೆ ಗ್ರಹಿಸಿದ ಹಾಗೆ ಕಾಣುತ್ತದೆ.

(ರಾಷ್ಟ್ರಕ್ಕಾಗಿ ವ್ಯಕ್ತಿ ತ್ಯಾಗಮಾಡಬೇಕು ಎನ್ನುವ ನಿಲುವನ್ನು ಬಲಪಂಥೀಯರು ಹಿಟ್ಲರ್‌ನ ಜರ್ಮನಿಯಿಂದ ಕಡ ಪಡೆದಿದ್ದಾರೆನ್ನುವುದು ನಿಜವಾದರೂ, ಅದು ಊಳಿಗಮಾನ್ಯತೆಯ ಪ್ರಧಾನ ಲಕ್ಷಣ ಎನ್ನುವುದು ಬಂಕಿಮಚಂದ್ರರ ಬರಹಗಳಲ್ಲಿ, ವೈದಿಕ ಪಠ್ಯಗಳಲ್ಲಿ ಹಾಗೂ ವೀರಗಲ್ಲು-ಮಾಸ್ತಿಕಲ್ಲುಗಳೆಂಬ ಸ್ಮಾರಕಗಳಲ್ಲಿ ನೋಡಬಹುದು.)

ಠಾಗೂರರ ಈ ಬರೆಹಗಳಲ್ಲೆಲ್ಲ ರಾಷ್ಟ್ರೀಯವಾದವೆನ್ನುವುದು ಹಲವು ಮಿತಿಗಳ ಮೊತ್ತವಾಗಿ ಭಾವಿತವಾಗುತ್ತದೆ. ಪರಂಪರೆಯಲ್ಲಿನ ಕೆಲ ಉತ್ತಮ ಅಂಶಗಳನ್ನು ಸೇರಿಸಿ 'ಆದರ್ಶ' ರಾಷ್ಟ್ರವೊಂದರ ಪ್ರತಿಪಾದನೆ ಮಾಡುತ್ತಾರೆ. ರಾಜಾರಾಮಹೆಗಡೆಯವರ ಚಿಂತನೆಗಳಲ್ಲಿ ರಾಷ್ಟ್ರವೊಂದು ನಿರ್ದಿಷ್ಟತೆಗಾಗಿ ಆಶಿಸಿದರೆ, ಠಾಗೂರರು ನಿರ್ದಿಷ್ಟತೆಯನ್ನು ನಿರಾಕರಿಸಿ ನಡೆಯುತ್ತಾರೆ.

೧೮೮೨ಕ್ಕಿಂತ ಮೊದಲೇ ಯುರೋಪಿನ ಚಿಂತಕನಾದ ಅರ್ನೆಸ್ಟ್‌ರೆನಾನ್ ರಾಷ್ಟ್ರವೊಂದು ರೂಪುಗೊಳ್ಳುವುದೇ ತನ್ನ 'ನೆನಪುಗಳನ್ನು ಸಂಘಟಿಸಿ'ಕೊಳ್ಳುವುದರ ಮೂಲಕ ಎಂದು ಹೇಳುತ್ತಾನೆ. ಆತ ಇಡೀ ರಾಷ್ಟ್ರೀಯತಾ ಚರ್ಚೆಗೆ ಸಾಂಸ್ಕೃತಿಕತೆಯ ಲೇಪವನ್ನೂ ಹಚ್ಚಲು ಪ್ರಯತ್ನಿಸುತ್ತಾನೆ. ನಂತರ ಮಾರ್ಕ್ಸ್‌ವಾದಿಗಳೂ ಸೇರಿದಂತೆ ರಾಷ್ಟ್ರ-ರಾಷ್ಟ್ರೀಯತೆಗಳ ಚರ್ಚೆಗಳಲ್ಲಿ 'ಸಂಸ್ಕೃತಿ' ಎನ್ನುವುದು ನಿರ್ಣಾಯಕ ಪಾತ್ರವಹಿಸುತ್ತದೆ ಎನ್ನುವ ಗ್ರಹಿಕೆಯಿಂದಲೇ ಆರಂಭಿಸುತ್ತಾರೆ. ಈ ಎಲ್ಲ ಚಿಂತನೆಗಳನ್ನು ಸಂಗ್ರಹಿಸಿ 'ಕೀವರ್ಡ್ಸ್' ಕೃತಿಯನ್ನು ರೂಪಿಸಿದ ರೇಮಂಡ್ ವಿಲಿಯಮ್ಸ್ ಈ ಪರಿಕಲ್ಪನೆಗಳನ್ನು ಹೀಗೆ ವಿವರಿಸಿದ್ದಾನೆ.

ರಾಷ್ಟ್ರ, ನಿರ್ದಿಷ್ಟ ಭೂಪ್ರದೇಶದಲ್ಲಿ ವಾಸಿಸುತ್ತಿರುವ ಒಂದು ಜನಾಂಗಿಕ ಗುಂಪು ಅಥವಾ ಸಮುದಾಯ. ಇದರಲ್ಲಿ ನಾವೆಲ್ಲರೂ ಒಂದು ಎನ್ನುವ ಭಾವನೆ ಇರುತ್ತದೆ. ಇದಕ್ಕೆ ಪೂರಕವಾಗಿ ಭಾಷೆ, ಸಂಸ್ಕೃತಿಗಳೆಲ್ಲವೂ ದುಡಿಯುತ್ತಿರುತ್ತವೆ.

ರಾಷ್ಟ್ರಪ್ರಭುತ್ವ: ರಾಷ್ಟ್ರದ ಎಲ್ಲ ಲಕ್ಷಣಗಳನ್ನು ಒಳಗೊಂಡಿರುತ್ತದೆ. ಜೊತೆಗೆ ಇಲ್ಲಿ ಸ್ವಾಯತ್ತತೆ, ಸಾರ್ವಭೌಮತೆ ಮತ್ತು ತಾನು ಇತರರಿಗಿಂತ ಭಿನ್ನ ಎನ್ನುವ ನಿಲುವನ್ನು ಹೊಂದಿರುತ್ತದೆ. ಅಲ್ಲದೆ ಇದಕ್ಕೆ ನಿರ್ದಿಷ್ಟವಾದ ಗಡಿ ಮತ್ತು ಭೂಪಟಗಳಿರುತ್ತವೆ. ಸರ್ಕಾರಿ ಸಂಸ್ಥೆಗಳಾದ ಮಿಲಿಟರಿ, ಕಾನೂನು, ಸಂವಿಧಾನ,

ರಾಷ್ಟ್ರಧ್ವಜ, ರಾಷ್ಟ್ರಗೀತೆ, ರಾಜಕೀಯ, ಸಾಮಾಜಿಕ, ಆರ್ಥಿಕ ವ್ಯವಸ್ಥೆ ಇತ್ಯಾದಿಗಳು ರಾಷ್ಟ್ರ ಪ್ರಭುತ್ವಕ್ಕೆ ಪೂರಕವಾಗಿ ದುಡಿಯುತ್ತಿರುತ್ತವೆ.

ಒಟ್ಟಾರೆ ಮೇಲಿನ ಎಲ್ಲಾ ಅಂಶಗಳನ್ನು ನೋಡಿದಾಗ ಈ ಪರಿಕಲ್ಪನೆಗಳ ನಡುವಿನ ವ್ಯತ್ಯಾಸದ ಗೆರೆಗಳು ತೀರಾ ತೆಳುವಾಗಿರುವಂತೆ ಕಾಣುತ್ತವೆ. ಆಳದಲ್ಲಿ ಇವು ಸಂಕೀರ್ಣಗೊಳ್ಳುತ್ತಾ ಹೋಗುತ್ತವೆ. ಕನ್ನಡದ ಅನೇಕ ಚಿಂತಕರ ಮೇಲೂ ಯುರೋಪಿನ ಈ ಚಿಂತನೆಗಳು ನೇರವಾಗಿ ಪ್ರಭಾವಿಸಿದಂತೆ ಕಾಣುತ್ತದೆ.

೩

ಕನ್ನಡ ಚಿಂತಕರು ರಾಷ್ಟ್ರತ್ವ ಕುರಿತಂತೆ ಭಿನ್ನ ಭಿನ್ನವಾದ ಆಶಯಗಳನ್ನು ವ್ಯಕ್ತಪಡಿಸಿದ್ದಾರೆ.

೧. ಕುವೆಂಪುರವರ ಅಭಿಪ್ರಾಯದಂತೆ, "ರಾಜ್ಯಗಳಿಗೆ ಸ್ವಾಯತ್ತತೆ ಅಗತ್ಯ, ಅಮೆರಿಕದ ಸ್ಟೇಟ್‌ಗಳಿರುವಂತೆ. ಅಲ್ಲಿ ಹೊಸ ಹೊಸ ಸಂಸ್ಥಾನಗಳು ಉದ್ಭವಿಸುತ್ತಲೇ ಇವೆ. ಅವುಗಳಿಗೂ ಸ್ವಾತಂತ್ರ್ಯವಿರುತ್ತದೆ, ರಾಷ್ಟ್ರಕ್ಕೂ ಭದ್ರತೆ ಇರುತ್ತದೆ. ನಮ್ಮದು United States of India ಆಗಬೇಕೆಂಬುದೇ ನನ್ನ ದೃಢವಾದ ಅಭಿಪ್ರಾಯ. ಇದು ಇಂದಲ್ಲ ನಾಳೆ ಆಗುತ್ತದೆ. ಇಲ್ಲವಾದರೆ ಪಂಜಾಬಿನಲ್ಲಿ ನಡೆಯುತ್ತಿರುವ ವಿದ್ಯಮಾನಗಳಂಥ ಘಟನೆಗಳು ನಿಲ್ಲುವುದಿಲ್ಲ. ರಾಜ್ಯಗಳು ಸ್ವಾಯತ್ತವಾಗಿರಲಿ ಸೈನ್ಯ ಮುಂತಾದ ವ್ಯವಸ್ಥೆಗಳು ಕೇಂದ್ರದ ಕೈಯಲ್ಲಿರಲಿ"[೫]

ಕುವೆಂಪು ನೇರವಾಗಿಯೇ ಅಮೆರಿಕಾ ಮಾದರಿಯ ರಾಷ್ಟ್ರವೊಂದರ ಅಗತ್ಯವನ್ನು ಪ್ರತಿಪಾದಿಸುತ್ತಿದ್ದಾರೆ. ಭಾರತದ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ವ್ಯಕ್ತಗೊಂಡಿದ್ದ ಆರೋಗ್ಯಕರ ಒಕ್ಕೂಟ ವ್ಯವಸ್ಥೆಯ ಪ್ರತಿಪಾದನೆಯನ್ನು ನೆನಪಿಸುತ್ತಿದ್ದಾರೆ. ರಾಷ್ಟ್ರಪ್ರಭುತ್ವ ಏಕಘನಾಕೃತಿಯ ಸ್ವರೂಪ ಪಡೆದುಕೊಳ್ಳತೊಡಗಿದಷ್ಟು ಬಿಡುಗಡೆಯ ಬೇಡಿಕೆಗಳು ಹೆಚ್ಚುತ್ತವೆ ಎನ್ನುವ ಸಿದ್ಧಾಂತವನ್ನು ಮಂಡಿಸುತ್ತಾರೆ. ಕೇಂದ್ರಕ್ಕಿಂತ ಸ್ವಾಯತ್ತವಾದ, ಬಲಿಷ್ಠವಾದ ಅಂಚುಗಳು ಮುಖ್ಯ ಎನ್ನುವ ನಿಲುವು ಇರುವಂತಿದೆ. ತಾತ್ವಿಕವಾಗಿ ರಷ್ಯಾದ ಪರವಿದ್ದಂತಿದ್ದ ಕುವೆಂಪು ವ್ಯಕ್ತಿಸ್ವಾತಂತ್ರ್ಯ ಮತ್ತು ಇನ್ನಿತರ ಕಾರಣಗಳಿಗಾಗಿ ಫೆಡರಲ್ ಅಮೆರಿಕ ಮಾದರಿಯನ್ನು ಪ್ರತಿಪಾದಿಸುವುದು ವಿಶಿಷ್ಟವೆನ್ನಿಸುತ್ತದೆ.

ಶಂಬಾ ಜೋಶಿಯವರು 'ನಾನಾತ್ವದೊಳದೊಳಗಿನ ಏಕತ್ವವಾದ'ವನ್ನು ಪ್ರತಿಪಾದಿಸುತ್ತಾರೆ. ಭಾರತಕ್ಕೆ ಈ ತತ್ವವು ಹೊಸದಲ್ಲ, ಇದು ವೇದ, ಉಪನಿಷತ್ತುಗಳ ಕಾಲದಲ್ಲೂ ಇತ್ತು ಎನ್ನುವುದು ಅವರ ವಾದ.

"ಅಖಿಲ ರಾಷ್ಟ್ರೀಯತ್ವದ ದೃಷ್ಟಿಯು, ಭಾರತೀಯ ಏಕಾತ್ಮಕತ್ವ ದೃಷ್ಟಿಯು ಬಾಳಿನಲ್ಲಿ ಅತ್ಯಾವಶ್ಯಕ, ಅನಿವಾರ್ಯ ಎಂಬುದು ಬ್ರಿಟಿಷರ ಪರಕೀಯ ಸತ್ತೆಯನ್ನು ಎದುರಿಸುವಾಗ ಬಂದ ತೀವ್ರವಾದ ಅನುಭವವಾಗಿದೆ............ ರಾಷ್ಟ್ರೀಯ ಐಕ್ಯವು ಇಲ್ಲದೆ, ಭಾರತವು ಜಗತ್ತಿನಲ್ಲಿ 'ಒಂದು' ರಾಷ್ಟ್ರ ಎಂದು ತಲೆಯೆತ್ತಿ ಮೆರೆಯಲು ಶಕ್ಯವಿಲ್ಲ. ಭಾರತವು ತನ್ನ ರಾಷ್ಟ್ರೀಯ ಸ್ವಾತಂತ್ರ್ಯಕ್ಕೆ ಎರವಾದರೆ ಜಾಗತಿಕ ರಂಗದ ಜೀವನ ಸ್ಪರ್ಧೆಯಲ್ಲಿ ಭಾರತೀಯರು ಯಾವುದೊಂದು ಪ್ರಬಲವಾದ ಎದುರಾಳಿ ರಾಷ್ಟ್ರದ ದಾಸ್ಯದಲ್ಲಿ ಬೀಳುವುದು ಅನಿವಾರ್ಯ"[೬]

ಶಂಬಾ ಜೋಶಿಯವರು ಆರಂಭದಲ್ಲಿಯೇ ಭಾರತವನ್ನು 'ಏಕರಾಷ್ಟ್ರ'ದ ಪರಿಯಲ್ಲಿ ಚರ್ಚಿಸುತ್ತಾರೆ. ಅಸ್ಮಿತೆಯ ಕುರಿತಾದ ಆತಂಕದಲ್ಲಿ ಹುಟ್ಟುವ ಚಿಂತನೆಯಿದೆನ್ನಿಸುತ್ತದೆ. ತಾನು ಏಕವಾಗದಿದ್ದರೆ ತನ್ನನ್ನು ಶತ್ರುಗಳು

ದಮನಿಸಬಹುದು ಎನ್ನುವ ಆತಂಕವಿದು. ಎಲ್ಲ ಕ್ಷಾತ್ರಕೇಂದ್ರಿತ ರಾಷ್ಟ್ರ ಚಿಂತನೆಗಳ ಮೂಲಭೂತ ಅಭಿಪ್ರಾಯದಂತೆ ಇಲ್ಲಿಯೂ ಭಯವಿದೆ. ಭಯದಿಂದಲೇ ಚಿಂತನೆ ರೂಪುಗೊಳ್ಳುತ್ತಾ ಹೋಗುತ್ತದೆ. ಐರೋಪ್ಯ ಚಿಂತನೆಯ ಮಾದರಿಯ ಏಕಕೇಂದ್ರಿತ ಚಿಂತನೆ ಶಂಬಾರಲ್ಲಿ ಮತ್ತೆ ಮತ್ತೆ ಪುನರಾವರ್ತನೆಯಾಗುತ್ತದೆ. ತಮ್ಮ ಚಿಂತನೆಗಳಿಗೆ ಪುರಾವೆಗಳನ್ನು ಅವರು ಯುರೋಪಿನಿಂದ ತರುವುದಿಲ್ಲ. ಬದಲಾಗಿ ವೇದಗಳಿಗೆ ಹೋಗುತ್ತಾರೆ. ಅಲ್ಲಿಂದಲೇ ತಮ್ಮ ನೆನಪುಗಳನ್ನು ಕಟ್ಟಿಕೊಳ್ಳುತ್ತಾರೆ. 'ಅನೇಕತೆಯಲ್ಲಿ ಏಕತೆ' ಎಂಬ ಸಿದ್ಧಾಂತ ಆರಂಭದಿಂದಲೂ ಇತ್ತು ಎಂದು ಪ್ರತಿಪಾದಿಸ ತೊಡಗುತ್ತಾರೆ. ಈ ಮಾದರಿಯ ಚಿಂತನೆಗಳಲ್ಲಿ ಹುಟ್ಟುವ ಅನ್ಯದ ಕುರಿತಾದ ಗುಮಾನಿಯ ನೋಟ, ಅಸಹನೆಗಳು ಶಂಬಾರಲ್ಲಿ ವಿಪುಲವಾಗತೊಡಗುತ್ತವೆ. ಶಂಬಾರಂಥ ಚಿಂತಕರಲ್ಲಿ ಏಕಕಾಲದಲ್ಲಿ ವಾಸ್ತವ ಕುರಿತಾದ ಮರುಕ, ಭವಿಷ್ಯತ್ತನ್ನು ಕುರಿತಂತೆ ಆತಂಕ, ಗತವನ್ನು ನೆನೆದಂತೆ ವಿಷಾದ ಮತ್ತು ರೋಮಾಂಚನಕಾರಿ ಭಾವನೆಗಳು ಪ್ರಬಲವಾಗಿರುತ್ತವೆ. ಇವು ಬಲಪಂಥಿಯ ಚಿಂತನೆಗಳಿಗೆ ಅತಿ ಹತ್ತಿರ ಬರುತ್ತವೆ.

ರಾಷ್ಟ್ರೀಯತೆ ಕುರಿತು ಖಚಿತ ನಿಲುವಿನಿಂದ ಮಾತನಾಡುವ ಡಿ.ಆರ್.ನಾಗರಾಜ ಅವರು ಹೀಗೆ ಅಭಿಪ್ರಾಯ ಪಡುತ್ತಾರೆ.

"ಆಧುನಿಕ ಸಮಾಜಗಳ ಎಲ್ಲ ಸಾಂಸ್ಕೃತಿಕ ಐಡೆಂಟಿಟಿಗಳೂ ನೆನಪುಗಳ ಪುನರ್ ಸಂಘಟನೆಯೇ, ಭಾರತ ರಾಷ್ಟ್ರೀಯತೆಯ ಉಗಮವೂ ಹೀಗೆಯೇ. ಕನ್ನಡ ರಾಷ್ಟ್ರೀಯತೆಯ ಉಗಮವೂ ಹೀಗೆಯೇ? ವರ್ತಮಾನದ ಹೋರಾಟಕ್ಕೆ ಗತಕಾಲದ ನೆನಪುಗಳಿಂದ ಸೃಷ್ಟಿಯಾದ ವ್ಯಕ್ತಿತ್ವ ಬೇಕು. ಇಲ್ಲಿ ಭಾರತ ರಾಷ್ಟ್ರೀಯತೆ ಮತ್ತು ಕನ್ನಡ ಉಪರಾಷ್ಟ್ರೀಯತೆಗಳ ವ್ಯತ್ಯಾಸದ ಬಗೆಗೆ ಹೆಚ್ಚು ತಲೆ ಕೆಡಿಸಿಕೊಳ್ಳಬೇಕಾದ ಅಗತ್ಯವಿಲ್ಲ. ಏಕೆಂದರೆ ಎಲ್ಲ ಉಪರಾಷ್ಟ್ರೀಯತೆಗಳೂ ಭವಿಷ್ಯದ ಪೂರ್ಣರಾಷ್ಟ್ರೀಯತೆಯ ಭ್ರೂಣರೂಪ. ಸಮಗ್ರ ರಾಷ್ಟ್ರೀಯತೆ ಯಾವಾಗ ಬೇಕಾದರೂ ತನ್ನ 'ಉಪ' ಸ್ಥಿತಿಯನ್ನು ಬಿಸಾಡಿ ಮುನ್ನಡೆಯಬಹುದು. ೨೦ನೇ ಶತಮಾನದ ಕಡೆಯ ದಶಕಗಳ ಚರಿತ್ರೆಯೇ ಉಪರಾಷ್ಟ್ರೀಯತೆಗಳು ಪೂರ್ಣ ರಾಷ್ಟ್ರೀಯತೆಗಳಾದದ್ದು. ಪೂರ್ವ ಯುರೋಪು ಮತ್ತು ಸೋವಿಯತ್ ರಷ್ಯಾಗಳು ಮಾತ್ರ ಇದಕ್ಕೆ ಉದಾಹರಣೆಗಳಲ್ಲ. ಭಾರತ ಉಪಖಂಡವೂ ಸೇರಿದಂತೆ ಏಷ್ಯಾದ ಅನೇಕ ದೇಶಗಳೂ ಇದೇ ಬಗೆಯ ಬದಲಾವಣೆಯ ಪ್ರಕ್ರಿಯೆಯಲ್ಲಿವೆ"[೭]

ಕನ್ನಡಕ್ಕೆ ರಾಷ್ಟ್ರೀಯತೆಯಾಗುವ ಎಲ್ಲ ಅರ್ಹತೆಗಳೂ ಇದೆ ಎನ್ನುವ ನಿಲುವಿನಿಂದಲೇ ಈ ಚಿಂತನೆ ಆರಂಭವಾಗುತ್ತದೆ. ಚಾರಿತ್ರಿಕ ಮತ್ತು ಸಾಂಸ್ಕೃತಿಕ ಆಯಾಮಗಳ ಆಧಾರದ ಮೇಲೆ ಚರ್ಚಿತವಾಗುವ ಈ ಚಿಂತನೆಯಲ್ಲಿ ಸ್ಥಳೀಯ ಮತ್ತು ಯುರೋಪಿನ ಎರಡೂ ಚಿಂತನೆಗಳು ಏಕೀಭವಿಸಿ ಚಲಿಸುವುದನ್ನು ಗಮನಿಸಬಹುದು. ಅರ್ನೆಸ್ಟ್ ರೆನಾನ್‌ನ ಚಿಂತನೆಗಳನ್ನು ನೆನಪಿಸುವ 'ನೆನಪುಗಳು' ಮತ್ತು 'ಸಾಂಸ್ಕೃತಿಕ ವ್ಯಕ್ತಿತ್ವ' ಎನ್ನುವ ತತ್ವ ಆಕರ್ಷಕವಾದದ್ದು. ಆಧುನಿಕ ರಾಷ್ಟ್ರೀಯ ವ್ಯಕ್ತಿತ್ವವೆನ್ನುವುದು, ಆಧುನಿಕ ಪೂರ್ವ ಸಮಾಜಕ್ಕಿಂತ ಭಿನ್ನವಾದದ್ದು, ಬಹುಮುಖಿ ಆಯಾಮಗಳಿಂದ ತಾರತಮ್ಯವಾದಿ ಆಯಾಮದ ಕಡೆಗೆ ಚಲಿಸಿದಂತಹುದು ಎಂದು ಅಭಿಪ್ರಾಯಪಡುತ್ತಾರೆ. ಎಲ್ಲಕ್ಕಿಂತ ಮುಖ್ಯವಾಗಿ ಡಿ.ಆರ್.ನಾಗರಾಜರ ಚಿಂತನೆಗಳ ದಿಟ್ಟತನ, ಚರಿತ್ರೆಯ ಚಲನಾತ್ಮಕತೆಯನ್ನು ಗುರುತಿಸಿ ವ್ಯಾಖ್ಯಾನಿಸುವುದರಲ್ಲಿದೆ ಎನಿಸುತ್ತದೆ.

ಒಟ್ಟಾರೆ, ಕನ್ನಡದಲ್ಲಿ ಈ ವಿಷಯದ ಕುರಿತಂತೆ ವಿಭಿನ್ನ ಆಯಾಮಗಳಲ್ಲಿ ಚರ್ಚಿಸಲಾಗಿದ್ದರೂ ಪ್ರಾತಿನಿಧಿಕವಾಗಿ ಈ ಮೂವರ ಅಭಿಪ್ರಾಯಗಳನ್ನಷ್ಟೆ ವಿಶ್ಲೇಷಿಸಲಾಗಿದೆ.

೪

ಕನ್ನಡದಲ್ಲಿ ರಾಷ್ಟ್ರೀಯತೆ ಕುರಿತಂತೆ ಪ್ರಧಾನವಾಗಿ ಮೂರು ಚಿಂತನಧಾರೆಗಳು ಕ್ರಿಯಾಶೀಲವಾಗಿವೆ. ಮುಖ್ಯವಾಗಿ ಕ್ರಿಯಾಶೀಲವಾಗಿವೆ.

೧. ಎಡಪಂಥೀಯ ರಾಷ್ಟ್ರೀಯತಾ ಚಿಂತನೆ

೨. ಬಲಪಂಥೀಯ ರಾಷ್ಟ್ರೀಯತಾ ಚಿಂತನೆ

೩. ಕರ್ನಾಟಕಾಂತರ್ಗತ ರಾಷ್ಟ್ರೀಯತಾ ಚಿಂತನೆ ಅಥವಾ ಉದಾರವಾದಿ ರಾಷ್ಟ್ರೀಯತಾ ಚಿಂತನೆ.

೧. ಎಡಪಂಥೀಯ ರಾಷ್ಟ್ರೀಯತಾ ಚಿಂತನೆ: ಸಾಂಪ್ರದಾಯಕ ಎಡಪಂಥೀಯ ವಿಚಾರಧಾರೆಗಳಲ್ಲಿ ಮುಖ್ಯವಾಗಿ ಆರ್ಥಿಕ, ರಾಜಕೀಯ ನೆಲೆಗಟ್ಟುಗಳನ್ನು ಪ್ರಧಾನವೆಂದು, ಭಾಷೆ, ಸಂಸ್ಕೃತಿ, ಧರ್ಮ ಇತ್ಯಾದಿಗಳನ್ನು ಮಿಥ್ಯ ಪ್ರಜ್ಞೆಗಳೆಂಬಂತೆ ಗ್ರಹಿಸಿದಂತಿದೆ. ಆದರೆ ಮಾರ್ಕ್ಸ್‌ವಾದಿ ತತ್ವಜ್ಞಾನವನ್ನು ತಮ್ಮ ರಾಷ್ಟ್ರ ಕಟ್ಟುವ ಪ್ರಯೋಗಗಳಿಗೆ ಅನ್ವಯ ಮಾಡಿದ ರಷ್ಯಾದ ನಾಯಕರುಗಳಾದ ಲೆನಿನ್ ಮತ್ತು ಸ್ಟಾಲಿನ್ ಅವರು 'ರಾಷ್ಟ್ರೀಯತಾ' ಚರ್ಚೆಗೆ ಪ್ರಗತಿಪರ ಆಯಾಮವನ್ನು ನೀಡಲೆತ್ನಿಸಿದ್ದಾರೆ. ಭಾಷೆ, ಸಂಸ್ಕೃತಿ, ಚರಿತ್ರೆ, ಭೂಪ್ರದೇಶ, ಸಮುದಾಯಪ್ರಜ್ಞೆ, ಆರ್ಥಿಕ ಚಟುವಟಿಕೆಗಳು ನಿರ್ದಿಷ್ಟವಾಗಿ ಕ್ರಿಯಾಶೀಲಗೊಂಡು ರಾಷ್ಟ್ರೀಯತೆಗಳ ನಿರ್ಮಾಣವಾಗುತ್ತದೆ ಎನ್ನುವುದನ್ನು ಅವರು ಪ್ರತಿಪಾದಿಸಿದ್ದಾರೆ. ಇವುಗಳನ್ನು ಅನ್ವಯ ಮಾಡಿ ಹೊಸ ರಾಷ್ಟ್ರ ರಚನೆಗೆ ಅವಕಾಶ ಮಾಡಿಕೊಟ್ಟಿದ್ದಾರೆ. ಆದರೆ ಭಾರತದ ಸಾಂಪ್ರದಾಯಿಕ ಎಡಪಂಥೀಯ ಚಿಂತನೆಗಳು ಮಾತ್ರ ಈ ವಿಷಯವನ್ನು ಅಷ್ಟು ಗಂಭೀರವಾಗಿ ತೆಗೆದುಕೊಂಡಂತೆ ಕಾಣುವುದಿಲ್ಲ.

ಆದರೆ ನವ ಎಡಪಂಥೀಯ ಚಿಂತನೆಗಳು, ರಾಷ್ಟ್ರೀಯತೆಗಳು 'ಸ್ವಯಂ ನಿರ್ಣಯಾಧಿಕಾರ'ದ ಹಕ್ಕನ್ನು ಹೊಂದಿರಬೇಕು ಎಂಬ ವಿಚಾರವನ್ನು ಪ್ರತಿಪಾದಿಸುವಂತೆ ಕಾಣಿಸುತ್ತವೆ. ಅಲ್ಲದೆ ತಾನು ಪ್ರತಿಪಾದಿಸುತ್ತಿರುವ ರಾಷ್ಟ್ರದಲ್ಲಿ ಅಂಚಿಗೆ ನೂಕಲ್ಪಟ್ಟ ಸಮುದಾಯಗಳನ್ನು ಒಳಗೊಂಡೇ ರಾಷ್ಟ್ರ ರೂಪಿಸಬೇಕೆನ್ನುವ ವಿಚಾರವನ್ನೂ ಮುಂದಿಡುತ್ತವೆ. ಅಂದರೆ ದಲಿತರು, ಮಹಿಳೆಯರು, ಅಲ್ಪಸಂಖ್ಯಾಕರು, ಆದಿವಾಸಿಗಳು, ರೈತರು, ಕಾರ್ಮಿಕರು ಇನ್ನಿತ್ಯಾದಿ ದುಡಿಯುವ ವರ್ಗದ ನಾಯಕತ್ವದಲ್ಲಿಯೇ ರಾಷ್ಟ್ರ ರೂಪಿತವಾಗಬೇಕೆನ್ನುವುದು ಈ ಚಿಂತನೆಯ ಪ್ರಧಾನ ಆಶಯದಂತೆ ಕಾಣುತ್ತದೆ.

ಅಲ್ಲದೆ ಅನ್ಯ ಭಾಷಿಕರು ಮತ್ತು ಧರ್ಮಗಳಲ್ಲಿನ ದುಡಿಯುವ ವರ್ಗವನ್ನು ವಿಶೇಷ ಕಾಳಜಿಯಿಂದ ನೋಡುವಂತೆಯೂ ಕಾಣುತ್ತದೆ.

**೨. ಬಲಪಂಥೀಯ ರಾಷ್ಟ್ರೀಯತಾ ಚಿಂತನೆ**

ಈ ವಿಚಾರಧಾರೆಯು ಮುಖ್ಯವಾಗಿ ಯುರೋಪಿನ ರಾಷ್ಟ್ರಮಾದರಿಯನ್ನೇ ರಾಷ್ಟ್ರೀಯತಾ ಮಾದರಿಯನ್ನಾಗಿರಿಸಿಕೊಂಡಂತೆ ಕಾಣುತ್ತದೆ. ಅಷ್ಟೇ ಅಲ್ಲದೆ ಯುರೋಪಿನ ಮಾದರಿಗಳಲ್ಲಿ ಸಹ ತನಗೆ

ಬೇಕಾದ್ದನ್ನು ಮಾತ್ರ ಆರಿಸಿಕೊಂಡು ಚಿಂತನೆ ಮಂಡಿಸುವಂತೆ ಕಾಣುತ್ತದೆ. ಪ್ರಧಾನವಾಗಿ ಈ ಚಿಂತನೆ ಸಮುದಾಯಾದಾರಿತವಾದುದಲ್ಲ. ಅಲ್ಲದೆ 'ಏಕತ್ವ'ದ ಪ್ರತಿಪಾದನೆ ಇದರ ಲಕ್ಷಣ. ಒಂದು ಭಾಷೆ, ಒಂದು ಧರ್ಮ, ಒಂದು ಸಂಸ್ಕೃತಿ, ಅಖಂಡ ಭೂಪ್ರದೇಶಗಳು ರಾಷ್ಟ್ರವೊಂದರ ಅಗತ್ಯಗಳು ಎನ್ನುವಂತೆ ವ್ಯಾಖ್ಯಾನಿಸಲಾಗುತ್ತದೆ. ಬಹುತ್ವವನ್ನು ನಿರಾಕರಿಸುವ, ಇತರರನ್ನು ಅಸಹನೆಯಿಂದ ನೋಡುವ ಚಿಂತನಾ ನೆಲೆಗಟ್ಟು ಇದರ ಪ್ರಧಾನ ಲಕ್ಷಣ. ಅಂದರೆ ನಿರ್ದಿಷ್ಟ ಭಾಷೆ, ಧರ್ಮ, ಸಂಸ್ಕೃತಿಯನ್ನು ಮುಂದುಮಾಡಿ ಅಥವಾ ರಾಷ್ಟ್ರೀಯ ಸಂಕೇತಗಳೆಂದು ಹೇಳಿ ಉಳಿದವುಗಳನ್ನು ಅಡಚಣೆಗಳೆಂದು ಭಾವಿಸಿ ನಿರಾಕರಿಸಲು ಅಥವಾ ದಮನಿಸಲು ಪ್ರಯತ್ನಿಸುತ್ತವೆ. ಧರ್ಮ ಮತ್ತು ಸಂಸ್ಕೃತಿಗಳ ಆಧಾರದ ಮೇಲೆ ರಾಷ್ಟ್ರ ಕಟ್ಟಲು ಪ್ರಯತ್ನಿಸಲಾಗುತ್ತದೆ. ಸಮಾಜದ ಸಂಕಷ್ಟಗಳಿಗಿಂತ ನದಿಗಳ, ಮಣ್ಣಿನ ಪವಿತ್ರೀಕರಣ, ಸಮಾನ ನಾಗರಿಕ ನೀತಿ ಇತ್ಯಾದಿ ಚಿಂತನೆಯನ್ನು ಮುಖ್ಯವೆಂದು ಭಾವಿಸಲಾಗುತ್ತದೆ. ಗುಪ್ತವಾಗಿ ಕುಲೀನ ವರ್ಗಗಳ ಹಿತಾಸಕ್ತಿಗಳು ಕ್ರಿಯಾಶೀಲವಾಗಿರುವಂತಿದೆ. ಅಂತಿಮವಾಗಿ ಭಿನ್ನಮತವನ್ನು, ವೈವಿಧ್ಯತೆಯನ್ನು ಸಹಿಸದ ಹಲವು ತನವನ್ನು ಒಳಗೊಳ್ಳದ ಏಕರೂಪಿ ಆಗ್ರಹ ಈ ರಾಷ್ಟ್ರೀಯ ಚಿಂತನೆಯ ಸಾರಾಂಶ.

### ೩. ಕರ್ನಾಟಕಾಂತರ್ಗತ (ದ್ವಿಮುಖ) ಭಾರತದ ಕಲ್ಪನೆ

೨೦ನೇ ಶತಮಾನದ ಆರಂಭದಿಂದಲೇ ಕನ್ನಡದ ಉದಾರವಾದಿ ಚಿಂತಕರು ಕರ್ನಾಟಕಾಂತರ್ಗತ ಭಾರತದ ಕಲ್ಪನೆಯನ್ನು ಪ್ರತಿಪಾದಿಸಿದಂತೆ ಕಾಣುತ್ತದೆ. ಅತ್ಯಂತ ಸಂಕೀರ್ಣವಾದ ಭಾರತ ಮತ್ತು ಕರ್ನಾಟಕಗಳೆಂಬ ವಿಚಾರಗಳನ್ನು ಸುಲಭವಾಗಿ ತಾಯಿ ಮತ್ತು ಮಗಳ ಕಲ್ಪನೆಯನ್ನಾಗಿಸಿ ತೊಡಕನ್ನು ಬಿಡಿಸಿಕೊಂಡಂತಿದೆ. ಕನ್ನಡ-ಭಾರತಗಳನ್ನು ವಸಾಹತು ಸಂದರ್ಭದಲ್ಲಿ ಪರಸ್ಪರ ಎದುರಾಳಿಗಳನ್ನಾಗಿಸದೆ ಗ್ರಹಿಸಿದ ವಿದ್ಯಮಾನವಿದು. ಕುವೆಂಪು, ಬಿ.ಎಂ.ಶ್ರೀ ಮುಂತಾದ ಚಿಂತಕರು ತಮ್ಮ ಒಟ್ಟಿಗಿರುವ ಇತರ ಚಿಂತನೆಗಳನ್ನು ಆರೋಗ್ಯಕರವೆಂದು ಭಾವಿಸುತ್ತಾರೆ. ಈ ದೃಷ್ಟಿಯಿಂದ ಕುವೆಂಪುರವರ 'ಕರ್ನಾಟಕ ರಾಷ್ಟ್ರಗೀತೆ', ಬಿ.ಎಂ.ಶ್ರೀ.ಯವರ 'ಭರತಮಾತೆಯ ಸುಡಿ' ಕವಿತೆಗಳು ಗಮನ ಸೆಳೆಯುತ್ತವೆ. ಕುವೆಂಪು ತಮ್ಮ ಕವಿತೆಯಲ್ಲಿ ಕನ್ನಡ ಪ್ರತಿಮೆಗಳನ್ನು, ಹೆಸರುಗಳನ್ನು ಮೊದಲಿಗೆ ಹೇಳಿ ಅಂತಿಮವಾಗಿ ಕನ್ನಡದ ಹೊರಗಿನ ವಿಷಯಗಳಿಗೆ ಹೊರಳುತ್ತಾರೆ. ಆಲೂರರ ಚಿಂತನೆಗಳಲ್ಲೂ ಸಹ ಕನ್ನಡವಿಲ್ಲದಿದ್ದರೆ ಭಾರತವೂ ಇಲ್ಲ, ಅದಕ್ಕಾಗಿ ಭಾರತಕ್ಕಿಂತ ಕನ್ನಡವೇ ಪ್ರಥಮ ಎನ್ನುವ ನಿಲುವು ಕಾಣುತ್ತದೆ. ಬಿ.ಎಂ.ಶ್ರೀಯವರು ಪ್ರತಿಪಾದಿಸಿದ ಸಮನ್ವಯ ಮತ್ತು ಸಂಕರಶೀಲ ರಾಷ್ಟ್ರಚಿಂತನೆ ಕುವೆಂಪು ಮುಂತಾದವರಲ್ಲೂ ಮುಂದುವರಿಯುತ್ತಿದೆ. ನಂತರ ಆಲೂರು ವೆಂಕಟರಾಯರನ್ನೊಳಗೊಂಡಂತೆ ಚಳುವಳಿಗಾರರು ಕನ್ನಡವೇ ಕೇಂದ್ರ ಅದರ ಮೂಲಕವೇ ಭಾರತದ ನಿರ್ವಚನವೆಂಬಂತೆ ಗ್ರಹಿಸುತ್ತಾರೆ.

ಭಾರತದ ಅಖಂಡತೆ ಮುಖ್ಯ, ಕನ್ನಡವೆಂಬುದು ಸದಾ ಅಧೀನವಾಗಿರಬೇಕು. ಭಾರತದ ಹಿತಾಸಕ್ತಿಗೆ ಕನ್ನಡ ತ್ಯಾಗ ಮಾಡಬೇಕು ಕನ್ನಡವೇ ಪ್ರಧಾನವೆನ್ನುವವರು ಪ್ರಾಂತೀಯವಾದಿಗಳು, ಸಂಕುಚಿತವಾದಿಗಳು ಎನ್ನುವ ಟೀಕೆಯಿಂದು ಪ್ರಬಲವಾಗಿ ಕೇಳಿ ಬರುತ್ತದೆ. ಆದರೆ ಕನ್ನಡದ ದೊಡ್ಡ ಚಿಂತಕರೆಲ್ಲ ಕನ್ನಡಕ್ಕೆ ಭದ್ರ

ಬೇರುಗಳಿಲ್ಲದೆ ಅಖಂಡತೆಗಾಗಿ ತ್ಯಾಗ ಮಾಡುವುದು ಅಪಾಯಕರವೆನ್ನುವಂತೆ ಗ್ರಹಿಸಿದ್ದಾರೆ. ೮೦ರ ದಶಕದ ಹೊತ್ತಿಗೆ ಕನ್ನಡಕ್ಕೆ ಪ್ರತ್ಯೇಕ ಅಸ್ಮಿತೆ ಅಗತ್ಯ ಎನ್ನುವ ನಿಲುವಿಗೂ ಡಾ.ಚಿದಾನಂದ ಮೂರ್ತಿಯಂಥ ಚಿಂತಕರು ತಲುಪುತ್ತಾರೆ.

ಕನ್ನಡ ಚಿಂತನೆಯ ಪ್ರಧಾನ ಧಾರೆಯೇ ಕರ್ನಾಟಕಾಂತರ್ಗತ ಭಾರತ ಚಿಂತನೆಯಾಗಿದೆ.

ಮುಂದಿನ ಎಲ್ಲ ಅಧ್ಯಾಯಗಳಲ್ಲಿ ಈ ಪರಿಕಲ್ಪನೆಗಳು ಮತ್ತು ಚಿಂತನೆಗಳು ಕನ್ನಡ ಚಿಂತನೆಯ ಅನುಭವದ ಮೂಲಕ ಚರ್ಚಿತಗೊಂಡಿವೆ.

**ಕೊನೆ ಟಿಪ್ಪಣಿಗಳು**

೧. ರಾಜಾರಾಮ ಹೆಗಡೆ-ದೇಶೀಯ ಇತಿಹಾಸದ ಹುಡುಕಾಟ (ಕೃತಿ) ದೇಶೀ ದರ್ಶನಗಳು (ಸಂ) ನ. ರವಿಕುಮಾರ್ ಪುಟ -೧೨

೨. ರವೀಂದ್ರನಾಥ ಠಾಗೂರ್, ನ್ಯಾಶನಲಿಸಂ, ಪುಟ ೧೨೧

೩. ಅದೇ, ಪುಟ ೧೨೧

೪. ಅದೇ, ಪುಟ ೧೨೦

೫. ಕುವೆಂಪು, ಕನ್ನಡ ಚಳುವಳಿಗಳು ಜೀವಂತವಾಗಿರಲಿ (ಲೇಖನ) ಸಮಗ್ರಗದ್ಯ ಪುಟ ೮೦೮

೬. ಶಂಬಾ ಜೋಶಿ ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ ಶಂಬಾ ಕೃತಿ ಸಂಪುಟ -೩, (ಸಂ) ಮಲ್ಲೇಪುರಂ. ಜಿ.ವೆಂಕಟೇಶ, ಪುಟ ೪೨೩.

೭. ಡಿ.ಆರ್.ನಾಗರಾಜ್, ಕನ್ನಡ ರಾಷ್ಟ್ರೀಯತೆಯ ಸ್ವರೂಪ, ಸಾಹಿತ್ಯ ಕಥನ ಪುಟ ೨೮೩-೨೮೪

ಅಧ್ಯಾಯ ೨

## ಕನ್ನಡ ರಾಷ್ಟ್ರೀಯತೆ : ಭೂಪ್ರದೇಶ ಕುರಿತ ಚಿಂತನೆ


೨.೧ ಪೀಠಿಕೆ

೨.೨ ಆಲೂರರ ಚಿಂತನೆಗಳು

೨.೩ ಬಿ.ಎಂ.ಶ್ರೀಯವರ ಚಿಂತನೆಗಳು

೨.೪ ಶಂಬಾ ಜೋಶಿಯವರ ಚಿಂತನೆಗಳು

೨.೫ ಕುವೆಂಪುರವರ ಚಿಂತನೆಗಳು

೨.೬ ಚಿದಾನಂದ ಮೂರ್ತಿಯವರ ಚಿಂತನೆಗಳು

೨.೭ ಕರ್ನಾಟಕ ವಿಮೋಚನಾ ರಂಗದ ನಿಲುವುಗಳು

೨.೮ ಚಿಂತನೆಗಳ ತೌಲನಿಕ ಸಮೀಕ್ಷೆ

ಅಧ್ಯಾಯ ೨

## ಕನ್ನಡ ರಾಷ್ಟ್ರೀಯತೆ : ಭೂಪ್ರದೇಶ ಕುರಿತ ಚಿಂತನೆಗಳು

**೨.೧ ಪೀಠಿಕೆ**

ಜಗತ್ತಿನ 'ಚರಿತ್ರೆ' ನಿರ್ಮಾಣದಲ್ಲಿ ಮಣ್ಣು ನಿರ್ಣಾಯಕ ಪಾತ್ರವಹಿಸಿದೆ. ಉಳಿದೆಲ್ಲ ಚರ್ಚೆಗಳಿಗಿಂತ, ನೆಲ ಎನ್ನುವುದು ಬದುಕಿಗೆ ತೀರಾ ಹತ್ತಿರವಾದ ಕಾರಣಕ್ಕಾಗಿ ಅನೇಕ ಸಂಘರ್ಷಗಳು, ಸಾಮರಸ್ಯಗಳು ನಡೆದಿವೆ. ಒಂದರ್ಥದಲ್ಲಿ 'ನೆಲದ' ಸುತ್ತ ಅಥವಾ 'ನೆಲ ಸಂಬಂಧಿ' ಚಟುವಟಿಕೆಗಳೇ ಇವತ್ತಿನ ಸುಧಾರಿಸಿದ ನಾಗರಿಕತೆಗಳ ಚರಿತ್ರೆ ನಿರ್ಮಾಣಕ್ಕೆ ಕಾರಣವಾಗಿವೆ. ಹಾಗಾಗಿ ಭಾರತದಲ್ಲಿ 'ತಾಯಿ ಭೂಮಿ' ಎಂದೂ ಯೂರೋಪಿನಲ್ಲಿ 'ಪಿತೃಭೂಮಿ' ಎಂದೂ ಕರೆದಂತೆ ಕಾಣುತ್ತದೆ. ಇದು 'ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸಿ' ಎನ್ನುವಂತಹ ಭಾವನಾತ್ಮಕ ಮಾತುಗಳು ಹುಟ್ಟಲು ಕಾರಣವಾಗಿದೆ. ರಾಜನನ್ನು 'ಭೂವಲ್ಲಭ', 'ಭೂನಾಥ' ಎಂಬಂತಹ ಮಾತುಗಳಿಂದ ಕರೆಯಲಾಗುತ್ತದೆ. ರಾಜನ ಭೂಮಿಯ 'ಆಳ್ವಿಕೆ'ಯನ್ನು ಸಮರ್ಥಿಸುವ ವರ್ಗವೇ ನೆಲವನ್ನು ಪವಿತ್ರವೆಂದು ಹೇಳಿ ಪ್ರಜೆಗಳಿಗೆ ಬದ್ಧತೆಯನ್ನು ಭಾವನಾತ್ಮಕವಾಗಿ ಒತ್ತಾಯಿಸುವ 'ರಾಜಕೀಯ'ವೊಂದು ಚರಿತ್ರೆಯುದ್ದಕ್ಕೂ ಕೆಲಸ ಮಾಡಿಕೊಂಡು ಬಂದಿದೆ. ವಿಚಿತ್ರವೆಂದರೆ ಪ್ರಜೆಗೆ ತಾಯಿಯಾಗಿ ಕಲ್ಪಿಸಿದ ಭೂಮಿಯನ್ನು ರಾಜನಿಗೆ ಮಡದಿಯಾಗಿ ಕಲ್ಪಿಸಲಾಗಿದೆ. (ಅವನು ರಾಜನಾಗುವವರೆಗೆ ಅವನಿಗೂ ತಾಯಿಯೆ) ಸಮಸ್ತ ಮನುಕುಲಕ್ಕೆ ಏಕರೀತಿಯ ವ್ಯಾಖ್ಯಾನವಿದು ಎಂದು ಈ ಪ್ರಜ್ಞೆ ಮಾನ್ಯಮಾಡಿದಂತೆ ಕಾಣುತ್ತದೆ. ಆದರೆ ಆಳುವವನಿಗೆ ಬೇರೆ ಬೇರೆಯ ಅನುಕೂಲಗಳನ್ನು ಕಲ್ಪಿಸಿಕೊಡಲಾಗಿದೆ. ಆ ಕಾರಣಕ್ಕೇನೆ, 'ವಿಷ್ಣುವಾಗದವನು ರಾಜನಾಗಲಾರ' ಎಂದು ನಂಬಿಸುವ, ಒಪ್ಪಿಸುವ ಕೆಲಸವನ್ನು ಮಾಡಲಾಗಿದೆ. ಈ ರೀತಿಯ ಚಿಂತನೆಗಳು ಬಹುಪಾಲು ಭಾರತೀಯ ಪ್ರಜ್ಞೆಗಳ ಭಾಗವಾಗಿಬಿಟ್ಟಿವೆ.

ಭೂಮಿಯ ಮೇಲಿನ 'ಒಡೆತನ' ಚರಿತ್ರಪೂರ್ವ ಯುಗದಿಂದಲೇ ಆರಂಭಗೊಂಡಿದೆ. ಆದರೆ ಒಡೆತನದ ಸ್ವರೂಪದಲ್ಲಿ ಮಾತ್ರ ನಿರಂತರವಾದ ಬದಲಾವಣೆಗಳು ಸಂಭವಿಸಿವೆ. 'ಬೇಟೆ'ಯ ಯುಗದಿಂದ ನವ ಸಾಮ್ರಾಜ್ಯವಾದದವರೆಗೆ ನಡೆದ ಒಡೆತನಗಳ, ಪರಿವರ್ತನೆಗಳ ಕಥಾನಕವೇ ಕುತೂಹಲಕರವಾದುದು. ಅದು ಸಮುದಾಯದ ಯಜಮಾನಿಕೆಯಿಂದ, ವೈಯಕ್ತಿಕ ಹಿತಾಸಕ್ತಿ ಅಥವಾ ಒಂದು ಗುಂಪಿನ ಹಿತಾಸಕ್ತಿಯಕಡೆಗೆ ನಡೆದಿದೆ. ಸ್ಥೂಲವಾಗಿ ಹಿಂದಕ್ಕೆ ಪಕ್ಷಿನೋಟ ಬೀರುವುದಾದರೆ

೧. ಮೊದಲ ಹಂತದಲ್ಲಿ ಏಕಾಂಗಿಯಾಗಿದ್ದ ಮನುಷ್ಯ ಬೇರೆ ಬೇರೆ ಕಾರಣಗಳಿಗಾಗಿ ಒಟ್ಟಿಗೆ ಬದುಕಬೇಕಾದ ಪರಿಸ್ಥಿತಿ ನಿರ್ಮಾಣವಾದುದನ್ನು ನೋಡುತ್ತೇವೆ. 'ಬೇಟೆಯೇ' ಪ್ರಧಾನ ಕಸುಬು ಆಗಿದ್ದ ಕಾರಣಕ್ಕೆ 'ಬೇಟೆಯ ಕ್ಷೇತ್ರ'ಗಳ ಮೇಲಿನ ಒಡೆತನದ ಕಾರಣಕ್ಕೆ ಸಂಘರ್ಷಗಳು ನಡೆದಿವೆ. ಆಗ ಬುಡಕಟ್ಟು ಬುಡಕಟ್ಟುಗಳ ನಡುವೆ ಜೀವನ್ಮರಣದಂತಹ ಹೋರಾಟಗಳು ನಡೆದಿವೆ.

೨. ಕಾಡಿನ ಕೆಲವು ಪ್ರಾಣಿಗಳನ್ನು ಪಳಗಿಸಿ 'ಪಶುಪಾಲನೆ' ಆರಂಭಿಸಿದ ಮನುಷ್ಯನಿಗೆ ಹೊಸ ಸಮಸ್ಯೆ ಹುಲ್ಲಿನದು ಅಥವಾ ಮೇವಿನದು. ಈ ಹಂತದಲ್ಲಿ 'ಅಲೆಮಾರಿತನ'ವೆಂಬ ಹೊಸ ಚಲನೆ ಆರಂಭವಾಗುತ್ತದೆ. ಇಲ್ಲಿ ಮೇವಿನ ಕ್ಷೇತ್ರಗಳಿಗಾಗಿ ಸಂಘರ್ಷಗಳು ನಡೆದಿವೆ. ಮೊದಲ ಹಂತದಲ್ಲಿ ಆಹಾರಕ್ಕಾಗಿ ಚಲನೆ ನಡೆದರೆ, ಎರಡನೇ ಹಂತದಲ್ಲಿ ಸ್ವಲ್ಪ ಸುಧಾರಿಸಿದ ಹಂತವೆಂದು ಮಾನವ ಶಾಸ್ತ್ರಜ್ಞರು ಮತ್ತು ಚರಿತ್ರಕಾರರು ಗುರುತಿಸುತ್ತಾರೆ. ಜೊತೆಗೆ ವಿಭಿನ್ನ ಜನಾಂಗಗಳ 'ಮಿಶ್ರಣ'ದ ಪ್ರಕ್ರಿಯೆ ಕೂಡ ಆರಂಭವಾಗುತ್ತದೆ. (ಕದನಗಳ ಸ್ವರೂಪ ಪಡೆದುಕೊಂಡ ಸಂಘರ್ಷಗಳಿಗೆ ಆಯುಧಗಳ ಕಡೆಗೆ, ವಾತಾವರಣವನ್ನು ಎದುರಿಸಲು ದೇಹ ರಕ್ಷಿಸುವಂಥ ಉತ್ಪನ್ನಗಳ ಕಡೆಗೆ ಮನುಷ್ಯ ಆಲೋಚಿಸಿದ್ದು ಇಲ್ಲಿಯೇ ಇರಬೇಕು)

೩. 'ವ್ಯವಸಾಯ' ಕ್ಷೇತ್ರದ ಮೇಲಿನ ಯಜಮಾನಿಕೆಗೆ ನಡೆದ ಸಂಘರ್ಷಗಳು ನದಿ ನೀರಿನ ಫಲವತ್ತತೆಯ ಪ್ರದೇಶಗಳು, ಪ್ರಭುತ್ವಗಳು ಅಥವಾ ಬುದ್ಧ ಬದುಕಿದ್ದ 'ಗಣತಂತ್ರ' ರೀತಿಯ ಒಡೆತನಗಳು ಆರಂಭಗೊಂಡವು. ನಂತರ ಚರಿತ್ರೆ 'ಏಕನಾಯಕತ್ವ'ದ 'ಏಕ ಆಡಳಿತ'ದ ಕಡೆಗೆ ನಡೆಯಲಾರಂಭಿಸಿದ್ದು ಬಹುಶಃ ಇಲ್ಲಿಂದಲೇ.

ಈ ಅವಧಿಯಿಂದ 'ಏಕ' ಪ್ರಭುತ್ವವನ್ನು ಸೈದ್ಧಾಂತಿಕವಾಗಿ ಸಮರ್ಥಿಸುವ ಜನತೆ ಮಾನ್ಯಮಾಡುವಂತೆ ಮಾಡುವ ಪ್ರಯತ್ನಗಳು ಆರಂಭಗೊಂಡವು. ಅನೇಕ ಪುರಾಣಗಳು, ಮಹಾಕಾವ್ಯಗಳು ಧಾರ್ಮಿಕ ಪುರುಷರ ಸಂಚಲನೆಗಳು ಇನ್ನಿತರ 'ಸಾಂಸ್ಕೃತಿಕ' ಸಂಬಂಧಿ ಚಟುವಟಿಕೆಗಳನ್ನು ಮೇಲಿನ ಅಂಶದ ಭಾಗವಾಗಿ ನೋಡಲು ಸಾಧ್ಯವಿದೆ.

ಈ ಅವಧಿಯಲ್ಲಿ ಹಸಿವಿಗಾಗಿ ನಡೆದ ಸಂಘರ್ಷಗಳಿಂದ ಸಂಪತ್ತಿಗಾಗಿ ನಡೆವ ಸಂಘರ್ಷಗಳ ಕಡೆಗೆ ಚರಿತ್ರೆ ನಿಧಾನವಾಗಿ ಹೆಜ್ಜೆ ಹಾಕುತ್ತದೆ. ಕುವೆಂಪುರವರು ಹೇಳುವ ಹಾಗೆ ಉತ್ಪಾದಕವರ್ಗ ಮತ್ತು ಸಂಗ್ರಾಹಕ ವರ್ಗಗಳ ನಡುವೆ ಕಂದರ ಇಲ್ಲಿ ತೀವ್ರವಾಗತೊಡಗುತ್ತದೆ. ಇಲ್ಲಿಂದಾಚೆಗೆ ಚರಿತ್ರೆಗೆ ವ್ಯಾಪಾರೀ ಗುಣ ಬರುತ್ತದೆ. ಹಾಗಾಗಿ 'ನೆಲ ಕೇಂದ್ರಿತ ಸಂಘರ್ಷಗಳನ್ನು ೧. ಯುದ್ಧಸಂಬಂಧಿತ ವಿಷಯವಾಗಿ ಮತ್ತು ೨. ವ್ಯಾಪಾರ ಕೇಂದ್ರಿತ ಚಟುವಟಿಕೆಗಳ ಭಾಗವಾಗಿ ನೋಡಲು ಸಾಧ್ಯವಿದೆ. ವಿಜಯನಗರದ ಅರಸರು ಮತ್ತು ಬಹಮನಿ ಸುಲ್ತಾನರ ನಡುವೆ 'ದೋ ಅಬ್' (ಕೃಷ್ಣಾ ತುಂಗಭದ್ರಾ ನಡುವಣ) ಪ್ರದೇಶಗಳಿಗೆ ನಡೆದ ಯುದ್ಧ ಸ್ಥೂಲವಾಗಿ ನದಿ ಪಾತ್ರಗಳ ವ್ಯವಸಾಯಕ್ಕೆ ಸಂಬಂಧಿಸಿತ್ತು. ಇಲ್ಲಿ ಸಣ್ಣ ಪ್ರಮಾಣದಲ್ಲಿ ವ್ಯಾಪಾರದ ಉದ್ದೇಶಗಳು ಇದ್ದವಾದರೂ, ಪೋರ್ಚುಗೀಸರ ನಡುವೆ ಬಂದರುಗಳಿಗಾಗಿ ನಡೆದ ಯುದ್ಧಗಳಲ್ಲಿ ವ್ಯಾಪಾರವೇ ಮುಖ್ಯವಾಗಿದ್ದವು. ಟಿಪ್ಪು ಮತ್ತು ಬ್ರಿಟಿಷರ ಕೆಲ ನಿರ್ಣಾಯಕ ಯುದ್ಧಗಳು ಬಂದರುಗಳಿಗಾಗಿ ನಡೆದಂತೆಯೂ ಕಾಣುತ್ತದೆ. ಇವುಗಳನ್ನು ಇನ್ನೂ ಸ್ಪಷ್ಟಪಡಿಸಿಕೊಳ್ಳಲು ಪ್ರಯತ್ನಿಸುವುದಾದರೆ ಐದು ಉಪಯುಕ್ತತಾವಾದಿ ನೆಲ ಕೇಂದ್ರಿತ ಸಂಘರ್ಷಗಳು ಕೆಲಸಮಾಡಿರುವಂತೆ ಕಾಣುತ್ತದೆ.

೧. ಫಲವತ್ತಾದ ಭೂಮಿಗಳು, ೨. ದೋಅಬ್ ಪ್ರದೇಶಗಳು, ನದಿಗಳು ೩. ಸಮುದ್ರ ಮತ್ತು ಬಂದರುಗಳು ೪. ರಕ್ಷಣೆಯ ದೃಷ್ಟಿಯಿಂದ ನಡೆದ ಜಲದುರ್ಗ, ವನದುರ್ಗ, ಗಿರಿದುರ್ಗ ಕುರಿತ ಸಂಘರ್ಷಗಳು ಅಂಶಗಳು ೫. ವಾಣಿಜ್ಯ ಪಥಗಳು ಮುಂತಾದವುಗಳನ್ನು ಪಟ್ಟಿಮಾಡಬಹುದು

ವಸಾಹತುಶಾಹಿ ಪೂರ್ವದಲ್ಲಿ ಮೇಲಿನ ಐದೂ ಅಂಶಗಳು ಒಟ್ಟಿಗೆ ಕ್ರಿಯಾಶೀಲವಾಗಿಲ್ಲದೆ ಇರಬಹುದು. ಆದರೆ ವಸಾಹತುಶಾಹಿಗಳು ಮಾತ್ರ ಈ ಐದು ಅಂಶಗಳನ್ನೂ ತಮ್ಮ ಸಂಪೂರ್ಣ ಸ್ವಾಧೀನಕ್ಕೆ ತೆಗೆದುಕೊಂಡರೆಂದು ಕಾಣುತ್ತದೆ.

ಇವೆಲ್ಲವುಗಳ ಜೊತೆಗೆ ಭೂಮಿ ಕುರಿತ ಖಚಿತ ವ್ಯಾಖ್ಯಾನ ಆರಂಭಗೊಂಡದ್ದು ಬಹುಶಃ ವಸಾಹತುವಾದದ ಘಟ್ಟದಲ್ಲೇ. ಕಂದಾಯವನ್ನು ಸುಧಾರಿಸಲು ಹುಟ್ಟಿಕೊಂಡ ಕ್ರಮ ಚರಿತ್ರೆಯ ಹಿಂದಿನ ಎಲ್ಲ ಚಿಂತನೆಗಳನ್ನೂ ತಿರುಗುಮುರುಗಾಗಿಸಿತು. ವಸಾಹತುಪೂರ್ವದಲ್ಲೂ ಪ್ರಭುತ್ವಗಳು ಭೂಕಂದಾಯವನ್ನು ನಿರ್ಣಾಯಕವೆಂದು ಭಾವಿಸುತ್ತಿದ್ದವು. ಆದರೆ ಬ್ರಿಟಿಷರಿಗೆ ಭೂಕಂದಾಯವೇ ಮುಖ್ಯವಾಗಿರಲಿಲ್ಲ. ಏಕೆಂದರೆ ಭಾರತವನ್ನು ಮಾರುಕಟ್ಟೆಯಾಗಿ ಪರಿವರ್ತಿಸಲು ಅವರು ನೋಡುತ್ತಿದ್ದರು. ಹಾಗಾಗಿ ಕೆಲವೊಮ್ಮೆ ಭೂಕಂದಾಯವೂ ದಮನದ ಭಾಗವಾಗಿ ಬಳಕೆಯಾಯಿತು. 'ಪುಂಡುಗಂದಾಯ' ಇತ್ಯಾದಿಗಳೆಲ್ಲ ಅದರ ಭಾಗಗಳೇ. ಕಚ್ಚಾಸರಕುಗಳ ಉತ್ಪಾದನೆ ಹೆಚ್ಚಿಸಬೇಕೆಂಬ ಕಡೆ ಕಂದಾಯವನ್ನು ಸಮತೋಲನದಲ್ಲಿರುವಂತೆ ಅವರು ನೋಡಿಕೊಂಡಿದ್ದಾರೆ ಕೂಡ. ಹಾಗಾಗಿ ಮೊಟ್ಟ ಮೊದಲಿಗೆ ಭಾರತದಲ್ಲಿ ವೈಜ್ಞಾನಿಕವಾಗಿ ಮೋಜಣಿ ಕಾರ್ಯವನ್ನು ಆರಂಭಿಸಿ ಅದಕ್ಕೊಂದು ಇಲಾಖೆಯನ್ನೂ ಅವರು ಸ್ಥಾಪಿಸಿದರು. ಒಂದು ಸರಪಳಿ, ನಾಲ್ಕೈದು ಮೊಳೆಗಳು, ಒಂದು ಕ್ರಾಸ್‌ಟ್ಯಾಪ್, ಒಂದು ಕ್ರೋಬಾರ್ (ಕಾಗೆಯ ಕೊಕ್ಕಿನಂತಿರುವ, ಐದು ಅಡಿ ಆಳದವರೆಗೆ ಭೂಮಿಯ ಒಳಗೆ ಹಾಕಿದ ಮಣ್ಣನ್ನು ಪರೀಕ್ಷಿಸುವ ಕಬ್ಬಿಣದ ತುಂಡು.) ಇವಿಷ್ಟರ ಮೂಲಕವೇ ಭೂಮಿಯನ್ನು ಅಳೆದು ನಕ್ಷೆಯನ್ನು ತಯಾರಿಸಿದರು. ಮೂವತ್ತು ವರ್ಷಗಳ ಸುದೀರ್ಘ ಪ್ರಯತ್ನದ ನಂತರ (ಸರಿಸುಮಾರು ೧೮೬೦ರಿಂದ ೧೮೯೦ವರೆಗೆ) ನೆಲವನ್ನು ಕುರಿತ ಖಚಿತ ವ್ಯಾಖ್ಯಾನಕ್ಕೆ ಬರಲು ಅವರು ಪ್ರಯತ್ನಿಸಿದರು. ನದಿ-ಬೆಟ್ಟಗಳು, ಕಾಡಿನ ಸ್ವರೂಪ, ಮಣ್ಣು-ಕಲ್ಲಿನ ಸ್ವರೂಪ, ಖನಿಜ ಸಂಪತ್ತಿನ ಲಭ್ಯತೆಗಳ ಸಾಧ್ಯತೆ, ಕೈಗಾರಿಕೆಗಳ ಸಾಧ್ಯತೆ, ಎಸ್ಟೇಟ್‌ಗಳ ವಿಸ್ತರಣೆ ಇತ್ಯಾದಿಗಳಿಗೆ ಮೋಜಣಿ ಕಾರ್ಯವನ್ನು ಬಳಸಿದರು. ಇದರಿಂದ ಆದ ಒಂದು ಬಹುಮುಖ್ಯ ಬೆಳವಣಿಗೆಯೆಂದರೆ, ಗ್ರಾಮದ ಗಡಿಗಳು ಮತ್ತು ಭೂಹಿಡುವಳಿಗಳ ಗಡಿಗಳಿಗಾಗಿ ನಡೆಯುತ್ತಿದ್ದ ಸಂಘರ್ಷಗಳು ಬೇರೆ ಸ್ವರೂಪ ಪಡೆದುಕೊಂಡವು.

ಮೇಲಿನ ಈ ಪೀಠಿಕೆ ಕನ್ನಡ ರಾಷ್ಟ್ರೀಯತಾ ಚರ್ಚೆಗೆ ಸ್ವಲ್ಪ ಮಟ್ಟಿನ ಅನುಕೂಲವಾಗುತ್ತದೆಂದು ಭಾವಿಸಲಾಗಿದೆ. ಪ್ರಾಚೀನ ಕಾಲದಿಂದಲೂ ಭೂಪ್ರದೇಶದ ಜೊತೆಗೆ 'ಗಡಿ' ಕುರಿತಾದ ವಿವಾದಗಳು ನಡೆದುಬಂದಿರುವುದನ್ನು ಕಾಣಬಹುದು. ಆದರೆ ಆಧುನಿಕ ಸಂದರ್ಭದಲ್ಲಿ "ಗಡಿ ವಿವಾದಗಳು ಹೆಚ್ಚು ಸಂಕೀರ್ಣವಾಗಿರುವಂತೆ ತೋರುತ್ತದೆ. ಗಡಿಗಳು ಸಹ ನೈಸರ್ಗಿಕವಾಗಿ ನಿರ್ಮಿತವಾಗಿದ್ದರೆ ಸಮಸ್ಯೆಗಳು ಕಡಿಮೆ. ಆದರೆ ಮಾನವ ನಿರ್ಮಿತ ಗಡಿಗಳು ವಿಪರೀತ ಸಮಸ್ಯೆಗಳನ್ನು ಸೃಷ್ಟಿಸಿವೆ. ಕೆಲವು ದೇಶಗಳಿಗೆ ಇನ್ನೂ ಸಹ ಅಂತಾರಾಷ್ಟ್ರೀಯವಾಗಿ ಒಪ್ಪಿತ ಗಡಿಗಳೇ ನಿರ್ಮಾಣವಾಗಿಲ್ಲ. ಭಾರತ ಮತ್ತು ಪಾಕಿಸ್ತಾನದ ಗಡಿ ಸಮಸ್ಯೆ ಕೂಡ ಇದೇ ಥರದ್ದು. ದ್ವೀಪ ರಾಷ್ಟ್ರಗಳು ಈ ವಿಚಾರದಲ್ಲಿ ಅಬಾಧಿತ. ಮನುಷ್ಯ ನಿರ್ಮಿತ ಗಡಿಗಳು ಬಹುತೇಕ ಸಲ ಎರಡೂ ಅಥವಾ ಇನ್ನೂ ಹೆಚ್ಚು ರಾಷ್ಟ್ರಗಳಿಗೆ ಸಮ್ಮತವಾದುವಾಗಿರುವುದಿಲ್ಲ. ಕೆಲವೊಮ್ಮೆ ಬಲಾಢ್ಯ ರಾಷ್ಟ್ರ, ದುರ್ಬಲ ರಾಷ್ಟ್ರದ ಭೂಮಿಯನ್ನು ಕಬಳಿಸಿರಬಹುದು. ಅದು ಇಸ್ರೇಲಿನಂತೆ

ಹೊಸ ರಾಷ್ಟ್ರವನ್ನೆ ತಂದು ನೆಟ್ಟಿರಬಹುದು. ಈಗಾಗಲೇ ನಿರ್ಮಾಣಗೊಂಡಿರುವ ರಾಷ್ಟ್ರಗಳ ಗರ್ಭದಿಂದ ರಾಷ್ಟ್ರೀಯತೆಗಳ ಚಲನೆ ಆರಂಭಗೊಳ್ಳಬಹುದು ಅಥವಾ ಭಾರತದಂತೆ ಕೃತಕವಾಗಿ ಅನೇಕ ರಾಷ್ಟ್ರೀಯತೆಗಳನ್ನು ಒಟ್ಟಿಗೆ ಕಟ್ಟಲು ಪ್ರಯತ್ನಿಸಿ 'ವೈವಿಧ್ಯತೆಯಲ್ಲಿ ಏಕತೆ' ಎಂಬ ಘೋಷಣೆ ಸೃಷ್ಟಿಸಿರಬಹುದು. ಬದಲಾದ ಕಾಲ ಘಟ್ಟದಲ್ಲಿ ಇಲ್ಲಿ ಸಹ ರಾಷ್ಟ್ರೀಯತೆಗಳು ಸ್ವಾತಂತ್ರ್ಯಕ್ಕಾಗಿ ಒತ್ತಾಯಿಸಬಹುದು. ಅಂತೂ ಗಡಿಗಳು ಬದಲಾಗುತ್ತಲೇ ಇರುತ್ತವೆ. ಚರಿತ್ರೆಯ ಕಠೋರ ಚಲನೆಯಲ್ಲಿ ನಂಬಿಕೆ ಇಟ್ಟವರಿಗೆ ಈ ಸತ್ಯ ಅರ್ಥವಾಗುತ್ತದೆ.

ಹಾಗೆ ನೋಡಿದರೆ ಇತ್ತೀಚಿನವರೆಗೂ ಗಡಿಗಳು 'ಯಾದೃಚ್ಛಿಕ'ವಾದುವೇ ಹೊರತು ಅಂತಿಮವೆಂದು ಭಾವಿಸಲಿಕ್ಕೆ ಸಾಧ್ಯವಾಗಲೇ ಇಲ್ಲ. ವಿಜಯನಗರದ ಕಾಲದಲ್ಲೇ ಅರಸುಗಳು ಬದಲಾದ ಹಾಗೆಲ್ಲ ಗಡಿಗಳೂ ಬದಲಾಗಿವೆ. ಕೃಷ್ಣದೇವರಾಯನಕಾಲದ ಗಡಿಗಳು, ಪ್ರೌಢದೇವರಾಯನ ಕಾಲದ ಗಡಿಗಳು, ರಾಮರಾಯನ ಕಾಲದ ಗಡಿಗಳು ಒಂದೇ ಆಗಿರಲಿಲ್ಲ. ಕುತೂಹಲವೆಂದರೆ ವಿಜಯನಗರದ ಪಕ್ಕದಲ್ಲೇ ಇದ್ದ ಬಹಮನಿ ಅರಸರ ಗಡಿ ಹಂಪಿಯಿಂದ ಐವತ್ತು ಅರವತ್ತು ಕಿಲೋಮೀಟರು ದೂರದಲ್ಲಿರಬಹುದಷ್ಟೆ. ಅದೂ ವಿಶಾಲ ಅರ್ಥದಲ್ಲಿ ಕರ್ನಾಟಕವೇ ಆಗಿತ್ತು.

೧೯೪೭ರ ನಂತರ ಕೂಡ ಭಾರತದ ಬಾಹ್ಯ ಮತ್ತು ಆಂತರಿಕ ಗಡಿಗಳು ಬಹಳಷ್ಟು ಬದಲಾಗಿವೆ. ಪ್ರತ್ಯೇಕ ರಾಷ್ಟ್ರಗಳು ಹುಟ್ಟಿವೆ, ಪ್ರತ್ಯೇಕ ರಾಜ್ಯಗಳು ಉದಿಸಿವೆ. ಅದಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಭೌಗೋಳಿಕ ಪ್ರತ್ಯೇಕತೆಗಾಗಿ ಒತ್ತಾಯಿಸುತ್ತಿವೆ. ಚರಿತ್ರೆಯ ಚಲನೆಯಲ್ಲಿ ಇದ್ಯಾವುದೂ ಅಸಾಧ್ಯವಲ್ಲ. ವಿಶ್ವಸಂಸ್ಥೆಗೆ ಸೇರುತ್ತಿರುವ ರಾಷ್ಟ್ರಗಳ ಪಟ್ಟಿ ಬೆಳೆಯುತ್ತಲೇ ಇದೆ. ಪೂರ್ವತೈಮೂರ್ ಆಯಿತು, ಕೊಸಾವೊ ಸೇರುವ ದಾರಿಯಲ್ಲಿದೆ. ಇಷ್ಟನ್ನು ಅರ್ಥಮಾಡಿಕೊಳ್ಳಲಾಗದೆ ಕಾಲರೂಪಿ ಕುದುರೆಯನ್ನು ಹಿಂದಕ್ಕೆ ತಿರುಗಿಸಲು ಪ್ರಯತ್ನಿಸುತ್ತಿರುವ ಭಾರತದ 'ಭೂಪಟವಾದಿ' (ಬಲಪಂಥೀಯ, ಮತೀಯವಾದಿ ದೃಷ್ಟಿಕೋನಗಳು) ಚಿಂತನೆಗಳು ಬೃಹತ್ ಭಾರತ, ಬೃಹತ್ ಕರ್ನಾಟಕ ಚಿಂತನೆಗಳು ವರ್ತಮಾನದಲ್ಲಿ ವ್ಯಂಗ್ಯಕ್ಕೊಳಗಾಗಿವೆ. ಆದರೆ ಭವಿಷ್ಯದಲ್ಲಿ ಏನಾಗುತ್ತವೆ ಎಂದು ಹೇಗೆ ಹೇಳುವುದು ?

ಈ ಚಿಂತನೆಗಳು ಹುಟ್ಟುಹಾಕುತ್ತಿರುವ ಸಂಘರ್ಷಗಳು ಮಾತ್ರ ಘೋರವಾಗಿವೆ. ಗಡಿಯ ಆಚೆ ಇರುವವರು ಮನುಷ್ಯರೆ, ದಿನದಿನದ ಬದುಕಿಗೆ ಬಾಧೆಪಡುವ ಅಸಂಖ್ಯಾತ ಜನ ನಮ್ಮ ಹಾಗೆಯೆ ದುಡಿದು ಬದುಕುವವರು ಎನ್ನುವುದನ್ನು ಮರೆಸಿ, 'ಶತ್ರುತ್ವ' ಭಾವನೆಯನ್ನು ಹುಟ್ಟಿಸುತ್ತ ಹೋಗುತ್ತದೆ. ತನ್ನೊಳಗಿನ ಮತ್ತು ಹೊರಗಿನ ಧಾರ್ಮಿಕ ಭಾಷಿಕ ಅನ್ಯರನ್ನು ಕುರಿತಂತೆ ನಿರಂತರ ರಾಕ್ಷಸ ಸ್ವರೂಪದ ಚಿತ್ರಣ ಕಟ್ಟುತ್ತಾ ತನ್ನೊಳಗೆ ಹುಸಿ ಒಗ್ಗಟ್ಟನ್ನು ಬಯಸುತ್ತದೆ. ಆ ಮೂಲಕ ತನ್ನೊಳಗೆ ನೆಲೆಸಿರುವ ಬಿಕ್ಕಟ್ಟುಗಳನ್ನು ಆಕಾಶ-ಭೂಮಿಯಷ್ಟು ಅಂತರವಿರುವ ವರ್ಗ ಸ್ವಭಾವವನ್ನು ಮರೆಸಿ, ಸದಾ ಶತ್ರುವಿನ ಕುರಿತಾದ ಆತಂಕ ಮತ್ತು ಅಸಹನೆಯಲ್ಲಿ ಬದುಕಲು ಪ್ರಯತ್ನಿಸುತ್ತದೆ. 'ರಾಷ್ಟ್ರೀಯತೆ'ಯ ಸಂರಚನೆ ಎಂದರೇನೆ ಅನ್ಯದ ಎದುರು ತನ್ನ ನೆನಪುಗಳನ್ನು ಸಂಘಟಿಸಿ ಮಂಡಿಸುವುದು ಇರಬಹುದು. ಕನ್ನಡದ ಚಿಂತಕ ಡಾ.ಡಿ.ಆರ್.ನಾಗರಾಜರು ಈ ಪರಿಕಲ್ಪನೆಯನ್ನು ಮಣ್ಣಿನ 'ಪವಿತ್ರೀಕರಣ' ಎಂದು ವಿವರಿಸುತ್ತಾರೆ.

" 'ರಾಷ್ಟ್ರೀಯತೆ' ಎಂದರೆ, ಮೂಲಭೂತವಾಗಿ 'ಮಣ್ಣಿನ ಪವಿತ್ರೀಕರಣ'ದ ಒಂದು ಪ್ರಕ್ರಿಯೆಯೆಂದು ಹೇಳಬಹುದು. ಅಂದರೆ ಒಂದು ಸಾಂಸ್ಕೃತಿಕ ಪ್ರದೇಶ ಅಥವಾ ಭೌಗೋಳಿಕ ಪ್ರದೇಶ ತನ್ನನ್ನು ತಾನು ಸಂಘಟಿಸಿಕೊಳ್ಳುವ ಪ್ರಯತ್ನದಲ್ಲಿ ತಾನು ವಾಸಿಸುವ ನೆಲವನ್ನು 'ಪವಿತ್ರ'ವೆಂದು ಪರಿಕಲ್ಪಿಸಿಕೊಳ್ಳಲು ಪ್ರಾರಂಭಿಸುತ್ತದೆ. ಅದನ್ನು 'ರಾಷ್ಟ್ರ'ವೆಂದು ಅಮೂರ್ತೀಕರಿಸಿ ಹಾಗೆಯೇ ಮೂರ್ತೀಕರಿಸಿ ಆರಾಧಿಸತೊಡಗುತ್ತದೆ. ಇಂಥ ಪ್ರಕ್ರಿಯೆಯಲ್ಲಿ ಆ ಮಣ್ಣು ಮೊದಲು ನಿಜವಾದ ಮಣ್ಣಾಗಿರುತ್ತದೆ. ಆ ನೆಲ ನಿಜವಾದ ನೆಲವಾಗಿರುತ್ತದೆ, ಅಲ್ಲಿ ಎಲ್ಲವೂ ನಿಜವಾದದ್ದಾಗಿರುತ್ತದೆ. ಆದರೆ, ಕಾಲ ಸರಿದಂತೆ 'ರಾಷ್ಟ್ರ'ದ ಮೂಲ ಧಾತುವಾದ ಆ ಮಣ್ಣು ನಿಜವಾದ ಮಣ್ಣಾಗಿ ಉಳಿಯದೆ ಬಹಳ ಸಲ ಅದು ಕಾಲ್ಪನಿಕ ಮಣ್ಣಾಗಿ, ಕಾಲ್ಪನಿಕ ಪ್ರದೇಶವಾಗಿ ಪರಿವರ್ತಿತವಾಗುತ್ತದೆ."[೧]

ನಿಸ್ಸಂದೇಹವಾಗಿ ಇದು ಒಂದು ರಾಜಕೀಯ ಪ್ರಜ್ಞೆಯ ಭಾಗ. ತನಗೆ ತನ್ನದೇ ಆದ ಚರಿತ್ರೆ, ಭೂಪ್ರದೇಶ, ವಿಶಿಷ್ಟ ಸಂಸ್ಕೃತಿ, ಭಾಷೆ ಮುಂತಾದ ಈ ಅರ್ಹತೆಗಳೆಲ್ಲ ಇದ್ದರೂ ಇನ್ನೊಬ್ಬ ಯಜಮಾನನ ಅಧೀನದಲ್ಲಿ ಬದುಕುತ್ತಿದ್ದೇನೆ ಎನ್ನಿಸಿದೊಡನೆಯೇ ವಿಭಕ್ತವಾಗಲು, ಬೇರೆಯಾಗಲು ಬಯಸತೊಡಗುತ್ತದೆ. ಆಲೂರರನ್ನು ಒಳಗೊಂಡು ಮೊದಲ ಕನ್ನಡ ಚಿಂತಕರು ರಾಷ್ಟ್ರವನ್ನು ಕುಟುಂಬ ಪರಿಭಾಷೆಯಲ್ಲಿ ಮಂಡಿಸುತ್ತಾರೆ. ಅರ್ಹತೆಗಳಿದ್ದ ಮೇಲೆ ಅಧೀನವಾಗುಳಿದ ಬದುಕನ್ನು ತಿರಸ್ಕರಿಸುವುದು ಇಲ್ಲಿನ ಪ್ರಧಾನ ಲಕ್ಷಣ. ಹಾಗಾಗಿ ತನ್ನ ನೆನಪುಗಳನ್ನು ನಿರ್ಮಿಸಿಕೊಳ್ಳಲೆತ್ನಿಸುತ್ತದೆ. ಬೇಕಾದ್ದನ್ನು ಆರಿಸಿ ಕಟ್ಟಿಕೊಳ್ಳುತ್ತದೆ. ಪವಿತ್ರೀಕರಿಸುತ್ತದೆ. ನೆಲ, ಚರಿತ್ರೆ ಮತ್ತು ಸ್ಮೃತಿಕೋಶಗಳು ಅಭಿನ್ನಗೊಂಡು ಸಂಕಥನಗೊಳ್ಳಲಾರಂಭಿಸುತ್ತದೆ. ಅಂತಿಮವಾಗಿ ಹಕ್ಕು ಪ್ರತಿಪಾದಿಸುತ್ತದೆ. ಭೂಪ್ರದೇಶವೆಂಬ ಮೂರ್ತರೂಪದ ಜೊತೆಯಲ್ಲಿಯೇ ತಳುಕು ಹಾಕಿಕೊಂಡಿರುವ ಇನ್ನಿತರ ಸಂಗತಿಗಳಿವು.

೧. ಕವಿರಾಜಮಾರ್ಗದ ಸಂದರ್ಭದಲ್ಲಿ ಕಾವೇರಿಯಿಂದ ಗೋದಾವರಿಯವರೆಗೆ ಕನ್ನಡ ನಾಡಿನ ಗಡಿಗಳನ್ನು ನಿರ್ಣಯಿಸಲಾಗಿದೆ. ಇಲ್ಲಿ ಎರಡು ನೈಸರ್ಗಿಕ ಗಡಿಗಳು ನಿಗದಿಗೊಂಡಿವೆ.

೨. ಎರಡು ಸಾವಿರ ವರ್ಷಗಳಲ್ಲಿ ಬೇರೆ ಬೇರೆ ರಾಜ ಪ್ರಭುತ್ವಗಳು ಕರ್ನಾಟಕವನ್ನು ಆಳಿ ಅನೇಕ 'ಭೂಪಟಗಳನ್ನು, ಅದರೊಟ್ಟಿಗೆ ಗಡಿಗಳನ್ನೂ ಕಟ್ಟಿ ಬಿಟ್ಟು ಹೋಗಿವೆ.

೩. ಬ್ರಿಟಿಷರು ಕರ್ನಾಟಕವನ್ನು ಹರಿದು ಹಂಚಿದ್ದು ಕರ್ನಾಟಕದ ಮಟ್ಟಿಗೆ ಅತ್ಯಂತ ಕ್ರೂರವಾದ ವಿದ್ಯಮಾನ. ಅನೇಕ ಅಧಿಕಾರ ಕೇಂದ್ರಗಳನ್ನು ಸ್ಥಾಪಿಸಿ ಅದರ ಅನುಕೂಲಕ್ಕಾಗಿ ಜೀವಂತ ಭಾಷಿಕ ಸಮುದಾಯಗಳನ್ನು ಹಂಚಲಾಗಿದೆ. (ಆಫ್ರಿಕಾದ ಚಿಂತಕ ಗೂಗಿ ವಾ ಥಿಯಾಂಗೋ ಕೂಡ ಯುರೋಪಿನ ವಸಾಹತುಶಾಹಿಗಳು, ಬರ್ಲಿನ್ನಿನ ಟೇಬಲ್ಲಿನ ಮೇಲೆ ಆಫ್ರಿಕಾಖಂಡವನ್ನು ಹಂಚಿಕೊಂಡರು ಎಂದು ಬರೆಯುತ್ತಾರೆ). ಪಶ್ಚಿಮ ಕರಾವಳಿಯಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯನ್ನು ಪೂರ್ವಕರಾವಳಿಯ ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸಲಾಗಿತ್ತು. ಮಧ್ಯಕರ್ನಾಟಕದ ಬಳ್ಳಾರಿಯನ್ನು ಬ್ರಿಟಿಷರೆ ಮದ್ರಾಸಿನಿಂದ ನಿಯಂತ್ರಿಸುತ್ತಿದ್ದರು. ರಕ್ಷಣೆಯ ದೃಷ್ಟಿಯೂ, ವ್ಯಾಪಾರದ ಉದ್ದೇಶವೂ ಸೇರಿಕೊಂಡು ಕರ್ನಾಟಕವನ್ನು

ಅನೇಕ ಭಾಗಗಳಾಗಿ ವಿಭಜಿಸಿ ಆಳಲಾಗಿದೆ. ಆಗಿನಿಂದಲೇ ಆರಂಭವಾದ ಗಡಿ ಕುರಿತ ಆಧುನಿಕ ಸಮಸ್ಯೆ ಸದ್ಯಕ್ಕೆ ನಿಲ್ಲುವಂತೆ ಕಾಣುತ್ತಿಲ್ಲ.

೪. ತನ್ನ ಹಳೆಯ ನೆನಪುಗಳನ್ನು ಸಂಘಟಿಸಿ ಏಕೀಕರಣ ಚಳುವಳಿಯ ಸಂದರ್ಭದಲ್ಲಿ ಒಂದು ಗಡಿ ಮತ್ತು ಒಂದು ಭೂಪಟ ನಿರ್ಧರಿಸಲಾಯಿತು. ಆದರೆ ಆ ಎಲ್ಲ ಪ್ರದೇಶಗಳು ಸೇರಿಸಲಾಗಲಿಲ್ಲ ಎಂಬ ನಿರಂತರ ವ್ಯಥೆಯನ್ನು ಕಾಪಾಡಿಕೊಂಡು ಬರಲಾಗಿದೆ.

೫. ಹಾಗಾಗಿ ಸದ್ಯದಲ್ಲಿ ಅಸ್ತಿತ್ವದಲ್ಲಿರುವ ಭೂಪಟವನ್ನು ವಿಸ್ತರಿಸಿ ಬೃಹತ್ ಕರ್ನಾಟಕ ನಿರ್ಮಿಸಬೇಕೆಂಬ ಚಿದಾನಂದ ಮೂರ್ತಿಯವರ ಮತ್ತು ಕೆಲವು ಸಂಘಟನೆಗಳ ವಾದವಾಗಿದೆ.

೬. ಜೊತೆಗೆ ಕರ್ನಾಟಕದಲ್ಲೇ ಇರುವ ಕೊಡಗು, ತುಳು, ಹೈದರಾಬಾದ್ ಕರ್ನಾಟಕ ಪ್ರತ್ಯೇಕ ರಾಜ್ಯಕ್ಕಾಗಿ ಬೇಡಿಕೆ ಸಲ್ಲಿಸಿವೆ.

೭. ಮಹಾರಾಷ್ಟ್ರ ಮುಂತಾದ ರಾಜ್ಯಗಳು ಕರ್ನಾಟಕದ ಪ್ರದೇಶಗಳು ನಮ್ಮವು ಎಂದು ಬೇಡಿಕೆ ಸಲ್ಲಿಸುತ್ತಿವೆ.

ಈ ರೀತಿಯ ಸಂಕೀರ್ಣ ವಾಸ್ತವದಲ್ಲಿ ಕನ್ನಡ ಚರಿತ್ರೆಯ ಭೂಪ್ರದೇಶವನ್ನು ಕುರಿತ ಚಿಂತನೆಗಳು ಕ್ರಿಯಾಶೀಲವಾಗಿವೆ. ಕಳೆದ ಶತಮಾನದ ಭೂಪ್ರದೇಶವನ್ನು ಕುರಿತ ಚಿಂತನೆಗಳನ್ನು ಪ್ರಾತಿನಿಧಿಕ ಲೇಖಕರ ಮೂಲಕ ಚರ್ಚಿಸಲಾಗಿದೆ.

## ೨.೨ ಆಲೂರರ ಭೂಪ್ರದೇಶ ಕುರಿತ ಚಿಂತನೆಗಳು

''ಸ್ವತಂತ್ರಭಾರತ ಏಕತಂತ್ರ ಕರ್ನಾಟಕ'' ಎಂಬ ಕನಸನ್ನು ಹೊತ್ತುಕೊಂಡು ಮೂರು-ನಾಲ್ಕು ದಶಕಗಳ ಕಾಲ ಕರ್ನಾಟಕ ಏಕೀಕರಣ ಚಳುವಳಿಗೆ ನಾಯಕತ್ವ ವಹಿಸಿದ್ದ ಆಲೂರರು, ಭೂಪ್ರದೇಶ ಕುರಿತಂತೆ ಸ್ಪಷ್ಟವಾಗಿ ಯೋಚಿಸಿದ್ದಾರೆ. ಕರ್ನಾಟಕ ಏಕತಂತ್ರವಾಗದೆ ಉಳಿಯುವಂತಿಲ್ಲ ಎಂಬ ನಿಲುವು ಅವರದಾಗಿತ್ತು. ''ಸ್ವಾತಂತ್ರ್ಯ ಸಿಕ್ಕಿತೆಂದೂ ಕರ್ನಾಟಕಕ್ಕೆ ಬೇರೆ ರಾಜ್ಯ ಸಿಕ್ಕಲಿಲ್ಲವೆಂದೂ ತಿಳಿಯಿರಿ. ಆಗ ನಮ್ಮ ಅವಸ್ಥೆ ಏನಾಗುತ್ತಿತ್ತೆಂಬುದನ್ನು ತುಸು ನೆನೆಯಿರಿ. ಆಗ ಕರ್ನಾಟಕದ ಅವಸ್ಥೆ, ''ನಾಯಿಗಳು ಹರಿದ ಹಿಟ್ಟಿನ ಚೀಲದಂತೆ ಅದರ ಅವಸ್ಥೆಯಾಗುತ್ತಿತ್ತು''[೨] ಮಾಧ್ವರಾಗಿದ್ದ ಆಲೂರರು 'ನಾಯಿ' ಉಪಮೆ ಕೊಡುತ್ತಿರುವುದು ಆಶ್ಚರ್ಯಕರ. 'ನಾಯಿಗಳು ಹರಿದ ಹಿಟ್ಟಿನ ಚೀಲದ ಕಲ್ಪನೆಯೇ' ಭಯಾನಕ. ಅದನ್ನು ನಾಡಿಗೆ ಅನ್ವಯಿಸಿ ಹೇಳುತ್ತಿದ್ದಾರೆ. ಆಡಳಿತದ ಅನುಕೂಲಕ್ಕಾಗಿ ಬ್ರಿಟಿಷರು ಭಾರತದ ಅನೇಕ ರಾಷ್ಟ್ರೀಯತೆಗಳಂತೆ ಕರ್ನಾಟಕವನ್ನು ಮನಬಂದಂತೆ ಕತ್ತರಿಸಿ ಹಾಕಿದ್ದರು. ಕನ್ನಡ ಭಾಷಿಕ ಸಮುದಾಯ ಬೇರೆ ಬೇರೆ ರಾಷ್ಟ್ರೀಯತೆಗಳ ಅಧೀನ ಬದುಕುವುದೇ, ಭೀಕರ ದುರಂತ ಸಂಗತಿಯಾಗಿ ಕಂಡಿರಬೇಕು. ಕರ್ನಾಟಕವನ್ನು ಭೌತಿಕವಾಗಿ ಸುತ್ತಿದ ಆಲೂರರು ಗಡಿ ಭಾಗಗಳ ಅವಸ್ಥೆಯನ್ನು ಸಮರ್ಥವಾಗಿ ಅರ್ಥಮಾಡಿಕೊಂಡವರಾಗಿದ್ದರು. ಮರಾಠಿ ಮತ್ತು ಕನ್ನಡಗಳ ಸಂಘರ್ಷದಲ್ಲಿ, ನಾಡನ್ನು ಕುರಿತಂತೆ ತಮ್ಮ ಸ್ಪಷ್ಟವಾದ ಚಿಂತನೆಗಳನ್ನು ಬೆಸೆದರು. ಸಂಘರ್ಷಮಯ ವಾತಾವರಣದಲ್ಲಿಯೂ ಸಮಚಿತ್ತವನ್ನು ಕಾಪಾಡಿಕೊಂಡರು. ಆಲೂರರು 'ಧಾರ್ಮಿಕ' ಮತ್ತು 'ಆಧ್ಯಾತ್ಮಿಕ' ಬುನಾದಿಯ ಮೇಲೆ ರಾಷ್ಟ್ರವನ್ನು ಕಟ್ಟಿ ನಿಲ್ಲಿಸಲು ಪ್ರಯತ್ನಿಸಿದರು.

ಅವರಿಗೆ 'ಕರ್ನಾಟಕ' ಮತ್ತು 'ಭಾರತ'ಗಳನ್ನು ಕುರಿತು ಹೇಗೆ ಬೆಸೆಯುವುದೆಂಬ ಬಗ್ಗೆ ಗೊಂದಲಗಳೇ ಇರಲಿಲ್ಲ. ಏಕೆಂದರೆ 'ಮಧ್ವಸಿದ್ಧಾಂತ'ವಾದ 'ದ್ವೈತ' ತತ್ವವು ಅವರಿಗೆ ಪೂರ್ಣವಾಗಿ ಸಹಕರಿಸಿದೆ. ಹಾಗಾಗಿಯೇ 'ಸ್ವತಂತ್ರಭಾರತ' ಏಕತಂತ್ರ ಕರ್ನಾಟಕ ಎಂಬ ನಿಲುವಿಗೆ ಆಲೂರರು ಬರಲು ಸಾಧ್ಯವಾಗಿರಬಹುದು. ತಮ್ಮದು 'ಸಾತ್ವಿಕ ರಾಷ್ಟ್ರ'ದ ಕಲ್ಪನೆ ಎಂದು ಹೇಳುತ್ತಾರಾದರೂ ರಾಷ್ಟ್ರಕ್ಕೆ 'ಕ್ಷಾತ್ರದ ಅಗತ್ಯ' ಇದೆಯೆಂದು ಭಾವಿಸಿ ಗಾಂಧೀಜಿಯವರ ಅಹಿಂಸಾತತ್ವದ ಜೊತೆಗೆ ಅವರು ಭಿನ್ನಾಭಿಪ್ರಾಯ ಉಳ್ಳವರಾಗಿದ್ದರು. ಕರ್ನಾಟಕವು ನಿರ್ದಿಷ್ಟ ಭೂಪ್ರದೇಶ ಮತ್ತು ಗಡಿಯನ್ನು ಹೊಂದಿರಬೇಕು. ಕನ್ನಡ ಮಾತನಾಡುವವರೆಲ್ಲ ಒಕ್ಕಟ್ಟಿಗೆ ಬರಬೇಕೆಂಬುದು ಅವರ ಮಹಾದಾಸೆ. ಆದರೆ ಗಡಿಯಾಚೆಗಿನ ಭಾಷಿಕರ ಕುರಿತು ದ್ವೇಷದ ಆಯಾಮ ಪಡೆಯದಂತೆ ಅವರು ಎಚ್ಚರ ಕಾಪಾಡಿಕೊಳ್ಳುತ್ತಾರೆ. ಕನ್ನಡ ಮಾತನಾಡುವ ಪ್ರದೇಶಗಳು ಹೊರಗೆ ಉಳಿದದ್ದರ ಬಗ್ಗೆ ಹೀಗೆ ಆಲೂರರು ಹೇಳುತ್ತಾರೆ :

"ನನಗೆ ಸೊಲ್ಲಾಪುರ, ಅಕ್ಕಲಕೋಟೆ, ಜತ್ತ, ಆಲೂರ, ಆದವಾನಿ, ರಾಯದುರ್ಗ, ಕಾಸರಗೋಡು, ಹೊಸೂರು, ನೀಲಗಿರಿ ಮುಂತಾದ ನಮ್ಮ ಅನೇಕ ಕನ್ನಡ ಪ್ರದೇಶಗಳು ಕೈಬಿಟ್ಟು ಹೋಗುತ್ತವಲ್ಲಾ ಎಂದು ನನ್ನ ಹೊಟ್ಟೆಯೊಳಗಿನ ಸಂಕಟ! ಸಾಹಿತ್ಯ ಪರಿಷತ್ತು ಸಹಜವಾಗಿಯೂ, ಸುಲಭವಾಗಿಯೂ ಉಳಿಸಿಕೊಳ್ಳಬಹುದಾಗಿತ್ತು!"[೩]

'ಬೃಹನ್ಮಹಾರಾಷ್ಟ್ರ' ಮಹತ್ವಾಕಾಂಕ್ಷೆಯುಳ್ಳ ಮರಾಠಿಗರನ್ನು ಟೀಕಿಸುವ ಆಲೂರರು ಸಹ 'ಬೃಹತ್ಕರ್ನಾಟಕ' ಕಲ್ಪನೆಯನ್ನು ಹೊಂದಿದವರೆ ಎನ್ನಿಸುವುದು ಸಹಜ. ಆದರೆ ಅವರ ತಣ್ಣನೆಯ ಪ್ರತಿಕ್ರಿಯೆಗಳು ದ್ವೇಷವಾಗಿ ಬದಲಾಗುವುದಿಲ್ಲ. ಆದರೆ ಮುಚ್ಚಿಹೋಗುವ ಸ್ಥಿತಿಯಲ್ಲಿದ್ದ ಮರಾಠಿ ಗ್ರಂಥಾಲಯವನ್ನು ನಾನೇ ನಡೆಸಿದೆ ಎಂದು ಹೇಳುವ ಮೂಲಕ ತಾನು ಪ್ರತಿಪಾದಿಸುತ್ತಿರುವ ಕರ್ನಾಟಕತ್ವದ ಕಲ್ಪನೆ ಸಂಕುಚಿತವಾದುದಲ್ಲ, ಬದಲಾಗಿ ಒಳಗೊಳ್ಳುವಿಕೆಯ ಆಯಾಮವುಳ್ಳದ್ದು ಎಂದು ಸುಳಿವು ನೀಡುತ್ತಾರೆ. ಹಾಗಾಗಿ ಆಲೂರರು 'ಭೂಪಟವಾದಿ' ಚಿಂತಕರಂತೆ ಸಂಕುಚಿತ ನೆಲೆಯಲ್ಲಿ ಕಾಣುವುದಿಲ್ಲ. ಈ ಕಾರಣದಿಂದ ಅವರ ನಿಲುವುಗಳು ಆರೋಗ್ಯಕರವಾಗಿ ಕಾಣುತ್ತವೆ.

"ಕನ್ನಡಿಗನೊಬ್ಬನು ಬಂಗಾಲದಲ್ಲಿ ಹೋಗಿ ಶಾಶ್ವತವಾಗಿ ನೆಲೆಸಿದನೆಂದು ತಿಳಿಯಿರಿ. ಆಗ ಅವನು ಬಂಗಾಲ ಭಾಷೆಯೊಡನೆ, ಬಂಗಾಲಿಗರೊಡನೆ ತಾದಾತ್ಮ್ಯವನ್ನು ಹೊಂದಲೇಬೇಕು. ಶಾಶ್ವತವಾಗಿ ನಿಲ್ಲುವ ಇಚ್ಛೆಯಿಲ್ಲದೆ ಇಂದಿಲ್ಲ ನಾಳೆ ತಿರುಗಿ ಕರ್ನಾಟಕಕ್ಕೆ ಬರುವ ಸಂಭವವಿದ್ದರೆ ಮಾತ್ರ ಕನ್ನಡದ ಅಭಿಮಾನವನ್ನು ಬಿಡಕೂಡದು"[೪]

'ತಾದಾತ್ಮ್ಯ'ದ ಕಲ್ಪನೆಯೇ ವಿಶಿಷ್ಟವಾದುದು. ತಾನು ಹೋಗಿ ನೆಲೆಸಿದ್ದರ ಜೊತೆ ಸಂಪೂರ್ಣ ಲೀನವಾಗಿ ಬಿಡುವುದು ಎಂಬರ್ಥವದು. ಇಲ್ಲಿನ ನಿಲುವಿನ ವಿಶೇಷತೆ ಅನ್ಯರು ತನ್ನೊಳಗೆ ಬೆರೆತು ಲೀನವಾಗುವುದಲ್ಲ. ತನ್ನವರೆ ಹೋದ ಕಡೆ ಲೀನವಾಗುವುದು ಎಂದ ಕೂಡಲೇ ಭಾಷಾಮೂಲಭೂತವಾದಿಯಾಗುವ ಅಪಾಯುಗಳನ್ನು ತಪ್ಪಿಸಿಕೊಂಡುಬಿಡುತ್ತಾರೆ. ಆದರೆ ಉದಾಹರಣೆಯಾಗಿ ಆರಿಸಿಕೊಳ್ಳುವುದು ಮಾತ್ರ

'ಬಂಗಾಲ'ವನ್ನು. ದೂರದ ತನ್ನ ನಾಡಿಸ ಗಡಿ ಹಂಚಿಕೊಂಡ ರಾಷ್ಟ್ರೀಯತೆಗಳು ಉದಾಹರಣೆಯಲ್ಲಿ ಸುಳಿಯುವುದಿಲ್ಲ ಎನ್ನುವುದು ಆಸಕ್ತಿಯ ವಿಚಾರ.

ಆಲೂರರು ಇದುವರೆಗೂ ಇಲ್ಲದ ರಾಷ್ಟ್ರವೊಂದನ್ನು ಕಟ್ಟುವ ಸಿದ್ಧಾಂತ ಮಂಡಿಸುತ್ತಿದ್ದಾರೆ. ತನ್ನ ಸಿದ್ಧಾಂತ ರೂಪಿಸುವಾಗ ಸಹಜವಾಗಿಯೇ ಅಕ್ಕಪಕ್ಕದ ರಾಷ್ಟ್ರೀಯತೆಗಳೂ ತನ್ನಂಥದೇ ಪ್ರಯತ್ನದಲ್ಲಿ ತೊಡಗಿವೆ ಎನ್ನುವ ಅರಿವು ಅವರಿಗಿವೆ. ಆದರೆ ಅವರು ಕಟ್ಟಬಯಸುವ ರಾಷ್ಟ್ರೀಯತೆ 'ಇನ್ನೊಂದನ್ನು ದಮನ ಮಾಡಬಾರದು' ಹಾಗೆಂದು ತನ್ನನ್ನು ಬಲಿಕೊಡಬಾರದು ಎನ್ನುವ ನೆಲೆಗಳಿಂದ ಹೊರಡುತ್ತದೆ. ಭಾಷೆಯ ಆಧಾರದ ಮೇಲೆಯೇ ಸಮುದಾಯಗಳನ್ನು ಒಂದುಗೂಡಿಸಲು ಸಾಧ್ಯ. ಅದಕ್ಕಿಂತ ಉತ್ತಮವಾದ ಉಪಾಯಗಳು ಬೇರೆ ಯಾವುವೂ ಕಾಣುವುದಿಲ್ಲ ಎಂದು ಆಲೂರರು 'ಸೈಮನ್ ಕಮಿಷನ್ನಿಗೆ' ಕೊಟ್ಟ ಮನವಿಯಲ್ಲೂ ಹೇಳುತ್ತಾರೆ. ಒಂದು ಭಾಷೆ ಮಾತನಾಡುವ ಜನರೆಲ್ಲ ಒಂದು ಆಡಳಿತ ಘಟಕಕ್ಕೆ ಸೇರಬೇಕೆಂಬ ನಿಲುವೇ ರಾಷ್ಟ್ರೀಯತಾ ನಿಲುವು. ತನ್ನ ಸದಸ್ಯರ ನಡುವೆ ಸಾವಯವ ಸಂಬಂಧ ಏರ್ಪಡಬೇಕಾದರೆ ಭಾಷೆ ಬಿಟ್ಟು ಅನ್ಯ ಸಾಧನಗಳಿಲ್ಲ ಎನ್ನುವ ನಿಲುವನ್ನು ತಳೆಯುತ್ತಾರೆ. ಆ ಕಾರಣಕ್ಕಾಗಿ ಆಲೂರರು ಪ್ರಾಯೋಗಿಕವಾದ ಚಿಂತನೆಗಳನ್ನು ರೂಪಿಸುತ್ತಾರೆ. ಮತ್ತು ತನ್ನ ಒಳಗಿರುವ ಕೊಡವ, ತುಳು, ಕೊಂಕಣಿ ಮುಂತಾದ ಜನಭಾಷೆಗಳ ಅನನ್ಯತೆಯನ್ನೂ ನಿರಾಕರಿಸುವುದಿಲ್ಲ. ಬದಲಾಗಿ 'ಅಲ್ಪಸಂಖ್ಯಾತ ಭಾಷಿಕರ ತುಷ್ಟಿ ಪುಷ್ಟಿ' ಕಾಪಾಡಿಕೊಳ್ಳಬೇಕೆನ್ನುವ ನಿಲುವು ತಳೆಯುತ್ತಾರೆ. ರಾಜಕೀಯವಾಗಿ 'ಕರ್ನಾಟಕ' ಕೇಂದ್ರ, ಆದರೆ ಆಧ್ಯಾತ್ಮಿಕವಾಗಿ ವ್ಯಕ್ತಿಕೇಂದ್ರದಿಂದ ಆರಂಭಗೊಳ್ಳುವ ತತ್ವವನ್ನು ಮಂಡಿಸುತ್ತಾರೆ. ಕನ್ನಡದ ಚಿಂತಕ ಡಾ.ಡಿ.ಆರ್.ನಾಗರಾಜರು ಆಲೂರರ ರಾಷ್ಟ್ರೀಯ ಮೀಮಾಂಸೆಯನ್ನು ಸಂಕ್ಷೇಪಗೊಳಿಸಿ ಹೀಗೆ ಗ್ರಹಿಸುತ್ತಾರೆ.

''ರಾಷ್ಟ್ರೀಯತೆ'' ಎಂದರೆ ''ಸಾತ್ವಿಕ ಅಹಂಕಾರ''ದ ರೂಪ ಎನ್ನುತ್ತಾರೆ ಆಲೂರರು. ಇದಕ್ಕೆ ನದಿಯ ಉಪಮೆ ಕೂಡ ಕೊಡುತ್ತಾರೆ. ಅದು ಮೊದಲು ಚಿಕ್ಕದಿದ್ದು, ನಾನು ನನ್ನ ಹೆಂಡತಿ, ಮಕ್ಕಳು, ನನ್ನ ಊರು, ನನ್ನ ಪ್ರಾಂತ, ನನ್ನ ರಾಷ್ಟ್ರ ಎಂಬುದಾಗಿ ವಿಸ್ತಾರವನ್ನೂ ಹೊಂದಿ ಕಡೆಗೆ ''ಸರ್ವಭೂತಹಿತ'' ವೆಂಬ ಸಮುದ್ರಕ್ಕೆ ಒಯ್ದು ಕೂಡಿಸಬೇಕು. ಆದರೆ, ಭಾರತೀಯ ರಾಷ್ಟ್ರೀಯತೆಗೂ ಪಾಶ್ಚಾತ್ಯ ರಾಷ್ಟ್ರೀಯತೆಗೂ ವ್ಯತ್ಯಾಸವಿದೆ. ಪಾಶ್ಚಾತ್ಯ ದೇಶದಲ್ಲಿಯ ರಾಷ್ಟ್ರೀಯತ್ವದ ಸೆಲೆಯು ಸ್ವಾರ್ಥ ಹಿತದಲ್ಲಿ ಅವಸಾನ ಹೊಂದುತ್ತದೆ. ಅದು ''ಸರ್ವ ಭೂತಹಿತಕ್ಕೆ'' ಹೋಗಿ ಕೂಡುವುದಿಲ್ಲ. ಇದಿಷ್ಟು ಆಲೂರರ ವಿಚಾರ ಸಾರ.''[೫]

ರಾಷ್ಟ್ರೀಯತೆಯೆಂಬ ಸಂಘರ್ಷ ಸ್ವರೂಪದ ತತ್ವವನ್ನು ಆಲೂರರು ತಮ್ಮ ದರ್ಶನದಲ್ಲಿ ''ಸರ್ವ ಭೂತಹಿತ ''ದಲ್ಲಿ ಪರ್ಯಾವಸಾನವಾಗಬೇಕೆಂಬ ಆಶಯವೇ ಸುಂದರವಾದದ್ದು. ಇಲ್ಲೆಲ್ಲ ಪಶ್ಚಿಮವನ್ನು 'ವಸ್ತುಕೇಂದ್ರಿತ'ವೆಂದು ಚಿಂತಿಸಿ ಅದರ ಎದುರು ಪೂರ್ವವನ್ನು 'ಆಧ್ಯಾತ್ಮ ಕೇಂದ್ರಿತ'ವಾಗಿ ಕಲ್ಪಿಸುವುದು ಕಾಣುತ್ತದೆ. ತಾನು ಪ್ರತಿಪಾದಿಸುವ ರಾಷ್ಟ್ರದಲ್ಲಿ ಕೀಟ, ಪಕ್ಷಿಗಳೂ ಸುಖವಾಗಿರಬೇಕು ಎಂದು ಬಯಸುವ ಕುವೆಂಪುರವರ ನಿಲುವಿಗೆ ಆಲೂರರ 'ಸರ್ವಭೂತಹಿತ' ತತ್ವ ಹತ್ತಿರ ಬಂದು ನಿಲ್ಲುತ್ತದೆ. ದ್ವೇಷವಿಲ್ಲದ, ಹಿಂಸ್ರಕವಲ್ಲದ , ರಕ್ತಪಾತ ಬಯಸದ ಆದರ್ಶವಾದಿ ರಾಷ್ಟ್ರೀಯತೆಯೊಂದರ ಪ್ರತಿಪಾದನೆ ಕನ್ನಡದ ನಮ್ಮ

ದೊಡ್ಡ ಚಿಂತಕರಲ್ಲಿದೆ. ಆ ಅರ್ಥದಲ್ಲಿ ಅವರನ್ನು ಕನ್ನಡದ ದಾರ್ಶನಿಕರು ಎಂದು ಕರೆಯಬಹುದು. 'ವೈಶಿಷ್ಟ್ಯವನ್ನು ಬಿಟ್ಟುಕೊಡದೆ ವಸುಧೆ (ಜಗತ್ತಿನಲ್ಲಿ)ಯಲ್ಲಿ ವಿಲೀನ'ವಾಗುವ ಸುಂದರ ತತ್ವವನ್ನು ಕನ್ನಡದ ಮೊದಲ ಲಕ್ಷಣಗ್ರಂಥ 'ಕವಿರಾಜಮಾರ್ಗ' ಪ್ರತಿಪಾದಿಸುತ್ತದೆ ಎಂದು ಕೆ.ವಿ.ಸುಬ್ಬಣ್ಣನವರು ವಿಶ್ಲೇಷಿಸಿದ್ದಾರೆ. ಬಹುಶಃ ಈ ಅರಿವು ಇದೆಯೆಂಬಂತೆ ಬರೆಯುವ ಆಲೂರರ ಮಾತುಗಳಿವು :

"ಕರ್ನಾಟಕತ್ವವೆಂದರೆ ಕಿರಣ ಕೇಂದ್ರದ ಕಾಜು (Focusing lense) ಅದರೊಳಗಿಂದ ಭರತಭೂಮಿ ಮಾತ್ರವೇ ಏಕೆ ವಿಶ್ವವೇ ಸಮಗೆ ಗೋಚರವಾಗುತ್ತದೆ. ವಿಶ್ವದ ಕಿರಣಗಳೂ, ಭಾರತದ ಕಿರಣಗಳೂ ನಮ್ಮ ಕರ್ನಾಟಕತ್ವದ ಕಾಜಿನಲ್ಲಿ ಅಂತರ್ಯಾಮಿಯಾಗಿವೆ."[೬]

ತನ್ನ ಪಾಲಿಗೆ ಕರ್ನಾಟಕವೇ ಅಂತಿಮ ಎಂಬ ನೆಲೆಯಿಂದ ಹೊರಡುವ ಈ ಮಾತುಗಳಿಗೆ 'ಅಹಂ ಕೇಂದ್ರಿತವಾದ' ಆಯಾಮವಿದೆ. ಕರ್ನಾಟಕದ ಮೂಲಕ ಜಗತ್ತನ್ನೇ ಕಾಣಬಲ್ಲೆ ಎಂಬ ನಿಲುವು ಅದು. ಬಹುಶಃ ತನ್ನ ನೆಲವನ್ನು, ಸಂಸ್ಕೃತಿಯನ್ನು ಘನತೀಕರಿಸುವ ಹಠದಿಂದ ಹುಟ್ಟಿದ ನಿಲುವು ಹೌದು. ಈ ಹಠವೇ ಪರಂಪರೆಯನ್ನು ಪುನಾರಚಿಸಿಕೊಳ್ಳುವ ಅಗತ್ಯಕ್ಕೆ ಒತ್ತಾಯಿಸುತ್ತದೆ. ತಾನು ಬದುಕುತ್ತಿರುವ ನೆಲವನ್ನು ದೋಷಗಳಿಲ್ಲದಂತೆ ಪವಿತ್ರೀಕರಿಸುವ ಕಾರ್ಯ ಇದರಿಂದ ಆರಂಭಗೊಳ್ಳುತ್ತದೆ; ಇದು ವೈರುಧ್ಯಗಳನ್ನು ಮುಚ್ಚಿ ಹಾಕುತ್ತದೆ. ಆದರೆ ಆಲೂರರು ಪ್ರತಿಪಾದಿಸುತ್ತಿರುವ ರಾಷ್ಟ್ರೀಯತೆ ವೈರುಧ್ಯಗಳನ್ನೇ ಗಮನಿಸುವುದಿಲ್ಲ. ಇದರಲ್ಲಿ ದುಡಿಯುವವರ, ಮಹಿಳೆಯರ, ಆದಿವಾಸಿಗಳ, ನಾಸ್ತಿಕರ ಪಾತ್ರ ಎಂಥಹುದು ಎಂಬ ಬಗ್ಗೆ ಇಲ್ಲಿ ವಿವರಗಳಿರುವುದಿಲ್ಲ. ಇಲ್ಲಿ ಬ್ರಾಹ್ಮಣ-ಲಿಂಗಾಯತ ಸಮುದಾಯಗಳಂಥ ಬಲಿಷ್ಠ ಸಮುದಾಯಗಳಿಗಷ್ಟೇ ಪಾತ್ರ ನಿರ್ಣಾಯಕವಾಗುತ್ತದೆ. ಇದು ಆಧ್ಯಾತ್ಮದ ಆಳದಲ್ಲಿರುವ ಬಿರುಕುಗಳು ಅಥವಾ ಕುರೂಪ. ಇಲ್ಲಿ "ಸರ್ವಭೂತಹಿತ"ವೆಂಬ ಕಲ್ಪನೆಯ ಮೂಲಕ ಎಲ್ಲ ವೈರುಧ್ಯಗಳನ್ನು ನಿಭಾಯಿಸಲು ಸಾಧ್ಯವೇ ಎಂಬ ಪ್ರಶ್ನೆ ಕಾಡುತ್ತದೆ. ಏಕೆಂದರೆ ಮೇಲಿನ ಎರಡು ಸಮುದಾಯಗಳನ್ನು ಬಿಟ್ಟರೆ "ಕರ್ನಾಟಕತ್ವದ ವಿಕಾಸ" ಕೃತಿಯಲ್ಲಿ ಉಳಿದ ಸಮುದಾಯಗಳ ಪಾತ್ರವೇನು ಎಂಬ ಪ್ರಶ್ನೆಗೆ ಆಲೂರರಲ್ಲಿ ಉತ್ತರ ಸಿಗುವುದಿಲ್ಲ. ಆದರೂ 'ಭೂಪ್ರದೇಶ' ಕುರಿತ ಚಿಂತನೆಯಲ್ಲಿ ಮತೀಯವಾದಿಗಳು ಮತ್ತು ಬೃಹತ್ ಭಾರತ - ಕರ್ನಾಟಕಗಳನ್ನು ಕಟ್ಟುವ ದಿಗ್ವಿಜಯವಾದಿಗಳು ಆಶಿಸುವ ವಿಸ್ತರಣವಾದಿ ಆಶಯಗಳು ಆಲೂರರಲ್ಲಿ ಇಲ್ಲ. ನೈಜತೆಯನ್ನು ಬಿಟ್ಟುಕೊಡದೆ ಗಡಿಯಾಚೆಗೆ ಉಳಿದ ಪ್ರದೇಶಗಳು ಸಾಧ್ಯವಾದರೆ ಒಳಗೆ ಬರಲಿ ಎನ್ನುವ ಆಶಯ ವ್ಯಕ್ತವಾಗಿದೆ. ಅಂತಿಮವಾಗಿ ಕರ್ನಾಟಕ ಕೇಂದ್ರಿತ ತಮ್ಮ ನಿಲುವನ್ನು ಹೀಗೆ ಹೇಳುತ್ತಾರೆ :

"ನಮ್ಮ ಕರ್ನಾಟಕವು ಭರತ ಖಂಡಕ್ಕಿಂತಲೂ ದೊಡ್ಡದಾಗಿದೆ, ಏಷಿಯಾ ಖಂಡವನ್ನು ಮಿಕ್ಕಿದೆ, ವಿಶ್ವವನ್ನು ವ್ಯಾಪಿಸಿದೆ. ಇದನ್ನು ಕೇಳಿ ಅನೇಕರು ಆಶ್ಚರ್ಯಗೊಳ್ಳಬಹುದು. ಭರತ ಖಂಡದ ಭಾಗೈಕ ಮಾತ್ರವಾದ ಕರ್ನಾಟಕವು ಭರತ ಖಂಡಕ್ಕಿಂತಲೂ ದೊಡ್ಡದಿರುವುದು ಎಂದಿಗಾದರೂ ಸಂಭವನೀಯವೇ ಎಂದು ಶಂಕಿಸಬಹುದು. ಅಹುದು ಅದು ನಿಜವಾಗಿಯೇ ದೊಡ್ಡದಾಗಿದೆ. ಏಕೆಂದರೆ, ಕರ್ನಾಟಕದ ಸ್ಥೂಲಶರೀರವು ಸಂಕುಚಿತವಾಗಿದ್ದರೂ ಸೂಕ್ಷ್ಮಶರೀರವು ಅತಿ ವಿಸ್ತಾರವಾಗಿದೆ."[೭]

‘ಕಿರಣಕೇಂದ್ರದ ಕಾಜು’ ಎಂಬ ಪರಿಕಲ್ಪನೆಯ ಪುನರಾವರ್ತನೆಯಂತೆ ಕಾಣಿಸುವ ಮಾತುಗಳಿವು. ಆದರೆ ಕರ್ನಾಟಕತ್ವವನ್ನು (ಭೂಪಟ ಆಧಾರಿತ) ಕುರಿತು ಭೌತಿಕವಾಗಿ ಚಿಂತಿಸದೆ ಅದನ್ನು ‘ವಿಶ್ವರೂಪಿ’ ಎನ್ನುವ ತತ್ವವಿದು. ಕುವೆಂಪುರವರ ‘ಭಾವನಾತ್ಮಕ’ ರಾಷ್ಟ್ರೀಯತೆಯಂತೆ ಕಾಣಿಸುವ ಸ್ವರೂಪವುಳ್ಳದ್ದು. ಭಾರತವೇ ಅಂತಿಮವಲ್ಲ. ಭಾರತವೇ ಏನು? ಎಂದು ಪ್ರಶ್ನಿಸುವಷ್ಟು ಧೀಮಂತಿಕೆ ತನ್ನ ರಾಷ್ಟ್ರಕ್ಕಿದೆ ಎನ್ನುವುದರ ಜೊತೆಗೆ ಆರಂಭಗೊಂಡು ವಿಶ್ವಕೋಶದ ಭಾಗ ಎನ್ನುವ ಅತಿ ಆಧ್ಯಾತ್ಮಿಕ ನೆಲೆಗೆ ಆಲೂರರು ತಲುಪುತ್ತಾರೆ.

### ೨.೩ ಭೂಪ್ರದೇಶ ಕುರಿತಂತೆ ಬಿ.ಎಂ.ಶ್ರೀ.ಯವರ ಚಿಂತನೆಗಳು

ಮೈಸೂರು ಕರ್ನಾಟಕದ ಸಾಹಿತಿ ಚಿಂತಕರಾಗಿದ್ದ ಬಿ.ಎಂ.ಶ್ರೀಯವರು ‘ಕರ್ನಾಟಕ ಏಕೀಕರಣ’ವಾಗಬೇಕು ಎಂದು ಬಯಸಿದವರು. ಅವರ ಎಲ್ಲ ಚಿಂತನೆ, ಕಲ್ಪನೆ, ಅನುವಾದಗಳ ಹಿಂದೆ ಕರ್ನಾಟಕವಿದೆ. ಆದರೆ ‘ಭೌತಿಕ ಕರ್ನಾಟಕದ’ ಕುರಿತ ನಿಲುವು ಏನು? ಎಂಬುದಕ್ಕೆ ಅವರ ಸಮಗ್ರ ಸಂಪುಟ ‘ಶ್ರೀಸಾಹಿತ್ಯ’ ಕೃತಿಯಲ್ಲಿ ಬಹಳ ಕಡಿಮೆ ವಿವರಗಳಿವೆ. ಚಳವಳಿಗಾರರಾಗಿದ್ದ ಆಲೂರರಿಗೆ ‘ಭೌತಿಕಕರ್ನಾಟಕ’ದ ಕುರಿತು ಸ್ಪಷ್ಟ ನಿಲುವುಗಳಿದ್ದವು. ಕರ್ನಾಟಕದ ಪ್ರಜ್ಞೆಯನ್ನು ನಿರ್ಮಿಸಬೇಕೆಂದು ಅವರು ಉತ್ಸವ ಮುಂತಾದವುಗಳ ಮೂಲಕ ಪ್ರಯತ್ನಿಸಿದರು. ಆದರೆ ಬಿ.ಎಂ.ಶ್ರೀಯವರು ಆ ಕುರಿತು ಹೆಚ್ಚು ತಲೆಕೆಡಿಸಿಕೊಂಡಂತಿಲ್ಲ. ಅವರ ‘ಕನ್ನಡದ ಕಟ್ಟುವಿಕೆ’ಯೆಂದರೆ ಭಾಷೆಯ ಕಟ್ಟುವಿಕೆ ಮಾತ್ರ ಅದು. ಆದರೆ ಆಂತರ್ಯದಲ್ಲಿ ‘ಕರ್ನಾಟಕ ನಿರ್ಮಾಣವಾಗದೆ, ಭಾಷೆ ಮೊದಲಾದುವುಗಳನ್ನು ಕಟ್ಟುವುದು ‘ಅಸಾಧ್ಯ’ ಎಂಬುದು ತಿಳಿದಿರಲಿಲ್ಲವೆಂತಲ್ಲ. ಪ್ರಭುತ್ವದ ಜೊತೆಗಿದ್ದ ಕಾರಣಕ್ಕೋಸ್ಕರ ಅದರ ಬಗೆಗಿನ ಮೃದುಧೋರಣೆಗಳ ಕಾರಣಕ್ಕೋ ಏನೊ ಭೌತಿಕ ಕರ್ನಾಟಕ ಕುರಿತು ಏನು ಹೇಳುತ್ತಾರೆ ಎಂಬುದರ ವಿವರಗಳು ಕಡಿಮೆ ಇವೆ. ಇದ್ದರೂ ಆದರ ಕನಸು ಬಿಟ್ಟುಕೊಟ್ಟವರಲ್ಲ. ೧೯೪೦ರಲ್ಲಿ ಎಮ್ಮಿಗನೂರಿನಲ್ಲಿ ‘ಕರ್ನಾಟಕ ಸಂಘ’ದ ಪ್ರಾರಂಭೋತ್ಸವದಲ್ಲಿ ಹೇಳಿದ ಅಭಿಪ್ರಾಯಗಳು ಹೀಗಿವೆ :

೧. “ಕನ್ನಡಿಗರಾದ ನಾವು ಸಂಘಟಿತರಾಗಬೇಕು. ನಮ್ಮ ನಾಡು ನುಡಿಯ ಸೇವೆ ಸಲ್ಲಿಸಲು ಮುಂದುವರಿಯುವಾಗ ಹಿಂದೂ ಮುಸಲ್ಮಾನ, ಬ್ರಾಹ್ಮಣ ಬ್ರಾಹ್ಮಣೇತರ ಎಂಬ ಸಂಕುಚಿತಾಭಿಪ್ರಾಯಗಳನ್ನು ಬದಿಗೊತ್ತಿ ನಮ್ಮ ಕುಲಕನ್ನಡ ಕುಲ, ಗೋತ್ರ ಸೂತ್ರಗಳೆಲ್ಲವೂ ಕನ್ನಡವೇ, ನಮಗೆ ‘ಕನ್ನಡ ಗೆಲ್ಗೆ ಕನ್ನಡ ಬಾಳ್ಗೆ’ ಎಂಬುದೇ ನಿತ್ಯವೂ ಪಠಿಸುವ ಪಂಚಾಕ್ಷರ ಮಹಾಮಂತ್ರವೆಂದು ಭಾವಿಸಬೇಕು.

‘ಒಂದು ಭಾಷೆಯಾಡುವವರೆಲ್ಲ ಒಂದು ಜಾತಿ ಅವರು ಅಧಿಕ ಸಂಖ್ಯಾತರಾಗಿ ಎಷ್ಟು ಭೂಭಾಗವನ್ನು ವ್ಯಾಪಿಸಿಕೊಂಡಿರುವರೋ ಅದು ಅವರ ಪ್ರಾಂತ’ ಎಂಬ ಭಾವನೆ ನಮ್ಮ ಬಂಧುಗಳಾದ ಬಂಗಾಳ, ಆಂಧ್ರ ಮುಂತಾದ ಪ್ರಾಂತಗಳವರಲ್ಲಿ ಪ್ರಬಲವಾಗಿದೆ. ಆದರೆ ನಮ್ಮ ಕನ್ನಡಿಗರಲ್ಲಿ ಈ ಭಾವನೆ ಇನ್ನೂ ಚೆನ್ನಾಗಿ ಮೂಡಿಲ್ಲ.

ಪ್ರಕೃತ ಕನ್ನಡ ನಾಡಿನಲ್ಲಿ ಹಲವಾರು ಕಡೆಗಳಲ್ಲಿ ಕನ್ನಡಿಗರು ಎಚ್ಚತ್ತಿದ್ದಾರೆ. ಅನೇಕ ಹಿರಿಯ ಸಾಹಿತಿಗಳು ಭಾಷಾಭಿಮಾನಿಗಳು ಜನರ ಬೆಂಬಲಕ್ಕೆ ನಿಂತು ತಕ್ಕ ಸಹಾಯವನ್ನು ಹೃದಯಪೂರ್ವಕವಾಗಿ ನೀಡುತ್ತಿದ್ದಾರೆ. ಆದರೆ ಅಕ್ಕಪಕ್ಕ ರಾಷ್ಟ್ರಗಳವರ ಅತಿಕ್ರಮಣದ ಜೋರಿನಲ್ಲಿ ಕನ್ನಡಿಗರು ಗಟ್ಟಿಯಾಗಿ ಶ್ವಾಸ ಬಿಡಲೂ ಸಾಧ್ಯವಿಲ್ಲವಾಗಿದೆ. ಗಡಿನಾಡಿನಲ್ಲಿ ವಾಸಿಸುವ ಕನ್ನಡಿಗರ ಸ್ಥಿತಿ ಬಹಳ ಶೋಚನೀಯವಾಗಿದೆ. ಅವರಿಗೆ ತಮ್ಮ ವಿಷಯದಲ್ಲಿ ಇರುವ ಅಜ್ಞಾನ, ಮಾತೃಭಾಷೆಯ ಮೇಲಣ ತಾತ್ಸಾರ ಇವೇ ಈ ಹೀನಸ್ಥಿತಿಗೆ ಕಾರಣ.''[೮]

ಈ ಭಾಗದಲ್ಲಿ ಬಿ.ಎಂ. ಶ್ರೀಯವರು ಗಡಿನಾಡಿನಲ್ಲಿರುವ ಕನ್ನಡ ಭಾಷೆಯ ದುರ್ಗತಿಗೆ ಕನ್ನಡಿಗರೇ ಕಾರಣವೆಂದೂ, ಅದು ರಿಪೇರಿಯಾಗಬೇಕೆಂದರೆ ಎಲ್ಲ ಜಾತಿ-ಮತ, ಭೇದ ಭಾವ ಮರೆತು ಒಂದು ಭಾಷೆ ಯಾಡುವವರೆಲ್ಲ ಒಂದೇ ಜಾತಿ' ಎಂದು ಭಾವಿಸಿ ಏಕತೆಯ ಕಡೆಗೆ ಧಾವಿಸಬೇಕೆಂದೂ, ಜೊತೆಗೆ ಅಕ್ಕಪಕ್ಕದ 'ರಾಷ್ಟ್ರ'ಗಳವರು ಅತಿಕ್ರಮಣಕಾರಿ ಸ್ವಭಾವದವರೆಂದೂ ವ್ಯಾಖ್ಯಾನ ಮಾಡುತ್ತಾರೆ. ವರ್ತಮಾನದ ಸಂಗತಿ ತೃಪ್ತಿಕರವಾಗಿಲ್ಲ. ಆದರೆ ಭವಿಷ್ಯದ ಕರ್ನಾಟಕ ಸುಂದರವಾಗಬೇಕು ಎನ್ನುವ ಮಹದಾಸೆ ಇಲ್ಲಿ ವ್ಯಕ್ತಗೊಳ್ಳುತ್ತಿದೆ. ಹಾಗೆ ನೋಡಿದರೆ ಶ್ರೀಯವರು ಭೂಪಟವಾದಿಗಳಲ್ಲ. ಅಕ್ಕಪಕ್ಕದ ಭಾಷಿಕರನ್ನು 'ರಾಷ್ಟ್ರ'ಗಳು ಎನ್ನುವ ಪರಿಭಾಷೆಯಲ್ಲಿ ಗುರುತಿಸುತ್ತಾರೆ. ಇಲ್ಲಿ ನೆಲದ ಕುರಿತಂತೆ ಕನ್ನಡ ಮಾತನಾಡುವವರೆಲ್ಲ ಒಂದುಗೂಡಬೇಕೆಂಬ ಅಭಿಪ್ರಾಯಗಳಿದ್ದರೂ, ಅದಕ್ಕಿಂತ ಮಿಗಿಲಾಗಿ 'ಸಾಹಿತ್ಯ ಸಾಮ್ರಾಜ್ಯ' ಕಟ್ಟಬೇಕೆಂದು ಬಿ.ಎಂ.ಶ್ರೀ ಹೊರಟವರು. ಇಲ್ಲಿ ಕುವೆಂಪುರವರ ಜೊತೆ ಶ್ರೀಯವರನ್ನು ಇಟ್ಟುನೋಡುವುದೆಂದರೆ 'ಭಾವಕರ್ನಾಟಕ' ಭೌತ ಕರ್ನಾಟಕಕ್ಕಿಂತ ದೊಡ್ಡದು, ಭೌತಕರ್ನಾಟಕಕ್ಕಿಂತ ಮೊದಲೇ ಭಾವಕರ್ನಾಟಕ ನಿರ್ಮಿಸಬೇಕೆಂಬ ದೊಡ್ಡ ಆಶಯ ಹೊತ್ತವರಂತೆ ಕಾಣುತ್ತಾರೆ. ಕನ್ನಡದ ಅನೇಕ ದೊಡ್ಡ ಚಿಂತಕರಂತೆ ಆಶಾವಾದಿಯಾದ ಇವರು ಕರ್ನಾಟಕ ಕುಗ್ಗಿದೆಯೆಂದೂ ಕೀಳರಿಮೆಯನ್ನೂ ಆಕ್ರಮಣಕ್ಕೆ ಒಳಗಾಗುತ್ತಿದೆಯೆಂದು ಆತಂಕವನ್ನೂ, ಹೊಂದಿದವರಲ್ಲ. ಈ ಕುರಿತ ಅವರ ನಿಲುವುಗಳಿವು.

''ನಮ್ಮ ಕನ್ನಡ ನಾಡು ಚಿಕ್ಕದಿರಬಹುದು, ನಮ್ಮ ಕನ್ನಡಿಗರು ಸ್ವಲ್ಪ ಜನವಿರಬಹುದು, ಚರಗವನ್ನು ಚೆಲ್ಲಿದಂತೆ ಚೆದರಿ ಹೋಗಿರಬಹುದು. ಆದರೆ ಕರ್ನಾಟಕದ ಪೂರ್ವ ಚರಿತ್ರೆಯನ್ನೂ ಪ್ರಕೃತ ಸಾಹಸಗಳನ್ನೂ ನೆನಸಿಕೊಂಡರೆ, ನಮ್ಮ ಪುರೋಭಿವೃದ್ಧಿಯಲ್ಲಿ ಯಾವ ಸಂದೇಹಕ್ಕೂ ಕಾರಣವಿರುವುದಿಲ್ಲ. ಈ ಪುಣ್ಯ ಕ್ಷೇತ್ರದಲ್ಲಿ ಬೇರೂರಿ, ಆಕಾಶ ಹಬ್ಬಿರುವ ಎಲ್ಲಾ ಪ್ರದೇಶಗಳಿಂದಲೂ ಗಾಳಿಯನ್ನೂ ಬೆಳಕನ್ನೂ ಆಹಾರವನ್ನೂ, ತೇಜಸ್ಸನ್ನೂ ಹೀರಿಕೊಳ್ಳುವ ಉದಾರ ಹೃದಯವೊಂದನ್ನು ನಾವು ಭದ್ರವಾಗಿ ಕಾಪಾಡಿಕೊಂಡರೆ.....''[೯]

'ರೆ'ಗಳ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. 'ರೆ' ಎಂಬ ಶಬ್ದವೆ ಕನಸನ್ನು ಕಂಡು ಬದುಕನ್ನು ಕಲ್ಪಿಸಿಕೊಳ್ಳುವ ಬಹಳ ದೊಡ್ಡ ಸಾಧ್ಯತೆಗಳನ್ನು ಒಳಗೊಂಡಿರುವಂತಹುದು. ಶ್ರೀಯವರು 'ಅನ್ಯ'ದ ಬಗ್ಗೆ ಅದರಲ್ಲೂ ಉತ್ತಮವಾದದ್ದನ್ನು ಸ್ವೀಕರಿಸಿ ಬೆಳೆಯುವುದರ ಕುರಿತು ಯಾವ ಸಂಕೋಚವೂ ಇಲ್ಲದೆ ಅತ್ಯಂತ ಉದಾತ್ತವಾದ ನಿಲುವನ್ನು ತಳೆಯುತ್ತಾರೆ. ಪ್ರಭಾವಗಳನ್ನು ಗಾಳಿ, ಬೆಳಕು, ತೇಜಸ್ಸುಗಳೆಂದೂ, ಆಹಾರಗಳನ್ನು ಜೀವ

ಚೈತನ್ಯಗಳೆಂದು ತಾನು ನಿಂತಿರುವ ನೆಲ 'ಪುಣ್ಯಕ್ಷೇತ್ರ'ವೆಂದೂ ಭಾವಿಸಿದಾಗ ತನ್ನಿಂತಾನೆ ಪವಿತ್ರತೆಯನ್ನು ಪಡೆದುಕೊಳ್ಳುತ್ತದೆ. 'ಆಲೂರರ ಕಿರಣಕೇಂದ್ರ ಕಾಜಿನ' ಕಲ್ಪನೆಯಂತೆ ಬಿ.ಎಂ.ಶ್ರೀಯವರು ಈ 'ಪುಣ್ಯಕ್ಷೇತ್ರ'ದಲ್ಲಿ, ಅಂದರೆ ತನ್ನ ನಾಡಿನ ನೆಲದಲ್ಲಿ ಬೇರೂರಿ ಆಕಾಶಗಾಮಿಯಾಗುವ, ಸಿಕ್ಕುವ ಚೈತನ್ಯವನ್ನೆಲ್ಲ ಹೀರಿ ಬೆಳೆಯುವ 'ಮರದ' ರೂಪಕವನ್ನು ಕಟ್ಟಿಕೊಡುತ್ತಾರೆ.

ಬಿ.ಎಂ.ಶ್ರೀಯವರ ಸದ್ಯದ ರಾಷ್ಟ್ರಚಿಂತನೆಯಲ್ಲಿನ ನಾಡು ಚಿಕ್ಕದಾಗಿದೆ. ಚರಗ ಚೆಲ್ಲಿದಂತೆ ಚದುರಿ ಹೋಗಿದೆ, (ಆಲೂರರು ನಾಯಿಗಳು ಕಿತ್ತ ಹಿಟ್ಟಿನ ಚೀಲವೆಂಬ ಉಪಮೆ ನೀಡುತ್ತಾರೆ) ಎಂಬ ನಿಲುವೇ ವರ್ತಮಾನದ ದಾರುಣತೆಯನ್ನು ಹೇಳುತ್ತಿದೆ. ಹಾಗೆಂದು ಹೇಳಿ ಭರವಸೆ ಕಳೆದುಕೊಳ್ಳುವುದಿಲ್ಲ. 'ಗತ'ದಲ್ಲಿ ಔಷಧಿಯಿದೆ, ಸ್ಫೂರ್ತಿಯಿದೆ ಮತ್ತು ಭವಿಷ್ಯದಲ್ಲಿ ಅಪಾರ ಭರವಸೆಯಿದೆ ಎನ್ನುವ ನಿಲುವಿನಿಂದ ಹೊರಡುತ್ತದೆ. ಆದರೆ ವರ್ತಮಾನವನ್ನು ಕುರಿತು ಎಲ್ಲಿಯೂ ಕ್ರೋಧವಿಲ್ಲ, ನಿರಾಸೆಯಿಂದ ಹುಟ್ಟುವ ಆತಂಕವಿಲ್ಲ. ಚರಿತ್ರೆಯ ನಡಿಗೆಯ ವಿಕಾಸಗತಿಯನ್ನು ಕುರಿತ ನಂಬಿಕೆಯಿಂದ ಹುಟ್ಟುವ ದೊಡ್ಡ ವಿವೇಕದಂತೆ ಕಾಣುತ್ತದೆ. ಹಾಗಾಗಿ ಅನ್ಯವನ್ನು ದ್ವೇಷಿಸದೆ ಪಡೆಯಬಹುದಾದ್ದನ್ನೆಲ್ಲ ಪಡೆದು ಆಳವಾಗುವ ವಿಸ್ತಾರವಾಗುವ 'ಆಲದ ಮರದಂತಾಗಲಿ' ಎಂಬ ಕನಸನ್ನು ಅವರು ಕಟ್ಟುತ್ತಾರೆ. ಏಕಕಾಲಕ್ಕೆ 'ನೆಲ ಸಂಬಂಧಿ'ಯಾದ ವಿವರಗಳೆಲ್ಲವನ್ನೂ ಪವಿತ್ರೀಕರಿಸುವ ಅಥವಾ ಸುಂದರಗೊಳಿಸುವ ಭಾವಕೋಶವನ್ನು ನಿರ್ಮಿಸಲು ಪ್ರಯತ್ನಿಸುತ್ತಾರೆ. ಇಲ್ಲಿ ಕಟ್ಟುವ ಕ್ರಿಯೆ ಅಮೂರ್ತವಾದದ್ದು. ಆದರೆ ಮೂರ್ತತೆಗೆ ಪ್ರೇರೇಪಿಸುವಂತಹುದು. ತನ್ನ ಕಟ್ಟುವಿಕೆಗೆ ಪರಂಪರೆಯಿಂದ ಆಯ್ಕೆಯಾಗುವ ಅಂಶಗಳೆಂದರೆ, ನಾಡಿನ ಸೌಂದರ್ಯ, ಜನರ ನೆಮ್ಮದಿ ಇತ್ಯಾದಿಗಳು. ಆದರೆ ಪ್ರಭುತ್ವದ ಮೂಲಕವಷ್ಟೇ ನಿರ್ಮಿತವಾದವಲ್ಲ. ಪ್ರಾಕೃತಿಕವಾಗಿಯೂ ಸಾಂಸ್ಕೃತಿಕವಾಗಿಯೂ ನಿರ್ಮಾಣವಾದವು. ಅದು ಕವಿನಿರ್ಮಿತ ಭಾವ ಕರ್ನಾಟಕ ನೆಲ ಕೂಡ.

"ರವಿ ಕಾಣದ್ದನ್ನು ಕಂಡು, ಆನಂದದಿಂದ ಉಬ್ಬಿ, ಮಣ್ಣನ್ನು ಹೊನ್ನು ಮಾಡಿ, ಜನರ ಹೃದಯದಲ್ಲಿ ಅಮೃತವನ್ನು ತುಂಬುವುದು. ಕವಿಯಿಲ್ಲದ ನಾಡು ಕುರುಡು ನಾಡು, ಪಂಪ ಹಾಡುತ್ತಿದ್ದಾನೆ. ಜಲ ಜಲನುಕ್ಕಿ ಹರಿಯುವ ಕಾಲುವೆ, ಕಾಲುವೆಯಲ್ಲಿ ಸೊಕ್ಕಿ ಬೆಳೆಯುವ ಹೊಸ ನೆಯ್ದಿಲ ಹೂವು, ನೆಯ್ದಿಲ ಸೊಕ್ಕು ಗಂಪನ್ನು ಬೀರುತ್ತ ಕೆಂದೆಸೆಗೆ ಜೋಲುವ ನೆಲ್ಲು, ಆ ತೆನೆಗೆ ಹಾಯುತ್ತಿರುವ ಗಿಳಿಗಳ ಬಳಗ, ಹಚ್ಚಗೆ ಹಬ್ಬಿ ಬೆಳೆಯಿಂದ ಬಾಗಿದ ಕೈಹೊಲ, ಕೈ ಹೊಲವನ್ನು ಬಳಸಿದ ಹೂವು ತುಂಬಿದ ಹೂಗೊಳ....ತಂಬೆಲರಿಗೆ ಹಾರುವ ಭೂಲಕ್ಷ್ಮಿಯ ಕುಂತಳ ! ಯಾವ ನಾಡನ್ನು ಸರಿ ಮಾಡುವುದು ಈ ನಾಡಿಗೆ? "[೨೦]

ಕುಂತಳ ನಾಡು ಜಗತ್ತಿನಲ್ಲಿ ಸ್ವರ್ಗಕ್ಕೆ ಸಮಾನವಾಗುತ್ತಾ ಹೋಗುತ್ತದೆ. ಅಸೂಯೆಗಳಿಲ್ಲದ, ಮತ್ಸರಗಳಿಲ್ಲದ, ಸಂಕುಚಿತತನಗಳಿಲ್ಲದ ಕನ್ನಡ ಕವಿಗಳೆಂಬ ಚಿಂತಕರು ಕಟ್ಟಿಕೊಟ್ಟ ನಾಡಿನ ಚರಿತ್ರೆ ಇದು. ಸ್ವಭಾವದಲ್ಲಿ 'ಜಾತ್ಯತೀತ'ವಾದ ಕಟ್ಟುವಿಕೆ ಇದು. ಇದರ ಮಹತ್ವವನ್ನು ನಮಗಿಂತ ಹಿಟ್ಲರನ ನಾಝಿ ಕಿರುಕುಳಕ್ಕೆ ಹೆದರಿ ದೇಶ ಭ್ರಷ್ಟನಾಗಿ ತಲೆತಪ್ಪಿಸಿಕೊಂಡಿರುವ ಜರ್ಮನಿಯ 'ಬರ್ಟೋಲ್ಟ್ ಬ್ರೆಕ್ಟ್'ನ 'ದಿ ಕಕೇಷಿಯನ್ ಚಾಕ್ ಸರ್ಕಲ್'ನ ನಾಟಕದಲ್ಲಿ ಒಂದು ಪಾತ್ರ ಹೇಳುತ್ತದೆ.

“ಒಬ್ಬ ಮನುಷ್ಯ ತನ್ನ ದೇಶವನ್ನು ಏಕೆ ಪ್ರೀತಿಸುತ್ತಾನೆ? ಏಕೆಂದರೆ ಅಲ್ಲಿ ರೊಟ್ಟಿ ಹೆಚ್ಚು ರುಚಿಯಾಗಿರುತ್ತದೆ, ಗಾಳಿ ಇನ್ನೂ ಸುಗಂಧವಾಗಿರುತ್ತದೆ, ದನಿಗಳು ಹೆಚ್ಚು ಶಕ್ತವಾಗಿ ಕೇಳುತ್ತವೆ. ಆಕಾಶ ಬೇರೆಡೆಗಿಂತ ಎತ್ತರವಾಗಿರುತ್ತದೆ, ನೆಲದ ಮೇಲೆ ನಡೆಯುವುದು ಇನ್ನೂ ಸುಲಭವಾಗಿರುತ್ತದೆ.”[೧೧]

ನೆಲದ ಕುರಿತಾದ ಈ ಸೌಂದರ್ಯಾತ್ಮಕ ಮಾತುಗಳು ಥಟ್ಟನೆ ರಾಜಕೀಯದ ಕಡೆಗೆ ತಿರುಗಲಾರಂಭಿಸುತ್ತವೆ. ಬಹುಶಃ ಇಲ್ಲಿ ಪಂಪನ ಸೌಂದರ್ಯದ ಹಾಡುಗಳು ಬರೀ ಸೌಂದರ್ಯವನ್ನು ಹೇಳಲು ಹುಟ್ಟಿಕೊಂಡಿರುವ ಪದಬಂಧಗೊಂಡ ಆಕೃತಿಗಳಲ್ಲ ಎನ್ನುವುದು ಬ್ರೆಕ್ಟನ ಹಿನ್ನೆಲೆಯಿಂದ ಅವನ ಮಾತುಗಳನ್ನು ಅವಲೋಕಿಸಿದಾಗ ಅರ್ಥವಾಗುತ್ತದೆ. ಅಷ್ಟೇ ಏಕೆ ಬಿ.ಎಂ.ಶ್ರೀಯವರ ಹಳಗನ್ನಡ ರೂಪದಲ್ಲಿರುವ ‘ಅಶ್ವತ್ಥಾಮನ್’ ನಾಟಕದಲ್ಲಿನ ಮುಖ್ಯ ಪಾತ್ರವಾದ ಅಶ್ವತ್ಥಾಮನು, ಪ್ರಭುತ್ವಗಳ ಸಂಘರ್ಷದಲ್ಲಿ ದುರಂತಕ್ಕೆ ಸಿಕ್ಕಿಕೊಳ್ಳುತ್ತಾನೆ. ಶ್ರೀಯವರು ಅವನನ್ನು ಕರ್ನಾಟಕದ ಸಂಬಂಧೀ ಎಂಬಂತೆ ಚಿತ್ರಿಸುತ್ತಾರೆ. ಅವನ ದುರಂತದ ಗಳಿಗೆಗಳಲ್ಲಿ, ತನ್ನವರು ಯಾರೂ ಇಲ್ಲದ ಆರ್ತಗಳಿಗೆಗಳಲ್ಲಿ ನಾಡನ್ನು ಕುರಿತ ಹಾಡುಗಳು, ಅವನ ನೆಲದಿಂದ ದೂರವಾದ ಏಕಾಂಗಿಯಾದ ರಾಜಕೀಯ ಕಾರಣಗಳಿಗೆ ಬಲಿಯಾಗುತ್ತಿರುವ ಸನ್ನಿವೇಶವನ್ನು ಕಲ್ಪಿಸಿಕೊಳ್ಳದಿದ್ದರೆ ರಸ ಹೋದ ಕಬ್ಬಿನ ಸಿಪ್ಪೆಯಂತಾಗುತ್ತವೆ. ಅವನ ಮಾತುಗಳು ನೆನಪುಗಳಾಗಿ ಕಾಡುತ್ತವೆ.

“ಓವೋ, ಕನ್ನಡ ನಾಡೇ,
ಮುನ್ನೀರ್ ಮೊಖಿಂಗು ಕರೆನಾಡೇ
ಮಲೆನಾಡೆ, ಪೊನಲ್‌ನಾಡೆ, ಬಯಲ ಪೊನ್‌ನಾಡೇ,
ಪಲ ಕಾಲಮ್ ಆನ್ ಅಗಲ್ದಿರ್ದೆನ್
ಅಲ್ಲಿ ಕಣ್ಮುಚ್ಚಲೆಂದಿರ್ದೆನ್
ಇಲ್ಲಮೆನಗಾ ಪುಣ್ಯಂ, ಓ ಚೆಲ್ವುನಾಡೇ”[೧೨]

ಬ್ರೆಕ್ಟನ ಮತ್ತು ಅಶ್ವತ್ಥಾಮನ ದುರಂತಗಳನ್ನು ತೂಗಿ ನೋಡಿದರೆ ವ್ಯತ್ಯಾಸವೇ ಇಲ್ಲ. ತಾಯಿನಾಡು ‘ತಾಯಿನೆಲ’ ಎಂದೆಲ್ಲ ಭಾವನಾತ್ಮಕ ಸಂಬಂಧವಾಚಕಕ್ಕೇ ಬೆಸೆದು ಹೇಳುವ ತನ್ನ ರಾಷ್ಟ್ರ ಹೇಗೆ ಉಳಿದವಕ್ಕಿಂತ ಶ್ರೇಷ್ಠವಾಗುತ್ತದೆ.? ರಾಷ್ಟ್ರಕ್ಕೆ ನೆಲದ ಹಂಗು ಮತ್ತು ಅದನ್ನು ಪವಿತ್ರೀಕರಿಸುವ ರಾಜಕೀಯ ಕಾರ್ಯ ಏಕೆ ಆರಂಭವಾಗುತ್ತದೆ? ವಸಾಹತುಶಾಹಿ ಕತ್ತರಿಸಿ ಹಾಕಿದ ರಾಷ್ಟ್ರ ಏಕೆ ಒಗ್ಗೂಡಲು ಹಾತೊರೆಯುತ್ತದೆ? ತಾನು ಬೇರೆಯಾಗುವ ಹಠ ಏಕೆ ತೊಡುತ್ತದೆ? ಎಂಬ ಆಧುನಿಕ ರಾಷ್ಟ್ರದ ಬಿಕ್ಕಟ್ಟುಗಳಲ್ಲೇ ಬ್ರೆಕ್ಟ್ ಮತ್ತು ಬಿ.ಎಂ.ಶ್ರೀಯವರ ಅಶ್ವತ್ಥಾಮನ್ ಹುಟ್ಟಿ ಬರುತ್ತಿದ್ದಾರೆನ್ನಿಸುತ್ತದೆ.

ಈ ವಿಶ್ಲೇಷಣಾ ಕ್ರಮದಲ್ಲಿ ಶತ್ರುವಿನ ಕಲ್ಪನೆ ಅಮೂರ್ತವಾದದ್ದು. ಎಲ್ಲರೂ ಸೇರಿ ರಾಷ್ಟ್ರ ನಿರ್ಮಿಸಬೇಕು ಎಂಬ ಪಾಸಿಟಿವ್ ಆಶಯ ಮಾತ್ರ ಮೂರ್ತವಾದುದು. ಸ್ವಭಾವದಲ್ಲಿ ಹೆಚ್ಚು ‘ಇನ್‌ಕ್ಲೂಸಿವ್’ ಆದ ಈ ಸ್ವರೂಪಕ್ಕೆ ಸಹಜವಾಗಿಯೇ ತನ್ನೊಳಗಿನ ವೈರುಧ್ಯಗಳನ್ನು ಬಿಟ್ಟುಕೊಡುತ್ತದೆ. ಏಕೆಂದರೆ ಅಪಾರ ತಾರತಮ್ಯಗಳಿಂದ ತುಂಬಿರುವ ಸಮಾಜದಲ್ಲಿ ಎಲ್ಲರನ್ನೂ ಒಂದೇ ‘ಟ್ರ್ಯಾಕ್’ನಲ್ಲಿ ಬಿಡಲಾಗುವುದಿಲ್ಲ.

ಹೆಳವನೂ, ಬಲಿಷ್ಠನೂ ಏಕಕಾಲಕ್ಕೆ ಸಮಶಕ್ತರಲ್ಲ. ಆದ್ದರಿಂದಲೇ ಆಲೂರರು 'ಸರ್ವ ಹಿತ'ವೆಂದೂ, ಕುವೆಂಪು 'ಸರ್ವೋದಯ'ವೆಂದೂ ಹೇಳುತ್ತಾರೆ. ಬಿ.ಎಂ.ಶ್ರೀ ಸ್ವಲ್ಪಮಟ್ಟಿಗೆ ಈ ಅಂಶಗಳನ್ನು ಬಿಟ್ಟು ಕೊಟ್ಟಂತೆ ಕಾಣುತ್ತದೆ.

**೨.೪ ಶಂಬಾ ಜೋಶಿಯವರ ಭೂಪ್ರದೇಶ ಕುರಿತ ಚಿಂತನೆಗಳು**

ಶಂಬಾ ಜೋಶಿಯವರ ಮೊದಲ ಘಟ್ಟದ ಕೃತಿಗಳೆಲ್ಲವೂ, 'ಭಾಷೆ' ಮತ್ತು 'ಭೂಪ್ರದೇಶ' ಕುರಿತ ರಚನೆಗಳೇ ಆಗಿವೆ. ಅವರು ಈ ವಿಚಾರಗಳ ಕುರಿತು ಸುಮಾರು ಮೂವತ್ತೈದು ವರ್ಷಗಳಷ್ಟು ಕೆಲಸಮಾಡಿದ್ದಾರೆ. ಭಾಷಿಕ ಮತ್ತು ಜಾನಾಂಗಿಕ ಅಧ್ಯಯನಗಳ ಕುರಿತು ಬರೆದ ಇಂಗ್ಲಿಷ್ ಕೃತಿಗಳನ್ನು, ವೇದ ವೇದಾಂತ, ಪುರಾಣ, ಮಹಾಕಾವ್ಯಗಳನ್ನೊಳಗೊಂಡ ಸಂಸ್ಕೃತ ಪಠ್ಯಗಳನ್ನು ಅಧ್ಯಯನ ಮಾಡಿದ್ದಾರೆ. ಮೇಲಿನ ಎರಡು ಲಿಖಿತ ಆಕೃತಿಗಳ ಜೊತೆಗೆ, ಜನರ ನಂಬಿಕೆ, ಸಂಕೇತ, ಪುರಾಣ, ಆಚರಣೆ, ಪ್ರತಿಮಾಲೋಕ ಮುಂತಾದುವುಗಳನ್ನು ಬೆರೆಸುತ್ತಾರೆ. ಕನ್ನಡ ವಿದ್ವತ್ ಲೋಕದಲ್ಲಿ ಈ ಮಟ್ಟದಲ್ಲಿ ವಿಭಿನ್ನ ಶಿಸ್ತುಗಳನ್ನು ಬೆರೆಸಿ 'ಸತ್ಯ' ಹುಡುಕುತ್ತೇನೆಂದು ಸಾಹಸ ಮಾಡಿರುವವರು ಶಂಬಾ ಒಬ್ಬರೇ ಎನ್ನಿಸುತ್ತದೆ. 'ಕನ್ನಡ ಜನಸಮುದಾಯ'ಗಳ 'ಅಸ್ಮಿತೆ' ಸ್ಥಾಪಿಸುವುದು ಮತ್ತು ಮರಾಠಿಯೆಂಬ ಶತ್ರುವಿನ ಎದುರು ಕನ್ನಡದ ಬೃಹತ್ ವೈಶಾಲ್ಯವನ್ನು ಸ್ಥಾಪಿಸುವುದೂ ಆಗಿರುವಂತೆ ಕಾಣುತ್ತದೆ. ಅವರ ಇನ್ನಿತರ ದಾರ್ಶನಿಕ ಹುಡುಕಾಟಗಳ ಜೊತೆಗೆ ವರ್ತಮಾನದ ಮೂರ್ತರೂಪದ ಈ ಸಮಸ್ಯೆ ಮುಖ್ಯವಾದದ್ದಾಗಿ ಕಾಡಿರುವಂತೆ ಕಾಣಿಸುತ್ತದೆ.

ಹಾಗೆ ನೋಡಿದರೆ ಭವಿಷ್ಯದ ಕರ್ನಾಟಕ ಜ್ಞಾನೋಪಾಸಕವಾಗಬೇಕು ಎಂಬುದನ್ನು ಬಿಟ್ಟರೆ ಉಳಿದಂತೆ ಶಂಬಾರ ಪ್ರತಿಪಾದನೆ ಏನು? ಹೇಗಿರಬೇಕು? ಎಂಬ ಪ್ರಶ್ನೆಗೆ ಉತ್ತರ ತೀರಾ ಅಸ್ಪಷ್ಟ. ಅವರು ಮರಾಠಿ ಬಹುಭಾಷಿಕ ಪ್ರದೇಶದಲ್ಲಿದ್ದುಕೊಂಡು, ವರ್ತಮಾನದ ಕುಗ್ಗಿದ ಕನ್ನಡ ಪ್ರದೇಶಗಳ, ಭಾಷೆಯ ಸಮಸ್ಯೆಗೆ 'ಗತ' ನೆನಪುಗಳನ್ನು ಕಟ್ಟಿಕೊಡುತ್ತಾ ಹೋಗುತ್ತಾರೆ. ಬೃಹದಾಕಾರದ ಈ ನೆನಪುಗಳ ನಿರ್ಮಾಣವೇ 'ಶಂಬಾ'ರ ರಾಷ್ಟ್ರೀಯತಾ ನಿರ್ಮಾಣದ ಚಿಂತನೆಗಳು ಎಂದು ಕರೆಯಬಹುದು. ಭವಿಷ್ಯದ ಜನಾಂಗಕ್ಕೆ ಈ ನೆನಪುಗಳು ಪೂರ್ವ ಪೀಠಿಕೆಗಳು. ಈ ನೆನಪುಗಳನ್ನು ಆಧರಿಸಿ ಯಾವ ಸ್ವರೂಪದ ರಾಷ್ಟ್ರವನ್ನು ಬೇಕಾದರೂ ಕಟ್ಟಿಕೊಳ್ಳಬಹುದು.

ಹಿಂದುತ್ವ ಪ್ರತಿಪಾದಿಸುವ ಸಂಘಟನೆಗಳಂತೆ ಭೂಪಟವಾದಿಯಲ್ಲದ, ವರ್ತಮಾನದಲ್ಲಿ ಆಲೂರು ಮುಂತಾದವರು ತಲೆಕೆಡಿಸಿಕೊಂಡಿದ್ದ 'ಗಡಿ ಸಮಸ್ಯೆ'ಯ ಸೀಮಿತತೆಗೆ ಒಳಗಾಗದ ಶಂಬಾ, ಕನ್ನಡ ಪ್ರದೇಶ ಇನ್ನೂ ಬಹಳ ದೊಡ್ಡದು ಎಂಬ ಮಹತ್ವಾಕಾಂಕ್ಷಿ ಸಂಶೋಧನೆಗೆ ಇಳಿಯುತ್ತಾರೆ. ಆಳದ ಗಣಿಯಿಂದ ಸಿಕ್ಕ ಸಣ್ಣಪುಟ್ಟ ಕುರುಹುಗಳನ್ನು ಹಿಡಿದು ಇಡೀ ಭಾರತದ ಪುರಾಣ ಚರಿತ್ರೆಗಳನ್ನೇ ಕನ್ನಡದ, ಕಂದಮಿಳ ಕಣ್ಣಲ್ಲಿ 'ಮರುವ್ಯಾಖ್ಯಾನ' ಮಾಡತೊಡಗುತ್ತಾರೆ. ಭಾರತದ ಅಧಃಪತನಕ್ಕೆ ಋಷಿ-ಮುನಿಗಳ ಸಂಘರ್ಷ ಕಾರಣವೆಂದು ಆರಂಭಿಸುವ ಶಂಬಾ, ಕನ್ನಡದ ಕುಬ್ಜತೆಗೆ ಆರ್ಯ ಅನಾರ್ಯ ಸಂಘರ್ಷ ಕಾರಣವೆಂದು ಪ್ರತಿಪಾದಿಸುತ್ತಾರೆ. (ವಿಶ್ವ ಸಂಸ್ಕೃತಿ ಚಂದ್ರಮನ ಕತ್ತಲೆಯ ಆರಾಧನೆಗೆ ತೊಡಗಿತು. ಆ ಮೂಲಕ ಸತ್ಯಗಳನ್ನು ಎದುರಿಸಲಾರದೆ ಕತ್ತಲೆಯ ಕಡೆಗೆ ಜಾರತೊಡಗಿತ್ತು ಎಂಬುದು ಅವರ ತತ್ವ).

ಶಂಬಾ ಕನ್ನಡ ಭೂಪ್ರದೇಶದ ಚಿಂತನೆಯನ್ನು ವೇದ ಪೂರ್ವಕಾಲಕ್ಕೆ ವಿಸ್ತರಿಸಿಕೊಂಡು ಹೋಗುತ್ತಾರೆ. ಸಿಂಧೂ ಸಂಸ್ಕೃತಿ ಕಂದಮಿಳ ಸಂಸ್ಕೃತಿಯಾಗಿಬಹುದು ಎಂಬುದು ಅವರ ವಿಶ್ಲೇಷಣೆ. ಈ ಕುರಿತ ಅವರ ಅಭಿಪ್ರಾಯ ಹೀಗಿದೆ :

"ಕುಂತಲ-ವು ಕರ್ನಾಟಕವೆಂದು ಹೆಸರು ಪಡೆದಿದೆ. ಕುಂತಲ-ಕನ್ನಡ. ಕುಂತಲವೆಂದರೆ ಕೂದಲಿಗೆ ಸಂಬಂಧಪಟ್ಟ ಎಂದು ; ಕೂಂದಲು ಕುಂತಲ ಕುಂತ-ಕುಂದ-ಗುಂದ ಈ ದಾರಿಯನ್ನು ನೋಡಿದರೆ ಗುಡ್ಡಕ್ಕೆ ಸಂಬಂಧವು ಇದ್ದುದು ಕಂಡುಬರುವುದು. ಗುಡ್ಡದ ಜನ ಎಂಬುದು ಮೂಲದಲ್ಲಿದ್ದು ಕೂದಲಿದ್ದವರು ಎಂಬ ರೂಪದಿಂದ ಬಂದುದು ಆಗಿ ಒಂದು ಶಬ್ದದಲ್ಲಿ ಎರಡೂ ಅರ್ಥ ಬಂದಿರಬೇಕೆಂದು ತೋರುತ್ತದೆ. ಗುಡ್ಡದ ಜನರು ಕುಡಿಯರು, ಗುಡ್ಡದ ಜನರು ಕೂದಲುಳ್ಳವರು, ಕುಂತಲರು. ಗುಡ್ಡದ ಜನರು ಶಿವಭಕ್ತರು. ಇವರಿಗೆ ಭಲ್ಲೂಕ ದಂಡಹಸ್ತರ್; ಗುಡ್ಡ ಧ್ವಜರ್ ಎಂಬ ಹೆಸರು ಇದೆ. ಇವರು ಕೂದಲುಳ್ಳವರು, ಕೇಶಿಗಳು. ಈ ಕೇಶಿಗಳು ಆರ್ಯಪೂರ್ವ ಸಂಸ್ಕೃತಿಗೆ ಹೊಂದಿದವರು, ಎಂದು ತೋರಲು ಮೊಹೆಂಜೋದಾರೋದಲ್ಲಿಯ ಉತ್ಖನನದಲ್ಲಿ ದೊರೆತ ಪ್ರತಿಮೆಯೊಂದು ಗಡ್ಡ ಮೀಸೆ ತಲೆಗೂದಲುಳ್ಳದ್ದು ಇರುವ ಹಾಗೆ ಇದೆ. ಮೊಹೆಂಜೋದಾರೋವಿನ ಜನರ ದೇವತೆ ಪಶುಪತಿ, ಪಶುಪತಿ ಶಿವ. ಕೇಶಿಗಳ ದೇವತೆ ಶಿವ, ಶಿವನಿಗೆ ಭಲ್ಲುಕನೆಂಬ ಹೆಸರುಂಟು."[೧೩]

ಶಂಬಾ ಇಲ್ಲಿ 'ಕುಂತಲ' ಮತ್ತು 'ಗುಡ್ಡ' ಎರಡು ಶಬ್ದಗಳಿಂದ ಚರಿತ್ರೆಗೆ ಹೊಸದೊಂದು ವ್ಯಾಖ್ಯಾನ ಕೊಡತೊಡಗುತ್ತಾರೆ. ಅದು ಸಂಕೇತ ಮತ್ತು ಪ್ರತಿಮಾಶಾಸ್ತ್ರಗಳ ಅಧ್ಯಯನದಿಂದ ದಕ್ಕಿದ ಶಕ್ತಿಯೂ ಇರಬಹುದು. ಶಿವನನ್ನು ಕಂದಮಿಳ ಜನಾಂಗದ ದೈವನೆಂದು ಗುರುತಿಸುವುದು ಮತ್ತು ಅದಕ್ಕೆ ಸಂಬಂಧಿಸಿದಂತೆ ಸಿಂಧೂ ನದಿ ನಾಗರಿಕತೆಯಲ್ಲಿ ಸಿಕ್ಕ ದಾಖಲೆ ಕುರುಹುಗಳನ್ನು ಆಧರಿಸಿ, ಅದು ಕಂದಮಿಳ ಜನಾಂಗದ ಸಂಸ್ಕೃತಿಯೇ ಇರಬೇಕು ಎಂಬ ತೀರ್ಮಾನಕ್ಕೆ ತಲುಪುತ್ತಾರೆ. ಆಶ್ಚರ್ಯವೆಂದರೆ ಸಂಸ್ಕೃತ ಪಠ್ಯಗಳ ಕುರಿತು ಅಧಿಕಾರಯುತವಾಗಿ ಬರೆಯುತ್ತಿದ್ದ ದೊಡ್ಡ ವಿದ್ವಾಂಸ ರಾಹುಲ ಸಾಂಕೃತ್ಯಾಯನ ಅವರು ಸಹ ಶಂಬಾರ ನಿಲುವಿಗೆ ಸಮೀಪವರ್ತಿಯಂತೆ ನಿಂತು ಮಾತನಾಡುವುದು. ಆದರೆ ಕನ್ನಡದಲ್ಲಿ ಈ ಕುರಿತು ಚರ್ಚೆಗಳೇ ನಡೆದಿಲ್ಲವೆಂಬುದು ಆಶ್ಚರ್ಯ ಹುಟ್ಟಿಸುತ್ತದೆ. ಶಂಬಾರ ವಿಚಾರಗಳನ್ನು ಚಳುವಳಿಗಳಾಗಲಿ, ವಿದ್ವಾಂಸರಾಗಲಿ, ಕಡೆಯ ಪಕ್ಷ ಏಕೀಕರಣ ಚಳುವಳಿ ಸಂದರ್ಭದಲ್ಲಿ 'ಕೊಲಂಬಸನು ಅಮೆರಿಕೆಯನ್ನು ಹುಡುಕಿ ತೆಗೆದಂತೆ ನಾನೂ ಕರ್ನಾಟಕವನ್ನು ಹುಡುಕಿ ತೆಗೆದೆ, ಎಂದು ಬರೆಯುವ ಆಲೂರರಾಗಲಿ, ಅವಲೋಕಿಸಿದಂತೆ ಕಾಣುವುದಿಲ್ಲ. ಇದರ ಹಿಂದಿನ ರಾಜಕೀಯಗಳೇನು? ಅಥವಾ ಶಂಬಾರ ವಿಚಾರಗಳಿಗೆ ವರ್ತಮಾನಕ್ಕೆ ಸಲ್ಲುವ ಶಕ್ತಿಯಿರಲಿಲ್ಲವೇ ಎಂಬುದು ಕುತೂಹಲದ ವಿಚಾರ.

ಆದರೆ ಶಂಬಾ ಜೋಶಿಯವರಂತೂ ಕನ್ನಡದ ನೆಲೆಯನ್ನು ಸೈಂಧವ ಸಂಸ್ಕೃತಿಯವರೆಗೆ ವಿಸ್ತರಿಸುತ್ತಾರೆ. ಹಾಗಾದರೆ ಈ ಸಂಸ್ಕೃತಿಗಳು ಕುಬ್ಜಗೊಳ್ಳಲು ಕಾರಣಗಳೇನು? ಎಂಬುದಕ್ಕೆ ಶಂಬಾ ಜೋಶಿಯವರೆ ವಿವರಿಸುವ ಉತ್ತರ ಈ ರೀತಿ ಇದೆ :

"ನರ್ಮದೆಯ ಉತ್ತರದ ಕುರ್ಬ - ಮಾಲ್ಡೊ (ಧನಗರ) ಜನ ಕಂನುಡಿಯನ್ನು ಹೋಲುವ ಭಾಷೆಯವರು; ಇವರೂ ಅಲ್ಲಿಗೆ ಕರ್ನಾಟಕದಿಂದ ಬಂದವರಂತೆ ! ಭಂಡಾರಾ -ಚಂದಾ (ನಾಗಪೂರ) ಭಾಗದ ಹೊಲೆಯರು, ಕುರುಬರು, ಗೊಲ್ಲರು ವಿಜಾಪುರದ ಭಾಷೆಯ ಮಾದರಿಯ ಮಾತಿನವರು, ಇವರೂ ಕರ್ನಾಟಕದಿಂದ ಬಂದವರಂತೆ ! ಎಂದರೆ ಇಷ್ಟು ವಿವಿಧ ತಂಡಗಳು ಕರ್ನಾಟಕದಿಂದ ಗುಳೆ ಹೊರಟು ಹೋದುದಕ್ಕೆ ಇಲ್ಲಿ ಸಂಭವಿಸಿದ ಉತ್ಪಾತಗಳು ಯಾವುವೆಂಬುದು ಗೊತ್ತಾದರೆ ಲೇಸಾದೀತು. ಉತ್ತರಾಪಥದಿಂದ ದಕ್ಷಿಣಾಪಥಕ್ಕೆ ಕ್ರಿಸ್ತಾಬ್ದದ ಆರಂಭದ ಸುಮಾರಿನಿಂದ ವಲಸೆ ಬರತೊಡಗಿದ ನಾನಾ ಪಂಗಡಗಳು ತಮ್ಮ ಹೊಲ-ಮನೆ ಬಿಟ್ಟು ಇತ್ತ ಏಕೆ ಹೊರಟಿರಬಹುದು ಎಂಬುದರ ಅರ್ಥವಾಗಲು ಅವಕಾಶವಿದೆ. ಹೂಣರು, ಶಕರು, ಅರಬರು, ಪಠಾಣರು, ಮೊಗಲರುಗಳ ತಂಡಗಳ ಧಾಳಿಗೆ ಉತ್ತರ ಭಾರತವು ದಿಗ್ಭ್ರಾಂತವಾಗುತ್ತದೆ. ಅಂತಹ ಉತ್ಪಾತಗಳ ಸುಮಾರಿಗೆ ದಕ್ಷಿಣಕ್ಕೆ, ವಲಸೆಗಾಗಿ ಉತ್ತರದಿಂದ ಬೇರೆ ಬೇರೆ ಪಂಗಡಗಳು ಆಗಾಗ ಬಂದುದುಂಟು. ಆದರೆ, ಆ ಬಗೆಯಲ್ಲಿ ಜೀವಿತತ್ವದ ಸಂದಿಗ್ಧ ಪರಿಸ್ಥಿತಿಯು ಕರ್ನಾಟಕದಲ್ಲಿ ಸಂಭವಿಸಿದ್ದು ಪರಕೀಯರ ದಾಳಿಗೆ ಒಳಗಾದದ್ದು ಮುಸಲ್ಮಾನರ ತೊತ್ತಳತುಳಿತಕ್ಕೇ ಮೊದಲ ಬಾರಿ! ೧೩ನೆಯ ಶತಮಾನದ ಕೊನೆಯಲ್ಲಿ! ಆದ ಕಾರಣ, ಜನಸಂಖ್ಯೆಯು ವಿಪರೀತ ಬೆಳೆದ ಅಥವಾ ಭೀಕರ ಬರಗಾಲಗಳೇ ಬೆಂಬತ್ತಿದ ಸಂಕಟಗಳ ಐತಿಹ್ಯವೂ ಕೂಡ ಇಲ್ಲದ ೪-೫ನೆಯ ಶತಮಾನಕ್ಕೆ ಮೊದಲಿನ ಯುಗದಲ್ಲಿ, ಕರ್ನಾಟಕದಿಂದ ಜನ, ತಂಡತಂಡವಾಗಿ ಹೊರಗೆ ವಲಸೆ ಹೋದರೆಂಬ ಗ್ರಹಿಕೆ ವಿಶ್ವಾಸಾರ್ಹವಾಗಿಲ್ಲ."[೧೪]

ಹಾಗಾಗಿ ಜನ ಕರ್ನಾಟಕದಿಂದ ವಲಸೆ ಹೋಗಿರಲಿಕ್ಕೆ ಸಾಧ್ಯವಿಲ್ಲ. ಮೊದಲ ಹಂತದಲ್ಲಿ ಪರಕೀಯರ ದಾಳಿಗೆ ಸಿಕ್ಕಿ ಚಲನೆಗಳಾದಾದದ್ದು ಬಿಟ್ಟರೆ, ಆ ಭಾಗಗಳೆಲ್ಲ ಕನ್ನಡಿಗರು ವಾಸಿಸುವ ಪ್ರದೇಶಗಳೇ ಆಗಿವೆ. ವರ್ತಮಾನದ ಕನ್ನಡದ ಸ್ಥಿತಿಗತಿಯ ಕುರಿತು ಶಂಬಾರಿಗೆ, ಉಳಿದೆಲ್ಲ ವಿದ್ವಾಂಸರುಗಳಿಗಿಂತ ದೊಡ್ಡ ಮಟ್ಟದ ವಿಷಾದ ಕಾಡುತ್ತದೆ. ಹಾಗಾಗಿ ಕಟ್ಟುತ್ತಿರುವ 'ಗತ' ಚರಿತ್ರಕಾರರ ಪ್ರಭುತ್ವಗಳ ಅನುಕ್ರಮಣಿಕೆಗಿಂತ ಬೃಹತ್ತಾದುದು. ಅದು ಜನಸಮುದಾಯಗಳ ಹೆಜ್ಜೆ ಗುರುತುಗಳನ್ನು ಹಿಡಿದು ಹೊರಟಿದೆ. ಅದು ಭೂತಕ್ಕೆ ಈಜುವ ಮಾನವಶಾಸ್ತ್ರಜ್ಞನ ಹಟ. ಇಲ್ಲಿ ಸಿಕ್ಕ ಕ್ಷುದ್ರ ಅಂಶಗಳೆಲ್ಲ ರೋಮಾಂಚಕವಾಗಿ ಕಾಣಿಸತೊಡಗುತ್ತವೆ. ಸಣ್ಣ ಪುರಾವೆಯೊಂದು ಸಾವಿರ ಕಥೆ ಹೇಳುತ್ತದೆ. ಶಂಬಾ ತಮ್ಮ ಮೀಮಾಂಸೆಗೆ ಅನೇಕ ಸಾರಿ 'ರಮ್ಯತೆ'ಯ ಗುಣವುಳ್ಳ ಕಥನ ಕಟ್ಟುತ್ತಿದ್ದಾರೆನ್ನಿಸುತ್ತದೆ. ರಾಹುಲ ಸಾಂಕೃತ್ಯಾಯನ ಕೂಡ ಹಾಗೆ ಚರಿತ್ರೆ ಮತ್ತು ಕಥನ ಸಾಹಿತ್ಯವನ್ನು ಅದ್ಭುತವಾಗಿ ಬೆರೆಸಿ ಇದು ಕಾದಂಬರಿಯೋ ಚರಿತ್ರೆಯ ಹೆಣಿಗೆಯೊ ಎನ್ನುವ ಅನುಮಾನ ಹುಟ್ಟುವಂತೆ ಮಾಡುತ್ತಾರೆ. ಆದರೆ ರಾಹುಲರಿಗೆ ಸಿಕ್ಕ ಸಂವಹನ ಸಾಧ್ಯತೆ ಶಂಬಾರಿಗೆ ಸಿಕ್ಕದೇ ಹೋದದ್ದು ಚರಿತ್ರೆಯ ಅಣಕದಂತೆ ಕಾಣುತ್ತದೆ. ಬಹುಶಃ ಸಾಂಪ್ರದಾಯಕ ಮನಸ್ಸಿನ ಕನ್ನಡ ವಿದ್ಯಾವಂತ ವರ್ಗದ ಕಥನ ಸಾಹಿತ್ಯ ಕುರಿತಾದ ಪಕ್ಷಪಾತ, ಚಿಂತನೆಗಳಿಗೆ ದಕ್ಕದೇ ಹೋದದ್ದು ಕೂಡ ಸುಳ್ಳಲ್ಲ. ಹಾಗಾಗಿ ಶಂಬಾರ ಭೂಪ್ರದೇಶದ ಹುಡುಕಾಟ, ತೋಳವೊಂದು ತನ್ನ ಬೇಟೆಯನ್ನು ವಾಸನೆಯ ಮೂಲಕ, ಹೆಜ್ಜೆ ಗುರುತುಗಳ ಮೂಲಕ ಹಿಡಿಯು ಹೊರಟಂತೆ ಕಾಣುತ್ತದೆ. ಅವರಿಗೆ ಮುಕ್ಕಾಲು ಪಾಲು ಭಾರತ ಕಂದಮಿಳ ಜನ ನೆಲಸಿದ್ದರೆಂದು ಸುಳಿವುಗಳು ಸಿಕ್ಕತೊಡಗುತ್ತವೆ. ಇವು ಕನ್ನಡದ ಪ್ರತಿಷ್ಠಿತ ವರ್ಗವನ್ನು ಚಿಂತೆಗೀಡು

ಮಾಡುವಂತೆ 'ಆರ್ಯ'ವೆಂದು ಭಾವಿಸಲಾದ ಜನಾಂಗದ ಅಸ್ತಿತ್ವವನ್ನೇ ನಿರಾಕರಿಸುತ್ತವೆ. ಜೊತೆಗೆ ಕುಲೀನವರ್ಗಗಳ ಸ್ವಾರ್ಥದಿಂದಾಗಿ ಭಾರತ ತನ್ನ ಕ್ಷಾತ್ರತನ ಕಳೆದುಕೊಂಡು ಪಾತಾಳಕ್ಕೆ ಬಿದ್ದಿರುವುದನ್ನು ತೋರಿಸುತ್ತಿದ್ದಾರೆ. ಶಂಬಾರನ್ನು ಸಹಿಸುವುದು ಹೇಗೆ? ಎಂಬ ಪ್ರಶ್ನೆ, ಸಾಂಪ್ರದಾಯಿಕರನ್ನು ಕಾಡಿರಬಹುದು. ಭಾರತದ ಸಂಸ್ಕೃತಿಗಳ ಮೂಲ ಜನಸಮುದಾಯ ಎಂದು ಶಂಬಾ ಗುರುತಿಸುವ ಜನ ವರ್ತಮಾನದಲ್ಲಿ ಯಾವ ಸಾಮಾಜಿಕ ವಿಶೇಷ ಮನ್ನಣೆಗಳೂ ಇಲ್ಲದೆ ಬದುಕುತ್ತಿರುವಾಗ, ಅವರೊಂದಿಗೆ ತಮ್ಮ ಬೇರುಗಳನ್ನು ಹಂಚಿಕೊಳ್ಳುವುದು ಸಾಧ್ಯವೆ? (ಶಂಬಾ ಅವರು ತಮ್ಮ ಕೃತಿಯೊಂದನ್ನು ಅಭಿಪ್ರಾಯ ಕೇಳಿ ಡಿ.ವಿ.ಜಿ.ಯವರಿಗೆ ಕಳಿಸಿದರೆ ನೀನು ಸಂಪ್ರದಾಯ ಭಂಜಕನೆಂದು ಹೇಳಿ ಓದದೆ ವಾಪಸ್ಸು ಕಳಿಸಿದ ಘಟನೆಯನ್ನು ಇಲ್ಲಿ ಸ್ಮರಿಸಬಹುದು.)

ಏನೇ ಆದರೂ ಶಂಬಾರ ಚಿಂತನೆಗಳು ತಮ್ಮ ಅವೈದಿಕ, ದುಡಿವ ಜನರ ಬದುಕಿನ ವಿವರಗಳ ಆಧಾರದ ಮೇಲೆ ಕನ್ನಡ ಸಮುದಾಯಗಳ ನೆಲೆಗಳನ್ನು ಪ್ರತಿಪಾದಿಸಿ ಮರಾಠಿಯನ್ನೂ ಮಹಾರಾಷ್ಟ್ರದ ಅಸ್ತಿತ್ವವನ್ನೂ ನಿರಾಕರಿಸುತ್ತವೆ. ಶಂಬಾ ಬರೆಯುತ್ತಿದ್ದ ಕಾಲಕ್ಕೆ ಅವರು ಬದುಕಿದ್ದ ಪ್ರದೇಶ ಮರಾಠಿ ಪ್ರಾಬಲ್ಯದ ಪ್ರದೇಶ. ಆರಿಯ-ಕಾನಡಿಗಳೆಂದು ವಿಭಜಿತಗೊಂಡು ದಕ್ಷಿಣವನ್ನು ಅಸಡ್ಡೆಯಿಂದ ನೋಡುತ್ತಿದ್ದ ಕಾಲಘಟ್ಟ. ಶಂಬಾ ತಮ್ಮ ಸಂಶೋಧನೆಗಳಿಂದ ಮರಾಠಿವಾದಕ್ಕೆ ತೀಕ್ಷ್ಣ ಪ್ರತಿಕ್ರಿಯೆ ನೀಡುತ್ತಿದ್ದಾರೆನ್ನಿಸುತ್ತದೆ. ಅವರು ಕವಿರಾಜಮಾರ್ಗದ ಗೋದಾವರಿಯವರೆಗಿನ ಕರ್ನಾಟಕವನ್ನು ಒಪ್ಪಿ ಆಧುನಿಕ ವಿದ್ವಾಂಸರ ವಾದವನ್ನು ಸಂಕ್ಷಿಪ್ತಗೊಳಿಸಿ ಹೀಗೆ ಹೇಳುತ್ತಾರೆ :

೧. "ಬ್ಲೂಮ್‌ಫೀಲ್ಡ್, ಸಪೀರ್ ಪ್ರಭೃತಿ ತಜ್ಞರು ಹೇಳುವಂತೆ 'ಸ್ಥಳನಾಮಗಳು ಅಲ್ಲಿ ನೆಲೆಸಿದ್ದ ಜನಭಾಷೆಯ ಸೂಚಕವಾಗಿರುತ್ತವೆ' ಎಂಬ ಸೂತ್ರವು ಸರಿಯೆಂದಲ್ಲಿ ಗೋದೆಯವರೆಗೆ ನರ್ಮದೆಯವರೆಗೂ ಕಂನುಡಿಯು ಇದ್ದಿತೆಂದು ಹೊರಡುತ್ತಿದೆ.

೨. ಆ ಭಾಗದ ಹಟಗಾರ-ಧನಗರ, 'ಕಾನಡ' ಗೌಳಿ, ಚಂದಾ ಭಂಡಾರದ ಅವಶಿಷ್ಟ, ಹೊಲೆಯ, ಕುರುಬ, ಗೊಲ್ಲ ಈ ಜನಪಂಗಡ, ಅಲ್ಲಿಯ ಹಳ್ಳಿಯ ಹಳಬ =ಕೊರಬು (ಓಲೆಕಾರ) ಇತ್ಯಾದಿ ಪ್ರಮಾಣಗಳು ಇದನ್ನು ಪುಷ್ಟೀಕರಿಸುತ್ತವೆ.

೩. ಮರಾಠೀ ಭಾಷೆಯೊಳಗಿನ ಆಖ್ಯಾತಗಳು, ಪಡೆನುಡಿಗಳು ಮುಂತಾದ ಭಾಷಿಕ ಪ್ರಮಾಣಗಳು ಅದನ್ನು ದೃಢಪಡಿಸುತ್ತವೆ."[೧೫]

ಹೀಗೆ ತಮ್ಮ ಭೂಪ್ರದೇಶ ಕುರಿತ ನಿರ್ವಚನಕ್ಕೆ ಒದಗಿಸುವ ಪುರಾವೆಗಳು ಜೀವಂತವಾದುವುಗಳಾಗಿರುತ್ತವೆ. ಭಾಷಿಕ ಪ್ರತಿಮೆಗಳಷ್ಟೇ ಅಲ್ಲದೆ, ದೈವತಶಾಸ್ತ್ರದ ಆಧಾರವನ್ನು ಬಳಸುತ್ತಾರೆ. ಅದು, ಗುಜರಾತು, ಮಹಾರಾಷ್ಟ್ರ, ಕರ್ನಾಟಕಗಳಲ್ಲಿ ಸಾಮಾನ್ಯವಾಗಿರುವ 'ಮೈಲಾರ, ಎಲ್ಲಪ್ಪ, ಮಾಳಪ್ಪ, ವಗ್ಗಯ್ಯ ಇತ್ಯಾದಿಯಾಗಿ ಜನಪದರ ದೈವಗಳು ಇಂದಿಗೂ ಅಸ್ತಿತ್ವದಲ್ಲಿವೆ. ಇವು ಆರ್ಯರ ದೇವತೆಗಳಿಗಿಂತ ಆರ್ಯೇತರವು ಎಂಬುದು ನಿರ್ವಿವಾದದ ಸಂಗತಿ. ಆದ್ದರಿಂದ ಈ ಭೂಪ್ರದೇಶಗಳು ಒಂದೊಮ್ಮೆ ಕಂದಮಿಳರ ನೆಲಸುನಾಡುಗಳು ಆಗಿರಬೇಕು' ಎಂಬ ನಿಲುವಿಗೆ ಬರಲು ಪ್ರಯತ್ನಿಸುತ್ತಾರೆ.

ನಾಲ್ಕು ಸಾವಿರ ವರ್ಷಗಳ ಹಿಂದೆ ಅಸ್ತಿತ್ವದಲ್ಲಿದ್ದಿತೆಂದು ಹೇಳಲಾಗುವ ಸೈಂಧವ ಸಂಸ್ಕೃತಿಯಿಂದ ಹಿಡಿದು ದಕ್ಷಿಣದಲ್ಲಿ ನೀಲಗಿರಿ ಪ್ರದೇಶಗಳವರೆಗೆ ಕಂದಮಿಳು ಜನಾಂಗ ವಾಸಿಸುತ್ತಿದ್ದ ಪ್ರದೇಶಗಳು ಎಂದು ಪ್ರತಿಪಾದಿಸುತ್ತಿರುವ ಶಂಬಾರ ವಿಚಾರಗಳ ಹಿಂದೆ ಬಹುಪಾಲು ರಾಷ್ಟ್ರೀಯತಾ ಚಿಂತಕರಿಗಿರುವ ವಿಸ್ತರಣಾವಾದಿ ವ್ಯಾಮೋಹವಿದೆಯೇ ಎಂಬ ಪ್ರಶ್ನೆ ಹುಟ್ಟುತ್ತದಾದರೂ, ಅವರು ಕೊಡುವ ತರ್ಕಗಳು ವಿದ್ವತ್ತಿನ ಭಾಗಗಳಾಗಿ ಪರ್ಯಾವಸಾನಗೊಳ್ಳುತ್ತವೆ. ಆದರೆ ಭೂಪ್ರದೇಶ ಕುರಿತ ಶಂಬಾರ ವ್ಯಾಖ್ಯಾನವು ಕನ್ನಡ ರಾಷ್ಟ್ರೀಯತಾ ಚಿಂತನೆಯಲ್ಲಿ ಹೊಸದೊಂದು ಆಯಾಮವನ್ನು ಸೃಷ್ಟಿಸುತ್ತದೆ. ಏಕೆಂದರೆ ಗಡಿ ಪ್ರದೇಶದ ಕೆಲ ಪ್ರದೇಶಗಳನ್ನು ಬಿಟ್ಟು ಹೋದವಲ್ಲ ಎಂದು ವ್ಯಥೆಪಡುತ್ತಿದ್ದ ಹೊತ್ತಿನಲ್ಲಿ ಕನ್ನಡಿಗರು ಕಳೆದುಕೊಂಡಿರುವುದೆಷ್ಟು ಎಂದು ಅಗೆದು ತೋರಿಸುತ್ತಾರೆ. ಹಾಗಾಗಿ ನದಿ ಮತ್ತು ಭೂಪ್ರದೇಶ ಕುರಿತಂತೆ ಶಂಬಾರ ನಿಲುವುಗಳು ಉಳಿದವರಿಗಿಂತ ಭಿನ್ನವಾದವುಗಳು.

## ೨.೫ ಭೂಪ್ರದೇಶ ಕುರಿತಂತೆ ಕುವೆಂಪುರವರ ಚಿಂತನೆಗಳು

ನಿರ್ದಿಷ್ಟ ಭೂಪ್ರದೇಶದಲ್ಲಿ ವಾಸಿಸುವ ಸಮುದಾಯದ ಜನರು ರಾಜಕೀಯವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಹಾಗೂ ಇನ್ನಿತರೆ ಆಶೋತ್ತರಗಳನ್ನು ಈಡೇರಿಸಿಕೊಳ್ಳಬೇಕೆಂದು ಬಯಸುವುದೂ ಸಹ ರಾಷ್ಟ್ರೀಯತೆಯ ಮುಖ್ಯ ಲಕ್ಷಣಗಳಲ್ಲಿ ಒಂದು. ನಿರ್ದಿಷ್ಟತೆಯನ್ನು ಬೇಡುವ ಗುಣವೂ 'ರಾಷ್ಟ್ರೀಯತೆ'ಯ ವ್ಯಾಖ್ಯಾನಗಳಿಗಿರುತ್ತದೆ. ಕಲ್ಪಿಸಿದ ಗಡಿ, ಕಲ್ಪಿಸಿ ಕಟ್ಟಿದ ಚರಿತ್ರೆ, ಸಂಸ್ಕೃತಿ ವ್ಯಾಖ್ಯಾನಗಳೆಲ್ಲ ನಿರ್ದಿಷ್ಟತೆ ಕಡೆಗೆ ತುಡಿಯಬೇಕೆನ್ನುವ ಸ್ವಭಾವವನ್ನುಳ್ಳಂಥವೆ. ಈ ನಿರ್ದಿಷ್ಟತೆ ಅಥವಾ ಮೂರ್ತತೆ ಎನ್ನುವುದು ಶತ್ರುವಿನ ಸ್ವರೂಪವನ್ನು ಸ್ಪಷ್ಟಪಡಿಸಿಕೊಳ್ಳಲು ಪ್ರಯತ್ನಿಸುತ್ತದೆ. ಎದುರು ನಿಂತಿರುವ ಅಥವಾ 'ಕಲ್ಪಿಸಿದ' ಶತ್ರುವಿಗೆ ತಾನು ಎಷ್ಟು ದೊಡ್ಡ ಪರಂಪರೆ ಹೊಂದಿದ್ದೇನೆ, ಮೊದಲು ನನ್ನ ಜನರು ಎಷ್ಟು ವಿಶಾಲ ಭೂಸಂಪತ್ತಿಗೆ ವಾರಸುದಾರರಾಗಿದ್ದರು ಎಂದು 'ಗತ'ವನ್ನು ವ್ಯಾಖ್ಯಾನಿಸಲು, ವಿವರಿಸಲು ಪ್ರಯತ್ನಿಸುತ್ತದೆ. ಹಾಗೆಯೇ ತನ್ನ ಜನಸಮುದಾಯಕ್ಕೆ ತನ್ನ ಭೂಮಿ ಬಂಜರುಭೂಮಿಯಾಗಿದ್ದರೂ ಅದು ತನ್ನ ನೆನಪುಗಳ ಕಾರಣಕ್ಕೆ 'ಚಿನ್ನ ಸದೃಶ'ವಾಗಿ ಮಾರ್ಪಡಿಸಿ ಹೇಳಲು ಪ್ರಯತ್ನಿಸಲಾಗುತ್ತದೆ. ಈ ಎರಡು ವ್ಯಾಖ್ಯಾನಗಳು ಬಹುಪಾಲು ಸಾರಿ ಒಟ್ಟಿಗೆ ನಡೆಯುವ ಪ್ರಕ್ರಿಯೆಗಳಾಗಿರುತ್ತವೆ. ವರ್ತಮಾನದಲ್ಲಿ ಅಸಹನೆ, ಅತೃಪ್ತಿಯ ಕಾರಣಗಳಿಗೆ ಈ ರೀತಿ ವ್ಯಾಖ್ಯಾನ ಕಲ್ಪಿಸುವ ಕೆಲಸ ನಡೆಯುತ್ತಿರುತ್ತದೆ. ಆದರೆ ಈ ವ್ಯಾಖ್ಯಾನಗಳ ಸ್ವರೂಪ ನಿರ್ಧರಿತವಾಗುವುದು ಯಾವ ರೀತಿಯ ನೆನಪುಗಳನ್ನು ಸಂಘಟಿಸಲಾಗುತ್ತಿದೆ ಹಾಗೂ ವರ್ತಮಾನದಲ್ಲಿ 'ಶತ್ರು'ವೆಂದು 'ಅನ್ಯ'ವೆಂದು ಯಾರನ್ನು ಕಲ್ಪಿಸಲಾಗಿದೆ ಅಥವಾ ಗುರುತಿಸಲಾಗಿದೆ ಎನ್ನುವುದರ ಜೊತೆಗೆ ಯಾವ ರೀತಿಯಲ್ಲಿ ಭವಿಷ್ಯದ ಕುರಿತು ಕನಸುತ್ತಿದೆ ಎನ್ನುವುದು ಕೂಡ ಬಹಳ ಮುಖ್ಯ ಸಂಗತಿಯಾಗಿ ಬಿಡುತ್ತದೆ.

ರಸಋಷಿಯೆಂದು, ಮಹಾಕಾದಂಬರಿಕಾರರೆಂದೂ, ಆಧುನಿಕ ಮಹಾಕವಿಯೆಂದೂ, ದಾರ್ಶನಿಕರೆಂದೂ ವ್ಯಾಖ್ಯಾನಿಸಿಸಲ್ಪಟ್ಟಿರುವ ಕುವೆಂಪುರವರು ಭೂಪ್ರದೇಶ ಕುರಿತಂತೆ ತಳೆದ ನಿಲುವುಗಳು ವಿಶಿಷ್ಟವಾದ ನೆಲೆಯಲ್ಲಿ

ವ್ಯವಹರಿಸುವಂತಹವು. 'ಸರ್ವೋದಯ', 'ಸಮಾನತೆ' ತತ್ವದ ಜೊತೆಯಲ್ಲಿ ಅದ್ವೈತ ತತ್ವವೂ ಕ್ರಿಯಾಶೀಲವಾಗುವುದರಿಂದ ಚಿಂತನೆಗಳು ಸಂಕುಚಿತತೆಯನ್ನು ಕಳೆದುಕೊಂಡು ವಿಶಾಲ ಭಿತ್ತಿಯ ಕಡೆಗೆ ತುಡಿಯುತ್ತಿರುತ್ತವೆ. ಅವರ ಮಾತುಗಳ ಧಾಟಿ ಹೀಗಿದೆ :

"ನಮ್ಮ ಕರ್ನಾಟಕ ಬರಿಯ ದೇಶ ವಿಸ್ತೀರ್ಣಕ್ಕೆ ಮಾತ್ರ ಸಂಬಂಧ ಪಟ್ಟುದಲ್ಲ; ಕಾಲವಿಸ್ತೀರ್ಣವನ್ನು ನಾವು ಪ್ರಮುಖವಾಗಿ ಭಾವಿಸುತ್ತೇವೆ. ಅದನ್ನು ಚದರಮೈಲಿಗಳಿಂದ ಅಳೆದರೆ ಸಾಲದು! ಚದರ ವರ್ಷಗಳಿಂದಲೂ ಗುರುತಿಸಬೇಕು. ವ್ಯಷ್ಟಿ ರೂಪವಾದ ವ್ಯಕ್ತಿಗೆ ಕೋಶಗಳಿರುವಂತೆ ಸಮಷ್ಟಿರೂಪವಾದ ದೇಶಕ್ಕೂ ಕೋಶಗಳಿವೆ ಎಂದು ಭಾವಿಸುವುದಾದರೆ ಕರ್ನಾಟಕಕ್ಕೆ ಅನ್ನಮಯ ರೂಪವಾದ ಭೂಪ್ರದೇಶವಿರುವಂತೆಯೆ ಪ್ರಾಣಮನೋಮಯ ರೂಪವಾದ ಚಿತ್ ಪ್ರದೇಶವೂ ಇದೆ. ಚಿನ್ಮಯವೂ ಆಧ್ಯಾತ್ಮಿಕವೂ ಆಗಿರುವ ಆ ಸಂಸ್ಕೃತಿ ಕೋಶವೆ ಕರ್ಣಾಟಕದೇವಿಯ ಸೂಕ್ಷ್ಮ ಶರೀರ. ನಶ್ವರವೂ ಚಂಚಲವೂ ಕಾಲ ಸನ್ನಿವೇಶ ವಶವೂ ಆಗಿರುವ ಭೂವಿಸ್ತೀರ್ಣ ರೂಪವಾದ ಲೀಲಾ ಸ್ಥೂಲ ಶರೀರವನ್ನು ಸರ್ವದಾ ಧಾರಣೆ ಮಾಡುತ್ತಿರುತ್ತದೆ. ಆ ನಿತ್ಯ ಭಾವತನು. ಆ ಜ್ಯೋತಿಶ್ಶರೀರಿಯೆ ದೇವಿ ಆ ದೇವಿಯ ಉಪಾಸನೆಯೆ ಕವಿ ಕಲಾವಿದ ತತ್ತ್ವಜ್ಞ ಸಾಧಕರಾದಿಯಾಗಿ ಸಕಲರ ಗಂತವ್ಯ ಮತ್ತು ಗಮ್ಯ, ಕರ್ಣಾಟಕದ ಕಾವ್ಯ ಕಲೆ ಸಂಸ್ಕೃತಿಗಳನ್ನು ಹೃದಯದಲ್ಲಿ ಪ್ರತಿಷ್ಠಾಪಿಸಿಕೊಂಡ ಕನ್ನಡಿಗನು ಭೌಗೋಲಿಕವಾದ ಎಲ್ಲೆಗಳಿಂದ ಹೆದರಬೇಕಾದ್ದಿಲ್ಲ."[೧೬]

ಕರ್ನಾಟಕ ಏಕೀಕರಣ ಚಳವಳಿಗೆ ನಿರಂತರ ಪ್ರೇರಣೆಯಾದ, ಮೈಸೂರಿನ ಅರಸರನ್ನು ಲೆಕ್ಕಿಸದೆ ವರ್ತಿಸಿದ ಕುವೆಂಪುರವರ ಕರ್ನಾಟಕದ ಕಲ್ಪನೆ ಯಾವ 'ತಬ್ಬುಗೆ'ಗಳಿಗೂ ಸಿಗುವಂಥದ್ದಲ್ಲ. ಗಡಿಗಳನ್ನು ಲೆಕ್ಕಿಸದೆ, ಭೂಪಟವನ್ನು ಲೆಕ್ಕಿಸದೆ ಸಂಸ್ಕೃತಿ ಕರ್ನಾಟಕವೆಂಬುದು ಎಲ್ಲವನ್ನೂ ಮೀರಿದ್ದು, ಅದು ಅಭೂಮ ರೂಪಿ. ಭೂವಿಸ್ತೀರ್ಣ ರೂಪವನ್ನು ತಿರಸ್ಕರಿಸದೆ ಅದನ್ನು ಸ್ಥೂಲಶರೀರವೆಂದು ಕರೆದು, ಅದಕ್ಕಿಂತಲೂ ಬಹಳ ವಿಸ್ತಾರವಾದ ಶಕ್ತಿ ಸಂಸ್ಕೃತಿ ಕರ್ನಾಟಕಕ್ಕಿದೆ ಎನ್ನುವ ನಿಲುವಿಗೆ ಅವರು ತಲುಪುತ್ತಾರೆ. ಆಲೂರರ ಆಧ್ಯಾತ್ಮಿಕ ರಾಷ್ಟ್ರೀಯತಾ ವ್ಯಾಖ್ಯಾನದಂತೆಯೆ ಕುವೆಂಪು ತಮ್ಮ ರಾಷ್ಟ್ರೀಯತಾ ವ್ಯಾಖ್ಯಾನಕ್ಕೆ ದಾರ್ಶನಿಕ ಸ್ಪರ್ಶ ನೀಡುತ್ತಾರೆ. ಆ ಅರ್ಥದಲ್ಲಿ ಅದು 'ದಾರ್ಶನಿಕ ರಾಷ್ಟ್ರೀಯತೆ. ದ್ವೇಷ, ಅಸೂಯೆಗಳಿಲ್ಲದೆ, ಶತ್ರುವಿನ ಕಲ್ಪನೆಯಿಲ್ಲದೆ ವ್ಯಾಖ್ಯಾನಿಸುವ ರಾಷ್ಟ್ರೀಯತೆ ಅತ್ಯಂತ ಮಾನವೀಯವಾದುದು. ಶತ್ರುತ್ವವನ್ನು ನಿರಾಕರಿಸಿ ನಡೆದುಬಿಡುವ ದೊಡ್ಡ ಗುಣವೊಂದು ಇಲ್ಲಿರುತ್ತದೆ.

ಈ ರಾಷ್ಟ್ರೀಯತೆ ತನ್ನ 'ಗತ'ವನ್ನು ಕಲ್ಪಿಸಿಕೊಳ್ಳುವುದು ಸಹ 'ಸಾಂಸ್ಕೃತಿಕ'ವಾದ ನೆನಪುಗಳನ್ನು, ಪ್ರಭುತ್ವವನ್ನು ನಿರಾಕರಿಸುವುದರ ಮೂಲಕ.

"ಇಂದುಬಹ ನಾಳೆ ಸಂದು
ಹೋಹ ಸಚಿವ ಮಂಡಲ
ರಚಿಸುವಂದು ಕೃತಕವಲ್ತೊ"[೧೭]

ಕೃತಕವಾದ, ಶಾಶ್ವತವಲ್ಲದ ಆಧುನಿಕ ಪ್ರಭುತ್ವದ ಕ್ಷುಲ್ಲಕ ರಾಜಕೀಯಕ್ಕಿಂತ ನನಗೆ ಶಾಶ್ವತವಾದ

ಮಂತ್ರಿಮಂಡಲವಿದೆ. ಅದು ಕನ್ನಡಿಗರ ಜನಮಾನಸದಲ್ಲಿ ಸ್ಥಾಪಿತಗೊಂಡ ಮಂತ್ರಿಮಂಡಲ ಎಂದು ಹೇಳುವ ಕವಿ, ಕವಿಗಳ, ಬಸವಣ್ಣನಂತಹ ಸುಧಾರಕರ, ನೃಪತುಂಗನಂತಹ ಪ್ರಭುಗಳ ಮಂತ್ರಿ ಮಂಡಲವನ್ನು ವ್ಯಾಖ್ಯಾನಿಸುತ್ತಾರೆ. ವರ್ತಮಾನಕ್ಕೆ ಇವೆಲ್ಲ ವಿವಾದಾತೀತ ಸಂಗತಿಗಳಾಗಿ ಅವರಿಗೆ ಕಾಣಿಸುತ್ತವೆ. ಹಾಗಾಗಿ ಭೂಪ್ರದೇಶವನ್ನು ಚದರಮೈಲಿಗಳಿಂದ ಅಳೆದರೆ ಸಾಲದು. (ಅಂದರೆ ಅದನ್ನು ನಿರಾಕರಿಸುತ್ತಿಲ್ಲ ಆದರೆ ಸಾಲದು ಅಷ್ಟೆ.) ಅದಕ್ಕೂ ಮಿಗಿಲಾದ ವಿಸ್ತಾರವಿದ್ದು, ಅದನ್ನು ಚದರ ವರ್ಷಗಳಿಂದ ಅಳೆಯಬೇಕಾಗುತ್ತದೆ. ಕುವೆಂಪು ಮತ್ತೂ ವಿವರಿಸುತ್ತಾರೆ.

"ಎಲ್ಲಾದರು ಇರು, ಎಂತಾದರು ಇರು!
ಎಂದೆಂದಿಗೂ ನೀ ಕನ್ನಡವಾಗಿರು!
ಕನ್ನಡ ಗೋವಿನ ಓ ಮುದ್ದಿನಕರು,
ಕನ್ನಡತನವೊಂದಿದ್ದರೆ ನೀನಮ್ಮಗೆ ಕಲ್ಪತರು;
ನೀ ಮೆಟ್ಟುವ ನೆಲ ಅದೆ ಕರ್ನಾಟಕ;
ನೀನೇರುವ ಮಲೆ -ಸಹ್ಯಾದ್ರಿ
ನೀ ಮುಟ್ಟುವ ಮರ -ಶ್ರೀಗಂಧದ ಮರ;
ನೀ ಕುಡಿಯುವ ನೀರ್ ಕಾವೇರಿ"

ಈ ಪದ್ಯಕ್ಕೆ ಅವರೇ ಕೊಡುವ ವಿವರಣೆ ಹೀಗಿದೆ :

ಕನ್ನಡ ಕಾವ್ಯಗಳನ್ನೋದುವಾತನು ಅಮೇರಿಕೆಯಲ್ಲಿದ್ದರೂ ಅದು ಕರ್ನಾಟಕವೆ. 'ಪಂಪನನೋದುವನಾಲಗೆ' ಮಿಸಿಸಿಪಿ ಹೊಳೆಯ ನೀರನ್ನು ಈಂಟಿದರೂ ಕಾವೇರಿಯೆ. 'ಕಾವೇರಿಯಿಂದಮಾಗೋದಾವರಿ ವರಮಿರ್ದ ನಾಡು' ಎಂದು ನೃಪತುಂಗನು ಬಣ್ಣಿಸಿದ ಕರ್ನಾಟಕ ನೆಲದ ಎಲ್ಲೆ ಇಂದು ಭೌಗೋಳಿಕವಾಗಿ ವ್ಯತ್ಯಸ್ತವಾಗಿರುವುದಕ್ಕಾಗಿ ನಾವು ಪರಿತಪಿಸುವುದು ಅನಾವಶ್ಯಕ. ಕಾವೇರಿ ಮತ್ತು ಗೋದಾವರಿಗಳು ನಿತ್ಯವೂ ನಿರ್ದಿಂಗತವಾಗಿ ವಿಸ್ತರಿಸುತ್ತಿರುವ ಕರ್ನಾಟಕದ ಸಾಂಸ್ಕೃತಿಕ ಹಾಗೂ ಆಧ್ಯಾತ್ಮಿಕ ಭೂಮಿಕೆಯ ಗಡಿಗಳಿಗೆ ಸಂಕೇತ ಮಾತ್ರವಾಗಿರಲಿ. ಅವು ಭಾವೋಪಯೋಗಿಗಳೆ ಹೊರತು ಲೋಕೋಪಯೋಗಿಗಳಾಗುವುದಿಲ್ಲ. ಏಕೆಂದರೆ ಮೈಸೂರಿನ ಎಲ್ಲೆ ರಾಜಕೀಯದಿಂದ ಭೌಗೋಳಿಕವಾಗಿ ನಿರ್ಣಯವಾಗಿದ್ದರೂ ಕರ್ನಾಟಕದ ಸಾಂಸ್ಕೃತಿಕ ಮೇರೆ ನಮ್ಮೆಲ್ಲರಿಂದ ಮಾನಸಿಕವಾಗಿ ನಿರಂತರವೂ ನಿರ್ಣಯವಾಗುತ್ತಿರುತ್ತದೆ. ಕನ್ನಡಿಗರ ಸಂಸ್ಕೃತಿಗೆ ಪ್ರತಿಮಾರೂಪವಾಗಿರುವ ಕರ್ನಾಟಕದ ವಿಸ್ತಾರ ನಿರ್ದಿಗಂತವಾದದ್ದು; ಅದರ ಔನ್ನತ್ಯ ನಿಶ್ಶಿಖರವಾದದ್ದು. ಅಂತಹ 'ಸಂಸ್ಕೃತಿ ಕರ್ನಾಟಕ'ದ ಸ್ಥಾಪನೆ, ರಕ್ಷಣೆ, ಪೋಷಣೆ ಮತ್ತು ವಿಸ್ತರಣೆಗಳಿಗಾಗಿಯೇ ಸಹೃದಯ ಸಮಷ್ಟಿರೂಪವಾದ ಸಾಹಿತ್ಯ ಪರಿಷತ್ತು ನಿರಂತರವೂ ತಪಸ್ವಿಯಾಗಿ ದುಡಿಯಬೇಕಾಗಿದೆ. ಏಕೆಂದರೆ ಭೌಗೋಳಿಕವಾಗಿ ಕರ್ನಾಟಕ ರಾಜ್ಯ ಸ್ಥಾಪನೆಯಾಯಿತು ಎಂದು ನಾವು ಸಡಿಲ ಬಾಳಿಗರಾಗಿ ಸುಮ್ಮನಾದರೆ ರಾಜ್ಯಸ್ಥಾಪನೆಯ ಮೂಲೋದ್ದೇಶವೆ ವಿಫಲವಾಗುತ್ತದೆ."[೧೮]

ಕುವೆಂಪುರವರ ಈ ಮಾತುಗಳು ಕರ್ನಾಟಕತ್ವ ಕುರಿತ ಚರ್ಚೆಯನ್ನು ಬೇರೊಂದು ಮಗ್ಗುಲಿಗೆ ಹೊರಳಿಸುತ್ತವೆ. ಭೌತಿಕ ಗಡಿಗಾಗಿ ಮತ್ತು, 'ಮಹಾ ಭೂಪಟ'ಕ್ಕಾಗಿ, ಇಂದು ಜಗತ್ತಿನಾದ್ಯಂತ ನಿರಂತರವಾದ ಸಂಘರ್ಷಗಳು ನಡೆಯುತ್ತಿರುವುದನ್ನು ಕಾಣುತ್ತಿದ್ದೇವೆ. ಆಧುನಿಕ ರಾಷ್ಟ್ರಗಳ ಅತಿದೊಡ್ಡ ಸಮಸ್ಯೆಗಳಲ್ಲಿ ಗಡಿ ಸಮಸ್ಯೆಯೂ ಒಂದು. ಅನೇಕ ಬಾರಿ ಆಳುವವರು ಅದನ್ನು ಭಾವನಾತ್ಮಕ ವಿಚಾರವಾಗಿ ಬೆಳಸಿಕೊಂಡು ರಾಜಕೀಯ ಮಾಡುತ್ತಿರುವುದನ್ನು ನೋಡುತ್ತಿದ್ದೇವೆ. ಈ ಸಮಸ್ಯೆ ಕರ್ನಾಟಕವನ್ನೂ ಒಳಗೊಂಡು ನಡೆಯುತ್ತಿದೆ. ಆದರೆ ಕುವೆಂಪು 'ವ್ಯತ್ಯಸ್ತವಾಗಿರುವ ಭೌಗೋಳಿಕ ಗಡಿಗಳಿಗಾಗಿ ಪರಿತಪಿಸುವುದು ಅನಾವಶ್ಯಕ' ಎಂದು ಹೇಳುತ್ತಾರೆ. ಈ ಗಡಿಗಳು ಭಾವೋಪಯೋಗಿಗಳೇ ಹೊರತು ಲೋಕೋಪಯೋಗಿಗಳಲ್ಲ. ಏಕೆಂದರೆ ಸಾಂಸ್ಕೃತಿಕ ಗಡಿಗಳು ನಿರಂತರವಾಗಿ ವಿಸ್ತರಿಸುತ್ತಿರುವುದರಿಂದ ಅಥವಾ ವಿಸ್ತರಿಸಬೇಕಾಗಿರುವುದರಿಂದ, ಮೂರ್ತ ರೂಪದ ಗಡಿಗಳಿಗೆ ಹೆಚ್ಚು ಚಿಂತಿಸಬೇಕಾದ ಅಗತ್ಯವಿಲ್ಲವೆಂಬ ನಿಲುವಿಗೆ ತಲುಪುತ್ತಾರೆ.

ಭೂಪ್ರದೇಶದ ಜೊತೆಯಲ್ಲಿ ನಿರ್ಣೀತವಾಗುವ 'ಜನ' ಸಮುದಾಯದ ಜೊತೆಗೆ, ಬೇರೊಂದು ರಾಷ್ಟ್ರಕ್ಕೊ -ರಾಷ್ಟ್ರೀಯತೆಗೊ, ತನ್ನ ಭಾಷಿಕ ಸಮುದಾಯಕ್ಕೆ ಸೇರಿದ ಪ್ರಜೆ ಹೋದರೆ ಅಥವಾ ಬೇರೊಂದು ಭಾಷಿಕ ರಾಷ್ಟ್ರೀಯತೆಗೆ ಸೇರಿದ ಪ್ರಜೆ ಬಂದರೆ ಹೇಗೆ ವ್ಯಾಖ್ಯಾನಿಸುವುದು, ಆತನ ಪಾತ್ರವನ್ನು ಹೇಗೆ ನಿರ್ಣಯಿಸುವುದು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಈ ಪ್ರಶ್ನೆ ಬದುಕಿಗೆ ಸಂಬಂಧಪಟ್ಟದು. ಇಂದು ಭಾರತದ ಅನೇಕ ರಾಜ್ಯಗಳಲ್ಲಿ ಈ ಸಮಸ್ಯೆ ಭೀಕರ ಸ್ವರೂಪ ತಾಳುತ್ತಿದೆ. ಕೋಮುವಾದದ ಜೊತೆಗೆ ಕ್ರಿಯಾಶೀಲವಾಗಿರುವ ಸಮಸ್ಯೆ ಭಾಷಿಕ ಮೂಲಭೂತವಾದಕ್ಕೂ ಸಂಬಂಧಿಸಿದ್ದು. ಕರ್ನಾಟಕವೂ ಈ ಸಮಸ್ಯೆಯನ್ನು ಎದುರಿಸುತ್ತಿದೆ. 'ತನ್ನೊಳಗೆ ಜೀರ್ಣವಾಗು ಇಲ್ಲದಿದ್ದರೆ ಬರುವ ಅಪಾಯಗಳನ್ನು ಎದುರಿಸು' ಎನ್ನುವ ಅತ್ಯಂತ ಅಪ್ರಜಾತಾಂತ್ರಿಕವಾದ ಏಕರೂಪಿ ಆಗ್ರಹವಿದು. ಅಸ್ಸಾಮಿನಲ್ಲಿ, ಮಹಾರಾಷ್ಟ್ರದಲ್ಲಿ, ಕರ್ನಾಟಕದಲ್ಲಿ ಅಥವಾ ಇನ್ನಿತರ ಕಡೆಗಳಲ್ಲಿ ದಿನವೂ ಉರಿಯುತ್ತಿರುವ ಸಮಸ್ಯೆ ಇದು. ಆಲೂರರು ಸಂಪೂರ್ಣ ಜೀರ್ಣವಾಗಿಬಿಡುವುದು ಅಂದರೆ 'ತಾದಾತ್ಮ್ಯ'ವಾಗು ಎಂಬ ವ್ಯಾಖ್ಯಾನ ನೀಡುತ್ತಾರೆ. ಆದರೆ ಕುವೆಂಪು ಅದಕ್ಕೆ ಬೇರೊಂದು ವ್ಯಾಖ್ಯಾನ ಕೊಡುತ್ತಿದ್ದಾರೆ. ಹೋದ ಕಡೆ ಸಂಪೂರ್ಣವಾಗಿ ಕರಗಿಹೋದರೆ 'ತನ್ನತನ ಉಳಿಸಿಕೊಳ್ಳುವುದು ಮತ್ತು ನೆಲೆಸಿದ ಸಮುದಾಯಗಳ ನಡುವೆ ಮುಳ್ಳಾಗದಂತೆ ಬದುಕುವುದು ಎನ್ನುವ ನಿಲುವು ಇದು. ತನ್ನ ಅಸ್ಮಿತೆ ಬಿಟ್ಟುಕೊಡದೆ, ನೆಲೆಸಿದ ಸಮುದಾಯಗಳ ಜೊತೆ ಹೊಂದಿಕೊಂಡು ಬದುಕುವುದು. ಆಗ ಅವರು ಕರ್ನಾಟಕದ ಎಲ್ಲೆ ಸಾಂಸ್ಕೃತಿಕವಾಗಿ ನಮ್ಮೆಲ್ಲರಿಂದ ನಿರ್ಣೀತವಾಗುತ್ತಿರುತ್ತದೆ, ವಿಸ್ತರಿಸುತ್ತಿರುತ್ತದೆ ಎನ್ನುವ ತೀರ್ಮಾನಕ್ಕೆ ಬರುತ್ತಾರೆ. ಇವತ್ತಿನ ಎಲ್ಲ ಸಂಘರ್ಷಗಳಿಗೆ ಕುವೆಂಪುರವರ ಮಾತುಗಳು ಔಷಧಿಯಂತೆ ಕಾಣುತ್ತವೆ.

ಬರೀ ಗಡಿ ಮತ್ತು ಭೂಪ್ರದೇಶವಷ್ಟೇ ಚರ್ಚೆಯ ವಿಷಯವಾಗಿ ಬಿಟ್ಟರೆ ಮೇಲ್ಪದರದ ಚರ್ಚೆ ಅಷ್ಟೇ ಆಗಿಬಿಡುತ್ತದೆ. ಆ ಪ್ರದೇಶದಲ್ಲಿ ಬದುಕಿದ ಜನತೆಯ ನಡುವಿನ ತಾರತಮ್ಯಗಳು, ಅಸಮಾನ ಬದುಕು, ವೈರುಧ್ಯಗಳನ್ನು ಸಾಮಾನ್ಯವಾಗಿ ಮರೆತು ಚಿಂತಿಸಲಾಗುತ್ತಿರುತ್ತದೆ. 'ಭೂಪಟ'ವಾದಿ ಚಿಂತನೆಗಳ ಹಿಂದಿರುವ ಬಲಪಂಥೀಯ ನಿಲುವುಗಳು ಸೃಷ್ಟಿಸುವ ಉನ್ಮಾದದಲ್ಲಿ ಬೇಕಂತಲೇ ವೈರುಧ್ಯಗಳನ್ನು ಮರೆಮಾಚುತ್ತಿರುತ್ತವೆ. ಅದರಲ್ಲಿ ಕುಲೀನ ವರ್ಗಗಳ ತತ್ಕಾಲೀನ ಬಿಕ್ಕಟ್ಟುಗಳನ್ನು ಸರಿದೂಗಿಸಲು ಈ ಕ್ರಮ ಬಳಕೆಯಾಗುತ್ತಿರುತ್ತದೆ.

ಆದರೆ ಮಹಾ ಕನಸುಗಾರರಾದ ಕನ್ನಡ ಚಿಂತಕರು ಈ ವೈರುಧ್ಯಗಳನ್ನೇನೂ ಬಿಟ್ಟುಕೊಡುವುದಿಲ್ಲ. ಆಲೂರರು ತನ್ನ ಆದರ್ಶದ ರಾಷ್ಟ್ರದಲ್ಲಿ 'ಸರ್ವಭೂತಹಿತ'ವೂ ಅಡಗಿರುತ್ತದೆ ಎನ್ನುತ್ತಾರೆ. ಆದರೆ ಕುವೆಂಪು ಅದನ್ನು ಹೆಚ್ಚು ಸ್ಪಷ್ಟೀಕರಿಸಿ ಹೇಳಲು ಪ್ರಯತ್ನಿಸುತ್ತಿದ್ದಾರೆನ್ನಿಸುತ್ತದೆ.

"ಶಿಶುರೂಪಿ, ಪಶುರೂಪಿ, ಜನರೂಪಿ, ಮನರೂಪಿ
ನವ್ಯಶಾದ್ವಲ ರೂಪಿ
ಕಲ ಕಲ ಪಕ್ಷಿ ರೂಪಿ
....................."

ಅನೇಕ ರೂಪಗಳಲ್ಲಿ ಈ ಕರ್ನಾಟಕ ಆಗಬೇಕಾಗಿದೆ, ಅರಳಬೇಕಾಗಿದೆ, ಬೆಳೆಯಬೇಕಾಗಿದೆ. ಕೌಟುಂಬಿಕ ಕ್ಷೇಮ, ಮಕ್ಕಳ ಕ್ಷೇಮ, ಪಶುಪಕ್ಷಿಗಳ ಕ್ಷೇಮ, ಜನದ ನಾನಾ ವಿಧ ಕ್ಷೇಮ, ತತ್ತ್ವ ಕವಿ ಕಾವ್ಯಕಲೆ ಆಧ್ಯಾತ್ಮ ಮೊದಲಾದ ಊರ್ಧ್ವಮುಖಿ ಸಾಹಸಗಳ ಮನೋವಿಕಾಸ ರೂಪದ ಕ್ಷೇಮ...ದಲ್ಲಿ ಮೂಡುತ್ತಿರುವ ಆ ಐಕ್ಯೈಕ ಕರ್ನಾಟಕ ಬಹುರೂಪಿ ಮತ್ತು ವಿಶ್ವತೋಮುಖಿ."[೧೯]

ಎಲ್ಲ ಬಹುತ್ವಗಳನ್ನು ಕಾಪಾಡಿಕೊಂಡು ಕಟ್ಟುವ ಕರ್ನಾಟಕದ ಕಲ್ಪನೆಯನ್ನು ಕುವೆಂಪು ಇಲ್ಲಿ ಮಂಡಿಸುತ್ತಿದ್ದಾರೆ. ಅಲ್ಲದೆ ಅವರು ಆಶಿಸುತ್ತಿರುವ ರಾಷ್ಟ್ರದಲ್ಲಿ ಕೀಟಗಳಾದಿಯಾಗಿ ಸಮಸ್ತ ಜೀವ ಸಂಕುಲಗಳ ಹಿತ ಮುಖ್ಯ, ಕ್ಷೇಮ ಮುಖ್ಯ. ಅಲ್ಲಿ ದಮನಕ್ಕೆ, ಸಂಘರ್ಷಕ್ಕೆ ಅವಕಾಶವಿಲ್ಲ. ಕುವೆಂಪುರವರ ಚಿಂತನೆಯಲ್ಲಿ ಈ 'ಅಗು'ವಿಕೆ ಎನ್ನುವುದು ಮತ್ತೆ ಮತ್ತೆ ಪ್ರಸ್ತಾಪಿತವಾಗುವ ಕಲ್ಪನೆ. ಆದರ್ಶ ರಾಷ್ಟ್ರದ ಮಹಾ ಕನಸುಗಳು ಅಲ್ಲಿ ರೂಪುತಳೆಯುತ್ತಿರುತ್ತವೆ. ವರ್ತಮಾನದ ಕುರಿತ ಅತೃಪ್ತಿಯೂ ಇದಕ್ಕೆ ಕಾರಣ. ಅಂತಿಮವಾಗಿ ತಮ್ಮ ಮಾತುಗಳಲ್ಲಿ ಇದನ್ನವರು ಹೀಗೆ ಸ್ಪಷ್ಟೀಕರಿಸುತ್ತಾರೆ :

"ಕೇರಳಾಭಿಮಾನ, ಕರ್ನಾಟಕಾಭಿಮಾನ, ಆಂಧ್ರಾಭಿಮಾನ ಇತ್ಯಾದಿ ದೇಶ ಭಾಷಾ ಕ್ಷೇತ್ರಾಭಿಮಾನಿಗಳು ದ್ವೇಷಕ್ಕಾಗಲಿ, ಅಸಹನೆಗಾಗಲಿ, ಅನ್ಯಾಯಕ್ಕಾಗಲಿ ಆಕ್ರಮಣ ಬುದ್ಧಿಗಾಗಲಿ ಎಡೆಗೊಡದೆ ಭಾರತಾಭಿಮಾನದ ಆಶ್ರಯದಲ್ಲಿ, ವೈಯಕ್ತಿಕವಾದ ಮತ್ತು ಅನುಚಿತವಾದ ಸ್ವಾರ್ಥತೆಗಳನ್ನು ತ್ಯಜಿಸಿ, ತಮ್ಮ ತಮ್ಮ ಏಳಿಗೆಯನ್ನು ಸಾಧಿಸಬೇಕು. ಏಕೆಂದರೆ ಸರ್ವಕ್ಷೇಮದ ಪ್ರಣಾಳದಲ್ಲಿಯೇ ಸ್ವಕ್ಷೇಮವೂ ಹರಿದುಬರುತ್ತದೆ."[೨೦]

ಕುವೆಂಪುರವರ ಆಧುನಿಕ ವಿಚಾರವಾದ ಮತ್ತು ಅದ್ವೈತ ತತ್ತ್ವಗಳು ಸಮ್ಮಿಲನಗೊಂಡು ಹುಟ್ಟುತ್ತಿರುವ ನಿಲುವು ಇದು. ಅನ್ಯಾಯಕ್ಕಾಗಲಿ, ಆಕ್ರಮಣಕ್ಕಾಗಲಿ ತನ್ನ ಅಭಿಮಾನ ಕಾರಣವಾಗಬಾರದು ಎಂಬ ನಿಲುವೇ ನವ ಪ್ರಜಾತಾಂತ್ರಿಕ ನಿಲುವಿನಂತೆ ಕಾಣಿಸುತ್ತದೆ.

ಅನೇಕ ಸಂದರ್ಭದಲ್ಲಿ ಕುವೆಂಪುರವರ ಭಾಷಣ ಮತ್ತು ಕವಿತೆಗಳು ಒಂದರ ಮುಂದುವರಿಕೆಯ ರೂಪದಂತೆ ಇನ್ನೊಂದು ಎಂಬಂತೆ ಕಾಣಿಸುತ್ತದೆ. ಇದನ್ನು ವಾಗಾಡಂಬರವೆಂತಲೊ ಶಬ್ದಾಡಂಬರವೆಂತಲೊ ಶೈಲಿದೃಷ್ಟಿಯಿಂದ ಮಾತ್ರ ನೋಡಿ ಒಳ್ಳೆಯ ಪದ್ಯಗಳಲ್ಲ ಎಂಬಂತೆಯೊ ವ್ಯಾಖ್ಯಾನಿಸಿರುವುದರಲ್ಲಿ ರಾಜಕೀಯ ಕಾರಣಗಳು ಅಡಗಿರಬಹುದು. ಆದರೆ ಕುವೆಂಪುರವರು ಈ ಪ್ರಯೋಗವನ್ನು ಬೇಕೆಂತಲೇ ಬಳಸುತ್ತಿದ್ದಾರೆನ್ನಿಸುತ್ತದೆ. 'ಕಲೆಗಾಗಿ ಕಲೆ' ಎಂಬ ಸಿದ್ಧಾಂತದಲ್ಲಿ ನಂಬಿಕೆಯಿಲ್ಲದವರಂತೆ ಅದನ್ನು ನಿರ್ಲಕ್ಷಿಸಿ

ತಮ್ಮ ಕಾವ್ಯವನ್ನು ಜನಮುಖಿಯಾದ ಆಶಯಗಳ ಕಡೆಗೆ ಅವರು ತಿರುಗಿಸುತ್ತಾರೆ. ನಾಡನ್ನು ನಿರ್ಮಿಸಲು, ಮನಸ್ಸುಗಳನ್ನು ಕಟ್ಟಲು, ವಿಚಾರದ ಕಿಚ್ಚು ಹೊತ್ತಿಸಲು ಬಳಸುವ ಈ ಪ್ರಯೋಗಗಳು ಮಹಾ ವಾಸ್ತವವಾದಿಯಾದ, ಅತ್ಯುನ್ನತ ರಾಜಕೀಯ ಪ್ರಜ್ಞೆಯಿಂದ ಬಂದುವೆಂದು ಅನ್ನಿಸುತ್ತದೆ.

**೨.೬ ಭೂಪ್ರದೇಶ ಕುರಿತಂತೆ ಚಿದಾನಂದ ಮೂರ್ತಿಯವರ ಚಿಂತನೆಗಳು**

'ಪ್ರಭುತ್ವ'ಪರ ಮೀಮಾಂಸೆಗಳ ಮುಖ್ಯ ನೆಲೆಯೆಂದರೆ, ತಮ್ಮವರು ಅನ್ಯಭಾಷಿಕ ಪ್ರದೇಶಗಳನ್ನು ಆಳಿದರೆ ಅದು ಹೆಮ್ಮೆಯ ಸಂಕೇತವೆಂದು ಭಾವಿಸಲಾಗುತ್ತದೆ. ಆದರೆ ಅನ್ಯ ಭಾಷಿಕ ಪ್ರದೇಶಗಳಿಗೆ ಸೇರಿದ ರಾಜರುಗಳು ನಮಗೆ ಸೇರಿದ ಪ್ರದೇಶಗಳನ್ನು ಆಳುತ್ತಿದ್ದರೆ ಅದನ್ನು ದ್ರೋಹವೆಂದು ಭಾವಿಸಿ ಸಂಕಟಪಡಲಾಗುತ್ತದೆ. ಟಿಪ್ಪುಸುಲ್ತಾನನು ತಿರುಚನಾಪಳ್ಳಿ, ದಿಂಡಿಗಲ್ ಮುಂತಾದ ತಮಿಳು ಪ್ರದೇಶಗಳನ್ನು ಆಳಿದರೆ ಅದು ಸಹಜವೆಂಬಂತೆ ವಿವರಿಸಲಾಗುತ್ತದೆ. ಅದೇ ತಮಿಳು ಅರಸರ ಮತ್ತು ಮೊಗಲರ ಕನ್ನಡ ಪ್ರದೇಶಗಳ ಆಳ್ವಿಕೆಯನ್ನು ಅಸಹನೆಯಿಂದ ನೋಡಲಾಗುತ್ತದೆ.

ಬಲಪಂಥೀಯ ಚರಿತ್ರೆಯ ನಿರ್ವಚನೆಯಲ್ಲಿ ನಿರಂತರವಾಗಿ ಈ ರೀತಿಯ ಪ್ರಜ್ಞೆ ನಿರ್ಮಾಣದ ಕೆಲಸ ನಡೆಯುತ್ತಿರುತ್ತದೆ. ಇದು ಕೆಲವೊಮ್ಮೆ ಯಾವ ಮಟ್ಟಕ್ಕೆ ತಲುಪುತ್ತದೆಯೆಂದರೆ ತನ್ನದಲ್ಲದ ಭಾಷಿಕ ಪ್ರದೇಶಗಳ ಲೂಟಿಯನ್ನು, ಹೆಂಗಸರ ಮೇಲಿನ ಅತ್ಯಾಚಾರಗಳನ್ನು, ಕೊಲೆಯನ್ನು, ಕ್ಷಾತ್ರತೇಜವೆಂದು ಕೀರ್ತಿಸಲಾಗುತ್ತದೆ. ಹಾಗಾಗಿಯೇ 'ಹಿಂದೂ'ಗಳೆಂದು ಹೆಮ್ಮೆಯಿಂದ ಹೇಳಿಕೊಳ್ಳುವ ಮರಾಠರು, ತನ್ನದೇ ಪಂಥಕ್ಕೆ ಸೇರಿದ ಶೃಂಗೇರಿ ದೇವಾಲಯುವನ್ನು ಅದು ಬೇರೊಬ್ಬ ರಾಜನ ಪ್ರದೇಶದಲ್ಲಿದೆಯೆಂಬ ಕಾರಣಕ್ಕೆ ಕೊಳ್ಳೆಹೊಡೆಯುತ್ತಾರೆ. ಮತೀಯವಾದಿ ಚರಿತ್ರಕಾರರು ಇದನ್ನು ಬೈಪಾಸು ಮಾಡುವ ವಿಧಾನ ಬಳಸುತ್ತಾರೆ.

ಈ ವಿಧಾನವು 'ಭೂಪಟ'ದ ಚಿಂತನೆಯೂ ಕೂಡ ಕೆಲಸ ಮಾಡುತ್ತಿರುತ್ತದೆ. 'ಅನ್ಯಭಾಷಿಕ' ಸಮುದಾಯ ತನಗೆ ಸೇರಿದ ಭೂಪ್ರದೇಶದಲ್ಲಿರುವುದು, ವಿವಾದವೆಂದು ಭಾವಿಸುವುದಿಲ್ಲ ಅಥವಾ ಅದನ್ನು ಕ್ರೂರವಾಗಿ ಅರಗಿಸಿಕೊಳ್ಳಲು ಪ್ರಯತ್ನಿಸುತ್ತದೆ. ಆದರೆ ತನ್ನ ಪ್ರದೇಶದ ಭಾಷಿಕರು ಅನ್ಯರಿಗೆ ಸೇರಿದ ಭೂಪ್ರದೇಶದಲ್ಲಿದ್ದರೆ ಅದು ತನಗೆ ಸೇರಬೇಕಾದ್ದೆಂದು ಹಕ್ಕು ಪ್ರತಿಪಾದನೆ ಮಾಡುತ್ತದೆ. ಈ ಚಿಂತನೆಯನ್ನು ಆಳುವ ವರ್ಗಗಳು ನಿರಂತರ ಪೋಷಿಸುತ್ತಲೇ ಬರುತ್ತವೆ. ಜನತೆಯ ಬಿಕ್ಕಟ್ಟುಗಳನ್ನು ಅವು ತನ್ನ ರಾಜಕೀಯ ಲಾಭವಾಗಿ ಪರಿವರ್ತಿಸಲು ಪ್ರಯತ್ನಿಸುತ್ತಿರುತ್ತವೆ. ವಸಾಹತುಶಾಹಿ ಆಡಳಿತದ ಮುಖ್ಯ ಲಕ್ಷಣ ಇದೇ ಥರದ್ದು.

ಡಾ.ಎಂ.ಚಿದಾನಂದಮೂರ್ತಿಯವರ ಭೂಪ್ರದೇಶ ಕುರಿತ ಚಿಂತನೆಗಳಿಗೆ ಮೇಲಿನ ಎಲ್ಲ ಆಯಾಮಗಳು ಇವೆ. ಇದನ್ನು 'ಅತಿರೇಕವಾದಿ ರಾಷ್ಟ್ರೀಯತಾ' ಚಿಂತನೆ ಎಂದೂ ವ್ಯಾಖ್ಯಾನಿಸಲು ಸಾಧ್ಯವಿದೆ. ಅವರ ಮಾತುಗಳಲ್ಲೇ ನೋಡುವುದಾದರೆ -

"ಕನ್ನಡಿಗರಿಗೆ ಕರ್ನಾಟಕವನ್ನು ದುರ್ಬಲಗೊಳಿಸಿ ಕಟ್ಟುವ ಭಾರತ ಬೇಕಾಗಿಲ್ಲ. ಸಂಪದ್ಭರಿತ ಸಂಸ್ಕೃತಿ ಸಂಪನ್ನ ಕರ್ನಾಟಕವು ಮಾತ್ರ ಕನ್ನಡಿಗರ ವೈಶಿಷ್ಟ್ಯವನ್ನು ಕಾಪಾಡಬಲ್ಲುದು. ಕನ್ನಡ ಇತಿಹಾಸದಿಂದ ಕಲಿಯಬೇಕಾದ ದೊಡ್ಡ ಪಾಠವಿದೆ. ಕ್ರಿ.ಶ. ೧೫೬೫ರಲ್ಲಿ ವಿಜಯನಗರ ಸಾಮ್ರಾಜ್ಯವು ಮಣ್ಣು ಪಾಲಾದ

ರಕ್ಕಸತಂಗಡಿ ಯುದ್ಧದ ಬಳಿಕ ಕನ್ನಡಿಗನಿಗೆ ಜೀವ ಸತ್ವವನ್ನು ಒದಗಿಸುತ್ತಿದ್ದ ದೊಡ್ಡ ರಾಜಮನೆತನಗಳು ಮರೆಯಾದವು. ಅಲ್ಲಿಂದ ಇಪ್ಪತ್ತನೆಯ ಶತಮಾನದವರೆಗೆ ಚರಿತ್ರೆಯ ಘಟನೆಗಳು ಕನ್ನಡಿಗರನ್ನು ಅಧೀರರನ್ನಾಗಿ ಮಾಡಿದವು. ಕರ್ನಾಟಕವು ಅನ್ಯಭಾಷೀಯರ ಆಡೊಂಬೊಲವಾಯಿತು. ಅನಂತಪುರ, ಸೇಲಂ, ನೀಲಗಿರಿ, ಕಾಸರಗೋಡು, ಗೋವಾ, ಔರಂಗಾಬಾದ್, ಸೊಲ್ಲಾಪುರ, ಕೊಲ್ಲಾಪುರ, ನಾಂದೇಡ್ ಇವೇ ಮೊದಲಾದ ಪ್ರದೇಶಗಳಲ್ಲಿ ಅನ್ಯಭಾಷೀಯರು ಹೆಚ್ಚಿನ ಸಂಖ್ಯೆಯಲ್ಲಿ ನೆಲೆಯೂರಿ ಅವು ಕನ್ನಡಿಗರ ಕೈತಪ್ಪಿದುವು. ಕನ್ನಡಿಗ ತನ್ನತನದ ಬಗ್ಗೆ ಇದ್ದ ಜಾಗೃತಿಯನ್ನು ಕಳೆದುಕೊಂಡ ಫಲ ಇದು. ಅತಿ ವಲಸೆಯಿಂದಾಗಿ ಕರ್ನಾಟಕದಲ್ಲೇ ಇರುವ ಬೆಳಗಾವಿಯ ಪರಿಸ್ಥಿತಿ ನೋಡಿ ಏನಾಗಿದೆ."[೨೧]

ಚಿದಾನಂದ ಮೂರ್ತಿಯವರಿಗೆ ಕನ್ನಡದ ವೈಭವ ವಿಜಯನಗರ ಪತನವಾದ ೧೫೬೫ನೇ ವರ್ಷಕ್ಕೆ ನಿಂತು ಹೋಗುತ್ತದೆ. ಅಲ್ಲಿಂದಾಚೆಗೆ ಕನ್ನಡ ಪ್ರದೇಶ ಮತ್ತು ಭಾಷೆ, ಸಂಸ್ಕೃತಿಗಳೆಲ್ಲ ಅಧಃಪತನದ ಕಡೆಗೆ ಸರಿದುಹೋಗುತ್ತವೆ. 'ಗತ'ದ ಕುರಿತು ಮಹಾವ್ಯಾಮೋಹಿಯಾಗಿ ಬರೆಯುವ ಚಿದಾನಂದ ಮೂರ್ತಿಯವರಿಗೆ ವರ್ತಮಾನವೆನ್ನುವುದು ಬರೀ ದುಃಖಗಳೇ, ಅವಮಾನಗಳೇ ತುಂಬಿರುವ ಸಂಗತಿಯಾಗಿ ಭಾಸವಾಗುತ್ತದೆ. ಅಲ್ಲದೆ ಚರಿತ್ರೆಯನ್ನು ಶಾಸನಗಳ ಆಧಾರದ ಮೇಲೆ ನೋಡಿದ್ದರಿಂದ ಸಿಕ್ಕ ಸತ್ಯಗಳಿವು. ಆಶ್ಚರ್ಯವೆಂದರೆ ವಿಜಯನಗರ ಕಾಲದ ಭೂಪಟ ನೋಡಿದರೆ ಹಂಪಿ (ವಿಜಯನಗರದ ರಾಜಧಾನಿ)ಯಿಂದ ಐವತ್ತು-ಅರವತ್ತು ಕಿಲೋಮೀಟರುಗಳಾಚೆಗೆ ಬಿಜಾಪುರ ಸುಲ್ತಾನರ ಬಹುಮನಿ ಅರಸರ ಸಾಮ್ರಾಜ್ಯ ಆರಂಭವಾಗುತ್ತದೆ. ಆ ಅರಸರೂ ಬಹುಪಾಲು ಮಹಾರಾಷ್ಟ್ರಕ್ಕೆ ಸೇರಿದ ಭೂಪ್ರದೇಶವನ್ನು ಆಳಿದವರು. ಶಂಬಾ ಜೋಶಿಯವರ ಸಂಶೋಧನೆ ಹೇಳುವುದೇನೆಂದರೆ, ವಿಜಯನಗರದ ಅರಸರೂ ಮರಾಠಿಯ ಪೋಷಕರಾಗಿದ್ದರು, ಮರಾಠಿಯನ್ನು ಕನ್ನಡ ಪ್ರದೇಶದಲ್ಲಿ ಬೆಳೆಸಿದವರು ಅವರೆ ; ತನಗೆ ಬೇಕಾದ ಸಂಗತಿಗಳನ್ನು ಆರಿಸಿಕೊಳ್ಳುವ ರಾಜಕಾರಣ ಮಾಡುವುದರಿಂದ ಈ ವೈರುಧ್ಯಗಳನ್ನು ಚಿಮೂ ಮಾದರಿ ಜಾಣತನದಿಂದ ಬಿಟ್ಟುಕೊಡುತ್ತದೆ.

ಚಿದಾನಂದ ಮೂರ್ತಿಯವರ ಈ ನಿಲುವುಗಳು ಕನ್ನಡ ಚಿಂತನ ಪರಂಪರೆಗೆ ನೂತನ ಸೇರ್ಪಡೆಗಳು. ಅಲ್ಲದೆ ಕನ್ನಡ ಕಟ್ಟುವ ಕಾಲದ ಚಿಂತಕರ ಚಿಂತನೆಗಳ ಜೊತೆಗೆ ನಿಲ್ಲದೆ ಸ್ವಲ್ಪ ಕುರೂಪಿಯಾಗಿಯೂ ಕಾಣುತ್ತವೆ. ಅನ್ಯರ ಕುರಿತಾದ ಮಹಾ ಅಸಹನೆ ಮತ್ತು ಆತಂಕಗಳಲ್ಲೇ ಈ ಚಿಂತನೆ ಬೆಳೆಯುತ್ತಾ ಹೋಗುತ್ತದೆ ಮತ್ತು ಸ್ವಭಾವದಲ್ಲಿ ವಿಸ್ತರಣವಾದಿ ಧೋರಣೆಯುಳ್ಳದ್ದಾಗಿ ಕಾಣುತ್ತದೆ. 'ಬೃಹತ್ ಕರ್ನಾಟಕ ಕಲ್ಪನೆ' ಚಿದಾನಂದ ಮೂರ್ತಿಯವರದು. ಆರ್.ಎಸ್.ಎಸ್. ಮಂಡಿಸುವ ಬೃಹತ್ ಭಾರತವಾದಿ ಭೂಪಟವಾದಿ ಚಿಂತನೆಯಂತೆಯೇ, ಚಿದಾನಂದ ಮೂರ್ತಿಯವರ ಚಿಂತನೆ ಎನ್ನಿಸುತ್ತದೆ. ಆದರೆ ಹಿಂದುತ್ವ ಪ್ರತಿಪಾದಿಸುವ ಸಂಘಟನೆಗಳು ಭಾರತವನ್ನು ಅಖಂಡ ಎಂದು ಯಾವುದನ್ನು ಪ್ರತಿಪಾದಿಸುತ್ತವೆಯೋ ಆ ಕಲ್ಪನೆಯನ್ನೂ ಚಿದಾನಂದ ಮೂರ್ತಿಯವರು ಪ್ರಶ್ನಿಸುತ್ತಿದ್ದಾರೆ. ಅಖಂಡದ ಕಲ್ಪನೆಯೇ ದ್ರೋಹದ ಕಲ್ಪನೆಯೆಂದೂ, ಅದು ಹುನ್ನಾರಗಳಿಂದ ಹುಟ್ಟಿದುದೆಂದೂ ಅವರು ವ್ಯಾಖ್ಯಾನ ಮಾಡುತ್ತಾರೆ. ಇಲ್ಲೆಲ್ಲ ಚಿದಾನಂದ ಮೂರ್ತಿಯವರು 'ಅಖಂಡ' ಕಲ್ಪನೆಯು ತೆಕ್ಕೆಗೆ ಸಿಕ್ಕದೆ ಹೋರಾಡುವವರಂತೆ ವರ್ತಿಸುತ್ತಾರೆ. ಅನ್ಯಭಾಷೆ, ಭಾಷಿಕರು ಕರ್ನಾಟಕಕ್ಕೆ ಅದರಲ್ಲೂ ಬೆಂಗಳೂರಿಗೆ ವಲಸೆ ಬರುತ್ತಿರುವುದನ್ನು ವಿರೋಧಿಸುವ ಸಂದರ್ಭದಲ್ಲಿ ಹುಟ್ಟಿದ

ಪ್ರತಿಕ್ರಿಯೆಯೆಂಬಂತೆ ಮೇಲಿನ ಮಾತುಗಳು ಕಾಣಿಸಿದರೂ, ಇವು ಅವರ ಚಿಂತನೆಗಳನ್ನು ರೂಪಿಸಿದ ಆಕೃತಿಗಳ ಸಮಸ್ಯೆಯೂ ಆಗಿ ಕಾಣುತ್ತದೆ. ಶಾಸನ ಮುಂತಾದ ಪ್ರಭುತ್ವಗಳ 'ಗಾಥೆ'ಗಳನ್ನು ಸಾಂಸ್ಕೃತಿಕವಾಗಿ ನೋಡಿರುವ ದೃಷ್ಟಿಕೋನದಲ್ಲೆ ಕೆಲವು ಊನಗಳಿರುವಂತೆ ಕಾಣಿಸುತ್ತದೆ. ಹಾಗಾಗಿ ವರ್ತಮಾನ ಅವರನ್ನು ತೀವ್ರವಾಗಿ ಕೆರಳಿಸುತ್ತದೆ. ಆದ್ದರಿಂದ ಅಸ್ಸಾಮಿನ ಧೀರ ಯುವಕರ ಮಾದರಿಯ ಹೋರಾಟದ ಅಗತ್ಯವೆಂದು ಅವರು ಪ್ರತಿಪಾದಿಸುತ್ತಾರೆ. ಅಂದರೆ ರಕ್ತಪಾತಕ್ಕೆ ಸಿದ್ಧರಾಗಿ ಎಂಬುದೇ ಆ ಕರೆಯ ಮೂಲ ಅರ್ಥ. ಈ ಸಿದ್ಧಾಂತಕ್ಕೆ ಗಡಿಯಾಚೆಗಿರುವವನನ್ನು ಶತ್ರುವಾಗಿ ಮಾತ್ರ ಕಲ್ಪಿಸಿ ಗೊತ್ತು. ಅಲ್ಲಿ ಆಳುವವರು -ದುಡಿಯುವವರು ಯಾರು ಎನ್ನುವುದು ಅಪ್ರಸ್ತುತ. ಹಾಗಾಗಿ ದುಡಿಯುವ ಅಸಹಾಯಕ, ಯಾವ ರಕ್ಷಣೆಯೂ ಇಲ್ಲದ ಸಮುದಾಯದ ಜನ ಸುಲಭವಾಗಿ ಪ್ರಾಣವನ್ನು ಕಳೆದುಕೊಳ್ಳುವುದೊ, ಕೈಕಾಲು ಕತ್ತರಿಸಿಕೊಂಡು ಅಂಗ ವಿಕಲರಾಗುವುದೊ, ಆಸ್ತಿ-ಪಾಸ್ತಿ ಕಳೆದುಕೊಳ್ಳುವುದೊ ಆಗುತ್ತದೆ. ಅದು ಚಿದಾನಂದಮೂರ್ತಿಯಂಥವರಿಗೆ 'ವೀರತ್ವ' ಮರಳಿ ಪಡೆಯುವ ದೀಕ್ಷೆ ತೊಟ್ಟಿರುವುದರಿಂದ ಸಹಜವಾಗಿ ಹೆಮ್ಮೆಯ ವಿಷಯವಾಗುತ್ತದೆ. ಹಾಗಾಗಿ ಭೀಕರವಾದ, ಅಮಾನುಷವಾದ ಕ್ರೌರ್ಯಕ್ಕೆ ಈ ಸಿದ್ಧಾಂತ ಕಾವು ಕೊಡುತ್ತಾ ಕೂತಿರುತ್ತದೆ.

ಸಹಜವಾಗಿಯೇ ಭವಿಷ್ಯದ ಕರ್ನಾಟಕ ಯಾವ ರೀತಿಯದು ಇತ್ಯಾದಿಗಳಿಗೆ ಉತ್ತರವಿರುವುದಿಲ್ಲ. ಇಲ್ಲಿ ತನ್ನೊಳಗಿನ ವರ್ಗ ವೈರುಧ್ಯಗಳನ್ನು ಮರೆಮಾಚಲಾಗುತ್ತದೆ. ಜಾತಿ, ಲಿಂಗ ಮುಂತಾದ ತರತಮ ಭಾವನೆಗಳನ್ನು ಮರೆತಂತೆ ಈ ಸಿದ್ಧಾಂತ ವರ್ತಿಸುತ್ತದೆ. ಆಗಿ ಹೋದ ಕಾಲದ ನೆನಪುಗಳು ಹೆಮ್ಮೆಯಾಗಿ ಕಾಣತೊಡಗುತ್ತವೆ.

ಚಿದಾನಂದ ಮೂರ್ತಿಯವರ ಸಂಶೋಧನೆ ಕನ್ನಡ ಗಡಿಗಳನ್ನು ಗುರುತಿಸುವುದು ಮತ್ತು ವ್ಯಾಖ್ಯಾನ ಮಾಡುವುದು ಅಷ್ಟೇ ಅಲ್ಲ. ಅದು ಪೂರ್ವ ಭಾರತವನ್ನು ವ್ಯಾಪಿಸಿ ನೇಪಾಳದವರೆಗೆ ಕನ್ನಡ ರಾಜರ ಆಳ್ವಿಕೆಯನ್ನು ವಿಸ್ತರಿಸುತ್ತಾರೆ. ನೇಪಾಳದ ಅನೇಕ ಕಡೆ ಕನ್ನಡದ ಅದರಲ್ಲೂ ಶೈವ-ವೀರಶೈವದ ಕುರುಹುಗಳನ್ನು ಪತ್ತೆ ಹಚ್ಚುತ್ತಾರೆ. ಈ ಎಲ್ಲ ಕೆಲಸಗಳೂ ಅವರಿಗೆ ಹೆಮ್ಮೆಯ ಸಂಗತಿಗಳಾಗುತ್ತವೆ. ಈ ಹುಡುಕಾಟಗಳು ವಿಸ್ತರಣವಾದಿ ಹುಡುಕಾಟಗಳ ಫಲವೇ? ಅದಷ್ಟೇ ಇರಲಿಕ್ಕಿಲ್ಲ ಎನಿಸುತ್ತದೆ.

**೨.೭ ಭೂಪ್ರದೇಶ ಕುರಿತಂತೆ ಕರ್ನಾಟಕ ವಿಮೋಚನಾರಂಗದ ನಿಲುವು**

ಈ ಸಂಘಟನೆಯು ಗಡಿ ಮತ್ತು ಭೂಪ್ರದೇಶಗಳನ್ನು ಕುರಿತು ಕೆಲವು ಪ್ರಾಯೋಗಿಕ ಎನ್ನಬಹುದಾದ ಸಲಹೆಗಳನ್ನು ಸೂಚಿಸುತ್ತದೆ. ಮುಖ್ಯವಾಗಿ, ಗಡಿ ಸಮಸ್ಯೆ. ಗಡಿವಿಂಗಡಣೆಯೇ ಅವೈಜ್ಞಾನಿಕವಾಗಿರುವುದರಿಂದ ಹುಟ್ಟುವಾಗಲೆ ದೋಷಗಳನ್ನು ಆಧರಿಸಿ ಹುಟ್ಟಿದೆ, ಹಾಗಾಗಿ ಅದನ್ನು ಸರಿಯಾದ ಮಾನದಂಡ ಅನುಸರಿಸಿ ಬಗೆಹರಿಸುವುದು. ಎರಡನೆಯದು, ಬಂಡವಾಳಶಾಹಿ ಹಿತಾಸಕ್ತಿಗಳಿಂದ ಮತ್ತು ಕೇಂದ್ರೀಕರಣಗೊಂಡ ಯೋಜನೆಗಳಿಂದಾಗಿ ವಲಸೆ ಸಮಸ್ಯೆ ಇದೆ. ಅದನ್ನು ಗಮನಿಸದೆ ಆಳುವ ಪ್ರಭುತ್ವಗಳು ಸಾಮಾನ್ಯ ಜನರ ನಡುವಿನ ಸಂಘರ್ಷವಾಗಿ ಮಾರ್ಪಡಿಸುತ್ತಿವೆ. ಮೂರನೆಯದಾಗಿ ಕರ್ನಾಟಕದಲ್ಲೆ ಅಸ್ತಿತ್ವದಲ್ಲಿರುವ ಕೊಡವ ಮತ್ತು ತುಳು ಸಮುದಾಯಗಳು ಸಾಂಸ್ಕೃತಿಕವಾಗಿ, ಭಾಷಿಕವಾಗಿ ಪ್ರತ್ಯೇಕ ಅಸ್ತಿತ್ವ ಹೊಂದಿವೆ. ಹಾಗಾಗಿ

ಅವು ಆರ್ಥಿಕ, ರಾಜಕೀಯವಾಗಿ 'ಸ್ವಯಂ ಆಡಳಿತ ಪ್ರತಿಪಾದಿಸುವುದಾದರೆ ಅದನ್ನು ನಿರಾಕರಿಸುವುದು ಅಪ್ರಜಾತಾಂತ್ರಿಕವಾಗುತ್ತದೆ. ಈ ಮೂರು ಆಶಯಗಳ ಮೇಲೆ ಕವಿರಂ ತನ್ನ ಚಿಂತನೆಯನ್ನು ಕಟ್ಟುತ್ತದೆ. ಜನತೆಯ ಭಾವನಾತ್ಮಕ ವಿಚಾರಗಳಾಗಿ ಪರಿವರ್ತಿಸಿರುವ ಭೂಪ್ರದೇಶ ಕುರಿತ ನಿಲುವುಗಳ ಹಿಂದೆ ಇರುವ ಆರ್ಥಿಕ-ರಾಜಕೀಯ ಕಾರಣಗಳನ್ನು ತರ್ಕಬದ್ಧವಾಗಿ ಮಂಡಿಸಲು, ಪ್ರತಿಪಾದಿಸಲು ಅದು ಪ್ರಯತ್ನಿಸುತ್ತದೆ. ಈ ಮೂಲಕ ರಾಷ್ಟ್ರೀಯತಾ ಚಿಂತನೆಯಲ್ಲಿ ಭೂಪ್ರದೇಶ ಕುರಿತಂತೆ ನಡೆಯುತ್ತಿರುವ ಚರ್ಚೆಗಳಿಗೆ, ಇದು ಹೊಸ ಚಿಂತನಧಾರೆಯೊಂದನ್ನು ಜೋಡಿಸುತ್ತದೆ.

ತೊಂಬತ್ತರ ದಶಕದ ವಿವಿಧ ರೀತಿಯ ಅಸಹನೆಗಳಿಗೆ ಉತ್ತರ ಹುಡುಕುವಂತೆ ಆರಂಭಗೊಂಡ ಚಿದಾನಂದಮೂರ್ತಿಯವರ ಮತ್ತು ಕ.ವಿ.ರಂ.ನ ಚಿಂತನೆಗಳು ಸ್ವಭಾವದಲ್ಲಿ ಎರಡು ವಿರುದ್ಧ ದಿಕ್ಕುಗಳಲ್ಲಿ ನಿಲ್ಲುತ್ತವೆ. ೧. ಚಿದಾನಂದ ಮೂರ್ತಿಯವರ 'ಎಕ್ಸ್‌ಕ್ಲೂಸಿವ್ ಪಾಲಿಟಿಕ್ಸ್'ನಿಂದ ಮತ್ತು ಕ.ವಿ.ರಂ.ನ ಇನ್‌ಕ್ಲೂಸಿವ್ ಪಾಲಿಟಿಕ್ಸ್‌ನಿಂದ ಇಲ್ಲಿ ಶತ್ರುತ್ವದ ವ್ಯಾಖ್ಯಾನ ಕೂಡ ಅದಲು ಬದಲಾಗಿ ಬಿಡುತ್ತದೆ. ಒಬ್ಬರಿಗೆ ಅನ್ಯಕ್ಕೆ ಸೇರಿದವರೆಲ್ಲ ಶತ್ರುಗಳೇ. ೨. ಶತ್ರುಗಳನ್ನು ಸಾಮ್ರಾಜ್ಯಶಾಹಿ ಶಕ್ತಿಗಳವರೆಗೆ ಕ.ವಿ.ರಂ ವಿಸ್ತರಿಸುತ್ತದೆ. ಆರ್ಥಿಕ ರಾಜಕೀಯ ಹಿತಾಸಕ್ತಿಗಳಿಗಾಗಿ ಜಗತ್ತನ್ನು ದಮನಿಸುತ್ತಿರುವ ಶಕ್ತಿಗಳೇ, ಇಲ್ಲಿನ ಭಾಷಿಕ, ಭೂಪ್ರದೇಶದ, ಗಡಿಗಳ ಸಮಸ್ಯೆಗೂ ಕಾರಣ ಎನ್ನುವ ವಿಶ್ಲೇಷಣೆಯಿದು. ಗಡಿ ಸಮಸ್ಯೆ ಕುರಿತಂತೆ ಕ.ವಿ.ರಂ. ಸಂಘಟನೆಯ ನಿಲುವು ಇದು.

"೧೯೫೭ರಿಂದ ಕೇಂದ್ರದಲ್ಲಿ ಆಡಳಿತದಲ್ಲಿದ್ದ ಸರ್ಕಾರದ ವಿರುದ್ಧ ಎಲ್ಲಾ ರಾಷ್ಟ್ರೀಯತೆಗಳು ಭಾಷಾವಾರು ಪ್ರಾಂತ್ಯಗಳಿಗಾಗಿ ಸಿಡಿದೆದ್ದಾಗ ಇದಕ್ಕೆ ಮಣಿದ ನೆಹರೂ ಆಡಳಿತ ಈ ಬೇಡಿಕೆಯನ್ನು ನೆರವೇರಿಸುತ್ತಾ ಪ್ರಜ್ಞಾಪೂರ್ವಕವಾಗಿಯೆ ನೆರೆ ರಾಷ್ಟ್ರೀಯತೆಗಳ ಗಡಿ ವಿಂಗಡಿಸುವಾಗ ಅವೈಜ್ಞಾನಿಕ ಮಾನದಂಡವಾದ ತಾಲ್ಲೂಕನ್ನು ವಿಂಗಡಣೆಗೆ ಘಟಕವಾಗಿ ತೆಗೆದುಕೊಂಡು ಗಡಿಯುದ್ದಕ್ಕೂ ಅಲ್ಲಲ್ಲಿ ಬಹುಪಾಲು ಭಾಷಾ ಅಲ್ಪಸಂಖ್ಯಾತರು ವಾಸಿಸುವಂತೆ ಮಾಡಿದರು. ಈ ರೀತಿಯಲ್ಲಿ ಗಡಿ ಸಮಸ್ಯೆಗೆ ನಿಜವಾದ ಕಾರಣ ಕರ್ತರನ್ನು ಮರೆತು ಸ್ಥಳೀಯ ಹಾಗೂ ನೆರೆ ರಾಜ್ಯಗಳ ಬಂಡವಾಳಿಗರು ಇದನ್ನೂ ತಮ್ಮ ಹಿತಾಸಕ್ತಿಗಾಗಿ ಬಳಸುತ್ತಾ ಜನರ ಮಧ್ಯೆ ಅವಿಶ್ವಾಸ ಹಾಗೂ ವೈಷಮ್ಯ ಮೂಡಿಸಿ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿದ್ದಾರೆ. ಜನರ ದೃಷ್ಟಿಕೋನದಿಂದ ಗಡಿ ವಿವಾದವನ್ನು ಪರಿಶೀಲಿಸಿ ಅದನ್ನು ಸಾಧ್ಯವಾದಷ್ಟು ಬೇಗ ಬಗೆಹರಿಸಬೇಕೆ ಹೊರತು ಅದನ್ನು ಬಂಡವಾಳ ಮಾಡಿಕೊಂಡು ಭಾವೋನ್ಮಾದಿ ರಾಜಕೀಯ ನಡೆಸಬಾರದು. ಗಡಿ ವಿವಾದ ಬಳಸಿ ನೆರೆಯಲ್ಲಿರುವ ಎರಡು ಭಾಷಾ ಸಮುದಾಯಗಳು ಪರಸ್ಪರ ಕಿತ್ತಾಡುವಂತೆ ಲೂಟಿಕೋರರು ಮಾಡಿರುವ ತಂತ್ರಕ್ಕೆ ಬಲಿಯಾಗಬಾರದು."[೨೨]



ಕೇಂದ್ರ ಸರ್ಕಾರದ ಅವೈಜ್ಞಾನಿಕ ನೀತಿಯೊ ಅಥವಾ ಉದ್ದೇಶಪೂರ್ವಕ ನೀತಿಯಿಂದಾಗಿಯೊ ತಾಲ್ಲೂಕನ್ನು ವಿಂಗಡಣೆಯ ಘಟಕವನ್ನಾಗಿಸಲಾಗಿದೆ. ಹಾಗಾಗಿ ಅದನ್ನು ಶೀಘ್ರ ಬಗೆಹರಿಸದಿದ್ದರೆ ಭಾವೋನ್ಮಾದಿ ರಾಜಕಾರಣ ನಡೆಸುವುದು ಮತ್ತು ಇದರ ನೆಪದಲ್ಲಿ ಭಾಷಾ ದುರಭಿಮಾನವನ್ನು ಬೆಳೆಸಿ, ಕನ್ನಡಿಗರ ಹಾಗೂ ಉಳಿದ ಭಾಷಾ ಅಲ್ಪಸಂಖ್ಯಾತರ ನಡುವೆ ವೈಷಮ್ಯ ಮೂಡಿಸಿ ನಿಜವಾದ ಶೋಷಕರಾದ ಬಂಡವಾಳಿಗರು,

ಅಧಿಕಾರಶಾಹಿವರ್ಗಗಳು, ವಿದೇಶಿ ಹಿತಾಸಕ್ತಿಗಳು ತಮ್ಮ ಲೂಟಿಯನ್ನು ಸರಾಗಗೊಳಿಸಿಕೊಳ್ಳುತ್ತಿವೆ ಎಂದು ಕ.ವಿ.ರಂ. ಪ್ರತಿಪಾದಿಸುತ್ತದೆ. ಅಕ್ಕ ಪಕ್ಕದ ಎರಡು ರಾಷ್ಟ್ರೀಯತೆಗಳಿಗೆ ಸೇರಿದ ಆರ್ಥಿಕ ಹಿತಾಸಕ್ತಿಗಳು ತಮ್ಮ ಮಾರುಕಟ್ಟೆ ಮೇಲಿನ ಹಿಡಿತಕ್ಕಾಗಿ ಸಾಮಾನ್ಯ ಜನತೆಯನ್ನು ಸಂಘರ್ಷದ ಕಡೆಗೆ ತಳ್ಳಲಾಗುತ್ತಿದೆ ಎಂದು ಪ್ರತಿಪಾದಿಸುತ್ತದೆ. ಹಾಗಾದರೆ ಇದನ್ನು ಪರಿಹರಿಸುವುದು ಹೇಗೆ ಎಂಬ ಪ್ರಶ್ನೆ ಹುಟ್ಟುವುದು ಸಹಜ. ಕ.ವಿ.ರಂ. ಇಡುವ ಪರಿಹಾರ ಮಾರ್ಗಗಳು ಈ ರೀತಿ ಇವೆ :

"೧. ಹಳ್ಳಿಯನ್ನು ವಿಂಗಡಣೆಯ ಘಟಕವಾಗಿ ಪರಿಗಣಿಸುವುದು

೨. ಸರಳ ಭಾಷಾ ಬಹುಮತವನ್ನು ಗಮನಿಸುವುದು

೩. ಭೌಗೋಳಿಕ ಸಾಮಿಪ್ಯ

೪. ಜನಮತ ಸಂಗ್ರಹ

ಇವುಗಳ ಆಧಾರದಲ್ಲಿ ಗಡಿ ವಿವಾದವನ್ನು ಬಗೆಹರಿಸಬೇಕು. ಗಡಿ ಭಾಗಗಳಲ್ಲಿ ಸ್ವಇಚ್ಛೆಯಿಂದ ವಾಸಿಸುವ ಅನ್ಯಭಾಷಿಕರಿಗೆ ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ಅವರ ಮಾತೃ ಭಾಷೆಯ ಕಲಿಕೆಗೆ ಸೂಕ್ತ ಅವಕಾಶಗಳನ್ನು ಕಲ್ಪಿಸುವುದು. ಈ ಕ್ರಮಗಳಿಂದ ಪ್ರೇರಿತರಾಗಿ ನೆರೆ ರಾಜ್ಯಗಳಲ್ಲಿರುವ ಕನ್ನಡಿಗರಿಗೂ ಈ ಸೌಲಭ್ಯವನ್ನು ಕಲ್ಪಿಸುವುದಕ್ಕೆ ಆ ರಾಜ್ಯಗಳು ಮುಂದಾಗುತ್ತವೆ." [೨೩]

ಸದ್ಯದ ಪರಿಸ್ಥಿತಿಯಲ್ಲಿ ಕ.ವಿ.ರಂ. ಸೂಚಿಸುತ್ತಿರುವ ಈ ಮಾರ್ಗಗಳಲ್ಲಿ ಸಮಸ್ಯೆಗಳೇ ಇಲ್ಲವೆಂದಲ್ಲ, ಆದರೆ ಈ ವಿಧಾನಗಳಲ್ಲಿ ಸಮಸ್ಯೆಗಳ ಪ್ರಮಾಣ ಕಡಿಮೆ ಎನ್ನಿಸುತ್ತದೆ. ಏಕೆಂದರೆ ಒಂದೇ ಗ್ರಾಮದಲ್ಲಿ ಕನ್ನಡ ಮತ್ತು ನೆರೆರಾಜ್ಯಗಳ ಭಾಷೆ ಮಾತನಾಡುವವರ ಸಂಖ್ಯೆ ಸಮಪ್ರಮಾಣದಲ್ಲಿರಬಹುದು. ಏರು ಪೇರಾಗಬಹುದು ಇತ್ಯಾದಿ. ಜನಮತ ಸಂಗ್ರಹ, ಮತ್ತು ಭಾಷಾಬಹುಮತ ವಿಧಾನ ಕೂಡ ಪೂರ್ಣತೃಪ್ತಿಕರವಾಗಿಯೇನೂ ಇರುವುದಿಲ್ಲ. ಆದರೆ ಮೊದಲೇ ಹೇಳಿದ ಹಾಗೆ ಸದ್ಯಕ್ಕೆ ಇವೇ ಉತ್ತಮ ವಿಧಾನಗಳಂತೆ ಕಾಣುತ್ತವೆ. ಪರಸ್ಪರ ಹೊಂದಾಣಿಕೆಯ ಮೂಲಕ ಮಾತ್ರ ಈ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬಹುದೆಂದೂ ಇವು ಸೂಚಿಸುತ್ತವೆ. ರಾಜ್ಯಗಳ ಒಳಗೇ ಇರುವ ಪ್ರತ್ಯೇಕತೆಯ ಕೂಗುಗಳು ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಅಭಿವೃದ್ಧಿಗಳಲ್ಲದೆ ನಿರಂತರವಾದ ಅಸಮಾನತೆಯಿಂದ ಹುಟ್ಟಿದ ಸಮಸ್ಯೆಗಳಾಗಿವೆ ಎಂದು ಕ.ವಿ.ರಂ. ವ್ಯಾಖ್ಯಾನಿಸಿದೆ. ಅಸಮಾನ ರೀತಿಯಲ್ಲಿ ಭೂ ಹಿಡುವಳಿಗಳ ಹಂಚಿಕೆ ಆಗಿರುವುದೂ ಸಹ ಇದಕ್ಕೆ ಕಾರಣವಾಗಿದೆ. ದಕ್ಷಿಣ ಮೈದಾನದಲ್ಲಿ ಚಿಕ್ಕದೇವರಾಜ ಒಡೆಯರ್ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ಪಾಳೇಗಾರಿ ವ್ಯವಸ್ಥೆಯನ್ನು ಕೊನೆಗೊಳಿಸಿದ್ದರಿಂದ ದೊಡ್ಡಮಟ್ಟದಲ್ಲಿ ಭೂಮಾಲೀಕತ್ವ ಕಡಿಮೆಯಾಯಿತು. ಹಾಗಾಗಿ ಶೇ. ೮೫ರಷ್ಟು ಜನರು ಕೃಷಿಹಿಡುವಳಿ ಹೊಂದಿದ್ದಾರೆ. ೨೫ ಎಕರೆಗಳಿಗಿಂತ ಹೆಚ್ಚು ಜಮೀನು ಉಳ್ಳವರು ಶೇ. ೧.೪೪ರಷ್ಟು ಇದ್ದಾರೆ. ಆದರೆ ಉತ್ತರ ಮೈದಾನದಲ್ಲಿ ಜಮೀನ್ದಾರಿಕೆ ದೊಡ್ಡ ಸಮಸ್ಯೆಯಾಗಿದೆ. ೨೫ಕ್ಕಿಂತ ಹೆಚ್ಚು ಎಂದರೆ ಜಮೀನು ಉಳ್ಳವರ ಸಂಖ್ಯೆ ಶೇ. ೮-೫೨ರಷ್ಟಿದೆ. ಅಲ್ಲದೆ ಮೂರು ಸಾವಿರ ಎಕರೆಗಿಂತ ಅಧಿಕ ಭೂಮಿಯುಳ್ಳವರೂ ಇದ್ದಾರೆ. ಶೇ. ೩೧.೬೬ರಷ್ಟು ಭೂಮಿ ಕೇವಲ ಶೇ. ೮.೫೨ರಷ್ಟು ಜನರ ಬಳಿ ಇದೆ. ದಕ್ಷಿಣ ಮೈದಾನದಲ್ಲಿ ಈ ಪ್ರಮಾಣ ೧೧.೬೨ರಷ್ಟಿದೆ.

ಹಾಗಾಗಿ ಕರ್ನಾಟಕ ವಾಸ್ತವವಾಗಿ ಅಪಾರ ಅಸಮಾನತೆಯುಳ್ಳ, ರಾಷ್ಟ್ರೀಯತೆಯಾಗಿದೆ. ಉತ್ತರ ಭಾಗಕ್ಕೆ ಹೋಲಿಸಿದರೆ ದಕ್ಷಿಣ ಹಾಗೂ ಪಶ್ಚಿಮಭಾಗಗಳು ಹೆಚ್ಚು ಅಭಿವೃದ್ಧಿ ಹೊಂದಿವೆ. ಸಮಾನ ಅಭಿವೃದ್ಧಿ ಮಾನದಂಡಗಳಲ್ಲದೆ ಪ್ರತ್ಯೇಕತೆಯ ಧ್ವನಿಗಳನ್ನು ನಿರಾಕರಿಸಲು ಸಾಧ್ಯವಿಲ್ಲ ಎನ್ನುವುದು ಈ ಸಂಘಟನೆಯ ನಿಲುವಾಗಿದೆ.

೨. ಅಲ್ಲದೆ 'ತುಳು' ಮತ್ತು 'ಕೊಡವ' 'ಭಾಷಿಕ' ಸಮುದಾಯಗಳ ಪ್ರತ್ಯೇಕತೆಯನ್ನು ಮನ್ನಿಸಬೇಕಾಗುತ್ತದೆ ಎನ್ನುವುದು ಕ.ವಿ.ರಂ. ನ ನಿಲುವಾಗಿದೆ.

"ತುಳು ಹಾಗೂ ಕೊಡಗು ಜನರು ಹಲವಾರು ವರ್ಷಗಳಿಂದ ಕನ್ನಡ ರಾಷ್ಟ್ರೀಯತೆಯೊಂದಿಗೆ ಸಂಬಂಧ ಹಾಗೂ ಸಂಪರ್ಕಗಳನ್ನು ಇಟ್ಟುಕೊಂಡಿದ್ದರೂ ತಮ್ಮ ತಮ್ಮ ಭಾಷೆ ಹಾಗೂ ಸಂಸ್ಕೃತಿಯ ವಿಶಿಷ್ಟಾಂಶಗಳನ್ನು ಕಾಪಾಡಿಕೊಳ್ಳುತ್ತಾ ಬಂದಿದ್ದಾರೆ. ತುಳು ಭಾಷೆಯಲ್ಲಿ (ಕನ್ನಡ ಲಿಪಿಯಲ್ಲಿ) ಪತ್ರಿಕೆ ನಡೆಸುತ್ತಿದ್ದಾರೆ. ತುಳು ಭಾಷೆಯಲ್ಲಿ ಚಲನ ಚಿತ್ರಗಳನ್ನು ನಿರ್ಮಿಸುತ್ತಿದ್ದಾರೆ. ಕಲೆ, ಸಾಹಿತ್ಯ, ನಾಟಕೋತ್ಸವಗಳು ಹಲವಾರು ವರ್ಷಗಳಿಂದ ನಡೆಯುತ್ತಿವೆ. ತುಳು ಜನರಿಗೆ ವಿಶಿಷ್ಟವಾದ ಸಾಂಸ್ಕೃತಿಕ ಅಂಶವಾಗಿ ಯಕ್ಷಗಾನ ಇದೆ. ತುಳು ನಿಘಂಟನ್ನು ಪ್ರಕಟಿಸಿದ್ದಾರೆ. ಇದೇ ರೀತಿಯಲ್ಲಿ ಕೊಡಗಿನವರು ವಿಶಿಷ್ಟವಾದ ಭೌಗೋಳಿಕತೆ, ಭಾಷೆ, ಸಂಸ್ಕೃತಿಯನ್ನು ಹೊಂದಿದ್ದಾರೆ."[೨೪]

ಏಕೀಕರಣ ಚಳವಳಿಯನ್ನು ಮುನ್ನಡೆಸಿದ ಆಲೂರು ವೆಂಕಟರಾಯರು ಕೂಡ ತುಳು, ಕೊಡವ, ಕೊಂಕಣಿ ಭಾಷೆಗಳ ಅನನ್ಯತೆಯನ್ನು ಕಾಪಾಡಬೇಕೆಂದು ಬಹಳ ಹಿಂದೆಯೇ ಪ್ರತಿಪಾದಿಸಿದ್ದಾರೆ. ಆದರೆ ಆನಂತರದ ಕಾಲಘಟ್ಟದಲ್ಲಿ ಕುವೆಂಪುರವರಾದಿಯಾಗಿ ಕನ್ನಡ ಚಿಂತಕರು ಈ ವಿಚಾರವನ್ನು ನಿರ್ಲಕ್ಷಿಸಿ ಬಿಟ್ಟಿದ್ದಾರೆನ್ನಿಸುತ್ತದೆ. ಆದರೆ ಚಿದಾನಂದ ಮೂರ್ತಿಯವರು ಈ ಭಾಷೆಗಳಿಗೆ ಪ್ರತ್ಯೇಕ ಅಕಾಡೆಮಿಗಳ ಸ್ಥಾಪನೆಯನ್ನೂ ವಿರೋಧಿಸಿದ್ದಾರೆ. ಅವರು ಈ ಭಾಷಿಕ ಸಮುದಾಯಗಳ ಮೇಲಿನ ಕನ್ನಡದ ಯಜಮಾನಿಕೆಯನ್ನು ಸಮರ್ಥಿಸುತ್ತಿದ್ದಾರೆಂದೇ ಅರ್ಥ. ಏಕೆಂದರೆ ಹಿಂದಿಯನ್ನು ಕನ್ನಡದ ಮೇಲೆ ಹೇರಲ್ಪಟ್ಟ ಭಾಷೆ ಎನ್ನುವುದಾಗಿ ಗ್ರಹಿಸುವ ಚಿದಾನಂದ ಮೂರ್ತಿಯವರಿಗೆ ಕೊಡವ, ತುಳು ಭಾಷೆಗಳ ಮೇಲೆ ಕನ್ನಡವು ಹೇರಲ್ಪಟ್ಟ ಭಾಷೆ ಎನ್ನಿಸುವುದೇ ?

ಏನೇ ಆದರೂ ಕ.ವಿ.ರಂ. ಪ್ರತಿಪಾದಿಸುತ್ತಿರುವ ಈ ವಿಚಾರಗಳು ಕನ್ನಡದಲ್ಲಿ ವಿವಾದಕ್ಕೆ ಕಾರಣವಾದರೂ, ರಾಷ್ಟ್ರೀಯತೆಗಳು ಮತ್ತು ಗಡಿಗಳು ನಿರಂತರ ಬದಲಾಗುವ ಪ್ರಕ್ರಿಯೆಯಲ್ಲಿರುತ್ತವೆ ಎನ್ನುವ ನಿಲುವಿನಿಂದ ಹೊರಡುತ್ತದೆ. ಈ ನಿಲುವುಗಳಲ್ಲಿ ಭಾವನೆಗಳಿಗಿಂತ ತರ್ಕ ಮತ್ತು ವೈಜ್ಞಾನಿಕತೆಗೆ ಪ್ರಾಧಾನ್ಯತೆ ನೀಡಲಾಗಿದೆ.

ಭೂಪ್ರದೇಶ ಆಧಾರಿತ ಸಮಸ್ಯೆಗಳಲ್ಲಿ ಜನ ವಲಸೆಯು ಅತಿದೊಡ್ಡ ಸಮಸ್ಯೆ ಆಗಿದೆ. ಬಹುಪಾಲು ನಗರ ಕೇಂದ್ರಿತವಾದ ಈ ಸಮಸ್ಯೆ ಇಂದು ಬಹುದೊಡ್ಡ ಸಂಘರ್ಷಗಳಿಗೆ ಕಾರಣವಾಗುತ್ತಿದೆ. ವಲಸೆ ಹೆಚ್ಚಲು ಕೃಷಿ ಮತ್ತು ಸಣ್ಣ ಕೈಗಾರಿಕೆಗಳಲ್ಲಿ ಉಂಟಾಗಿರುವ ಬಿಕ್ಕಟ್ಟುಗಳೂ ಕಾರಣವಾಗಿದೆ. ಕ.ವಿ.ರಂ.ನ ಪ್ರತಿಪಾದನೆಯ ಪ್ರಕಾರ ಈ ಸಮಸ್ಯೆಗೆ ಸಾಮ್ರಾಜ್ಯಶಾಹಿ ಹಾಗೂ ಭಾರತದ ದೊಡ್ಡ ಆರ್ಥಿಕ ಹಿತಾಸಕ್ತಿಗಳ 'ಅಭಿವೃದ್ಧಿ' ಯೋಜನೆಗಳ ಕೇಂದ್ರೀಕೃತತೆಯಿಂದಾಗಿಯೂ ಈ ಸಮಸ್ಯೆಗಳು ಉದ್ಭವವಾಗಿವೆ. ಬೆಂಗಳೂರು,

ಚೆನ್ನೈ, ಅಹಮದಾಬಾದ್, ಮುಂಬಯಿ, ಕೊಲ್ಕೊತ್ತಾ, ಸೂರತ್, ಹೈದರಬಾದ್, ದೆಹಲಿ, ಗೋವಾ ಮುಂತಾದ ನಗರಗಳಿಗೆ ನಿತ್ಯವೂ ವಿವಿಧ ರಾಜ್ಯಗಳಿಂದ ಅಥವಾ ತನ್ನದೇ ರಾಜ್ಯದ ಹಳ್ಳಿಗಳಿಂದ ವಲಸೆ ನಡೆಯುತ್ತಿದೆ. ಹೊಸ ಅರಣ್ಯ ನೀತಿಗಳಿಂದ ಆದಿವಾಸಿಗಳು, ಕೃಷಿ ಬಿಕ್ಕಟ್ಟಿನಿಂದ ರೈತರು, ನಿರುದ್ಯೋಗಿ ಯುವಜನತೆ ಉದ್ಯೋಗ ಹುಡುಕಿಕೊಂಡು ನಗರಗಳ ರಸ್ತೆ, ಕಟ್ಟಡ ನಿರ್ಮಾಣ, ಹೋಟೆಲ್, ಸೆಕ್ಯೂರಿಟಿ ಗಾರ್ಡು ಮುಂತಾದ ಕ್ಷೇತ್ರಗಳಲ್ಲಿ ಅಗ್ಗದ ಕಾರ್ಮಿಕರಾಗಿ ದುಡಿಯಲು ಬರುತ್ತಿದ್ದಾರೆ.

ಎಲ್ಲ ಭಾಷಿಕ ಸಮುದಾಯಗಳು ಎದುರಿಸುತ್ತಿರುವ ಬಿಕ್ಕಟ್ಟುಗಳು ವಲಸೆ ಸಮಸ್ಯೆಯನ್ನು ಸೃಷ್ಟಿಸಿವೆ. ಆದರೆ ಭಾಷಾ ಮೂಲಭೂತವಾದಿಗಳು ಈ ಸಮಸ್ಯೆ ಅರ್ಥಮಾಡಿಕೊಳ್ಳದೆ ಸಂಘರ್ಷಮಯ ವಾತಾವರಣಕ್ಕೆ ಕಾರಣವಾಗುತ್ತಿದ್ದಾರೆನ್ನುವುದು ಕ.ವಿ.ರಂ.ನ ನಿಲುವು ; ಪ್ರಭುತ್ವಗಳು ಕೂಡ ಈ ಸಮಸ್ಯೆಯನ್ನು ಪರಿಹರಿಸುವ ಕಡೆಗೆ ಯೋಚಿಸುತ್ತಿಲ್ಲ ಎಂದು ಕ.ವಿ.ರಂ. ಪ್ರತಿಪಾದಿಸುತ್ತದೆ.

ಒಟ್ಟಾರೆ ಗಡಿ ಮತ್ತು ಭೂಪ್ರದೇಶ ಕುರಿತಂತೆ ಕರ್ನಾಟಕ ವಿಮೋಚನಾ ರಂಗವು ತನ್ನ ತರ್ಕಬದ್ಧ ನಿಲುವುಗಳಿಂದ ಕನ್ನಡ ಚಿಂತನೆಗೆ ಹೊಸದೊಂದು ಆಯಾಮವನ್ನು ದಕ್ಕಿಸಿ ಕೊಟ್ಟಿದೆ ಎಂದು ಗುರುತಿಸಬಹುದಾಗಿದೆ.

**೩.೮ ಭೂಪ್ರದೇಶ : ಸೈದ್ಧಾಂತಿಕ ಚರ್ಚೆ**

ರಾಷ್ಟ್ರೀಯತೆಗಳ ಚರ್ಚೆಯಲ್ಲಿ ನಿರ್ಣಾಯಕವಾದ ಪಾತ್ರವನ್ನು ಇಂದು ಭೂಪಟಗಳು ಮತ್ತು ಗಡಿರೇಖೆಗಳು ನಿರ್ವಹಿಸುತ್ತಿವೆ. ಬೇರೆಲ್ಲ ವಿವರಗಳು ತಮಗೆ ಬೇಕಾದ ಹಾಗೆ ರಾಷ್ಟ್ರೀಯತಾ ಚಾರಿತ್ರ್ಯವೊಂದನ್ನು ಕಟ್ಟಲು ಪ್ರಯತ್ನಿಸಿದರೆ ಸ್ವರೂಪದಲ್ಲಿ ಮೂರ್ತರೂಪಿಯಂತಿರುವ ಆದರೆ ಸ್ವಭಾವದಲ್ಲಿ ಹಾಗಲ್ಲದ ಭೂಪ್ರದೇಶದ ಚರ್ಚೆಯು ನೇರಾನೇರ ಸಮುದಾಯಗಳನ್ನು ಅಖಾಡದತ್ತ ಆಹ್ವಾನಿಸುವಂತೆ ಮಾಡುತ್ತದೆ. ಹಾಗಾಗಿಯೇ ಜಗತ್ತಿನ ಪ್ರಗತಿಪರರೆನ್ನಿಸಿಕೊಂಡ ಅನೇಕ ವಿಚಾರವಾದಿಗಳು ಭೂಪ್ರದೇಶ ಹಾಗೂ ಗಡಿ ಪ್ರದೇಶಗಳ ವಿಚಾರದಲ್ಲಿ ಆತಂಕಿತರಾಗುತ್ತಾರೆ. ಅದರೆಲ್ಲ ಇತ್ಯಾತ್ಮಕ ಗುಣಗಳನ್ನು ಮರೆತಂತೆ ನಕಾರಾತ್ಮಕ ಅಂಶಗಳ ಪಟ್ಟಿ ಮಾಡುತ್ತಾರೆ. ಭೂಪ್ರದೇಶವು ಚರಿತ್ರೆಯಲ್ಲಿ ರಕ್ತಸಿಕ್ತ ಅಧ್ಯಾಯಗಳನ್ನು ನಿರ್ಮಿಸಿದೆ ಎನ್ನುವುದು ಮಾತ್ರ ಮನಸ್ಸಿಗೆ ಥಟ್ಟನೆ ಬಂದು ನಿಲ್ಲುತ್ತದೆ. ಅದರಿಂದಾಗಿಯೇ ಗಡಿಗಳನ್ನು ಭೂಸಮುದಾಯದ ಮೇಲಿನವು ತೋರುವ ಗಾಯಗಳು ಎನ್ನುವಂತಹ ಆತ್ಯಂತಿಕ ನೇತ್ಯಾತ್ಮಕ ತೀರ್ಮಾನಕ್ಕೆ ಬರಲಾಗಿದೆ.

ಭೂಪ್ರದೇಶ ಕುರಿತಂತೆ ಪಟರೂಪ ಮತ್ತು ದಿಟರೂಪಗಳ ನಡುವಿನ ಗೆರೆಯನ್ನು ವಸಾಹತುವಾದಿ ಚರಿತ್ರೆಯು ಮಬ್ಬುಗೊಳಿಸಿಬಿಟ್ಟಿದ್ದರೂ ಕನ್ನಡದ ಚಿಂತನಾ ಪರಂಪರೆಯನ್ನು ಆಶ್ಚರ್ಯ ಹುಟ್ಟಿಸುವಷ್ಟರ ಮಟ್ಟಿಗೆ ಆರೋಗ್ಯಕರ ನಿಲುವು ಕಾಣುತ್ತದೆ. ಇಡೀ ಇಪ್ಪತ್ತನೇ ಶತಮಾನದ ಪ್ರಾತಿನಿಧಿಕ ಚಿಂತಕರ ಮೂಲಕ ನಡೆಸಿದ ಚರ್ಚೆಯಲ್ಲಿ ಆತಂಕ ಮತ್ತು ವಿಷಾದಗಳಿಗಿಂತ ಮಹಾಉದಾರತಾವಾದಿ ಆಶಯಗಳು ಕಾಣಿಸುತ್ತವೆ. ಗಡಿಯಾಚೆಗಿನ ಸಮುದಾಯಗಳನ್ನು ಶತ್ರು ಸಮುದಾಯವೆಂಬಂತೆಯೂ, ಅಲ್ಲಿನ ಚಾರಿತ್ರ್ಯ ಭಾಷೆ ಸಂಸ್ಕೃತಿ ಇತ್ಯಾದಿಗಳನ್ನು ಉಳಿಸಿಕೊಂಡು ತನ್ನೊಳಗೆ ಬದುಕುತ್ತಿರುವವರನ್ನು ಶತ್ರುಗಳೆಂತಲೇ ಬಿಂಬಿಸಿ ದ್ವೇಷ ಅಸಹನೆಯನ್ನು ಹೊತ್ತಿರುವ ವಸಾಹತುವಾದಿ ಮತೀಯವಾದಿ ಚಿಂತನೆಯು ಪ್ರಬಲವಾಗಿರುವಂತೆ ಕಂಡರೂ

ಸೈದ್ಧಾಂತಿಕವಾಗಿ ಅತ್ಯಂತ ಕ್ಷೀಣ ಧ್ವನಿಯಂತೆ ಕಾಣುತ್ತದೆ. ಈ ಧ್ವನಿ ಕಳೆದ ಶತಮಾನದ ಅಂತ್ಯದಲ್ಲಿ ತುಸು ಬಲಿಷ್ಠಗೊಂಡಂತೆ ಕಾಣುತ್ತದೆ. ಸ್ಪಷ್ಟವಾಗಿಯೇ ಇದು ವಿಭಿನ್ನ ರಾಜಕೀಯ ಹಿತಾಸಕ್ತಿಗಳಿಂದಲೂ ಸ್ವಾರ್ಥದಿಂದಲೂ ಹುಟ್ಟಿದಂತೆ ಕಾಣುತ್ತದೆ.

ಎರಡನೆಯದಾಗಿ ಒಂದೊಮ್ಮೆ ಬೃಹತ್ತಾಗಿತ್ತೆಂದೂ, ಆಳುವ ಸಮುದಾಯಗಳನ್ನು ಸೃಷ್ಟಿಸಿತ್ತೆಂದೂ ತನ್ನ ನೆಲವನ್ನು ಭಾವಿಸಿ ವಾಸ್ತವ ಸ್ಥಿತಿಯನ್ನು ಕುರಿತಂತೆ ವಿಷಾದ ಪಡುವ ಚಿಂತನೆಯೊಂದು ಕನ್ನಡದಲ್ಲಿ ತುಸು ಪ್ರಬಲವಾಗಿಯೇ ಇದೆ. ಈ ಧಾರೆಯು ತನ್ನನ್ನು ಇತ್ಯಾತ್ಮಕವಾಗಿ ಕಟ್ಟಿಕೊಳ್ಳಬಯಸುತ್ತದೆ. ಆದರೆ ವಾಸ್ತವವನ್ನು ವಿಕೃತವೆಂದು ಭಾವಿಸದೆ ತನ್ನ ಸ್ಥಿತಿಯನ್ನು ಕಂಡು ತಾನೇ ಮರುಕ ಪಡುತ್ತದೆ. ಭವಿಷ್ಯವನ್ನು ಕುರಿತು ತುಸು ಆತಂಕ ತೋರುತ್ತದೆ. ಬಹುಶಃ ಇದರ ಗರ್ಭದಿಂದಲೇ ಮೇಲಿನ ವಿದ್ವೇಷಕಾರಿ ಚಿಂತನೆಯು ಯಥೇಚ್ಛವಾಗಿ ಸತ್ವವನ್ನು ಹೀರಿಕೊಳ್ಳುತ್ತದೆ. ಅಷ್ಟರ ಮಟ್ಟಿಗೆ ಈ ಚಿಂತನಧಾರೆಯಲ್ಲಿ ಮೋಸವಿದೆ. ಉಳಿದಂತೆ ವಿರಾಟ್ ಸ್ವರೂಪದ ಆಡಳಿತ ಶಕ್ತಿಗಳ ಎದುರು ತನ್ನ ಕಲ್ಪಿತ ಅಥವಾ ದಾಖಲಿತ ಭೂಪ್ರದೇಶವನ್ನು ನಿಲ್ಲಿಸಿ ಸ್ವಾಭಿಮಾನ ಸೃಷ್ಟಿಸಲು ಯತ್ನಿಸುತ್ತದೆ. ಇದು ಸಮುದಾಯದ ನೆನಪುಗಳನ್ನು ದಕ್ಕಿಸಿಕೊಟ್ಟು ಏಕೀಕರಣಗೊಳ್ಳುವಂತೆಯೂ ಒತ್ತಾಯಿಸುತ್ತದೆ. ಮೊದಲನೆಯ ಚಿಂತನೆ ತನ್ನೊಳಗಿನ ಎಲ್ಲರೂ ತಮ್ಮನ್ನು ತ್ಯಾಗಮಾಡಿ ಬದುಕುತ್ತಿರುವ ನೆಲದ ಭಾವನೆಗಳನ್ನು ಗೌರವಿಸಬೇಕೆಂದು ಬಲಾತ್ಕರಿಸುತ್ತದೆ. ಆದರೆ ಈ ಚಿಂತನೆ ಆಧುನಿಕ ಕನ್ನಡ ನಾಡಿನ ಪಟವನ್ನು ನಿರ್ಮಿಸಲು ಯತ್ನಿಸುತ್ತಿರುವ ಸಂದರ್ಭದಲ್ಲಿ ಹರಳುಗಟ್ಟುತ್ತಿದ್ದ ಕಾರಣವಿದ್ದುದರಿಂದ, ತನ್ನೊಳಗಿನ ಸ್ವತಂತ್ರ ರಾಷ್ಟ್ರೀಯತಾ ಚಾರಿತ್ರ್ಯವನ್ನು ಹೊಂದಿರುವ ಸಮುದಾಯಗಳ ನೆಲದ ಅಸ್ಮಿತೆಯನ್ನು ನಿರಾಕರಿಸದೆ ಮಾನ್ಯಮಾಡಲು ಇದು ಪ್ರಯತ್ನಿಸುತ್ತದೆ. ಅಷ್ಟರಮಟ್ಟಿಗೆ ಇದು ಇತ್ಯಾತ್ಮಕ ಚಿಂತನೆ ಎಂದು ಆಧುನಿಕ ಚರಿತ್ರೆ ಗುರುತಿಸುತ್ತದೆ.

ಮೂರನೆಯದಾಗಿ ಮಂಡಿತವಾಗಿರುವ ಚಿಂತನೆಯನ್ನು ಕನ್ನಡ ಪ್ರಧಾನ ಚಿಂತನೆ ಎಂದು ಕರೆಯಲಾಗುತ್ತದೆ. ಪಟರೂಪವನ್ನು ಮಿಥ್ಯೆ ಎಂದು ಪ್ರತಿಪಾದಿಸುವ ರಾಷ್ಟ್ರೀಯತಾ ಚಾರಿತ್ರ್ಯವನ್ನು ಬಿಟ್ಟುಕೊಡದೆ ವಿಶ್ವಚಾರಿತ್ರ್ಯವನ್ನು ನಿರ್ಮಿಸ ಬಯಸುವ ಆಶಯವನ್ನು ವ್ಯಕ್ತಪಡಿಸುತ್ತದೆ. ದ್ವೇಷ ರಹಿತವಾದ ಈ ಚಿಂತನೆ ಮನುಷ್ಯ ಕೇಂದ್ರಿತವಷ್ಟೇ ಅಲ್ಲ, ಸಮಸ್ತ ಚರಾಚರ ಸಂಕುಲದ ಜತೆಯಲ್ಲಿಯೇ ತನ್ನನ್ನು ಗುರುತಿಸಿಕೊಳ್ಳಲು ಪ್ರಯತ್ನಿಸುತ್ತದೆ ; ಪ್ರತ್ಯೇಕವೆಂದಲ್ಲ. ಪ್ರಭುತ್ವ ಪರಿಭಾಷೆಯನ್ನು ತ್ಯಜಿಸಿ ಲೀನವಾಗುವ ಅದ್ವೈತತೆಯನ್ನು ಅದು ಪ್ರತಿಪಾದಿಸುತ್ತದೆ. ಇದು ಭಾವನಾವಾದಿಯೆಂಬಂತೆ ಕಂಡರೂ ವಾಸ್ತವದಲ್ಲಿ ದುಡಿಯುವ ಸಮುದಾಯಗಳ ಚಲನಾತ್ಮಕತೆಯನ್ನು ಕಂಡಾಗ ಅತ್ಯಂತ ವಾಸ್ತವವಾದಿಯೆನಿಸುತ್ತದೆ. ಆಳುತ್ತಿರುವ ಶಕ್ತಿಗಳ ಎದುರು ತನ್ನನ್ನು ಇಲ್ಲಿ ಸಂಘಟಿಸಿಕೊಳ್ಳ ಬಯಸುತ್ತದೆ. ಹಾಗೆಂದು ತನ್ನ ಗಡಿಯಾಚೆಗಿನ ಸಮುದಾಯಗಳನ್ನು ದ್ವೇಷಿಸದೆ ಸೋದರಭಾವದಿಂದ ನೋಡಲು ಪ್ರಯತ್ನಿಸುತ್ತದೆ. ವಸಾಹತುವಾದಿ ಚಿಂತನೆಯ ಒಡೆದು ಆಳುವ ದ್ವೈತ ತತ್ವವನ್ನು ವಿರೋಧಿಸಿ ಕಟ್ಟಿದ ಈ ಚಿಂತನೆಯು, ತನ್ನೊಳಗಿನ ಇನ್ನಿತರ ಅಸ್ಮಿತೆಗಳನ್ನು ವ್ಯಕ್ತಮಾಡಲಾಗದ ಅಥವಾ ಮರೆತಂತ ಸ್ಥಿತಿಗೆ ತಲುಪುತ್ತದೆ. ನೆಲಕ್ಕಿಂತ ಜೀವಮುಖ್ಯವೆಂದು ಪ್ರೀತಿ ತತ್ವವನ್ನು ಪ್ರತಿಪಾದಿಸಿದ ಅವಧೂತ ಚಿಂತನೆ ಈ ಧಾರೆಯ ಅಂತಃವಾಹಿನಿಯಂತೆ ಕಾಣುತ್ತದೆ. ಎಲ್ಲಿದ್ದರೂ ತನ್ನ ನೆಲವನ್ನು ಮರೆಯದ ತನ್ನ ತನವನ್ನು ಬಿಟ್ಟುಕೊಡದೆ ಎದುರಿಸುತ್ತಿರುವ ಪರಿಸರದ ಭಾವನೆಗಳನ್ನು

ಗೌರವಿಸಬೇಕೆನ್ನುವ ಈ ಚಿಂತನೆ, ಜಗತ್ತಿನ ಚಿಂತನಾ ಪರಂಪರೆಗೆ ನೀಡಿದ ದೊಡ್ಡ ಕಾಣಿಕೆ ಎಂಬಂತೆ ತೋರುತ್ತದೆ. ಕಳೆದ ಶತಮಾನದ ಕಡೆಯ ದಶಕದಲ್ಲಿ ಹುಟ್ಟಿದ ವರ್ಗಕೇಂದ್ರಿತ ಚಿಂತನೆ ಎರಡು ಮತ್ತು ಮೂರನೆಯ ಚಿಂತನೆಯನ್ನು ಬಳಸಿಕೊಂಡು ತನ್ನ ತತ್ವ ನಿರ್ಮಿಸಲು ಯತ್ನಿಸಿದಂತೆ ಕಾಣುತ್ತದೆ. ಕರ್ನಾಟಕದ ಇನ್ನಿತರೆ ಅಸ್ಮಿತೆಗಳನ್ನು ಇದು ಎತ್ತಿ ಹಿಡಿಯುತ್ತದೆ. ಇದು ಗಡಿಯಾಚೆಗಿನ ಸಮುದಾಯಗಳು ತನ್ನ ಶತ್ರುಗಳಲ್ಲ ಎಂದು ಶ್ರಮ ಕೇಂದ್ರಿತ ನೆಲ ತತ್ವವನ್ನು ಪ್ರತಿಪಾಡಿಸಲು ಯತ್ನಿಸಿದಂತೆ ತೋರುತ್ತದೆ. ಬಂಡವಾಳ ಸಂಚಯನಕ್ಕೂ ಪಟ ತತ್ವಕ್ಕೂ ಸಂಬಂಧವಿದೆಯೆಂಬ ಎಡಪಂಥೀಯ ಚಿಂತನೆಯನ್ನು ಈ ಚಿಂತನೆ ಪ್ರತಿಪಾದಿಸುತ್ತಿರುವಂತೆ ತೋರುತ್ತದೆ. ಮೂರನೆಯ ಚಿಂತನೆಯ ಜೀವ ತತ್ವವನ್ನು ಗೌರವಿಸುವ ಇಂಗಿತ ಈ ಚಿಂತನೆಗೂ ಇದೆ. ಇದೂ ಕೂಡ ಒಡಕು ಹುಟ್ಟಿಸುವ ದ್ವೇಷ ಹೆಚ್ಚಿಸುವ ಚಿಂತನೆಯನ್ನು ವಿರೋಧಿಸುತ್ತದೆ. ಆದರೆ ತನ್ನದೇ ಆದ ನೆಲ ಹಾಗೂ ಪಟ ವನ್ನು ಒತ್ತಾಯಿಸುತ್ತದೆ. ಮೊದಲನೆಯ ಚಿಂತನೆಯ ಧಾರೆಯನ್ನು ಪ್ರಬಲವಾಗಿ ವರ್ಧಿಸುತ್ತದೆ. ಹಾಗಾಗಿಯೇ ಈ ಎರಡೂ ಚಿಂತನೆಗಳ ನಡುವೆ ನಿರಂತರ ಸಂಘರ್ಷ ನಡೆದೇ ಇದೆ.

**ಕೊನೆ ಟಿಪ್ಪಣಿಗಳು**

೧. ಡಿ.ಆರ್.ನಾಗರಾಜ, ಸಂಸ್ಕೃತಿ ಕಥನ (ಸಂ) ಅಗ್ರಹಾರ ಕೃಷ್ಣಮೂರ್ತಿ, ಪುಟ ೨೭೮-೨೭೯

೨. ಆಲೂರ ವೆಂಕಟರಾಯರು, ಕರ್ನಾಟಕತ್ವದ ವಿಕಾಸ, ಪುಟ ೧೨-೧೩

೩. ಅದೇ, ಪು. ೧೩

೪. ಅದೇ, ಪು. ೧೬೨

೫. ಅದೇ, ಪು. ೧೪೮

೬. ಡಾ.ಡಿ.ಆರ್.ನಾಗರಾಜ, ಸಾಹಿತ್ಯ ಕಥನ, ಕನ್ನಡ ರಾಷ್ಟ್ರೀಯತೆಯ ಸ್ವರೂಪ ಎಂಬ ಬರಹದಿಂದ, ಪು. ೨೮೪

೭. ಆಲೂರು ವೆಂಕಟರಾಯರು, ಕರ್ನಾಟಕತ್ವದ ವಿಕಾಸ, ಪು. ೧೯೯

೮. ಅದೇ, ಪು. ೧೭೨

೯. ಬಿ.ಎಂ.ಶ್ರೀಕಂಠಯ್ಯ, ಶ್ರೀ ಸಾಹಿತ್ಯ, ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯದ ನಮ್ಮ ಕುಲ ಕನ್ನಡಕುಲ ಭಾಗದಿಂದ, ಪು. ೩೨೮

೧೦. ಅದೇ, ಪು. ೨೭೭

೧೧. ಅದೇ, ಪು. ೩೮೧

೧೨. ಕಾ.ವೆಂ.ಶ್ರೀನಿವಾಸಮೂರ್ತಿ (ಸಂ) ಕನ್ನಡ ಸಾಹಿತ್ಯ ಮತ್ತು ಕರ್ನಾಟಕತ್ವ ಕೃತಿಯ ಮುನ್ನುಡಿಯಿಂದ, ಪು. vii

೧೩. ಬಿ.ಎಂ.ಶ್ರೀಕಂಠಯ್ಯ, ಶ್ರೀಸಾಹಿತ್ಯ, ಅಶ್ವತ್ಥಾಮನ್ ನಾಟಕದಿಂದ ಪು. ೧೯೨

೧೪. ಶಂಬಾ ಜೋಶಿ, ಶಂಬಾ ಕೃತಿಸಂಪುಟ ೩, (ಸಂ) ಮಲ್ಲೇಪುರಂ ಜಿ.ವೆಂಕಟೇಶ, ಪು. ೧೮೬, ಹಾಲುಮತ ದರ್ಶನದಿಂದ

೧೫. ಅದೇ, ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ ಭಾಗದಿಂದ ಪು. ೨೫೦-೨೫೧

೧೬. ಅದೇ, ಪು. ೩೦೪

೧೭. ಕುವೆಂಪು, ಕುವೆಂಪು ಸಮಗ್ರ ಗದ್ಯ (ಸಂ) ಕೆ.ಸಿ.ಶಿವಾರೆಡ್ಡಿ, ಸಂಸ್ಕೃತಿ ಕರ್ನಾಟಕ ಬರಹದಿಂದ, ಪು. ೧೪೩-೧೪೪

೧೮. ಅದೇ, ಪು. ೧೪೩

೧೯. ಅದೇ, ಪು. ೧೪೪

೨೦. ಅದೇ, ಪು. ೧೪೫-೧೪೬

೨೧. ಅದೇ, ಪು. ೧೪೬

೨೨. ಡಾ.ಎಂ.ಚಿದಾನಂದ ಮೂರ್ತಿ, ಕನ್ನಡ ಸಂಸ್ಕೃತಿ, ನಮ್ಮ ಹೆಮ್ಮೆ, ಪು. ೨೫

೨೩. ಕರ್ನಾಟಕ ವಿಮೋಚನಾ ರಂಗ, ಪ್ರಣಾಳಿಕೆ ಹಾಗೂ ಸಂವಿಧಾನ, ಪು. ೪೧

೨೪. ಅದೇ, ಪು. ೪೧

೨೫. ಅದೇ, ಪು. ೪೫

ಅಧ್ಯಾಯ ೩

## ಕನ್ನಡ ರಾಷ್ಟ್ರೀಯತೆ : ಭಾಷಾಚಿಂತನೆ

೩.೧ ಪೀಠಿಕೆ

೩.೨ ಆಲೂರು ವೆಂಕಟರಾಯರ ಚಿಂತನೆಗಳು

೩.೩ ಬಿ.ಎಂ.ಶ್ರೀಯವರ ಚಿಂತನೆಗಳು

೩.೪ ಶಂಬಾ ಜೋಶಿಯವರ ಚಿಂತನೆಗಳು

೩.೫ ಕುವೆಂಪುರವರ ಚಿಂತನೆಗಳು

೩.೬ ಚಿದಾನಂದ ಮೂರ್ತಿಯವರ ಚಿಂತನೆಗಳು

೩.೭ ಕರ್ನಾಟಕ ವಿಮೋಚನಾ ರಂಗದ ನಿಲುವುಗಳು

೩.೮ ಚಿಂತನೆಗಳ ತೌಲನಿಕ ಸಮೀಕ್ಷೆ

## ಅಧ್ಯಾಯ ೩

# ಕನ್ನಡ ರಾಷ್ಟ್ರೀಯತೆ: ಭಾಷಾ ಚಿಂತನೆಗಳು

### ೩.೧ ಪೀಠಿಕೆ

ರಾಷ್ಟ್ರ ಮತ್ತು ರಾಷ್ಟ್ರೀಯತೆಗಳ ಹುಟ್ಟಿಗೆ ಕಾರಣಗಳೇನು? ಸ್ವಭಾವದಲ್ಲಿ ಮಾರುಕಟ್ಟೆಯನ್ನು ವಿಸ್ತರಿಸಿಕೊಳ್ಳುವುದು ಮತ್ತು ರಕ್ಷಿಸಿಕೊಳ್ಳುವುದು, ಬಂಡವಾಳವಾದದ ಜೊತೆಯಲ್ಲಿ ಈ ವ್ಯಾಖ್ಯಾನಗಳನ್ನು ಮಾಡಲಾಗುತ್ತದೆ. 'ಆಧುನಿಕ ರಾಷ್ಟ್ರ' ಎಂಬುದರ ಕಲ್ಪನೆ ಬಂಡವಾಳವಾದೀ ಯುಗದ ಅಗತ್ಯಗಳನ್ನು ಪೂರೈಸಿಕೊಳ್ಳುವುದಕ್ಕೋಸ್ಕರ ಹುಟ್ಟಿಕೊಂಡ ವ್ಯವಸ್ಥೆ ಎಂಬುದನ್ನು ಬೆನೆಡಿಕ್ಟ್ ಆಂಡರ್‌ಸನ್ ಮುಂತಾದ ಚಿಂತಕರು ಮಂಡಿಸುತ್ತಾರೆ. ಈ ವ್ಯಾಖ್ಯಾನವು ಬಹುಮಟ್ಟಿಗೆ ನಿರ್ವಿವಾದಿತ. ಆದರೆ ರಾಷ್ಟ್ರೀಯತೆಗಳು ಯಾವ ಭಿತ್ತಿಯ ಮೇಲೆ ಸಂಘಟಿತಗೊಳ್ಳುತ್ತವೆ ಎಂಬ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವುದು ಸುಲಭವಲ್ಲ. ಅತ್ಯಂತ ಜಟಿಲವೂ ಸಂಕೀರ್ಣವೂ ಆದ ಉದಾಹರಣೆಗಳನ್ನು ಜಗತ್ತಿನ ರಾಷ್ಟ್ರೀಯತೆಗಳು ಸೃಷ್ಟಿಸುತ್ತವೆ. ಬುಡಕಟ್ಟು ವ್ಯವಸ್ಥೆಯನ್ನು ಆಧರಿಸಿ ರೂಪುಗೊಂಡ ಆಫ್ರಿಕನ್ ರಾಷ್ಟ್ರಗಳು, ಯುರೋಪಿನ ದೇಶಗಳಿಗೆ ಸುದೀರ್ಘ ಕಾಲ ವಸಾಹತುಗಳಾಗಿದ್ದ ತನ್ನ ಭಾಷೆ, ಸಂಸ್ಕೃತಿಗಳು ತನ್ನ ಕಣ್ಣ ಮುಂದೆಯೇ ಹತ್ಯೆಗೀಡಾಗುತ್ತಿದ್ದುದನ್ನು ಸಹಿಸಿಕೊಂಡು ಸುಮ್ಮನಿರಬೇಕಾಯಿತು. ಈ ಸ್ಥಿತಿಯಲ್ಲಿಯೇ ರೂಪುಗೊಂಡ ದಕ್ಷಿಣ ಅಮೆರಿಕ ರಾಷ್ಟ್ರಗಳಿವೆ ; ಜನಾಂಗದ ಆಧಾರದ ಮೇಲೆ ರಾಷ್ಟ್ರದ ಹಕ್ಕನ್ನು ಪ್ರತಿಪಾದಿಸುತ್ತಿರುವ ಇಸ್ರೇಲ್ ಪ್ಯಾಲಸ್ತೈನ್‌ಗಳಿವೆ ; ಪೂರ್ವಶ್ರೀಲಂಕಾದ ತಮಿಳರು ಇದ್ದಾರೆ. (ಪ್ಯಾಲಸ್ತೈನ್-ಇಸ್ರೇಲ್‌ಗಳಲ್ಲಿ ಕೇವಲ 'ಜನಾಂಗದ' ಆಧಾರಗಳಿಗಿಂತ ಜಟಿಲವೂ, ಸಂಕೀರ್ಣವೂ ಆದ ನೆನಪುಗಳ ಗಾಯದ ಸಮಸ್ಯೆಯೂ ಇದೆ. ಅಮೆರಿಕ, ಯುರೋಪ್‌ಗಳ ಆರ್ಥಿಕ, ರಾಜಕೀಯ, ಧಾರ್ಮಿಕ ಕಾರಣಗಳೂ ಕ್ರಿಯಾಶೀಲವಾಗಿವೆ.) ಅಲ್ಲದೆ ಸಮುದಾಯಗಳು ಧರ್ಮಗಳ ಆಧಾರದ ಮೇಲೆಯೂ, ಭಾಷೆಯ ಆಧಾರದ ಮೇಲೆಯೂ ವಸಾಹತುಶಾಹಿಯ ವಿರುದ್ಧ ಸಂಘಟಿತವಾದ ರೀತಿಯನ್ನು ನೋಡಬಹುದು.

ಆದರೆ ಭಾರತದಲ್ಲಿನ ಸಮಸ್ಯೆ ಇಷ್ಟೊಂದು ಸಂಕೀರ್ಣತೆಗಳನ್ನು ಒಳಗೊಂಡಿದೆಯೇ? ಯಾವ ರೀತಿ ನೋಡಿದರೂ ಒಂದು ಉಪಖಂಡದಂತೆ ಕಾಣುವ ಇಲ್ಲಿ 'ಭಾಷೆಯ' ಚಹರೆಗಳೇ ಪ್ರಧಾನವಾದ ಮಾನದಂಡಗಳೇ? ಈಶಾನ್ಯ ಭಾರತ, ಕಾಶ್ಮೀರ, ದಕ್ಷಿಣ ಭಾರತ, ಮಧ್ಯಭಾರತಗಳಲ್ಲಿ ಸಾಮಾಜಿಕ ಅಸಮಾನತೆಯ ಜೊತೆಗೆ ಸಂಸ್ಕೃತಿ ಮತ್ತು ಜನಾಂಗಗಳ ಆಯಾಮವೂ ಇದೆ ಅಲ್ಲವೇ? ಎನ್ನುವ ಪ್ರಶ್ನೆಗಳು ಹುಟ್ಟುತ್ತವೆ.

ಪ್ರಧಾನವಾಗಿ 'ಭಾಷಾ ಚಹರೆ'ಗಳ ಮೇಲೆಯೇ ಭಾರತದ ರಾಷ್ಟ್ರೀಯತೆಗಳು ರೂಪುಗೊಂಡಿವೆ. ೧೯೦೫ ರಲ್ಲಿ ಬ್ರಿಟಿಷ್ ಗವರ್ನರನಾಗಿದ್ದ ಲಾರ್ಡ್‌ಕರ್ಜನನ 'ಬಂಗಾಳ ವಿಭಜನೆ' ಘಟನೆಯಿಂದ, ಎಲ್ಲರೂ ತಮ್ಮ ತಮ್ಮ ಭಾಷಿಕರನ್ನು ಸಂಘಟಿಸಿ ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುವುದರ ಜೊತೆಗೆ, ದೊಡ್ಡ ಶತ್ರುಗಳನ್ನು ಎದುರಿಸಲು ಸೋದರ ರಾಷ್ಟ್ರೀಯತೆಗಳ ಸಮುದಾಯಗಳೊಂದಿಗೆ ಸೇರಿಯೇ ಹೋರಾಟಗಳು ರೂಪುಗೊಂಡಿದ್ದವು. ಕರ್ನಾಟಕದಲ್ಲಿ ಅದಕ್ಕೂ ಮೊದಲೇ ೧೮೯೦ರ ಸುಮಾರಿಗೆ 'ವಿದ್ಯಾವರ್ಧಕ ಸಂಘ'ದಂತಹ ಚಟುವಟಿಕೆಗಳ ಮೂಲಕ 'ಕರ್ನಾಟಕ'ದ ಅಸ್ಮಿತೆಯನ್ನು ಪ್ರತಿಷ್ಠಾಪಿಸಲು ಯತ್ನಿಸಲಾಗುತ್ತಿತ್ತು.

ಸಮೃದ್ಧ ಇತಿಹಾಸದ ಪ್ರತೀಕಗಳಂತೆ ಭಾಷೆ, ಸಂಸ್ಕೃತಿಗಳು ಭಾರತದಲ್ಲಿ ರಾಷ್ಟ್ರೀಯತಾ ನಿರ್ಮಾಣದಲ್ಲಿ ಪ್ರಧಾನ ಪಾತ್ರ ವಹಿಸುತ್ತಿವೆ. ಸೈಮನ್ ಆಯೋಗಕ್ಕೆ ಕನ್ನಡದ ಏಕೀಕರಣ ಚಳವಳಿಯ ನಾಯಕರು ಕೊಟ್ಟ ಮನವಿಯಲ್ಲಿ ಭಾಷೆ ಆಧರಿಸಿಯೇ ಏಕೀಕರಣವಾಗಬೇಕೆಂಬ ಮನವಿಯನ್ನು ಸಹ ಗಮನಿಸಬಹುದಾಗಿದೆ.

ರಾಷ್ಟ್ರೀಯತೆಗಳ ಅಧ್ಯಯನಕ್ಕೆ ಭಾಷೆಯನ್ನು ಕುರಿತಂತೆ ಭಾಷಾ ವಿಜ್ಞಾನದ ಸಾಮಾನ್ಯ ವ್ಯಾಖ್ಯಾನಗಳು ಪ್ರಯೋಜನಕ್ಕೆ ಒದಗುವುದಿಲ್ಲ. ಇದಕ್ಕೆ ಬೇರೆಯದೇ ನುಡಿಗಟ್ಟಿನ ಆವಶ್ಯಕತೆ ಕಾಣುತ್ತದೆ. ಸ್ವತಂತ್ರ ನೆಲೆಗಟ್ಟಿನ ಮೇಲೆ ಅನನ್ಯತೆಯನ್ನು ರೂಪಿಸಿಕೊಳ್ಳಲು ಯತ್ನಿಸುತ್ತಿರುವ ರಾಷ್ಟ್ರೀಯತೆಗಳು, ಭಾಷೆ ಕುರಿತಂತೆ ಮೂರು ನೆಲೆಗಟ್ಟಿನ ಮೇಲೆ ಕ್ರಿಯಾಶೀಲವಾಗಿವೆ.

೧. ತನ್ನನ್ನು ದಮನಿಸುತ್ತಿರುವ 'ವಿರಾಟ್' ಸ್ವರೂಪದ ಶತ್ರುವಾಗಿರುವ ಅಧಿಕಾರಸ್ಥ ಭಾಷೆಯ ಯಜಮಾನಿಕೆಯನ್ನು ನಿರಾಕರಿಸುವುದು. ಉದಾಹರಣೆಗೆ ಇಂಗ್ಲೀಷ್, ಹಿಂದಿ, ಸಂಸ್ಕೃತಗಳ ಜೊತೆಗೆ ಗಡಿ ಪ್ರದೇಶಗಳಲ್ಲಿ ನೆಲೆಸಿರುವ ಕನ್ನಡಿಗರು ಮರಾಠಿ, ತಮಿಳು, ತೆಲುಗು, ಮಲಯಾಳಂಗಳನ್ನು ವಿರೋಧಿಸುವ ನೆಲೆ.

೨. ಅಧಿಕಾರಸ್ಥ ಭಾಷೆಯನ್ನು ವಿರೋಧಿಸುತ್ತಲೇ ತನ್ನೊಳಗೆ ಸ್ವಲ್ಪ ಪ್ರಬಲವಾಗಿರುವ ಭಾಷೆಯನ್ನು ಪ್ರಮಾಣೀಕರಿಸುವ ಪ್ರಯತ್ನ ಮಾಡುವುದು. ತನ್ನೊಳಗಿನ ಉಪಭಾಷೆಗಳಲ್ಲಿ ಅಧಿಕಾರಸ್ಥವಾಗಿರುವ, ಮೇಲ್ವರ್ಗದವರಿಗೆ ಹತ್ತಿರವಿರುವ, ಅಧಿಕಾರ ಕೇಂದ್ರದ ಸುತ್ತ ನೆಲಸಿರುವ ಪ್ರದೇಶಗಳ ಜನರ ಉಪಭಾಷೆಯೊಂದನ್ನು ಪ್ರಮಾಣೀಕರಿಸಿ, ಉಳಿದ ಉಪಭಾಷೆಗಳಿಗೆ ಮಾನದಂಡವೆಂಬಂತೆ ಬಿಂಬಿಸುವುದು. ಉದಾಹರಣೆಗೆ ಬೆಂಗಳೂರು ಸುತ್ತಮುತ್ತಲ ಕನ್ನಡವನ್ನೇ ಮಾದರಿ ಕನ್ನಡವೆಂಬಂತೆ ಬಿಂಬಿಸುವ ಕ್ರಮ. (ಈ ರೀತಿಯ ಪ್ರಯತ್ನವನ್ನು ಕನ್ನಡದ ಪ್ರಸಿದ್ಧ ಚಿಂತಕರಾದ ಕೆ.ವಿ.ಸುಬ್ಬಣ್ಣನವರು ಕವಿರಾಜಮಾರ್ಗಕಾರನಲ್ಲಿ, ರಾಷ್ಟ್ರಕೂಟರ ಹೊಸ ಪ್ರಭುತ್ವದ ಆವಶ್ಯಕತೆಗೆ ಅನುಗುಣವಾಗಿ ಹೊಸ ಪ್ರಮಾಣೀಕೃತ ಭಾಷೆಯೊಂದನ್ನು ರೂಪಿಸುವ ಪ್ರಯತ್ನವಿದೆ. ಪುಲಿಗೆರೆಯ ತಿರುಳ್ಗನ್ನಡವನ್ನು 'ಪ್ರಮಾಣೀಕೃತ ಕನ್ನಡವೇ ಆಡಳಿತದ ಕನ್ನಡವೆಂದು ಬಿಂಬಿಸಲು ಪ್ರಯತ್ನಿಸಲಾಗಿದೆ ಎಂಬ ಅಂಶವನ್ನು ಗುರುತಿಸುತ್ತಾರೆ.)

೩. ತಮ್ಮ ಮಧ್ಯದಲ್ಲಿರುವ ಉಪಭಾಷೆಯೊಂದು ಪ್ರಮಾಣೀಕೃತ ಭಾಷೆಯ ಹೆಸರಲ್ಲಿ ಅಧಿಕಾರಸ್ಥರ ಭಾಷೆಯಾಗುವುದನ್ನು ಉಳಿದ ಉಪಭಾಷೆಗಳು ವಿರೋಧಿಸಲು ಪ್ರಯತ್ನಿಸಬಹುದು. ಹಾಗೆ ವಿರೋಧಿಸುವ ಪ್ರಬಲ ಉಪಭಾಷೆಗಳ ಅಥವಾ ಭಾಷೆಗಳನ್ನು ಸಮಾಧಾನಪಡಿಸಲೆಂಬಂತೆ, ಅವಕ್ಕೂ ಒಂದೊಂದು ಜಾಗ

ಕಲ್ಪಿಸುವುದು ನಡೆಯುತ್ತಲಿದೆ. ಇದರ ಪ್ರಯತ್ನವಾಗಿಯೇ ತುಳು ಅಕಾಡೆಮಿ, ಉರ್ದು ಅಕಾಡೆಮಿ, ಕೊಡವ ಅಕಾಡೆಮಿ (ಇದರಲ್ಲಿ ಮೊದಲು ಮತ್ತು ಮೂರನೆಯದನ್ನು ಕನ್ನಡ ಉಪಭಾಷೆಗಳೆಂದು ಕರೆಯಲಾಗದು. ಇವು ಕನ್ನಡದಂತೆಯೇ ಸ್ವತಂತ್ರ ಅಸ್ತಿತ್ವವುಳ್ಳ, ಪರಂಪರೆಯುಳ್ಳ, ಭಾಷೆಗಳು ಮತ್ತು ಉರ್ದು ಕೂಡ ರಾಷ್ಟ್ರೀಯ ಭಾಷೆಗಳಲ್ಲೊಂದು.) ಬ್ಯಾರಿ ಸಾಹಿತ್ಯ ಸಮ್ಮೇಳನ ಮುಂತಾದವು ರೂಪುತಳೆಯುತ್ತವೆ.

ಯಜಮಾನಿಕೆಯನ್ನು ವಿರೋಧಿಸುವ ತಾನೇ ಯಜಮಾನನಾಗುವ, ತನ್ನ ಯಜಮಾನಿಕೆಯನ್ನು ವಿರೋಧಿಸಿದವರಿಗೆ ಒಂದೊಂದು ಆಯಕಟ್ಟಿನ ಜಾಗ ಕಲ್ಪಿಸಿ ಸಮಾಧಾನಪಡಿಸುವ ಅತ್ಯಂತ ಸಂಕೀರ್ಣ ವಾಸ್ತವದಲ್ಲಿ ರಾಷ್ಟ್ರವೊಂದು ರೂಪ ಪಡೆದುಕೊಳ್ಳುತ್ತಿರುತ್ತದೆ. ರಾಷ್ಟ್ರೀಯತೆಗಳಲ್ಲಿ ಭಾಷೆ ವಹಿಸುವ ಪಾತ್ರವನ್ನು 'ಲಯೆನಲ್ ಕರ್ಟಿಸ್'ನ ಹೇಳಿಕೆ ಮೂಲಕ ಕನ್ನಡ ಚಿಂತಕ ಬಂಜಗೆರೆ ಜಯಪ್ರಕಾಶ ಅವರು "ಭಾಷೆ, ಜನಾಂಗ ಮತ್ತು ಧರ್ಮದ ಘಟಕಗಳು ಮುಖ್ಯವಾದ ಅಂಶಗಳು ಹಾಗೂ ಭಾಷೆ ಎಲ್ಲಕ್ಕಿಂತ ಮುಖ್ಯವಾದ ಅಂಗವೇ ಸರಿ. ಯಾಕೆಂದರೆ ಮಾನವನೊಬ್ಬ ತಾನು ಹಾಲು ಕುಡಿಯುತ್ತಾ ತಾಯ ತೊಡೆಯ ಮೇಲೆ ಮಲಗಿದ್ದಾಗಿನಿಂದ ಸಾಯುವ ಕಡೆಯ ಗಳಿಗೆಯವರೆಗೆ ಭಾಷೆಯೊಂದಿಗೆ ಒಡನಾಡುತ್ತಾನೆ. ಸಾಲದ್ದಕ್ಕೆ ಅವನ ಸಾಮಾಜೀಕರಣ, ಉತ್ಪಾದನಾ ಸಂಬಂಧಗಳಲ್ಲಿ ಸಾಮಾಜಿಕ ವಹಿವಾಟು ಮುಂತಾದವುಗಳೆಲ್ಲ ಭಾಷೆಯ ಮುಖಾಂತರವೇ ಏರ್ಪಡುತ್ತದೆ. ಇಷ್ಟು ಪ್ರಮುಖ ಪಾತ್ರ ವಹಿಸುವ ಭಾಷೆ ತನ್ನ ವ್ಯಾಪ್ತಿಗೆ ಒಳಪಡುವ ನಿರ್ದಿಷ್ಟ ಸಮುದಾಯದ ಆಶೋತ್ತರಗಳಿಗೆ ವಾಹಕವಾಗುತ್ತಾ ಒಂದು ಚಿಹ್ನೆಯಾಗಿ ಕಾಲಾಂತರದವರೆಗೂ ನಿಲ್ಲುತ್ತದೆ. ಅಂತಹ ಭಾಷಾ ಸಮುದಾಯವು ತನ್ನನ್ನು ಒಂದು ಸ್ವತಂತ್ರ, ಸಾರ್ವಭೌಮ, ಸಮೃದ್ಧ ರಾಷ್ಟ್ರವನ್ನಾಗಿ ರೂಪಿಸಿಕೊಂಡು ಮುನ್ನಡೆಯಬೇಕೆಂದು ಬಯಸುವುದು ಕೂಡ ಒಂದು ನಿರ್ದಿಷ್ಟ ಚಾರಿತ್ರಿಕ ಬೆಳವಣಿಗೆಯ ಒತ್ತಡಗಳಲ್ಲೇ. ಕನ್ನಡ ರಾಷ್ಟ್ರೀಯತೆಯು ತನ್ನನ್ನು ಹಾಗೆ ಒಂದು ರಾಷ್ಟ್ರತ್ವವಾಗಿ ಕಲ್ಪಿಸಿಕೊಳ್ಳತೊಡಗಿದ ಅವಧಿಯಲ್ಲಿ ಯಾವ ಯಾವ ಬಗೆಯ ಒತ್ತಡಗಳನ್ನು ಅನುಭವಿಸಬೇಕಾಗಿ ಬಂದಿತೋ, ಆಯಾ ವಿಧಾನಗಳಲ್ಲಿ ತನ್ನ ಆಶೋತ್ತರಗಳನ್ನು ನಿರ್ಮಿಸಿಕೊಂಡಿತು"[೭] ಎನ್ನುತ್ತಾರೆ.

ಬೆನೆಡಿಕ್ಟ್ ಆಂಡರ್‌ಸನ್ ಅವರ "ಕಲ್ಪಿತಕುಲ" ಪರಿಕಲ್ಪನೆಯನ್ನು ಒಪ್ಪಿಕೊಂಡು ಮಂಡಿತವಾಗುತ್ತಿರುವ ಈ ಚಿಂತನೆಯು ಭಾಷೆಯೊಂದು ರಾಷ್ಟ್ರತ್ವ ನಿರ್ಮಾಣಕ್ಕೆ ಅತ್ಯಂತ ಅನಿವಾರ್ಯ ಅಂಗ ಎಂದು ಪ್ರತಿಪಾದಿಸುತ್ತದೆ. ಸಮುದಾಯವೊಂದರ ಆಶೋತ್ತರಗಳನ್ನು ಈಡೇರಿಸುವ ಸಾಧ್ಯತೆಯಿರುವುದು ಮುಖ್ಯವಾಗಿ ಭಾಷೆಗೆ ಎಂಬ ಅರಿವು ಕೂಡ ಇಲ್ಲಿದೆ.

ಭಾಷೆಯನ್ನು ಕುರಿತಂತೆ ಕನ್ನಡದ ಪ್ರಾತಿನಿಧಿಕ ಚಿಂತಕರ ಗ್ರಹಿಕೆಗಳೇನು, ಗ್ರಹಿಕೆ ಹಿಂದಿನ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಆರ್ಥಿಕ ಒತ್ತಡಗಳೇನು ಎಂಬುದನ್ನು ಪರಿಶೀಲಿಸಬಹುದು.

### ೩.೨ ಭಾಷೆ ಕುರಿತಂತೆ - ಆಲೂರು ವೆಂಕಟರಾಯರ ನಿಲುವುಗಳು

ಧಾರವಾಡ ಪ್ರದೇಶದ ಹೊಳೆ ಆಲೂರಿನಲ್ಲಿ ೧೮೮೦ರಲ್ಲಿ ಜನಿಸಿದ ಆಲೂರು ವೆಂಕಟರಾಯರು, ಮೆಟ್ರಿಕ್ ಪರೀಕ್ಷೆಯನಂತರ ಉತ್ತರ ಕರ್ನಾಟಕದಲ್ಲಿ ಕಾಲೇಜುಗಳ ಕೊರತೆಯ ಕಾರಣಕ್ಕೆ ಬಾಲ ಗಂಗಾಧರನಾಥ ತಿಲಕರು ಪುಣೆಯಲ್ಲಿ ಸ್ಥಾಪಿಸಿದ್ದ ಫರ್ಗ್ಯೂಸನ್ ಕಾಲೇಜು ಸೇರಿದರು. (ಉಗ್ರ ದೇಶಭಕ್ತ ತಿಲಕರು

'ಫರ್ಗ್ಯೂಸನ್' ಹೆಸರಿನಲ್ಲಿ ಕಾಲೇಜು ಸ್ಥಾಪಿಸಿರುವುದು ಸಹ ಕುತೂಹಲಕರ ವಿಚಾರ) ರಾಷ್ಟ್ರಭಕ್ತರ ಉತ್ಸಾಹದ ವಾತಾವರಣದ ಕೇಂದ್ರವೂ ಆಗಿದ್ದ ಪುಣೆಯ ಈ ಕಾಲೇಜಿನಲ್ಲಿ ಕನ್ನಡ ಕನ್ನಡಿಗರ ಕುರಿತಾಗಿ ಮರಾಠಿ ಅಧ್ಯಾಪಕರು ತಾಳಿದ್ದ ನಿರ್ಲಕ್ಷ್ಯ ಮತ್ತು ತಿರಸ್ಕಾರದ ಭಾವನೆಗಳ ಪರಿಣಾಮವಾಗಿ ಆಲೂರರು ಕನ್ನಡವನ್ನು ಕುರಿತು ಯೋಚಿಸುವಂತೆ ಮಾಡಿತು. ಮಧ್ವರ ಚಿಂತನೆಗಳನ್ನೂ ಸಂಸ್ಕೃತ ಭಾಷೆಯನ್ನೂ ಅಪಾರವಾಗಿ ಗೌರವಿಸುತ್ತಿದ್ದ ಆಲೂರರು, ಮರಾಠಿಯ ಯಜಮಾನಿಕೆಯ ಧೋರಣೆಯಿಂದಾಗಿ ಕನ್ನಡದ ಕಡೆಗೆ ತಿರುಗಿ ಯೋಚಿಸುವಂತಾದುದು, ಕನ್ನಡ ರಾಷ್ಟ್ರೀಯತೆಯ ಮಟ್ಟಿಗೆ 'ಇತ್ಯಾತ್ಮಕ' ತಿರುವೇ ಸರಿ. ತಮ್ಮ ಜೀವನದುದ್ದಕ್ಕೂ ಅನ್ಯಭಾಷೆಗಳು ಮತ್ತು ಸಮುದಾಯಗಳ ಕುರಿತಾದ 'ಅತಿ'ಗೆ ಹೋಗದ ನಿಲುವಿನಿಂದಾಗಿ ಅವರು ಮುಖ್ಯರಾಗುತ್ತಾರೆ. ತೆಲುಗು ಮತ್ತು ಮರಾಠಿ ಭಾಷೆಗಳು ಮತ್ತು ಹೈದರಾಬಾದ್ ಕರ್ನಾಟಕದ ಕೆಲವು ಕಡೆಗಳಲ್ಲಿ ಉರ್ದು ಕೂಡ ಕನ್ನಡಕ್ಕೆ ಎದುರಾದ ಕಂಟಕವಾಗಿ ಆಲೂರರಿಗೆ ಕಂಡಿರಬಹುದು. ಅದರಲ್ಲೂ ಮುಖ್ಯವಾಗಿ ಮರಾಠಿಯು ತನ್ನ ಎದುರು ಆಕ್ರಮಣಕಾರಿಯೂ ಅಧಿಕಾರಸ್ಥ ಭಾಷೆಯಾಗಿಯೂ ನಿಂತಿರಬಹುದು. ಕಾಲೇಜು ಶಿಕ್ಷಣದ ನಂತರದ ದಿನಗಳಲ್ಲಿ ಅವರ ವಕೀಲಿ ವೃತ್ತಿಯ ಅಭ್ಯಾಸ ಮತ್ತು ಕಾರ್ಯಾನೆಗಳನ್ನು ಕುರಿತಾದ ಆಸಕ್ತಿಯ ನಡುವೆಯೇ ಕರ್ನಾಟಕವನ್ನು ಭೌತಿಕ ಪ್ರವಾಸ ಮಾಡಿ ಪರಿಸ್ಥಿತಿಯನ್ನು ಅರ್ಥೈಸಿಕೊಳ್ಳಲು ಪ್ರಯತ್ನಿಸುತ್ತಾರೆ.

"೧೯೨೪-೨೫ರಲ್ಲಿ ಉದಕಮಂಡಲಕ್ಕೆ ಹೋದಾಗ ಅಲ್ಲಿ ಕನ್ನಡ ನುಡಿಯ ದುರ್ದಶೆ ಎಷ್ಟಾಗಿರುತ್ತದೆಂಬುದು ಗೊತ್ತಾಯಿತು. ಹೈದರಾಬಾದ್ ಪ್ರಾಂತ್ಯಕ್ಕೆ ಹೋದಾಗ ಅಲ್ಲಿ ಉರ್ದು ಮತ್ತು ಮರಾಠಿ ಭಾಷೆಗಳು ಕನ್ನಡದ ಕುತ್ತಿಗೆಯನ್ನು ಹಿಚುಕುತ್ತಿರುವವೆಂಬುದು ಗೊತ್ತಾಯಿತು. ಅದೇ ಕಾಲಕ್ಕೆ ನಾವು ಕನ್ನಡಿಗರು ಕರ್ನಾಟಕದಲ್ಲಿರುವ ಕೊಂಕಣಿ, ತುಳು, ಕೊಡಗು ಮುಂತಾದ ಉಪಭಾಷೆಗಳನ್ನಾಡುವ ಜನರಿಗೆ ಅವರವರ ಭಾಷೆಗಳಿಗೆ ತಕ್ಕ ಸ್ಥಾನ ಕೊಟ್ಟು ಇಡೀ ಕರ್ನಾಟಕ ದೃಷ್ಟಿಯಿಂದ ಕನ್ನಡವನ್ನು ರಾಜ್ಯಭಾಷೆಯನ್ನಾಗಿ ಮಾಡುವುದರ ಮತ್ತು ರಾಜಕಾರಣಕ್ಕೋಸ್ಕರ ಆ ಭಾಷೆಯಲ್ಲಿ ನೈಪುಣ್ಯವನ್ನು ಪಡೆಯುವುದರ ಮಹತ್ವವನ್ನು ತಿಳಿ ಹೇಳಿದೆನು.

'ಕರ್ನಾಟಕವು ಕನ್ನಡಕ್ಕಿಂತ ವ್ಯಾಪಕವಾಗಿರುವುದೆಂಬುದನ್ನು ನಾವು ಮರೆಯಕೂಡದು ಮತ್ತು ಉಪಭಾಷಿಗರನ್ನು ಮಾತ್ರವೇ ಅಲ್ಲ, ನೆರೆ ಭಾಷೆಗಳ ಅಲ್ಪ ಸಂಖ್ಯಾತರನ್ನೂ ಮರೆಯ ಕೂಡದು' ಎಂಬುದು ಅಖಂಡ ಕರ್ನಾಟಕ ರಚನೆಯಲ್ಲಿ ನಾವು ಒಂದು ಅವಶ್ಯವಾಗಿ ನೆನಪಿನಲ್ಲಿಡತಕ್ಕ ಮಾತು. ಅರ್ಥಾತ್ ಕನ್ನಡಕ್ಕೆ ಪ್ರಧಾನ ಸ್ಥಾನವಿದೆ. ಆದರೆ ಜ್ಞಾನಕ್ಕೆ ಸರ್ವ ದಿಶೆಯಿಂದಲೂ ಸ್ವಾಗತವಿದೆ. ಕರ್ನಾಟಕ ಚಳುವಳಿಯನ್ನು ಉತ್ಕಟವಾಗಿ ನಡೆಸಿದ ನಾನು ಅದನ್ನು ಎಂದೂ ಮರೆಯಲಿಲ್ಲ. ಅಂತೇ ಧಾರವಾಡದಲ್ಲಿ ಮರಾಠಿ ಲಾಯಬ್ರರಿಯು ನಿಂತುಹೋಗುವ ಸಂದರ್ಭದಲ್ಲಿ ನಾನು ಅದನ್ನು ತಕ್ಕೊಂಡು ನನ್ನ ಸ್ವಂತ ಭಾರತ ಪುಸ್ತಕಾಲಯಕ್ಕೆ ಜೋಡಿಸಿ, ಕೆಲವರ್ಷ ನಡೆಯಿಸಿ, ಮುಂದೆ ಇಲ್ಲಿಯ ಮರಾಠಿಗರು ಅದನ್ನು ನಡೆಸಲು ಮುಂದೆ ಬಂದಾಗ ಅದನ್ನು ಅವರಿಗೆ ಒಪ್ಪಿಸಿದೆನು. ನಾನು ನನ್ನ ಸ್ವಂತ ಲೈಬ್ರರಿಯಲ್ಲಿ ನೂರಾರು ಮರಾಠಿ ಗ್ರಂಥಗಳನ್ನು ಸಂಗ್ರಹಿಸಿರುವೆನು."[೨]

೧೯೫೭ರಲ್ಲಿ ಕರ್ನಾಟಕ ಏಕೀಕರಣವಾದ ಮರುವರ್ಷ ಪ್ರಕಾಶನಗೊಂಡ 'ಕರ್ನಾಟಕತ್ವದ ವಿಕಾಸ' ಕೃತಿಯಲ್ಲಿ ಆಲೂರರು ವ್ಯಕ್ತಪಡಿಸುತ್ತಿರುವ ನಿಲುವುಗಳಿವು. ಕರ್ನಾಟಕವು ಕನ್ನಡಕ್ಕಿಂತ ವ್ಯಾಪಕವಾಗಿರುವುದು ಎಂಬ ನಿಲುವೇ ಇಂದಿನ ಸಂದರ್ಭದಲ್ಲಿ ಕ್ರಾಂತಿಕಾರಕವಾಗಿ ಕಾಣುತ್ತದೆ.'ಕರ್ನಾಟಕದೊಳಗಿನ ಉಪಭಾಷಿಕರನ್ನು ಮತ್ತು ನೆರೆ ಭಾಷೆಯಾಡುವ ಭಾಷಿಕ ಅಲ್ಪ ಸಂಖ್ಯಾತರನ್ನು ಮರೆಯಬಾರದು' ಎನ್ನುವುದು ಅವರು ಆಧುನಿಕ ಕರ್ನಾಟಕದ ಪ್ರಭುತ್ವಕ್ಕೆ ಹೇಳುತ್ತಿರುವ ಕಿವಿಮಾತಿನಂತೆ ಕೇಳಿಸುತ್ತವೆ. 'ಡೆಮಾಕ್ರಟಿಕ್' ಆದ 'ಸಮಾನತೆ'ಯ ಆಶಯಗಳನ್ನು ಪ್ರಭುತ್ವ ಹೊಂದಿರಬೇಕು, ದ್ವೇಷ, ಅಸಹನೆಯ ನಿಲುವುಗಳು ರಾಷ್ಟ್ರದ ಭಿತ್ತಿಯನ್ನು ಸಂಕುಚಿತಗೊಳಿಸುತ್ತವೆ ಎಂಬ ತಿಳಿವಳಿಕೆ ೫೦ ವರ್ಷಗಳಿಗೂ ಅಧಿಕ ಕಾಲ ಕರ್ನಾಟಕತ್ವದ ರಾಜಕೀಯದಲ್ಲಿ ತೀವ್ರವಾಗಿ ತೊಡಗಿಸಿಕೊಂಡಿದ್ದ ಆಲೂರರಿಗೆ ದಕ್ಕಿದ ದೊಡ್ಡ ವಿವೇಕ . ಎಡ ಪಂಥೀಯರು ಮತ್ತು ಪ್ರಗತಿಪರರು ಕರ್ನಾಟಕದಲ್ಲಿ ಭಾಷೆಯ ವಿಚಾರದಲ್ಲಿ ಮಂಡಿಸುತ್ತಿರುವ ನಿಲುವು ಕೂಡ ಇದರಂತೆಯೇ ಕಾಣುತ್ತದೆ. ಬಿಹಾರಿಗಳು ಉತ್ತರ ಭಾರತದವರು, ಹಿಂದಿ ಮಾತನಾಡುವವರು ಎಂಬ ಕಾರಣಕ್ಕೆ ಮಹಾರಾಷ್ಟ್ರದ ನಗರಗಳಲ್ಲಿ ದುಡಿಯುವ ಕೈಗಳನ್ನು ಕತ್ತರಿಸುವ, ಕೊಲ್ಲುವ, ಆಸ್ತಿ ಪಾಸ್ತಿ ಲೂಟಿಮಾಡುವ ಭಾಷಾಂಧ ದೃಷ್ಟಿಕೋನಗಳಿಗೂ, ಕರ್ನಾಟಕದಲ್ಲಿ ತಮಿಳು, ಮರಾಠಿ, ಉರ್ದು ಜನಸಮುದಾಯಗಳ ಮೇಲೆ ನಡೆಯುತ್ತಿರುವ ದೌರ್ಜನ್ಯಗಳಿಗೂ, ಬ್ರಿಟಿಶ್ ವಸಾಹತುವಾದಿಗಳು ಢಾಕಾದ ಮಸ್ಲಿಮ್ ಬಟ್ಟೆ ನೇಯುತ್ತಿದ್ದ ಬಡ ಕಾರ್ಮಿಕರ ಹೆಬ್ಬೆರಳುಗಳನ್ನು ಕತ್ತರಿಸುತ್ತಿದ್ದರೆಂಬ ಕಥೆ(?)ಗಳಿಗೂ ಏನಾದರೂ ವ್ಯತ್ಯಾಸಗಳು ಕಾಣುತ್ತವೆಯೇ ಎಂಬ ಪ್ರಶ್ನೆ ಹುಟ್ಟುತ್ತವೆ. ಆಳುವ ವರ್ಗಗಳು ಸೃಷ್ಟಿಸುವ ಬಿಕ್ಕಟ್ಟು ಮತ್ತು ಕಂದರಗಳಿಗೆ ಬಡಪಾಯಿಗಳು ಬಲಿಯಾಗುತ್ತಾ ಹೋಗುತ್ತಾರೆ. ಆಧುನಿಕ 'ರಾಷ್ಟ್ರ'ಕಲ್ಪನೆಯನ್ನು ಕುಬ್ಜಗೊಳಿಸಲು ರಚಿಸಿಕೊಂಡ ಸಂವಿಧಾನವನ್ನೂ ಅಣಕಮಾಡುವಂತಹ ನಿಲುವುಗಳಿವು. ನೂರಾರು ಬಹುರಾಷ್ಟ್ರೀಯ ಕಂಪನಿಗಳು (ಮಹಾರಾಷ್ಟ್ರದಲ್ಲಿ ಗುಜರಾತ್ ಮೂಲದ ಅಂಬಾನಿ ಕೈಗಾರಿಕೆಗಳ ಗುಂಪು) ಸ್ಥಳೀಯ ಜನರ ಶ್ರಮವನ್ನು ನಿರಂತರ ದೋಚುತ್ತಿರುವಾಗ, ತೀರಾ ಅಸಹಾಯಕರು, ಹೊಟ್ಟೆಪಾಡಿಗಾಗಿ ನೆಲೆಸಿರುವವರು, ತಾವು ನೆಲೆಸಿರುವ ರಾಷ್ಟ್ರೀಯತೆಯ ಸಂಪತ್ತನ್ನು ಹೆಚ್ಚಿಸುವಲ್ಲಿ ತೊಡಗಿಕೊಂಡವರು. ಆಧುನಿಕ ರಾಷ್ಟ್ರಪ್ರಭುತ್ವವು ದುಡಿಯುವ ವರ್ಗವನ್ನು ನಿರ್ಲಕ್ಷಿಸಬಾರದು ಎಂದು ಹೇಳುವ ಆಲೂರರು ಇವತ್ತಿನ ಸಂದರ್ಭಗಳಲ್ಲಿ ತುಂಬ ಎತ್ತರಕ್ಕೆ ಕಾಣುತ್ತಾರೆ. ಆದರೆ ಆಲೂರರು ಅನ್ಯಭಾಷೆಗಳ ಆಕ್ರಮಣಕಾರಿ ನಿಲುವನ್ನು ಖಂಡಿಸುತ್ತಾರೆ :

"ಬೆಳಗಾವಿ, ಸೊಲ್ಲಾಪುರ ಪ್ರದೇಶಗಳಲ್ಲಿ ಮರಾಠಿಯನ್ನು ಮುನ್ನುಗ್ಗಿಸುವ ಆಕ್ರಮಣಶೀಲ ಪ್ರಯತ್ನ! ಇಂಥ ಇವರ ದುರಾಗ್ರಹದ ಭಾಷಾಭಿಮಾನದ ಅತಿರೇಕದ ಬುದ್ಧಿಯೇ ಸುತ್ತಲಿನವರಿಗೆ ಹಾನಿ ಮಾಡಹತ್ತಿದೆ. ಇಂಥ ಕಲ್ಪನೆಯೂ ಆತ್ಮ ಘಾತುಕವಾದುದಲ್ಲದೆ, ರಾಷ್ಟ್ರಘಾತುಕವಾದುದು. ಈ ಕಾರಣದ ಮೂಲಕವೇ ಧಾರವಾಡದಲ್ಲಿ ಮಾತ್ರವೇ ಅಲ್ಲ ಬೆಂಗಳೂರು, ಮೈಸೂರುಗಳಲ್ಲಿ ನೂರಾರು ವರ್ಷಗಳಿಂದ ನೆಲೆಸಿದ ಅನೇಕ ಮರಾಠಿಗರು ಕರ್ನಾಟಕ ದೊಡನೆ ಎಷ್ಟೋ ದಿವಸ ತಾದಾತ್ಮ್ಯ ಹೊಂದಲಿಲ್ಲ. ನಮ್ಮ ಕರ್ನಾಟಕತ್ವದ ಭಾವನೆಯಲ್ಲಿ ಇಂಥ ಅತಿರೇಕಕ್ಕೆ ನಾವು ಆಸ್ಪದ ಕೊಡಲಿಲ್ಲ. ಕನ್ನಡಿಗನೊಬ್ಬನು ಬಂಗಾಲದಲ್ಲಿ ಹೋಗಿ

ಶಾಶ್ವತವಾಗಿ ನೆಲೆಸಿದನೆಂದು ತಿಳಿಯಿರಿ. ಆಗ ಅವನು ಬಂಗಾಲಿ ಭಾಷೆಯೊಡನೆ, ಬಂಗಾಲಿಗರೊಡನೆ ತಾದಾತ್ಮ್ಯವನ್ನು ಹೊಂದಲೇ ಬೇಕು. ಶಾಶ್ವತವಾಗಿ ನಿಲ್ಲುವ ಇಚ್ಛೆಯಿಲ್ಲದೆ ಇಂದಲ್ಲ ನಾಳೆ ತಿರುಗಿ ಕರ್ನಾಟಕಕ್ಕೆ ಬರುವ ಸಂಭವವಿದ್ದರೆ ಮಾತ್ರ ಕನ್ನಡದ ಅಭಿಮಾನವನ್ನು ಬಿಡಕೂಡದು. ಇಷ್ಟೇ ಕಾರಣಕ್ಕಾಗಿಯೇ ನಾವು ಹೊರನಾಡ ಕನ್ನಡ ಸಂಸ್ಥೆಗಳನ್ನು ತೆಗೆದದ್ದು. ಈ ನಮ್ಮ ತತ್ವವು ಸರಿಯಾಗಿದ್ದುದರಿಂದಲೇ ಶ್ರೀ ಗುರುನಾಥರಾವ ಘಟಕ, ಮಹರ್ಷಿ ರಾನಡೆ, ಶ್ರೀ ಕರಮಕರ, ಶ್ರೀ ಬೇಂದ್ರೆ, ಶ್ರೀ ಶಂಬಾಜೋಶಿ, ಶ್ರೀ ಬಾಲಚಂದ್ರ ಘಾಣೇಕರ, ಶ್ರೀಗದ್ರೆ ಮುಂತಾದವರು ಕನ್ನಡ ಭಾಷೆಯೊಡನೆ ತಾದಾತ್ಮ್ಯ ಹೊಂದಿರುವರು ಮತ್ತು ಕರ್ನಾಟಕ ಸೇವೆಯನ್ನು ಸತತವಾಗಿ ಮಾಡುತ್ತಿರುವರು. ಕೆಲ ದುರಭಿಮಾನಿ ಮರಾಠಿಗರು ಇಲ್ಲಿ ಶಿವಾಜಿ ಉತ್ಸವ ಮುಂತಾದ ಉತ್ಸವಗಳನ್ನು ಮಾಡಿದರೂ ವಿದ್ಯಾರಣ್ಯ ಉತ್ಸವ, ನಾಡಹಬ್ಬ ಮುಂತಾದ ಉತ್ಸವಗಳಲ್ಲಿ ಬೆರೆಯುತ್ತಿರಲಿಲ್ಲ. ಈ ಕಾರಣಕ್ಕಾಗಿಯೆ ನಾವು ಅಂಥವರೊಡನೆ ವಿರೋಧ ಕಟ್ಟಿಕೊಂಡು ಮುಂದೆ ಬಡಿದಾಡಬೇಕಾಯಿತು. ಕರ್ನಾಟಕತ್ವವೆಂದರೆ ಕನ್ನಡ ವಾಙ್ಮಯ ಮಾತ್ರವಲ್ಲ. ಕನ್ನಡ ನುಡಿಯೆಂದರೆ, ಕರ್ಣಾಟಕ ಸರ್ವಸ್ವವೆಂದು ತಿಳಿಯುವುದೊಂದು ವರ್ಗವು ನಮ್ಮಲ್ಲಿದೆ. ಅದು ಅಷ್ಟು ಸರಿಯಲ್ಲ. "ಅತ್ಯತಿಷ್ಠತ್ ದಶಾಂಗುಲಂ" ಎಂಬಂತೆ ಕರ್ನಾಟಕತ್ವವು ವ್ಯಾಪಾರ, ಕಲೆ, ಭೂ ಸುಧಾರಣೆ, ಬಂದರ ಸುಧಾರಣೆ, ಆಯುರ್ವೇದ ಮುಂತಾದ ಅನೇಕ ವಿಷಯಗಳನ್ನು ಒಳಗೊಂಡಿದೆ. ಕರ್ನಾಟಕದಲ್ಲಿ ಕನ್ನಡವಲ್ಲದೆ ತುಳು, ಕೊಂಕಣಿ, ಕೊಡವ ಮುಂತಾದ ಉಪಭಾಷೆಗಳಿವೆ. ಈ ಜನರಿಗೆ ತಮ್ಮ ಮಾತೃಭಾಷೆಯ ಅಭಿಮಾನವನ್ನು ಬಿಡಹೇಳುವುದು ಸರಿಯಲ್ಲ. ಆದರೆ ಈಗಿನ ದಿವಸಗಳಲ್ಲಿ 'ಮಾತೃಭಾಷೆಗಿಂತ ದೇಶಭಾಷೆಗೆ' ಒಂದು ಬಗೆಯ ಮಹತ್ವವಿದೆ. ಏಕೆಂದರೆ, ಭಾಷಾನ್ವಯ ಪ್ರಾಂತ ರಚನೆಯಾಗುವುದರಿಂದ ಆಡಳಿತೆಯು ಸುಗಮವಾಗುವುದೆಂಬುದೆ ಭಾಷಾನ್ವಯ ಪ್ರಾಂತ ರಚನೆಯ ತತ್ವ, ಆದಕಾರಣ ಮಾತೃಭಾಷೆಯು ಮರಾಠಿಯೇ ಇರಲಿ, ಮುಸಲ್ಮಾನಿಯೇ ಇರಲಿ, ಅಥವಾ ಮತ್ತಾವುದೇ ಇರಲಿ, ಎಲ್ಲರೂ ದೇಶ ಭಾಷೆಯನ್ನು ಕಲಿಯುವುದು ಅತ್ಯವಶ್ಯವು."[೩]

ಇಲ್ಲಿ ಆಲೂರರು 'ಅನ್ಯ' ರಾಷ್ಟ್ರೀಯತೆಗಳಿಂದ ಶಾಶ್ವತವಾಗಿ ನೆಲೆಸುವುದಕ್ಕೆ ಬಂದವರು ನೆಲೆಸಿದ ಪ್ರದೇಶದ ಭಾಷೆಯನ್ನು ಕಲಿಯಬೇಕು. ಬರೀ ಕಲಿತರಷ್ಟೇ ಸಾಲದು 'ತಾದಾತ್ಮ್ಯ' ಹೊಂದಬೇಕು ಮತ್ತು ಅನ್ಯರಾಷ್ಟ್ರೀಯತೆಗಳಲ್ಲಿ ನೆಲೆಸುವುದಕ್ಕೆ ಹೋದ ಕನ್ನಡಿಗ ಕೂಡ ಅಲ್ಲಿನ ಭಾಷೆ ಮತ್ತು ಸಂಸ್ಕೃತಿಗಳ ಜೊತೆ ಬೆರೆತು ಹೋಗಬೇಕು ಎಂಬ ಸೂತ್ರವನ್ನೂ ರೂಪಿಸುತ್ತಿದ್ದಾರೆ. ಆಧುನಿಕ ರಾಷ್ಟ್ರೀಯತಾ ಆಡಳಿತಕ್ಕೆ ರೂಪಿಸಿದ ದೇಶಭಾಷೆಗೆ ಮಾತೃಭಾಷೆಗಿಂತ ಹೆಚ್ಚಿನ ಮಹತ್ವವಿದೆ. ಹಾಗಾಗಿ ಇಲ್ಲಿ ನೆಲೆಸಿರುವ ಬೇರೆ ಭಾಷಿಕರು ಮಾತೃಭಾಷೆ ಯಾವುದಾಗಿದ್ದರೂ ದೇಶಭಾಷೆಯನ್ನು ಕಲಿಯಲೇ ಬೇಕು. ಹಾಗಾದರೆ ಆಲೂರು ಸೂಚಿಸುತ್ತಿರುವ ದೇಶಭಾಷೆ ಯಾವುದು? "ಉತ್ತರ ಕರ್ನಾಟಕ, ಮೈಸೂರು, ಮಂಗಳೂರು, ಹೈದರಾಬಾದ್ ಮುಂತಾದ ಭಾಗಗಳಲ್ಲಿರುವ ಕನ್ನಡದಲ್ಲಿ ಏಕರೂಪತೆ ಇಲ್ಲದಿರುವುದು. ಆಗ ನನಗೆ ತೀರ ಹೊಸದೊಂದು ವಿಚಾರ ಜಗ್ಗನೆ ಹೊಳೆಯಿತು! ಅದೇನೆಂದರೆ ಕರ್ನಾಟಕದ ಎಲ್ಲ ಭಾಗಗಳ ಭಾಷೆಯಲ್ಲಿ ಏಕರೂಪತೆ ಉಂಟಾಗದೆ ಸಾಹಿತ್ಯದ ಉದ್ಧಾರವಾಗದೆಂಬ ಮಾತು. ಇವೆಲ್ಲ ಭಾಗಗಳು ಕನ್ನಡ ಜನತೆಯಲ್ಲಿ ಪರಸ್ಪರ ಪ್ರೀತಿ-ವಿಶ್ವಾಸಗಳು ಹುಟ್ಟದಿದ್ದರೆ ಅಖಂಡ ಕರ್ನಾಟಕದ ನಿರ್ಮಾಣವಾಗುವ ಬಗೆ ಹೇಗೆ?"[೪]

'ಏಕರೂಪತೆ' ಎಂಬುದೆ ಆಧುನಿಕ ರಾಷ್ಟ್ರಗಳ ಬಲವಾದ ಆಕಾಂಕ್ಷೆ. ಈ ಏಕರೂಪಿ ಆಗ್ರಹದಿಂದಾಗಿಯೇ ಆಧುನಿಕ ಜಗತ್ತಿನ ಇತಿಹಾಸ ರಕ್ತಸಿಕ್ತ ಅಧ್ಯಾಯಗಳಿಂದ ತುಂಬಿದೆ. ಆದರೆ ಆಲೂರರ ಏಕರೂಪತೆಯನ್ನು ವಿಪರೀತಾರ್ಥ ಕಲ್ಪಿಸದೆ ನೋಡಿದರೆ, ಪ್ರಭುತ್ವವು ಪ್ರಾಚೀನ ಕಾಲದಿಂದಲೂ ತನ್ನ ಸದಸ್ಯರಲ್ಲಿ ನಾವೆಲ್ಲ ಒಂದು ಎಂಬ ಭಾವನೆ ತರಲು ನಿರಂತರ ಪ್ರಯತ್ನ ಪಟ್ಟಂತೆ ಕಾಣುತ್ತವೆ. (ಕನ್ನಡದ ಪ್ರಸಿದ್ಧ ಚಿಂತಕ ಕೆ.ವಿ. ಸುಬ್ಬಣ್ಣನವರು ಕವಿರಾಜಮಾರ್ಗ ಕುರಿತ ಅಧ್ಯಯನದಲ್ಲಿ ಈ 'ಪ್ರಮಾಣೀಕೃತ' ಭಾಷೆಯ ಅನಿವಾರ್ಯತೆ ಕುರಿತು ಅನೇಕ ಒಳನೋಟಗಳನ್ನು ನೀಡಿದ್ದಾರೆ). ಆಧುನಿಕ ಪ್ರಭುತ್ವಗಳ ಸಂದರ್ಭದಲ್ಲಿಯಂತೂ ಪ್ರಮಾಣೀಕೃತ ಭಾಷೆಯ ಆವೃತ್ತಿಯೊಂದನ್ನು ರೂಪಿಸಿಕೊಂಡೇ ಆಡಳಿತ ಯಂತ್ರಕ್ಕೆ ಚಾಲನೆ ನೀಡುತ್ತದೆ.

ಆಲೂರರು ತಾವು ಮಂಡಿಸುತ್ತಿರುವ ದೇಶಭಾಷೆ ಯಾವ ಉಪಭಾಷೆಯಿಂದ ಆರಿಸಿದ್ದು ಎಂಬುದರ ಕುರಿತು ಪ್ರಸ್ತಾಪಿಸುವುದಿಲ್ಲ. ಆದರೂ ಅವರು ತಮ್ಮೆಲ್ಲ ಬರೆಹಗಳಲ್ಲಿ ಮೈಸೂರು ಬೆಂಗಳೂರು ಪ್ರದೇಶದ ಉಪಭಾಷೆಯನ್ನು ಮತ್ತು ಕ್ರಿಶ್ಚಿಯನ್ ಮಿಶನರಿಗಳ ಪ್ರಕಟಣೆಗಳಲ್ಲಿ ಮತ್ತು ಕನ್ನಡದ ಅನೇಕ ಬರಹಗಾರರ ಬರಹಗಳಲ್ಲಿ ಪ್ರಕಟಗೊಂಡಿದ್ದ ಭಾಷೆಯನ್ನು ದೇಶಭಾಷೆಯೆಂದು ಒಪ್ಪಿಕೊಳ್ಳುತ್ತಾರೆ. ಆ ಮೂಲಕ ಕನ್ನಡದ ಉಪಭಾಷೆಗಳನ್ನು ಕಡೆಗಣಿಸಬಾರದು ಎಂದೂ ಪ್ರತಿಪಾದಿಸುತ್ತಾರೆ.

ಆರೋಗ್ಯವಂತ ಆಧುನಿಕ ರಾಷ್ಟ್ರೀಯತೆಯನ್ನು ರೂಪಿಸುವುದು ಹೇಗೆ? ಎಂದು ಚಿಂತಿಸುತ್ತಲೇ ಹೋರಾಟರೂಪಿಸಿ, ಅದಕ್ಕೆ ನಾಯಕತ್ವ ನೀಡಿ ಸ್ವಲ್ಪಮಟ್ಟಿಗೆ ಆಶಯ ಸಾಕಾರಗೊಂಡಾದ ಮೇಲೆ ನೀಡುತ್ತಿರುವ ಸಲಹೆಗಳಿವು. ಅದರ ಜೊತೆಗೆ ಆಲೂರರು ತಮ್ಮ ಅನುಭವವನ್ನು ಸಮ್ಮಿಳಿತಗೊಳಿಸುತ್ತಾರೆ. ಹಾಗಾದರೆ ಮರಾಠಿ, ತೆಲುಗು, ಉರ್ದು, ತಮಿಳುಗಳಷ್ಟೇ ಕನ್ನಡ ರಾಷ್ಟ್ರೀಯತೆಯನ್ನು ಆಕ್ರಮಿಸುತ್ತಿರುವ ಭಾಷೆಗಳೆ? ಎಂಬ ಪ್ರಶ್ನೆ ಸಹಜವಾಗಿ ಹುಟ್ಟಿಕೊಳ್ಳುತ್ತದೆ. ವಸಾಹತುಶಾಹಿ ಭಾಷೆಯಾದ ಇಂಗ್ಲೀಷಿನ ಕುರಿತು ಆಲೂರರು ತಮ್ಮ ಕೃತಿಯಲ್ಲಿ ಪ್ರತಿಕ್ರಿಯಿಸದೆ ಇರುವುದು ಆಶ್ಚರ್ಯ ಹುಟ್ಟಿಸುತ್ತದೆ. ಕುವೆಂಪು ಮುಂತಾದ ಕನ್ನಡ ಸಾಹಿತಿ ಚಿಂತಕರು, ರಾಷ್ಟ್ರಮಟ್ಟದಲ್ಲಿ ರಾಮಮನೋಹರ ಲೋಹಿಯಾ ಮುಂತಾದವರು ಇಂಗ್ಲೀಷಿನ ವಿಕ್ಷಿಪ್ತಕಾರಿ ಧೋರಣೆ ಕುರಿತು ಪ್ರತಿಪಾದಿಸುವ ಹೊತ್ತಿನಲ್ಲಿ ತಮ್ಮ ಕೃತಿ ರಚನೆ ಮಾಡುತ್ತಿರುವ ಆಲೂರರು ಈ ಕುರಿತು ಪ್ರಸ್ತಾಪಿಸುವುದೇ ಇಲ್ಲ. ಆದರೆ ಸಂಸ್ಕೃತ ಮತ್ತು ಹಿಂದಿಯನ್ನು ಕುರಿತಂತೆ, "ಸಂಸ್ಕೃತ ನಮ್ಮ ಪೂಜ್ಯ ಭಾಷೆಯು, ಅದು ವಿದ್ವಜ್ಜನರ ರಾಷ್ಟ್ರಭಾಷೆಯಾಗಬೇಕು. ಹಿಂದಿಯೂ ಅಂತಃ ಪ್ರಾಂತೀಯ ರಾಷ್ಟ್ರಭಾಷೆಯಾಗಬೇಕು. ಪ್ರಾದೇಶಿಕ ಭಾಷೆಗೆ ಭಂಗ ತರುವುದು ಅದರ ಅಧಿಕಾರವಲ್ಲ'' ಎಂದು ಅವರು ಸ್ಥಾನ ನಿರ್ಣಯ ಮಾಡುತ್ತಾರೆ. ಸಂಪರ್ಕ ಭಾಷೆಯಾಗಿ ಹಿಂದಿಯನ್ನು ವಿದ್ವಜ್ಜನರ ರಾಷ್ಟ್ರಭಾಷೆಯಾಗಿ ಸಂಸ್ಕೃತವನ್ನು ೧೯೩೨ರಲ್ಲಿ ಪ್ರತಿಪಾದಿಸುತ್ತಿರುವುದು ಮಾತ್ರ ಸ್ವಲ್ಪಮಟ್ಟಿಗೆ ಅಪಾಯಕಾರಿ ಎನ್ನಿಸುತ್ತದೆ. ಆದರೆ ಕನ್ನಡ ಮತ್ತು ಸೋದರ ಭಾಷೆಗಳ ಕುರಿತಂತೆ ಇಷ್ಟೊಂದು ಪ್ರಗತಿಪರ ನಿಲುವು ತಾಳುವ ಆಲೂರರು ಸಂಸ್ಕೃತದ ಕುರಿತ ಧೋರಣೆಗೆ ಕಾರಣಗಳೇನು? ಎನ್ನುವುದಕ್ಕೆ ಕನ್ನಡ ರಾಷ್ಟ್ರೀಯತೆ ಕುರಿತಂತೆ ಚಿಂತಿಸಿರುವ ಕೆ.ರಾಘವೇಂದ್ರರಾವ್‌ರವರು "ಆಲೂರರು ಭಾರತ ಒಂದು ದೇಶವೆನ್ನುವ ವಿಚಾರವನ್ನು ಅದರ ಸನಾತನ

ಧರ್ಮದ ಮೂಲದೊಡನೆ ಜೋಡಿಸುತ್ತಾರೆ.[೬] ಸನಾತನ ಧರ್ಮದ ಕುರಿತ ಅವರ ಒಲವಿನ ಕಾರಣಕ್ಕೆ ಸಂಸ್ಕೃತದ ಕುರಿತಾಗಿಯೂ ಒಲವಿದೆ. ಆದರೆ ಈ ಒಲವು ಅವರ ಕನ್ನಡಪರ ಚಿಂತನೆಗಳನ್ನು ನಿರಾಕರಿಸುವ ಮಟ್ಟಿಗೆ ಇಲ್ಲದಿರುವುದು ಸಮಾಧಾನಕರ ಸಂಗತಿ. ಹಿಂದಿ ಸಂಪರ್ಕ ಭಾಷೆಯಾಗಿ ಇರಲಿ ಎಂದು ಮಾನ್ಯ ಮಾಡುತ್ತಾರಾದರೂ ಅದು ಯಜಮಾನಿಕೆಯಾಗಬಾರದು ಎಂದು ಎಚ್ಚರಿಕೆಯನ್ನು ನೀಡುತ್ತಾರೆ. ಕರ್ನಾಟಕದಲ್ಲಿ ಇಂದು ದೇಶ ಭಾಷೆಯನ್ನು ಪ್ರಮಾಣೀಕರಿಸಿ ಪ್ರತಿಪಾದಿಸುವಂತೆ, ಭಾರತದಲ್ಲಿ ಹಿಂದಿಯನ್ನು ಉಳಿದ ರಾಷ್ಟ್ರೀಯತೆಗಳ ಪ್ರಜಾಪ್ರಭುತ್ವದ ಆಶಯಗಳ ಹಿನ್ನೆಲೆಯಲ್ಲಿ ಅವರು ನೋಡುತ್ತಾರೆ.

**೩.೩. ಭಾಷೆ ಕುರಿತಂತೆ ಬಿ.ಎಂ.ಶ್ರೀಯವರ ಚಿಂತನೆಗಳು**

ಮೈಸೂರು ಅರಸೊತ್ತಿಗೆಯ ಕುರಿತಾದ ಆರಾಧನ ಭಾವ ಮತ್ತು ಬ್ರಿಟಿಷ್ ವಸಾಹತುಶಾಹಿ ಕುರಿತಾದ ಮೃದು ಧೋರಣೆಯಿಂದಾಗಿ ಎಲ್ಲ ಪಂಥಗಳ ಕನ್ನಡ ವಿಮರ್ಶಕರು, ಚಿಂತಕರು ಬಿ.ಎಂ.ಶ್ರೀಯವರನ್ನು ಟೀಕಿಸಿದ್ದಾರೆ. ಆದರೆ ೨೧ನೇ ಶತಮಾನದ ಈ ಆರಂಭದ ದಶಕದಲ್ಲಿ ಬಿ.ಎಂ.ಶ್ರೀಯವರನ್ನು ಅವಲೋಕಿಸುವಾಗ, ಕನ್ನಡ ಸಾಹಿತ್ಯ, ಸಂಸ್ಕೃತಿ ಲೋಕ ಅವರಿಗೆ ಮಾಡಿರುವ ಟೀಕೆಗಳು ಆರೋಪಗಳಂತೆ ಕಾಣಿಸುತ್ತವೆ. ಈ ಟೀಕೆಗಳನ್ನು ಬಿ.ಎಂ.ಶ್ರೀಯವರ ಭಾಷೆಯನ್ನು ಕುರಿತ ನಿಲುವುಗಳಿಗೂ ಅನ್ವಯಿಸಿ ನೋಡಬಹುದು. 'ಇಂಗ್ಲೀಷ್ ಭಾಷೆಯು ಕನ್ನಡವನ್ನು ಉದ್ಧಾರ ಮಾಡಬಲ್ಲದು' ಎಂಬ ದೃಷ್ಟಿಕೋನವೇ ೨೦ನೇ ಶತಮಾನದ ಆರಂಭದಲ್ಲಿ ಕ್ರಾಂತಿಕಾರಕವೆಂಬಂತೆ ಕಾಣಿಸುತ್ತದೆ. ಕನ್ನಡ ಭಾಷೆಯು ಉದ್ಧಾರವಾಗಬೇಕಾದರೆ ಆಗ ಇದ್ದ ಸ್ಥಿತಿಯಾದರೂ ಯಾವುದು? ಬಿ.ಎಂ.ಶ್ರೀಯವರ ಅಭಿಪ್ರಾಯ ಹೀಗಿದೆ :

"ಸಾಮಾನ್ಯ ಜನರೆಂದರೆ ದಕ್ಷಿಣದಲ್ಲಿ ಆರ್ಯರಲ್ಲ ಶೂದ್ರರು. ಶೂದ್ರರನ್ನು ಕಂಡರೆ ಆರ್ಯರಿಗೆ ತಿರಸ್ಕಾರ ಈಗಲೂ ಇದೆ. ಹಿಂದೆ ಇನ್ನೂ ಹೆಚ್ಚೇ ಇದ್ದಿರಬೇಕು. ಈ ಶೂದ್ರರು ತಮ್ಮನ್ನು ಗೌರವದಿಂದ ಕಾಣುವುದಕ್ಕೆ ಎಷ್ಟು ಬೇಕೋ ಅಷ್ಟು ಅವರಿಗೆ ಉಪದೇಶವನ್ನು ಮಾಡಿದರು. ಮಿಕ್ಕದ್ದನ್ನೆಲ್ಲಾ ತಮ್ಮಲ್ಲೇ ಬಚ್ಚಿಟ್ಟುಕೊಂಡರು. ಗ್ರಂಥಗಳನ್ನು ಅವರ ಏಳಿಗೆಗೆ ಬರೆಯಲಿಲ್ಲ. ರಾಜ ಸಭೆಗಳಲ್ಲಿ ಸುಖಪುರುಷನಾದ ಪೋಷಕನಿಗೆ ಹೊಗಳು ಭಟ್ಟರಾಗಿ, ತಮ್ಮೊಳಗೆ ಒಬ್ಬರನ್ನೊಬ್ಬರು ಜರೆಯುತ್ತಾ, ಸಂಸ್ಕೃತ ಕವಿಗಳನ್ನು ತಲೆಮೆಟ್ಟಿಹಾರಿದೆವೆಂದು ಪ್ರತಿಷ್ಠೆ ಕೊಚ್ಚುತ್ತಾ, ಹತ್ತು ಎಳೆ ಸಂಸ್ಕೃತ ಒಂದು ಎಳೆ ಕನ್ನಡ, ಹೀಗೆ ಕೂಡಿಸಿ ಬರಿಯ ಶಬ್ದಾಡಂಬರದ ಮಗ್ಗವನ್ನೂ ಹೆಣೆಯುತ್ತಾ, ದೊಡ್ಡ ಬಿರುದುಗಳನ್ನೂ ಧನವನ್ನೂ ಅಗ್ರಹಾರಗಳನ್ನೂ ಪಡೆಯುವುದಕ್ಕಾಗಿ ಸಂಸ್ಕೃತ ಪಂಡಿತರಾದ ಕವಿಗಳು ಈ ಗ್ರಂಥಗಳನ್ನು ಬರೆದದ್ದು. ರಾಜರ ಪ್ರಾಬಲ್ಯ ಮುರಿದು ಹೋದಹಾಗೆಲ್ಲ ಈ ಕವಿಗಳ ಅಬ್ಬರವೂ ಅಡಗುತ್ತ ಬಂತು. ಶಿವಭಕ್ತರ ಕಾಲದಿಂದ ಸ್ವಲ್ಪ ಮಟ್ಟಿಗೆ ಅತಿ ಪಾಂಡಿತ್ಯಕ್ಕೆ ಹೋಗದೆ ಜನಮಂಡಲಿಗಾಗಿ ಬರೆದ ಕಾವ್ಯಗಳು ದೊರಕುತ್ತವೆ."[೭]

ಧಾರವಾಡದಲ್ಲಿ ೧೯೧೧ ರಲ್ಲಿ 'ಕನ್ನಡ ಮಾತು ತಲೆಯೆತ್ತುವ ಬಗೆ' ಎಂಬ ವಿಷಯದ ಮೇಲೆ ಶ್ರೀಯವರು ಮಾಡಿರುವ ಭಾಷಣದ ಭಾಗವಿದು. ಸರಿಸುಮಾರು ನೂರು ವರ್ಷಗಳ ಹಿಂದಿನ ಈ ಮಾತುಗಳು ಕನ್ನಡದ

ಬರಹ ರೂಪವನ್ನು ಕುರಿತು ವ್ಯಕ್ತಪಡಿಸುತ್ತಿರುವ ಚಿಂತನೆಗಳಾದ್ದರಿಂದ ಸಹಜವಾಗಿಯೇ ಕೆಲವು ಮಿತಿಗಳು ಒದಗುತ್ತವೆ. ಆದರೆ ಜನರ ಭಾಷೆಗೆ ಸ್ಪಂದಿಸುವ ರೀತಿಯಲ್ಲಿ ಬರಹಗಳು ಪ್ರಾರಂಭಗೊಂಡು ಅವು ಮುದ್ರಣ ರೂಪದಲ್ಲಿ ಪ್ರಕಟವಾದ್ದರಿಂದಲೇ ಆಧುನಿಕ ರಾಷ್ಟ್ರೀಯ ಸಂಚಲನೆಗಳು ಆರಂಭವಾದವು ಎಂದು ವಿವರಿಸುವ ಬೆನೆಡಿಕ್ಟ್ ಆಂಡರ್‌ಸನ್‌ರ ಅಭಿಪ್ರಾಯಗಳನ್ನೂ (print capitalism) ಗಮನಿಸಿದರೆ ಬಿ.ಎಂ.ಶ್ರೀಯವರ ಮೇಲಿನ ಅಭಿಪ್ರಾಯಗಳಿಗೆ ಅನೇಕ ಆಯಾಮಗಳು ಒದಗಲಾರಂಭಿಸುತ್ತವೆ. ಕನ್ನಡ ಭಾಷೆಯ ಹಿಂದುಳಿದಿರುವಿಕೆಗಾಗಿ ಸಾಂಸ್ಕೃತಿಕ ರಾಜಕೀಯ ಕಾರಣಗಳನ್ನು ಪಟ್ಟಿಮಾಡುವ ಬಿ.ಎಂ.ಶ್ರೀಯವರು ಮೈಸೂರು ಸಂಸ್ಥಾನಕ್ಕೆ ತುಂಬ ಹತ್ತಿರದವರು. ಆದರೆ ಅವರು ಮೈಸೂರಿನ ದೂರದ ಪ್ರದೇಶವಾದ ಧಾರವಾಡದಲ್ಲಿ ಮಾತನಾಡುತ್ತಿದ್ದಾರೆ.

ರಾಜಾಸ್ಥಾನಗಳಿಗಿಂತಲೂ, ಆ ಆಸ್ಥಾನಗಳಲ್ಲಿರುವ ಹೊಗಳುಭಟ್ಟ ಕವಿಗಳಿಂದ ಕನ್ನಡ ಭಾಷೆಯು ಅಧಃಪತನದ ಹಾದಿ ಹಿಡಿಯಿತೆಂಬುದು ಬಿ.ಎಂ.ಶ್ರೀಯವರ ನಿಲುವು. ಸಂಸ್ಕೃತದ ಕುರಿತು ದ್ವೇಷವಿಲ್ಲದ, ಬದಲಾಗಿ 'ಪ್ರಾಚೀನ ಕಾಲದ ಜ್ಞಾನ ಭಂಡಾರ ಸಂಸ್ಕೃತ ಆಗಿರುವುದರಿಂದ ಅದನ್ನು ಬಿಡುವ ಹಾಗಿಲ್ಲ ಎಂಬ ಅಭಿಪ್ರಾಯವನ್ನುಳ್ಳ ಬಿ.ಎಂ.ಶ್ರೀಯವರಿಗೆ ಕನ್ನಡ ಭಾಷೆಗೂ ತನ್ನದೆ ಶಬ್ದ ಭಂಡಾರವಿದೆ. ಆದರೆ ಅದನ್ನು ಸಂಸ್ಕೃತದ ಸೀಗೆಮೆಳೆಗೆ ಸಿಕ್ಕಿಸಿ ಹಳಗನ್ನಡ ಕವಿಗಳು ನರಳಿಸಿದ್ದಾರೆನ್ನುವ ನಿಲುವು ವ್ಯಕ್ತಪಡಿಸುತ್ತಾರೆ.

ಸ್ವಲ್ಪಮಟ್ಟಿಗೆ ಸಂಸ್ಕೃತ ಅಧಿಕಾರಸ್ಥ ಭಾಷೆಯಾಗಿ ಬಿ.ಎಂ.ಶ್ರೀಯವರಿಗೆ ಕಂಡರೂ ಅವರು ಮಾತನಾಡುತ್ತಿರುವ ಸಂದರ್ಭದಲ್ಲಿ ಸಂಸ್ಕೃತವೂ ಒಳಗೊಂಡು ಅಧಿಕಾರಸ್ಥ ಭಾಷೆಗಳಾಗಿ, ಕನ್ನಡದ ಮೇಲೆ ಯಜಮಾನಿಕೆ ನಡೆಸುತ್ತಿರುವ ಭಾಷೆಗಳು ಯಾವುದೂ ಇಲ್ಲವೆಂದು ಅವರು ಗ್ರಹಿಸಿದಂತಿದೆ. ಅಥವಾ ಕನ್ನಡದಂತೆಯೇ ಸೋದರ ಭಾಷೆಗಳೆಂದು ಭಾವಿಸಿರುವ ಭಾಷೆಗಳೂ ಸಹ ತಲೆಯೆತ್ತಬೇಕಾಗಿದೆಯೆಂಬ ನಿಲುವಿನಿಂದ ಹೊರಟಂತೆ ಕಾಣಿಸುತ್ತದೆ. ಅಥವಾ 'ಅಧಿಕಾರಸ್ಥ ಭಾಷೆ' ಎಂಬ ಪ್ರಶ್ನೆ ಬಿ.ಎಂ.ಶ್ರೀಯವರಿಗೆ ಸಮಸ್ಯೆಯಾಗಿ ಕಾಡಿರುವ ಸಾಧ್ಯತೆಗಳೂ ಇದ್ದಂತಿಲ್ಲ.

ಆಳದಲ್ಲಿ 'ಅನ್ಯ'ದ ಕುರಿತಾದ ಸ್ವಾಗತಕಾರಕ ನಿಲುವು, ದ್ವೇಷವಿಲ್ಲದ, ಸಂಕುಚಿತವಾಗಿಲ್ಲದ ನಿಲುವುಗಳೇ ಇಂದಿನ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಆಪ್ಯಾಯಮಾನವಾಗಿ ಕಾಣಿಸುತ್ತವೆ. ಆದರೆ ಕನ್ನಡಕ್ಕೆ ಒಂದು ಚೌಕಟ್ಟು ವಿಧಿಸಲು, ತಲೆಯೆತ್ತುವಂತೆ ಮಾಡಲು ಅನುಸರಿಸುವ ಮಾನದಂಡಗಳಾದರೂ ಏನು? ಎಂಬ ಪ್ರಶ್ನೆ ಹುಟ್ಟುತ್ತದೆ. ಅದಕ್ಕೆ ಬಿ.ಎಂ.ಶ್ರೀಯವರು ಕೊಡುವ ವಿವರಣೆ ಈ ರೀತಿ ಇದೆ :

"ಈಗಿನ ಆಡುವ ಭಾಷೆಯಲ್ಲಿ ಕ್ರಮವಿಲ್ಲ, ಏಕರೂಪವಿಲ್ಲ, ಪ್ರಾಂತ್ಯ ಭೇದವಿದೆ, ಮಿಶ್ರವಿದೆ, ಗ್ರಾಮ್ಯವಿದೆ. ಅರ್ಥ, ಕ್ರಮ ಎರಡೂ ಬೇಕಾದರೂ, ಅರ್ಥಮುಂದು, ಕ್ರಮ ಹಿಂದು, ಆದದ್ದರಿಂದ ಅರ್ಥವಾಗುವ ಹೊಸ ಭಾಷೆಯನ್ನೇ ಹಿಡಿದು ಕ್ರಮಕ್ಕೆ ಬರುವಂತೆ ತಪ್ಪು ಭಾಗವನ್ನೆಲ್ಲಾ ಶೋಧಿಸೋಣ. ಎರಡು ಭಾಷೆಗೂ ಮಧ್ಯಮಾರ್ಗವನ್ನು ಹಿಡಿದರೆ ಇದು ಸಾಧ್ಯವಾಗುತ್ತದೆ. ಹೊಸಗನ್ನಡದಲ್ಲಿ ವಚನ ಗ್ರಂಥವನ್ನು ಬರೆಯುವುದಕ್ಕೆ ಸತ್ತ ಕವಿಗಳೂ ಶಾಸನಕಾರರೂ ಬಲವಾಗಿ ಹಿಡಿದಿರುವ ಮುಷ್ಟಿಯಿಂದ ಭಾಷೆಯನ್ನು ಸಡಿಲಿಸಿ, ಬದುಕಿರತಕ್ಕವರ ಬಾಯಿಂದಲ್ಲಿ ಸ್ವತಂತ್ರವಾಗಿ ಉಸಿರಾಡಿ ಜೀವಕಳೆ ತುಂಬಿಕೊಳ್ಳುವಂತೆ ಮಾಡಬೇಕು. ಆದರೆ ಭಾಷೆಯನ್ನು

ಸುಲಭ ಮಾಡುತ್ತೇನೆಂದು, ಅಬದ್ಧ ಮಾಡಬಾರದು, ಗ್ರಾಮ್ಯವನ್ನು ದೂರವೇ ನಿಲ್ಲಿಸಿ, ಭಾಷೆ ಶುದ್ಧವಾಗಿ, ಬಿಗಿಯೂ ಕಟ್ಟು ಇರುವಂತೆ ಜಾಗ್ರತೆಯಿಂದ ನೋಡಿಕೊಳ್ಳಬೇಕು.''[೮]

ಬಿ.ಎಂ.ಶ್ರೀಯವರು ಪ್ರತಿಪಾದಿಸುತ್ತಿರುವ ಈ 'ಮಧ್ಯಮ' ಕನ್ನಡವೇ 'ಪ್ರಮಾಣೀಕೃತ ಭಾಷೆ' ಎಂದೂ ಕರೆಯಬಹುದೆನ್ನಿಸುತ್ತದೆ. ಮಕ್ಕಳು, ಹೆಂಗಸರು, ಒಕ್ಕಲಿಗರೂ ಹೀಗೆ ಹೊಸ ಓದುಗ ವರ್ಗದ ಅಗತ್ಯಗಳನ್ನು ಪೂರೈಸುವುದಕ್ಕೆ ಹೊಸ ನುಡಿಗಟ್ಟಿನ ಅವಶ್ಯಕತೆಯನ್ನು ಮನಗಂಡು ಬಿ.ಎಂ.ಶ್ರೀಯವರು ಈ ಮಾರ್ಗವನ್ನು ಪ್ರತಿಪಾದಿಸುತ್ತಿದ್ದಾರೆ. ಆದರೆ ಆ ಮಧ್ಯಮಮಾರ್ಗದ ಭಾಷೆ ಯಾವುದು? ಎಂಬುದಕ್ಕೆ ''ಒಂದು ದೇಶಭಾಷೆಯ ಮಾತುಗಳಿಗೇ ಎಲ್ಲವೂ ಗ್ರಂಥಕ್ಕೆ ಸೇರುವ ಯೋಗ್ಯತೆ ಇರುವುದಿಲ್ಲ, ಗ್ರಾಮ್ಯ, ಪ್ರಾಂತ್ಯ, ನೀಚ ಎಂದು ನಿಷೇಧ ಮಾಡುತ್ತೇವೆ. ಬಂದ ಹೊಸ ಶಬ್ದಗಳಿಗೆಲ್ಲಾ ಯಾಕೆ ಮಣೆಯನ್ನು ಹಾಕಬೇಕು? ಒಕ್ಕಲಿಗರನ್ನೂ ಹೊರಗಿರಿ ಎನ್ನುವವರು ಹೊಲೆಯರನ್ನೂ ದೇವರ ಮನೆಗೆ ಬಿಡುವುದುಂಟೊ?''[೯]

ಕನ್ನಡಕ್ಕೆ ಕಟ್ಟು ವಿಧಿಸುವ ಭರದಲ್ಲಿ ಬಿ.ಎಂ.ಶ್ರೀಯವರನ್ನು ನಿಯಂತ್ರಿಸುತ್ತಿರುವ ಸಂಗತಿಗಳು ಯಾವುವು? ಯಾವ ಕನ್ನಡವನ್ನು ಆಯ್ಕೆಮಾಡಿ ಕನ್ನಡಿಗರ ಮುಂದೆ ಇಡುತ್ತಿದ್ದಾರೆಂಬ ಸಂದೇಶಕ್ಕೆ ಉತ್ತರವೆಂಬಂತೆ ಅವರು ಕೊಡುವ ಉದಾಹರಣೆಗಳಲ್ಲೇ ಮೇಲ್ಜಾತಿಪರ ನಿಲುವು ಥಟ್ಟನೆ ಎದ್ದು ಕೂರುತ್ತವೆ. ಗ್ರಾಮ್ಯ, ಪ್ರಾಂತ್ಯ, ನೀಚ ಶಬ್ದಗಳೆಂದು ಕರೆಯುವ ಈ ನಿಲುವೇ ಚರ್ಚಾಸ್ಪದ. ಈ ನಿಲುವನ್ನು ಕುರಿತು ಕನ್ನಡ ಸಾಹಿತ್ಯ ವಿಮರ್ಶಕ ಮತ್ತು ಚಿಂತಕರಾದ ಎಚ್.ಎಸ್.ರಾಘವೇಂದ್ರರಾವ್‌ರವರು ಹೀಗೆ ಗುರುತಿಸುತ್ತಾರೆ:

''ರಾಜರಿಗೇ ಆಗಲಿ, ಪಂಡಿತರಿಗೇ ಆಗಲಿ ಬರೆಯತಕ್ಕ ಕಾಲ ಆಗಿಹೋಯಿತು. ಈಗ ಗಂಡಸರು, ಹೆಂಗಸರು, ಚಿಕ್ಕವರು, ದೊಡ್ಡವರು, ಬ್ರಾಹ್ಮಣರು, ಒಕ್ಕಲಿಗರು, ಅಷ್ಟರೂ ಓದುವಂತೆ ಬರೆಯಬೇಕು. (ಈ ಮಾತುಗಳು ಬಿ.ಎಂ.ಶ್ರೀಯವರವು) ೧೯೧೧ರಲ್ಲಿ ಈ ಎಲ್ಲಾ ಜನರೂ ಸಾಹಿತ್ಯವನ್ನು 'ಓದುವ' ಶಕ್ತಿಯನ್ನು ಪಡೆದಿದ್ದರೇ ಎಂಬ ಪ್ರಶ್ನೆಯು ಸಹಜವಾಗಿಯೇ ಮೂಡುತ್ತದೆ. ಅನಕ್ಷರಸ್ಥ ಜನಸಾಮಾನ್ಯನಿಗೂ ಗಮಕ ಮುಂತಾದ ದೇಶೀ ಸಂವಹನ ಮಾರ್ಗಗಳ ಮೂಲಕವಾಗಿ ತಲುಪುತ್ತಿದ್ದ ನಡುಗನ್ನಡ ಸಾಹಿತ್ಯದ ಜಾಗದಲ್ಲಿ, ಸುಶಿಕ್ಷಿತ, ಉತ್ತಮ ಜಾತಿಯ, ಮಧ್ಯಮ ವರ್ಗದ ಜನರಿಗೆ ಮಾತ್ರ ತಲುಪುವಂತಹ ಬರವಣಿಗೆಯ ಸಾಹಿತ್ಯವನ್ನು ರಚಿಸಿ, ಅದು ಹೆಚ್ಚು ಜನರಿಗೆ ತಲುಪಿತೆಂದು ಭ್ರಮಿಸುವುದು ಹೇಗೆ ಸಮಂಜಸ?........ ಗ್ರಾಮವನ್ನು ಬಿಟ್ಟು, ವಿದ್ಯಾವಂತರೂ, ಉತ್ತಮ ಜಾತಿಯವರೂ ಆಡುವ ಸ್ಫುಟವಾದ ಕನ್ನಡವನ್ನು ಗ್ರಂಥಭಾಷೆಯಾಗಿ ತಿರುಗಿಸಿಬಿಟ್ಟರೆ ಅಚ್ಚುಹಾಕುವುದರಿಂದಲೂ ಮಕ್ಕಳಿಗೆ ಕಲಿಸುವುದರಿಂದಲೂ ಇದೆ ನೆಲೆಯಾಗಿ ನಿಂತು ಎತ್ತಲೂ ಹರಡುತ್ತದೆ. (ಈ ಮಾತುಗಳೂ ಬಿ.ಎಂ.ಶ್ರೀಯವರನ್ನು) ಕೆಲವೇ ವರ್ಷಗಳಲ್ಲಿ, 'ಗ್ರಾಮ್ಯ'ವಾದ ಭಾಷೆಯನ್ನು ಕಾವ್ಯವನ್ನಾಗಿಸಿದ ಬೇಂದ್ರೆಯವರಿಗೆ ಹೋಲಿಸಿದಾಗ ಶ್ರೀಯವರ ವಾದ ಮತ್ತು ವಾಚಕವರ್ಗದ ಸ್ವರೂಪಗಳು ಅರ್ಥವಾಗುತ್ತವೆ.''[೧೦]

ಎಚ್.ಎಸ್. ರಾಘವೇಂದ್ರರಾವ್‌ರವರ ಅಭಿಪ್ರಾಯದಲ್ಲಿ ಬ್ರಾಹ್ಮಣರು ಬಳಸುವ ಕನ್ನಡವೇ, ಬಿ.ಎಂ.ಶ್ರೀಯವರು ಪ್ರತಿಪಾದಿಸುತ್ತಿರುವ 'ಮಧ್ಯಮ ಕನ್ನಡ' ಗ್ರಾಮ್ಯದ ಕುರಿತಾದ ಅವರ ತಿರಸ್ಕಾರದ

ಮನೋಭಾವವೇ 'ಜಾತಿ ಗ್ರಹೀತವಾದುದು' ಎಂಬಂತೆ ಎಚ್.ಎಸ್.ರಾಘವೇಂದ್ರರಾವ್‌ರವರು ಗ್ರಹಿಸುತ್ತಿದ್ದಾರೆಂಬಂತೆ ಅರಿವಾಗುತ್ತದೆ. ಮೇಲಿನ ಬಿ.ಎಂ.ಶ್ರೀಯವರ ನಿಲುವುಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿದಾಗ ಎಚ್.ಎಸ್. ರಾಘವೇಂದ್ರರಾಯರ ಅಭಿಪ್ರಾಯವನ್ನು ನಿರಾಕರಿಸಲು ಆಗುವುದಿಲ್ಲ.

ರಾಷ್ಟ್ರ ನಿರ್ಮಾಣದ ಮಾತುಗಳನ್ನಾಡುವ, ಎಲ್ಲರಲ್ಲೂ ಕಾಣುವ ಸಾಮಾನ್ಯ ನಿಲುವು, ಮೊದಲಿಗೆ ಎಲ್ಲವನ್ನು 'ಏಕರೂಪಿ'ಗೊಳಿಸುವುದು. ಈ ಮನೋಭಾವ ಇಂದಿಗಿಂತ ೨೦ನೇ ಶತಮಾನದ ಆರಂಭ ಘಟ್ಟದಲ್ಲಿ ಇನ್ನೂ ಹೆಚ್ಚಿ ಕ್ರಿಯಾಶೀಲವಾಗಿರಬೇಕು. ಆದರೆ ಉಪಭಾಷೆಗಳನ್ನು ಕುರಿತು ಬಿ.ಎಂ.ಶ್ರೀ ನಿಲುವು ಏನೆಂದು ಪರಿಶೀಲಿಸಲು ಹೊರಟರೆ ನಿರಾಸೆಯಾಗುತ್ತದೆ. ಎಲ್ಲ ಪ್ರಾಂತ್ಯ ಭೇದಗಳನ್ನೂ ನಿರಾಕರಿಸುವ ಬಿ.ಎಂ.ಶ್ರೀಯವರು ಉಪಭಾಷೆಗಳನ್ನು ನಿರಾಕರಿಸುತ್ತಾರೆ. ೫೦ರ ದಶಕದಲ್ಲಿ ಆಲೂರರು ಉಪಭಾಷೆಗಳನ್ನು ನಿರ್ಲಕ್ಷಿಸಬಾರದು ಎಂಬ ಎಚ್ಚರಿಕೆ ತೋರಿಸುತ್ತಾರೆ. ಆದರೆ ಬಿ.ಎಂ.ಶ್ರೀ ಪ್ರಮಾಣೀಕರಿಸಿದ ದೇಶಭಾಷೆಯನ್ನು ಬಿಟ್ಟು ಉಳಿದುದ್ದರ ಅಸ್ತಿತ್ವವನ್ನೇ ನಿರಾಕರಿಸುತ್ತಾರೆ. ಅಷ್ಟರ ಮಟ್ಟಿಗೆ ಅಪ್ರಜಾಪ್ರಭುತ್ವವಾದಿ ಅವರು. ಮೈಸೂರು ಕರ್ನಾಟಕದಿಂದ, 'ಕರ್ನಾಟಕದ ಏಕೀಕರಣ ಚಳುವಳಿಯನ್ನು ಬೆಂಬಲಿಸಿದ ಬಿ.ಎಂ.ಶ್ರೀಯವರ ಭಾಷೆ ಕುರಿತ ನಿಲುವುಗಳು ಆಶ್ಚರ್ಯ ಹುಟ್ಟಿಸುತ್ತವೆ. ಹಾಗೆ ನೋಡಿದರೆ ಎಚ್.ಎಸ್.ರಾಘವೇಂದ್ರರಾವ್‌ರವರ ಬೇಂದ್ರೆಯವರ ಕುರಿತಾದ ಮಾತುಗಳು ಸರಿಯೆನ್ನಿಸುತ್ತವೆ. ಬಿ.ಎಂ.ಶ್ರೀಯವರು ಯಾವುದನ್ನು ಗ್ರಾಮ್ಯವೆಂದು ತಿರಸ್ಕರಿಸಿದರೋ ಅದನ್ನೇ ಬೇಂದ್ರೆಯವರು ತಮ್ಮ 'ಕಾವ್ಯ ಮಾಧ್ಯಮ'ವನ್ನಾಗಿಸಿಕೊಂಡು ಅದಕ್ಕೆ ಅಪಾರ ಜನಮನ್ನಣೆಯನ್ನು ಒದಗಿಸಿಕೊಟ್ಟರು.

ಇಂಗ್ಲಿಷಿನ ಕುರಿತಂತೆ, ಬಿ.ಎಂ.ಶ್ರೀಯವರ ಗ್ರಹಿಕೆಗಳು ಕೂಡ ಏಕಪಕ್ಷೀಯವಾದವುಗಳೆನ್ನಿಸುತ್ತವೆ. ಕನ್ನಡ ರಾಷ್ಟ್ರೀಯತೆಯ ಮಹಾಕಂಟಕಗಳಲ್ಲಿ ಒಂದೆಂದು ಪರಿಗಣಿಸಲಾಗುತ್ತಿರುವ ಇಂದಿನ ಸಂದರ್ಭದಲ್ಲಿ, ಬಿ.ಎಂ.ಶ್ರೀಯವರು, ಕನ್ನಡ ಕಟ್ಟಲು ಒದಗಿದ ಮಹಾ ಅವಕಾಶವೆಂದೂ, ಇಂಗ್ಲಿಷನ್ನೂ ಭರತಮಾತೆಯ 'ಇನಿಯ ತಂಗಿ' ಎಂದು ಗ್ರಹಿಸುವ ನಿಲುವೇ ಇವತ್ತಿನ ಸಂದರ್ಭದಲ್ಲಿ ಆಘಾತಕರವಾದುದು. ಆದರೆ ಬಿ.ಎಂ.ಶ್ರೀ ಚಿಂತಿಸುತ್ತಿದ್ದ ಸಂದರ್ಭದಲ್ಲಿ ಇಂಗ್ಲಿಷನ್ನು ಕೇವಲ ಸಾಹಿತ್ಯದ ಕಾರಣಗಳಿಗಾಗಿ ಮೆಚ್ಚಿದಂತೆ ಕಾಣಿಸುತ್ತದೆ. ಅದರ ಅಧಿಕಾರಸ್ಥ ಗುಣಗಳು, ಮಾರುಕಟ್ಟೆಯ ಮೇಲೆ ಹಿಡಿತ ಸ್ಥಾಪಿಸುವುದಕ್ಕೆ ಸಂಸ್ಕೃತಿಯ ಮುಖವಾಡ ತೊಟ್ಟಿರುವುದು ಬಿ.ಎಂ.ಶ್ರೀಯವರ ಅರಿವಿಗೆ ಬಂದಿರುವ ಸಾಧ್ಯತೆಗಳೇ ಕಡಿಮೆ ಎಂದು ಅನ್ನಿಸುತ್ತದೆ. ಆದರೆ ಒಂದು ಅರಿವಂತೂ ಇದೆ, ಇಂಗ್ಲಿಷು ಮತ್ತು ಹಿಂದಿಗಳು ಕನ್ನಡಕ್ಕೆ ಪೂರಕವಾಗಿ ಕೆಲಸ ಮಾಡಬೇಕೇ ಹೊರತು, ಕನ್ನಡದ ಮೇಲೆ ಯಜಮಾನಿಕೆ ಸ್ಥಾಪಿಸಬಾರದು ಎಂಬ ನಿಲುವು ಸೂಚ್ಯವಾಗಿ ಅಲ್ಲಲ್ಲಿ ಕಾಣಿಸಿಕೊಳ್ಳುತ್ತದೆ. ಆ ಪ್ರಜ್ಞೆಯ ಭಾಗವಾಗಿಯೆ೨೦೫೯, "ಕನ್ನಡ ನಾಡಿಗೆ ಕನ್ನಡವೇ ಗತಿ, ಅನ್ಯಥಾ ಶರಣಂ ನಾಸ್ತಿ. "ಇಂಗ್ಲಿಷಲ್ಲ, ಹಿಂದಿಯಲ್ಲ ಕನ್ನಡ" [೧೧] ಎಂಬುದನ್ನೂ ಗುರುತಿಸುತ್ತಾರೆ.

ಕಾಲದ ಅಗತ್ಯಗಳು ಮತ್ತು ವ್ಯಕ್ತಿಯ ಚಿಂತನೆಯ ಹಿಂದಿನ ಒತ್ತಾಯಗಳು ಯಾವುವು, ಎಂಬುದರ ಆಧಾರದ ಮೇಲೆಯೇ ಚಿಂತನೆಗಳು ರೂಪುಗೊಳ್ಳುತ್ತವೆ ಎಂಬುದಕ್ಕೆ ಬಿ.ಎಂ.ಶ್ರೀಯವರೇ ಸಾಕ್ಷಿ. ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದ, ಇಂಗ್ಲಿಷಿನ ವಿವಿಧ ಅಭಿವ್ಯಕ್ತಿ ಮಾಧ್ಯಮಗಳು, ಕಥನ ಸಾಹಿತ್ಯದ ಸೌಂದರ್ಯಕ್ಕೆ

ಮಾರುಹೋಗಿದ್ದ, ಮೈಸೂರು ರಾಜರಿಗೆ ನಿಷ್ಠರಾಗಿದ್ದ ಕನ್ನಡವನ್ನು ಆಧುನಿಕ ಅಗತ್ಯಗಳಿಗೆ ಕಟ್ಟಬೇಕೆಂದು ಯೋಚಿಸುತ್ತಿದ್ದ, ಬ್ರಾಹ್ಮಣ ಹಿನ್ನೆಲೆಯ ಮೂಲಕವೇ ಅದನ್ನು ಕಾರ್ಯಗತಗೊಳಿಸಲು ಪ್ರಯತ್ನಿಸಿದ, ಉತ್ತರ ಕರ್ನಾಟಕದ ಜನಸಮುದಾಯಗಳ ಜತೆ ಸಂಪರ್ಕವಿಟ್ಟುಕೊಂಡಿದ್ದ ಬಿ.ಎಂ.ಶ್ರೀಯವರು ಉಪಭಾಷೆಗಳನ್ನು ನಿರಾಕರಿಸುತ್ತಾರೆ. ಆದರೆ ಹಳ್ಳಿಗಳ, ಹೆಂಗಸರ ಏಳಿಗೆ ಕುರಿತು ಪುಸ್ತಕ ಬರೆಸುತ್ತಾರೆ. ಮುನ್ನುಡಿ ಬರೆಯುತ್ತಾರೆ. ಜಗತ್ತಿನ ವಿವಿಧ ಸಂಸ್ಕೃತಿಗಳಲ್ಲಿರುವ ಅತ್ಯುತ್ತಮವಾದದ್ದನ್ನು ಅನುವಾದಿಸಿಕೊಳ್ಳಬೇಕೆಂಬ ಹಂಬಲ ಬಿ.ಎಂ.ಶ್ರೀಯವರದು. ಈ ಸ್ವೀಕರಣ ಗುಣವೇ ಅವರನ್ನು ಮತೀಯವಾದಿಯಾಗದಂತೆ, ಸಂಕುಚಿತವಾದಿಯಾಗದಂತೆ ತಡೆಯುತ್ತದೆ. ಆದರೆ ಭಾಷೆಯನ್ನು ಅದೇ ದೃಷ್ಟಿಯಲ್ಲಿ ನೋಡಲಾಗದು ಎಂಬುದಕ್ಕೆ ಮೇಲಿನ ವಿವರಗಳು ಸಾಕ್ಷಿ. ಆರ್ಥಿಕ-ರಾಜಕೀಯ ಹಿತಾಸಕ್ತಿಗಳ ಜೊತೆಯಲ್ಲಿಯೇ ಭಾಷಿಕ ವಿಚಾರಗಳು ತಳುಕು ಹಾಕಿಕೊಂಡಿರುತ್ತವೆ. ಬಿ.ಎಂ.ಶ್ರೀ ಇದನ್ನು ಗಮನಿಸದೆ ಹೋದದ್ದು ಮಾತ್ರ ಕನ್ನಡ ರಾಷ್ಟ್ರೀಯತೆಯ ಆರಂಭಿಕ ಕೊರತೆಗಳಲ್ಲೊಂದೆಂದು ಗ್ರಹಿಸಬಹುದಾಗಿದೆ.

ಕಡೆಯದಾಗಿ ಅನ್ಯ ಭಾಷಿಕರ ಕುರಿತು ಆಲೂರು ವೆಂಕಟರಾಯರು ತಳೆದ ನಿಲುವನ್ನೇ ತಳೆಯುತ್ತಾರೆ. "ಕನ್ನಡ ದೇಶದಲ್ಲಿ ನೆಲೆಸಿರುವ ತೆಲುಗು, ತಮಿಳು ಭಾಷೆಗಳನ್ನಾಡುವ ಜನರು ಕನ್ನಡಿಗರಾಗಬೇಕು ಕನ್ನಡಕ್ಕೆ ಹೊಂದಿಕೊಳ್ಳಬೇಕು ಅದರ ಹೊಟ್ಟೆಯಲ್ಲೇ ಮುಳ್ಳಾಗಿ ನಿಲ್ಲಬಾರದು"[೧೨] ಎಂಬ ನಿಲುವು ಆಲೂರರು ಪ್ರತಿಪಾದಿಸಿದ ತಾದಾತ್ಮ್ಯದ ಪರಿಕಲ್ಪನೆಯನ್ನೇ ನೆನಪಿಸುತ್ತದೆ. ಸಂಕುಚಿತ ವಾದಿಯಲ್ಲದ ಈ ನಿಲುವು ಸ್ವೀಕಾರಾರ್ಹವಾದುದು.

ಆದರೆ ಅವರ ತ್ರಿಭಾಷಾ ಸೂತ್ರ ಮಾತ್ರ ವಿವಾದಾತ್ಮಕವಾದುದು. "ಸಾಮಾನ್ಯವಾದ ರಾಜಕಾರ್ಯಕ್ಕೂ ಇಂಡಿಯ ರಾಜ್ಯಕ್ಕೆಲ್ಲಾ ಸಂಬಂಧಪಟ್ಟ ವಿಷಯಗಳಿದ್ದರೂ ಬೇರೆ ಬೇರೆ ಪ್ರಾಂತ್ಯಗಳಿಂದ ಜನ ಕಲೆಯತಕ್ಕ ಸಭೆಗಳಿಗೂ, ಬಳಸುವುದಕ್ಕೆ ಇಂಗ್ಲೀಷ್ ಭಾಷೆಯನ್ನು ಇಟ್ಟುಕೊಳ್ಳುವುದು, ಪೂರ್ವಿಕರಾದ ಆರ್ಯರ ಭಾಷೆಯಾದ ಸಂಸ್ಕೃತದಲ್ಲೇ ಪುಸ್ತಕ ಭಂಡಾರವೆಲ್ಲ ಅಡಗಿದೆ ಅದನ್ನು ಬಿಡುವ ಹಾಗಿಲ್ಲ ಮತ್ತು ಆಧುನಿಕ ರಾಷ್ಟ್ರ ನಿರ್ಮಾಣ ಅಗತ್ಯಕ್ಕೆ ದೇಶ ಭಾಷೆಯನ್ನು ಬಳಸುವುದು."[೧೩]

ಬಿ.ಎಂ.ಶ್ರೀಯವರ ಒಟ್ಟು ಭಾಷಿಕ ನಿಲುವುಗಳ ಕುರುಹಾಗಿ ಮೇಲಿನ ಮಾತುಗಳು ಕಾಣುತ್ತವೆ.

### ೩.೪ ಭಾಷೆ ಕುರಿತಂತೆ ಶಂಬಾ ಜೋಶಿಯವರ ಚಿಂತನೆಗಳು

ಮರಾಠಿ ಮೂಲದ ಕನ್ನಡ ವಿದ್ವಾಂಸರಲ್ಲಿ ಶಂಬಾ ಜೋಶಿಯವರ ಹೆಸರು ದೊಡ್ಡದು. ಮರಾಠಿ ಮತ್ತು ಕನ್ನಡಗಳ ಸಂಘರ್ಷಮಯ ವಾತಾವರಣದಲ್ಲಿ ಚಿಂತಿಸಿ, ಬರಹದ ಕೆಲಸ ಮಾಡಿದ ಶಂಬಾ ಜೋಶಿಯವರ ಚಿಂತನೆಗಳು, ಮರಾಠಿಯನ್ನೂ ಒಳಗೊಂಡಂತೆ ಉತ್ತರ ಭಾರತದ ಪ್ರಮುಖ ಅಧಿಕಾರಸ್ಥ ಭಾಷೆಗಳಿಗೆ ಪ್ರತಿಕ್ರಿಯೆ ಮಾಡಿದ ಭಾಗವಾಗಿ ಹುಟ್ಟಿಕೊಂಡಿವೆ ಎನ್ನಿಸುತ್ತದೆ. ಅದರಲ್ಲೂ ಕಳೆದ ಶತಮಾನದ ಪೂರ್ವಾರ್ಧದಲ್ಲಿ ಮುಂಬೈ ಕರ್ನಾಟಕದಲ್ಲಿ ಬ್ರಿಟಿಷರ ರಾಜಕೀಯ ಆರ್ಥಿಕ ಹಿತಾಸಕ್ತಿಗಳ ಕಾರಣಕ್ಕೆ ಅನೇಕ ಮರಾಠಿ ಅಧಿಕಾರಿಗಳನ್ನು ತಂದು ನಿಲ್ಲಿಸಿದ ಪರಿಣಾಮ, ಮರಾಠಿ ಕನ್ನಡದ ಶತ್ರುಪಾಳೆಯದಲ್ಲಿ ನಿಲ್ಲಲು

ಕಾರಣವಾಯಿತು ಎನ್ನಿಸುತ್ತದೆ. ಹಾಗಾಗಿ ಶಂಬಾ ಮುಂತಾದ ಸಂಶೋಧಕ ವಿದ್ವಾಂಸರುಗಳಿಗೆ ಮರಾಠಿಯ ಯಜಮಾನಿಕೆಯನ್ನು ವಿರೋಧಿಸುವುದರ ಮೂಲಕವೇ ಕನ್ನಡದ 'ಚಹರೆ'ಯನ್ನು ಗಟ್ಟಿಗೊಳಿಸುವ ಏಕೈಕ ವಿಧಾನ ಎಂಬಂತೆ ಗ್ರಹಿಸಿರಲೂಬಹುದು. ಕನ್ನಡ-ಮರಾಠಿಗಳ ಸಂಘರ್ಷವನ್ನು ಕನಿಷ್ಠ ಸಾವಿರವರ್ಷದವರೆಗೆ ವಿಸ್ತರಿಸಿ ಹೇಳುವ ಶಂಬಾ ಜೋಶಿಯವರು ಅದರಾಚೆಗೆ ಮರಾಠಿಗೆ ಅಸ್ತಿತ್ವವೇ ಇರಲಿಲ್ಲ, ಈಗಿನ ಮಹಾರಾಷ್ಟ್ರವೆಲ್ಲವೂ ಕನ್ನಡ ಜನರು ಬಾಳುವೆ ಮಾಡಿದ್ದ ಭೂಪ್ರದೇಶ ಎನ್ನುತ್ತಾರೆ. ತಮ್ಮ ಸಿದ್ಧಾಂತಕ್ಕೆ ಪುರಾವೆಗಳನ್ನು ಹುಡುಕುವ ಕೆಲಸದ ಮಧ್ಯೆ ಕನ್ನಡದ ಬಹುದೊಡ್ಡ ವಿದ್ವಾಂಸರಾಗಿ ಶಂಬಾ ರೂಪುಗೊಂಡಂತೆ ಕಾಣಿಸುತ್ತಾರೆ.

ಕನ್ನಡ-ಮರಾಠಿ ಜನಸಮುದಾಯಗಳನ್ನು 'ಆರಿಯ ಕಂದಮಿಳ'ರೆಂದು ವಿಂಗಡಿಸಿ ಅಧ್ಯಯನ ಆರಂಭಿಸುತ್ತಾರೆ. ಸಿಂಧೂನದಿಯಿಂದ ಭಾರತದ ಭೂಭಾಗದ ಕೊನೆಯ ಭಾಗದವರೆಗೆ (ಉತ್ತರ-ಪೂರ್ವ ಭಾರತ ಬಿಟ್ಟು) ಹಬ್ಬಿರುವ ಪ್ರದೇಶದ ಸ್ಥಳನಾಮಗಳು, ಜನಾಂಗ ಲಕ್ಷಣಗಳು, ಭಾಷಿಕ ಲಕ್ಷಣಗಳು ಶಾಸನಗಳು, ಆಚರಣೆಗಳು, ನಂಬಿಕೆಗಳು ಮುಂತಾದವುಗಳನ್ನು ವಿಶ್ಲೇಷಿಸಿ 'ಆರಿಯ' [೧೪] ಪೂರ್ವ ಯುಗದಲ್ಲಿ ಕಂದಮಿಳು ಪ್ರದೇಶಗಳಾಗಿದ್ದವು ಎಂದು ಅವರು ಅಭಿಪ್ರಾಯಪಡುತ್ತಾರೆ.

ಶಂಬಾ ಜೋಶಿಯವರ ಒಟ್ಟು ಚಿಂತನೆಗಳ ತಳದಲ್ಲಿ ಭಾಷೆ ಎಂಬುದು ಮೂರ್ತ ಸ್ವರೂಪದಲ್ಲಿ ಹರಿಯುವ ವಿದ್ಯುತ್ತಿನಂತೆ ಕೆಲಸ ಮಾಡುತ್ತದೆ. ಕನ್ನಡ ಎಂಬುದು 'ಭಾಷೆ-ಜನಾಂಗ' ಎರಡೂ ಅರ್ಥಗಳನ್ನು ಒಳಗೊಂಡುದೆಂದು ಅವರು ಪ್ರತಿಪಾದಿಸುತ್ತಾರೆ. ಕನ್ನಡ ಭಾಷೆಯ ಸಂಕಟಗಳನ್ನು 'ಗತ'ದಲ್ಲಿ ಹುಡುಕುವ ಶಂಬಾ ಜೋಶಿಯವರಿಗೆ, ವರ್ತಮಾನದಲ್ಲಿ ವಸಾಹತುಶಾಹಿ ಸೃಷ್ಟಿಸಿದ, ಭಾಷೆಯ ಕುರಿತಾದ ಮಹಾತಲ್ಲಣಗಳು ಶಂಬಾರಿಗೆ ಮುಖ್ಯವಾಗುವುದೇ ಇಲ್ಲ. ಗತಿಸಿದ ದಿನಗಳಲ್ಲಿನ ವೈಭವಗಳನ್ನು ನೆನೆದು ವರ್ತಮಾನದ ಕುಬ್ಜತೆಗೆ ವಿಷಾದ ವ್ಯಕ್ತಪಡಿಸುವ ಶಂಬಾರಿಂದ ಇವತ್ತಿನ ಕನ್ನಡದ ಕಷ್ಟಗಳಿಗೆ ಹೇಗೆ ಸಹಾಯ ಪಡೆಯಬಹುದು ಎಂಬ ಕುರಿತಾಗಿ ಯೋಚಿಸಿದರೆ ಉತ್ತರ ಅಷ್ಟೊಂದು ಆಶಾದಾಯಕವಾಗಿರುವುದಿಲ್ಲ. ಹಿಂದಿ, ಇಂಗ್ಲಿಷುಗಳೆಂಬ ಕನ್ನಡದ ಕಂಟಕಗಳ ಕುರಿತು ಶಂಬಾರ ಚಿಂತನೆಗಳು ಇಲ್ಲವೇ ಇಲ್ಲ ಎನ್ನಬಹುದು.

ಶಂಬಾ ಜೋಶಿಯವರ ಭಾಷಿಕ ಅಧ್ಯಯನಗಳ ಮುಖ್ಯ ಆಯಾಮಗಳಲ್ಲಿ, ಭಾಷೆ, ಧರ್ಮ ಮತ್ತು ಪ್ರಭುತ್ವಗಳಿಗಿರುವ ಕಾರಣ, ಮೀಮಾಂಸೆಯ ಎಳೆಯನ್ನು ಗುರುತಿಸುವುದು. ಸಂಸ್ಕೃತಿಯ ಪ್ರಮುಖವಾಹಕವಾಗಿದ್ದ ಸಂಸ್ಕೃತ ಭಾಷೆ, ಇದು ಐಹಿಕ ಜೀವನದಲ್ಲಿ ಸಾಫಲ್ಯವನ್ನು ಕಾಣುತ್ತಿದ್ದ ಪ್ರವೃತ್ತಿ ಮಾರ್ಗಿಗಳ ಭಾಷೆ ಎನ್ನಿಸಿತು. ಆದರೆ ಅಹಿಂಸಾ ಮಾರ್ಗವನ್ನು ಹೇಳಿದ ಜೈನ, ಬೌದ್ಧ, ಶೈವ ಧರ್ಮಗಳು ಜನರಿಗೆ ಹತ್ತಿರದ ಭಾಷೆಗಳಾದ ಪಾಳಿ, ಪ್ರಾಕೃತ, ಅಪಭ್ರಂಶಗಳನ್ನೂ ಪ್ರಚಾರಕ್ಕೆ ಬಳಸಿಕೊಂಡವು. ಆರ್ಯವಾಸ ಪ್ರದೇಶಗಳ ಸುತ್ತಲೂ ಇದ್ದ ಪ್ರದೇಶಗಳಲ್ಲಿ ಇವು ಕೆಲಸ ಮಾಡಲಾರಂಭಿಸಿರಬೇಕು. ಹಾಗಾಗಿ ಮರಾಠಿ ಗುಜರಾತಿ ಕನ್ನಡ ಭಾಷೆಗಳಲ್ಲಿ ಸಂಸ್ಕೃತಕ್ಕಿಂತಲೂ ಪ್ರಾಕೃತ ಭಾಷೆಯ ಪ್ರಭಾವ ಹೆಚ್ಚಾಗಿದೆ ಎಂದು ಅವರು ಗುರುತಿಸುತ್ತಾರೆ. ಕನ್ನಡದಲ್ಲಿ ಅವೈದಿಕ ಸಾಹಿತ್ಯ ಪ್ರಧಾನವಾಗಿದ್ದ ಕಾರಣದಿಂದ ಅನೇಕ ಬ್ರಾಹ್ಮಣ ವಿದ್ವಾಂಸರು ತೆಲುಗು ಮುಂತಾದ ಭಾಷೆಗಳ ಕಡೆಗೆ ವಲಸೆ ಹೋದುದನ್ನು ಅವರು ಪ್ರಸ್ತಾಪಿಸುತ್ತಾರೆ.

ಹಾಗಾಗಿ ಶಂಬಾ ಜೋಶಿಯವರು ಈ ಕುರಿತು ವ್ಯಕ್ತಪಡಿಸುವ ಒಟ್ಟಾರೆ ಅಭಿಪ್ರಾಯ ಹೀಗಿದೆ :

"ಧರ್ಮ ಮತ್ತು ಭಾಷೆ ಇವೆರಡನ್ನೂ ಒಂದರಿಂದೊಂದು ಬೇರ್ಪಡಿಸಿ ವಿಚಾರಿಸಿ ನೋಡಲು ಅಸಮರ್ಥವಿದ್ದ ಸಾಮಾಜಿಕ ವಾತಾವರಣವನ್ನು ಚೆನ್ನಾಗಿ ನೆನಪಿಟ್ಟುಕೊಂಡಲ್ಲದೆ ಕಂನುಡಿಯು, ಕಂನಾಡ ಜನಪದವು ಗೋದೆ-ನರ್ಮದೆಯಿಂದ ತಗ್ಗಿ ಕೃಷ್ಣ ಮಲಾಪಹಾರಿಗೆ ಬಂದುದರ ಅರ್ಥವೇ ಆಗಲಾರದು....ಋಗ್ವೇದ ಕಾಲದಿಂದಲೇ ಕಂದಮಿಳ ಉಪಭಾಷೆಗಳ ಸಂಸ್ಕೃತೀಕರಣಕ್ಕೆ ಪ್ರಾರಂಭವಾಗುತ್ತದೆ."[೧೭]

ಆದರೆ ಧರ್ಮ ಮತ್ತು ಪ್ರಭುತ್ವದ ಕಾರಣಗಳಿಗಾಗಿ ಭಾಷೆಗಳು ರೂಪು ತಳೆಯುವ ವಿದ್ಯಮಾನವನ್ನು ಕುರಿತಂತೆ ಹೊಯ್ಸಳ ಸೇವುಣ ದೇವಗಿರಿ ಯಾದವರ ಸಂಘರ್ಷದಲ್ಲಿ ಕನ್ನಡ ಮರಾಠಿಗಳು ಬೇರೆಯಾಗಿ ಸ್ವತಂತ್ರಗೊಂಡ ಕಥಾನಕವನ್ನು ಶಂಬಾ ಅದ್ಭುತವಾಗಿ ವಿವರಿಸುತ್ತಾರೆ. ಆ ಮೂಲಕ ಕನ್ನಡ ಭಾಷಿಕ ಚಿಂತನೆಗೆ ಹೊಸದೊಂದು ರಾಜಕೀಯ ಆಯಾಮ ಒದಗಿಸುತ್ತಾರೆ. ಎರಡು ಪ್ರಭುತ್ವಗಳ ನಡುವಣ, ಎರಡು ಧರ್ಮಗಳ ಘರ್ಷಣೆಗಳು ಹೇಗೆ ಭಾಷೆಯ ಉಗಮ ಮತ್ತು ಅವನತಿಗಳಿಗೆ ಕಾರಣವಾಗುತ್ತವೆ ಎಂಬುದನ್ನು ಸಿದ್ಧಾಂತ ರೂಪದಲ್ಲಿ ಶಂಬಾರವರು ಮಂಡಿಸುತ್ತಾರೆ. ವೈದಿಕ ಸಂಘರ್ಷದಲ್ಲಿ ಜೈನ ಬೌದ್ಧಗಳು ಪಾಲಿ-ಪ್ರಾಕೃತಗಳನ್ನು ಮಾಧ್ಯಮ ಭಾಷೆಯಾಗಿಸಿಕೊಂಡು ಅವನ್ನು ಜನ ಭಾಷೆಯಾಗಿ ರೂಪಿಸಿಕೊಂಡದ್ದನ್ನು ಅವರು ಗುರುತಿಸಬಲ್ಲವರಾಗಿದ್ದಾರೆ. ಹಾಗೂ ದಕ್ಷಿಣ ಭಾರತದ ಭಕ್ತಿ ಚಳುವಳಿ ಸ್ಥಳೀಯ ರಾಷ್ಟ್ರೀಯ ಭಾಷೆಗಳನ್ನು ಇನ್ನಷ್ಟು ಆಳಗೊಳಿಸಿದವು ಎಂಬುದನ್ನು ಹೇಳುವ ಶಂಬಾ, ಕನ್ನಡದ ವಚನ ಚಳುವಳಿ ಮತ್ತು ದಾಸ ಸಾಹಿತ್ಯಗಳು ಮಾತ್ರ ಅಷ್ಟು ಆಶಾದಾಯಕವಲ್ಲದ ಫಲ ನೀಡಿವೆ ಎಂದು ನಿರಾಸೆ ವ್ಯಕ್ತಪಡಿಸುತ್ತಾರೆ. ವಚನ ಚಳುವಳಿಗೆ ಭಾಷೆಗಿಂತ 'ಭಕ್ತಿ' ದೊಡ್ಡದು ಹರಿದಾಸರಿಗೆ 'ಸಂಸ್ಕೃತ ಸಂಸ್ಕೃತಿ' ನಿಷ್ಠೆ ದೊಡ್ಡದು ಎನ್ನುತ್ತಾರೆ. ಈ ಎರಡೂ ಚಳುವಳಿಗಳ ಕುರಿತಾದ ನಿಲುವು 'ಸೀಮಿತ' ದೃಷ್ಟಿಕೋನವೋ ಅಥವಾ ಅತಿ ನಿರೀಕ್ಷೆಯ ಕಾರಣವೋ ಅರ್ಥವಾಗುವುದಿಲ್ಲ. ಬ್ರಾಹ್ಮಣ-ಲಿಂಗಾಯತ ಮೇಲಾಟದಲ್ಲಿ, ವಚನ ಚಳುವಳಿ ಕುರಿತ ಶಂಬಾರ ಭಾಷಿಕ ದೃಷ್ಟಿಕೋನ ಮಾತ್ರ ಬೆರಗು ಹುಟ್ಟಿಸಬಲ್ಲದು. ಬ್ರಾಹ್ಮಣ ಚಿಂತಕರು ಕಳೆದ ಶತಮಾನದ ಆರಂಭದಲ್ಲಿ ವಚನ ಚಳುವಳಿಗೆ ಹೇಗೆ ಪ್ರತಿಕ್ರಿಯಿಸಿರಬಹುದು ಎಂಬ ಕುತೂಹಲಕ್ಕೆ ಶಂಬಾರ ಈ ಸಣ್ಣ ಅಸಮಾಧಾನವೂ ಪ್ರಶ್ನೆಯಾಗಿ ಕಾಣುತ್ತದೆ.

ಕನ್ನಡ ಭಾಷೆಯ ಅನನ್ಯತೆಯ ಶೋಧದಲ್ಲಿ ತೊಡಗಿದ್ದ ಶಂಬಾರ ಪ್ರಬುದ್ಧ ನಿಲುವುಗಳು ಕಾಣಿಸಿಕೊಳ್ಳುವುದು, ಅವರು ಸಂಸ್ಕೃತ ಮತ್ತು ಮರಾಠಿಯನ್ನು ಒಳಗೊಂಡ ಆರ್ಯನ್ ಗುಂಪಿನ ಭಾಷೆಗಳಲ್ಲಿ ನೆಲೆಸಿರುವ ಕನ್ನಡ ಪದಗಳ ಪಟ್ಟಿ ಮಾಡುವಾಗ. ಯಜಮಾನ ಸ್ಥಾನದಲ್ಲಿರುವ ಈ ಭಾಷೆಗಳಲ್ಲಿ ಕನ್ನಡ ಪದಗಳೆಷ್ಟಿವೆ? ಹೇಗೆ ಹೋಗಿವೆ? ಏಕೆ ನೆಲೆಸಿವೆ? ಎಂಬ ಶೋಧವೇ ಕನ್ನಡ ರಾಷ್ಟ್ರೀಯತೆಯ ಪರಿಕಲ್ಪನೆಗೆ ಅವರು ನೀಡಿರುವ ಅತಿದೊಡ್ಡ ಕೊಡುಗೆಗಳಲ್ಲೊಂದು. ಸಾಂಪ್ರದಾಯಕ ಕನ್ನಡ ಭಾಷಾ ಶಾಸ್ತ್ರಜ್ಞರು ಕನ್ನಡವನ್ನು ಸಂಸ್ಕೃತ ಭಾಷೆ ಅಥವಾ ಆರ್ಯನ್ ಮೂಲದ ಭಾಷೆಗಳಿಂದ ರೂಪುಗೊಂಡಿದೆ ಎಂದು ವಾದ ಮಂಡಿಸುತ್ತಿರುವಾಗ ಶಂಬಾ ಜೋಶಿಯವರಿಗೆ ನನ್ನ ಭಾಷೆಯಿಂದ ಯಜಮಾನ ಭಾಷೆ ಅಪಾರ ಶಬ್ದಗಳನ್ನು

ತುಂಬಿಕೊಂಡಿದೆ ಎಂಬುದೇ ನಾನೇನು ಕಡಿಮೆಯಲ್ಲ ಎಂಬ ಆತ್ಮವಿಶ್ವಾಸವನ್ನು ಒದಗಿಸುತ್ತದೆ. ಅಲ್ಲದೆ, ಶಂಬಾರ ಅಭಿಪ್ರಾಯದಲ್ಲಿ, "ಉತ್ತರ ಹಿಂದುಸ್ತಾನದಲ್ಲಿಯೇ ರಚಿಸಲ್ಪಟ್ಟ ಸಂಸ್ಕೃತ ಸಾಹಿತ್ಯದಲ್ಲಿ ಕಂಡಮಿಳ ವರ್ಗದ ಮಾತುಗಳು ದೊರೆಯುವುದರಿಂದ ಆ ಪ್ರದೇಶದಲ್ಲಿ ಆಗ ಈ ಜನ ನೆಲೆಸಿದ್ದಿತೆಂದು ನಿಶ್ಚಿತವಾಗುತ್ತದೆ. ಈ ಬಗೆಯ ಆರ್ಯೇತರ ಪಡಿಯಚ್ಚಿನ ಮಾತುಗಳೂ, ವಿಚಾರಗಳೂ ಋಗ್ವೇದದಿಂದಲೇ ದೊರೆಯುತ್ತವೆ"[೧೪]; ಆ ಕಾರಣಕ್ಕಾಗಿ ಆರ್ಯಾವರ್ತವೆಂದು ಕರೆಯಲಾಗುತ್ತಿರುವ ಪ್ರದೇಶವೆಲ್ಲ ಒಂದೊಮ್ಮೆ ಕಂಡಮಿಳು ಬಾಳಿ ಬದುಕಿದ ಪ್ರದೇಶಗಳು ಎಂಬುದು ಅವರ ಸಿದ್ಧಾಂತ.

ಈ ಸಿದ್ಧಾಂತವು ವರ್ತಮಾನದ ತಲ್ಲಣಗಳಿಗೆ ಹೇಗೆ ಔಷಧವಾಗಬಲ್ಲದು ಎಂಬ ಪ್ರಶ್ನೆಯ ಕಡೆಗೆ ಪದೇ ಪದೇ ವಾಪಸ್ಸು ತಿರುಗಬೇಕಾಗುತ್ತದೆ. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಸೆರೆಮನೆಗೂ ಹೋಗಿ ಬಂದಿರುವ ವೃತ್ತಿಯಲ್ಲಿ ಶಿಕ್ಷಕರಾಗಿದ್ದ ಶಂಬಾ ಬ್ರಿಟಿಷ್ ಪ್ರಭುತ್ವ ಕುರಿತಂತೆ ಬಿಡಿಬಿಡಿ ಪ್ರತಿಕ್ರಿಯೆ ಬಿಟ್ಟರೆ, ದೀರ್ಘ ಬರೆಹಗಳನ್ನೇನೂ ಮಾಡಿದಂತೆ ಕಾಣುವುದಿಲ್ಲ. ಬದುಕಿನ ಬಹುಭಾಗವನ್ನು ಬ್ರಿಟಿಷ್ ಪ್ರಭುತ್ವದಡಿ ಕಳೆದ ಅವರ ಈ ವರ್ತನೆ ವಿಚಿತ್ರವೆನಿಸುತ್ತದೆ. ವಸಾಹತುವಾದದ ಬಹಳ ದೊಡ್ಡ ಅಸ್ತ್ರವಾದ ಇಂಗ್ಲಿಷನ್ನು ಕುರಿತಂತೆ ಶಂಬಾ ಅವರು ಮೃದುವಾಗಿದ್ದರೆ? ಅಥವಾ ಅವರದು ಅನುಕೂಲವಾದಿ ನಿಲುವೆ? ಕುವೆಂಪು ಅವರಂತೆ ವರ್ತಮಾನದ ಬಿಕ್ಕಟ್ಟುಗಳನ್ನು ಸಮಾಜದ ತಲ್ಲಣಗಳನ್ನು ಶಿಕ್ಷಣ ಸಂಸ್ಥೆಯೊಂದನ್ನು ನಡೆಸುವಾಗ ಎದುರಿಸುತ್ತಿದ್ದ ಕಷ್ಟಗಳು ಮರಾಠಿ ಅಧಿಪತ್ಯದಲ್ಲಿದ್ದ ಶಂಬಾರಿಗೆ ಕಾಡಿರಲಿಕ್ಕಿಲ್ಲವೆ? ಆದರೆ ಶಂಬಾರವರು ತಮ್ಮ ಅಧ್ಯಯನಕ್ಕೆ ಆಕರವಾಗಿ ಬಳಸಿಕೊಂಡದ್ದು ಬಹುಪಾಲು ಇಂಗ್ಲಿಷನ್ನೆ. ಆ ಕಾರಣಕ್ಕೆ ಬಿ.ಎಂ.ಶ್ರೀಯವರಂತೆ ಇಂಗ್ಲಿಷ್ ಕುರಿತು ಅವರಿಗೆ ಗೌರವವೂ ಇರಬಹುದು. ಹಾಗಾಗಿ ಇಂಗ್ಲಿಷ್‌ನ ಯಜಮಾನಿಕೆಯ ಕುರಿತು ಹೆಚ್ಚೇನೂ ಅವರು ಬರೆದಿಲ್ಲವೆನ್ನಿಸುತ್ತದೆ. ಅವರ ಸಿದ್ಧಾಂತದ ವಿಶ್ಲೇಷಣೆಯ ಗುಣ ವರ್ತಮಾಸಕ್ಕೆ ದಕ್ಕದೆ ಹೋಗಿ ಬಿಡುವುದು ಇಲ್ಲಿಯೇ ಇರಬೇಕು. ಮೆಕಾಲೆಯ ಇಂಗ್ಲಿಷ್ ಭಾಷಾ ಮಾಧ್ಯಮದ ಕುರಿತು ವಿಶ್ಲೇಷಿಸಬಲ್ಲವರಾಗಿದ್ದ ಶಂಬಾ ಅದರ ಪರಿಣಾಮಗಳ ಕಡೆಗೆ ಗಮನ ಹರಿಸದಿರುವುದು ಬೆರಗು ಹುಟ್ಟಿಸುತ್ತದೆ. ಇಂಗ್ಲಿಷಿನ ಭಾಷಾ ರಾಜಕಾರಣದ ಕುರಿತು ಹೆಚ್ಚು ತಲೆ ಕೆಡಿಸಿಕೊಳ್ಳದೆ ಆ ಭಾಷೆಯಲ್ಲಿರುವ ಕೃತಿಗಳನ್ನು ಅನುಕೂಲಕ್ಕಾಗಿ ಬಳಸಿಕೊಂಡು ಅವರು ಸುಮ್ಮನಿದ್ದು ಬಿಡುತ್ತಾರೆ. ಆದರೆ ಶಂಬಾ ಬ್ರಿಟಿಷ್ ವಸಾಹತು ಪ್ರಭುತ್ವದ ಆರ್ಥಿಕ ಹಿತಾಸಕ್ತಿಗಳನ್ನು ಗುರುತಿಸಬಲ್ಲವರಾಗಿದ್ದರು. 'ಬ್ರಿಟಿಷ್ ಪೂರ್ವ ಮುಸ್ಲಿಂ ಪ್ರಭುತ್ವಗಳಲ್ಲಿ ಅಶಾಂತಿಯಿತ್ತು. ಆದರೆ ಈಗ ಶಾಂತಿ ನೆಲೆಸಿದೆ. ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ಕೋಲಿನ ತುದಿಗೆ ಬಂಗಾರದ ಗಂಟನ್ನು ಕಟ್ಟಿಕೊಂಡು ತಿರುಗಾಡಬಹುದು' ಎಂದು ಬ್ರಿಟಿಷ್ ಪರವಿದ್ದವರು ವಾದಿಸುತ್ತಿದ್ದಾಗ ಶಂಬಾ ಒಂದು ಕಡೆ ಬರೆಯುತ್ತಾರೆ : 'ಮುಸ್ಲಿಮರ ಪ್ರಭುತ್ವದಲ್ಲಿ ಅಶಾಂತಿ ಇರಬಹುದು ಆದರೆ ಈಗ ಇರುವುದು ಶಾಂತಿಯಲ್ಲ ಸ್ಮಶಾನ ಶಾಂತಿ. ಅಶಾಂತಿಯಲ್ಲಿ ಶಿವಾಜಿಯಂಥವರು ಹುಟ್ಟುತ್ತಾರೆ. ಸ್ಮಶಾನ ಶಾಂತಿಯಲ್ಲಿ ಬ್ರಿಟಿಷ್ ಪ್ರಭುತ್ವವನ್ನು, ಜೀವನ ಶೈಲಿಯನ್ನು ಅನುಸರಿಸಿ ಬ್ರಿಟಿಷರೇ ಆಗ ಹೊರಟ ಅನೇಕರು ರೂಪುಗೊಂಡಿದ್ದಾರೆ. ಇದು ಮೊದಲನೆಯದಕ್ಕಿಂತ ಅಪಾಯಕಾರಿಯಾದದ್ದು, ಅಲ್ಲದೆ ಬಂಗಾರ ಕೊಂಡೊಯ್ಯಲು ಬಂಗಾರವೇ ಇಲ್ಲ'. ಎಲ್ಲವನ್ನು ಬ್ರಿಟಿಷರೇ ಲೂಟಿ ಮಾಡಿಯಾಗಿದೆ

ಎಂಬ ತಿಲಕರ ಮಾತುಗಳನ್ನು ಅನುಮೋದಿಸುವ ಶಂಬಾಗೆ ಭಾಷೆಯ ರಾಜಕಾರಣ ಅರ್ಥವಾಗಲಿಲ್ಲ ಎನ್ನುವುದು ಅನೇಕ ಪ್ರಶ್ನೆಗಳಿಗೆ ಆಹ್ವಾನಿಸುತ್ತದೆ.

ಮರಾಠಿ ಮತ್ತು ಉತ್ತರದ ಆರ್ಯಪರವಿದ್ದ ಪ್ರಭುತ್ವಗಳು ಮತ್ತು, ಧಾರ್ಮಿಕ ಕಾರಣಗಳು ಕನ್ನಡವನ್ನು ಕುಗ್ಗಿಸಿ ಬಿಟ್ಟವು ಎಂದು ಪ್ರತಿಪಾದಿಸುವುದರ ಜೊತೆಗೆ ಶಂಬಾ ಕರ್ನಾಟಕದ 'ಮುಸ್ಲಿಮ್' ಪ್ರಭುತ್ವಗಳ ಕುರಿತು ಅದೇ ನಿಲುವು ತಾಳುತ್ತಾರೆ. ಬಹಮನಿ ಸುಲ್ತಾನರು ಮರಾಠಿಯನ್ನು ಪ್ರೋತ್ಸಾಹಿಸಿದರು ಎಂದು ಅವರು ಹೇಳುತ್ತಾರೆ. ಆದರೆ ತೆಲುಗು ಅರಸರದು (ಕೃಷ್ಣದೇವರಾಯನ 'ಆಮುಕ್ತಮೌಲ್ಯದ' ತೆಲುಗಿನಲ್ಲಿದೆ ) ಎನ್ನುವ ವಾದವೂ ಇರುವ ವಿಜಯನಗರ ಸಾಮ್ರಾಜ್ಯವನ್ನು 'ಕನ್ನಡ ರಕ್ಷಕ' ಸಾಮ್ರಾಜ್ಯವೆಂದು ಗುರುತಿಸುತ್ತಾರೆ. ಈ ಸಾಮ್ರಾಜ್ಯದ ಪತನದ ನಂತರ ಕನ್ನಡವೂ ಕುಬ್ಜಗೊಳ್ಳಲಾರಂಭಿಸಿತು ಎಂದು ಅವರು ಹೇಳುತ್ತಾರೆ :

"ಇಂತು ತೊಳಗಿ ಬೆಳಗಲಾರಂಭಿಸಿದ ಕನ್ನಡ ಅಭಿಮಾನ ಜ್ಯೋತಿಯು ತಾಳಿಕೋಟೆ (ರಕ್ಕಸ ತಂಗಡಿ)ಯ ಕ್ರಿಶ. ೧೫೬೫ರ ಕಾಳಗದ ಬಿರುಗಾಳಿಗೆ ಸಂಪೂರ್ಣ ನಂದಿಹೋಯಿತೆಂದು ಹೇಳಬಹುದಾಗಿದೆ. ೧೬ನೆಯ ಶತಮಾನದಲ್ಲಿ ನಂದಿದ ಈ ಜ್ಯೋತಿಯ ಸಣ್ಣ ಕುಡಿಯೊಂದು ೧೭ನೆಯ ಶತಕದಲ್ಲಿ ಮೈಸೂರು ಚಿಕ್ಕದೇವರಾಜರ ಪುಣ್ಯದಿಂದ ಮತ್ತೆ ಸ್ವಲ್ಪ ಹೊತ್ತಿಕೊಂಡಂತಾಗಿತ್ತು. ಆದರೆ ೧೮ನೆಯ ಶತಮಾನದಲ್ಲಿ ಹೈದರ್ ಟಿಪ್ಪು ಸುಳಿಗಾಳಿಯಿಂದ ಅದೂ ಆರಿತು. ಟಿಪ್ಪೂವಿನ ಸಂತತಿಯೇ ಮೈಸೂರಿನಲ್ಲಿ ಈವರೆಗೆ ಆಳಿದ್ದುದಾದರೆ ಕನ್ನಡವು ರುಂಡವಿಲ್ಲದ ದೇಹದಂತಾಗುತ್ತಿದ್ದುದೆಂಬುದರಲ್ಲಿ ಸಂದೇಹವಿಲ್ಲ. ಟಿಪ್ಪುವಿನ ವಂಶಸ್ಥರ ಕೈಯೊಳಗಿನ ಮೈಸೂರು ಎಂದರೆ ನಿಜಾಂ ಕರ್ನಾಟಕದ ಇನ್ನೊಂದು ಅಣ್ಣ ಅಥವಾ ತಮ್ಮನಾಗುತ್ತಿದ್ದಿತೆಂಬುದರಲ್ಲಿ ಸಂದೇಹವಿಲ್ಲ. ಆದರೆ ಕರ್ನಾಟಕವು ಈ ಕುತ್ತಿನೊಳಗಿನಿಂದಲೂ ದೇವರ ದಯದಿಂದ ಪಾರಾಯಿತು. ಮೈಸೂರು ಒಡೆಯರೆ ಮತ್ತೆ ಕರ್ಣಾಟಕದ ಸಿಂಹಾಸನಾಧೀಶರಾದರು. ಕನ್ನಡದ ಜೀವಜ್ಯೋತಿಯು ಪುನಃ ಚೇತರಿಸಿತು. ಮೈಸೂರು ಸ್ವಾಭಿಮಾನ ಚಿಗುರಿತು."[೧೭]

ಮುಂಬೈಸರ್ಕಾರದಿಂದ ಧನ ಸಹಾಯ ಪಡೆದು ಪ್ರಕಟಿಸಿದ ಪುಸ್ತಕದ ಸಾಲುಗಳಿವು. ಆಶ್ಚರ್ಯವೆಂದರೆ ಮೈಸೂರಿನಲ್ಲಿಯೇ ಇದ್ದ ಕುವೆಂಪು ಮತ್ತು ಬಿ.ಎಂ.ಶ್ರೀಯವರು ಈ ರೀತಿ ಭಾವಿಸುವುದಿಲ್ಲ. ಬಲಪಂಥೀಯ ಬ್ರಾಹ್ಮಣ ವಿದ್ವಾಂಸರನೇಕರ ತರ್ಕವೊಂದನ್ನು ಶಂಬಾ ನಿರಾಯಾಸವಾಗಿ ಮಂಡಿಸುತ್ತಾರೆ. 'ವೈದಿಕ'ದ ಕುರಿತ ಸಂಸ್ಕೃತಿ ಕುರಿತ ಪ್ರಗತಿಪರ ನಿಲುವಿನಿಂದಾಗಿ ಪ್ರಗತಿಪರವಾಗಿ ಕನ್ನಡ ರಾಷ್ಟ್ರೀಯತೆಗೆ ಆಪ್ತರೆಂದು ಕಾಣುವ ಶಂಬಾ ಜೋಶಿಯವರು ಅನ್ಯ ಧರ್ಮಗಳ ಪ್ರಭುತ್ವಗಳ ಕುರಿತು ಪೂರ್ವಾಗ್ರಹದಿಂದ ಹೊರಡುತ್ತಾರೆ. ಇದಕ್ಕೆ ಕಾರಣ ಮರಾಠಿ ಬಲಪಂಥೀಯ ರಾಜಕೀಯ ಮುಖಂಡರ ಜೊತೆಗಿನ ಸಂಪರ್ಕದ ಪ್ರಭಾವವೋ ಅಥವಾ ವಸಾಹತುವಾದಿ ಚರಿತ್ರಕಾರರ ಸಿದ್ಧಾಂತಗಳ ಪ್ರಭಾವವೋ? ಭಾರತವಾದಿ, ಪೌರ್ವಾತ್ಯವಾದಿ ಚಿಂತನೆಗಳ ಮಿತಿಯೋ ಅಂತೂ ಅವರಲ್ಲಿ ಅನ್ಯಧರ್ಮಗಳ ಕುರಿತಾದ 'ಹೊರಗಿಡುವ, ರಾಜಕಾರಣ ಕ್ರಿಯಾಶೀಲವಾಗುತ್ತದೆ. ಬರೀ ಇಸ್ಲಾಮಿನ ಬಗ್ಗೆ ಅಷ್ಟೇ ಅಲ್ಲ ಬೌದ್ಧ, ಜೈನ ಮತ್ತು ವೀರಶೈವಗಳ ಕುರಿತಂತೆ

ಕೂಡ ಇದೇ ರೀತಿಯ ನಿಲುವು ಅವರದು. ಶಂಬಾ ಜೋಶಿಯವರು ಇಲ್ಲೆಲ್ಲ ಬಲಪಂಥೀಯ ಚಿಂತನೆಗಳ ಜೊತೆಜೊತೆಯಲ್ಲಿಯೇ ಸಾಗುತ್ತಾರೆ.

ಕನ್ನಡ ರಾಷ್ಟ್ರೀಯತೆಯಲ್ಲಿನ ಉಪಭಾಷೆಗಳ ಕುರಿತು ಶಂಬಾ ಏನು ಹೇಳುತ್ತಾರೆ? ಅವುಗಳಿಗೆ ಯಾವ ಸ್ಥಾನ ನಿರ್ಣಯಿಸುತ್ತಾರೆ ಎಂಬುದಕ್ಕೆ ಅವರಲ್ಲಿ ಪ್ರಸ್ತಾಪಗಳೇ ಇಲ್ಲ. ಶತ್ರುಸ್ಥಾನದಲ್ಲಿ ಮರಾಠಿ ಮಾತ್ರ ಠಳಾಯಿಸುತ್ತಿರುವಂತೆ ಕಾಣುತ್ತದೆ. ಬಹುಶಃ ಕನ್ನಡ ಮರಾಠಿ ದ್ವಿಭಾಷಿಕ ಪರಿಸರದಲ್ಲಿ ಬದುಕಿದ್ದ ಶಂಬಾರಿಗೆ ಮರಾಠಿ ಪರ ಒಲವುಳ್ಳ ವಿದ್ವಾಂಸರುಗಳಿಗೆ ಕನ್ನಡ ವಿಸ್ತಾರದ ಕುರಿತು ಮನದಟ್ಟುಮಾಡಿಸುವುದೇ ದೊಡ್ಡ ಕೆಲಸವಾಗಿರಬೇಕು, ಹಾಗಾಗಿ ಉಳಿದವ್ವರ ಕಡೆ ತಾವು ಹೆಚ್ಚು ಚಿಂತಿಸಿಲ್ಲವೆಂದೂ ಭಾವಿಸಬಹುದು. ಒಂದು ಕಡೆ ಅವರೇ ಹೇಳುವಂತೆ "ಕನ್ನಡಿಗರು ತಮಿಳರನ್ನು ತಮ್ಮವರೆಂದು ಎಂದೂ ಭಾವಿಸಿರಲಿಲ್ಲ. ಆದುದರಿಂದ ಅವರನ್ನು ಎದುರಿಸುವುದು ಅಷ್ಟು ಕಠಿಣವಾಗಲಿಲ್ಲ ಆದರೆ ಯಾರನ್ನು ಎದುರಾಳಿಗಳೆಂದು ಭಾವಿಸದೆ ತಮ್ಮ ಊಳಿಗದವರು, ತಮ್ಮವರು ಎಂದು ಎಣಿಸಿ ಕನ್ನಡ ಮನೆಯಲ್ಲಿ ಯಾರಿಗೆ ಬರಮಾಡಿಕೊಂಡರೋ ಯಾರೊಡನೆ ಬೆರತುಕೊಂಡರೋ ಕೂಡಿಬೆಳೆದರೋ ಅವರಿಂದ ಆದ ಆಘಾತವು ಕನ್ನಡಕ್ಕೆ ಮರ್ಮಾಘಾತವೇ ಆಯಿತು. ಅದನ್ನು ಪಡೆದುಕೊಳ್ಳುವುದಕ್ಕೆ ಕನ್ನಡಿಗರು ಇನ್ನೂ ಸಮರ್ಥರಾಗಲಿಲ್ಲ."[೧೮]

ಸ್ವತಃ ಮರಾಠಿ ಮೂಲದವರಾದವರೂ ಮರಾಠಿಗರನ್ನು ವಿಶ್ವಾಸದ್ರೋಹಿಗಳು, ನಂಬಿಕೆಗೆ ಅನರ್ಹರು ಎಂದು ಧ್ವನಿಸುವಂತೆ ಬರೆಯುವ ಶಂಬಾ, ತಮಿಳನ್ನು ಈಗಾಗಲೇ ಶತ್ರುಗಳ ಪಟ್ಟಿಯಲ್ಲಿ ಸೇರಿಸಲಾಗಿದೆ ಎಂದು ಮಾತನಾಡುತ್ತಾರೆ. ಮರಾಠಿ ಸ್ಥಳೀಯ ಶತ್ರುವಾಗಿದ್ದ ಕಾರಣಕ್ಕೆ ಅವರಿಗೆ ಹೆಚ್ಚು ಅಪಾಯಕಾರಿಯಾಗಿ ಕಂಡಿರಬಹುದು.

ಏನೇ ಆದರೂ ಶಂಬಾ ಜೋಶಿಯವರು ತಮ್ಮ ಬಹುಶಿಸ್ತೀಯ ಎಂದು ಕರೆಯಬಹುದಾದ ಅಧ್ಯಯನ ಕ್ರಮ ಮತ್ತು ಚಿಂತನೆಗಳಿಗೆ ಕನ್ನಡ ಭಾಷೆಯನ್ನು ಬಳಸಿದರು. ಆ ಮೂಲಕ ಕನ್ನಡ ಸಂಶೋಧನಾ ಭಾಷೆಯನ್ನು ಹೆಚ್ಚು ಅರ್ಥವತ್ತಾಗಿಸಲು ಪ್ರಯತ್ನಿಸಿದರು. ಈ ಮೂಲಕ ಶಂಬಾ ಜೋಶಿಯವರು ಕನ್ನಡ ರಾಷ್ಟ್ರೀಯತೆಯನ್ನು ಹೆಚ್ಚು ಅರ್ಥವಾಗಿಸಲು ಪ್ರಯತ್ನಿಸಿದರೆಂದು ಭಾವಿಸಬಹುದು.

### ೩.೫ ಭಾಷೆ ಕುರಿತಂತೆ ಕುವೆಂಪುರವರ ಚಿಂತನೆಗಳು

'ಕನ್ನಡ ರಾಷ್ಟ್ರೀಯತೆ' ಎಂಬ ಪರಿಕಲ್ಪನೆ ದೃಷ್ಟಿಯಿಂದ ಕುವೆಂಪು ಬಹಳ ದೊಡ್ಡ ಭಾಷಾ ಚಿಂತಕರಂತೆ ಕಾಣಿಸುತ್ತಾರೆ. ಆಲೂರರು ಚಳುವಳಿಯೊಂದನ್ನು ಮುನ್ನಡೆಸಿ, ಶಂಬಾ ಜೋಶಿಯವರು ವಿದ್ವತ್ ಶಿಸ್ತುಗಳಿಗೆ ಕನ್ನಡವನ್ನು ಪಳಗಿಸಿದರು. ಬಿ.ಎಂ.ಶ್ರೀ ಮತ್ತು ಕುವೆಂಪುರವರು ವಿಶ್ವವಿದ್ಯಾಲಯಗಳಲ್ಲಿದ್ದವರು. ಶೈಕ್ಷಣಿಕವಾಗಿ ಮಹತ್ವದ ಸಂಸ್ಥೆಗಳಲ್ಲಿದ್ದು, ಆಡಳಿತದ ದೃಷ್ಟಿಯಿಂದ ಕೂಡ ಮಹತ್ವದ ಹುದ್ದೆಗೇರಿದವರು. ಭಾಷೆಯ ಕುರಿತಂತೆ ಆಲೋಚಿಸಿದ್ದನ್ನು ಅನ್ವಯಿಸಿ ನೋಡುವ ಕೆಲಸವನ್ನೂ ಮಾಡಿದರು. ಹಾಗಾಗಿ ಕನ್ನಡ ನಿರ್ಮಾಣದ ಕಾರ್ಯದಲ್ಲಿ ಇಡೀ ಸಂಸ್ಥೆಯನ್ನು ತೊಡಗಿಸುವ ಕೆಲಸ ದೊಡ್ಡ ಚಳುವಳಿಗಾರನ ಕೆಲಸದಂತೆಯೇ ಕಾಣಿಸುತ್ತದೆ. ಕನ್ನಡದಲ್ಲಿ, ವಿಜ್ಞಾನ, ಗಣಿತ, ಸಮಾಜಶಾಸ್ತ್ರ, ಖಗೋಳಶಾಸ್ತ್ರ, ಮನಃಶಾಸ್ತ್ರ, ಮಾನವ

ಶಾಸ್ತ್ರ ಮುಂತಾದ ಪಠ್ಯ ನಿರ್ಮಾಣದ ಕೆಲಸ ಆಲೂರು ಹಾಗೂ ಶಂಬಾರಿಗೆ ಸಾಧ್ಯವಿರಲಿಲ್ಲ. ಆದರೆ ಸಾಂಸ್ಥಿಕ ಬಲದ ಮೂಲಕ ಕುವೆಂಪು ಹಾಗೂ ಬಿ.ಎಂ.ಶ್ರೀ ಅದನ್ನು ಮಾಡಿದರು.

ಮೈಸೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಅಧ್ಯಾಪಕರಾಗಿ, ಮುಖ್ಯಸ್ಥರಾಗಿ, ನಂತರ 'ಕುಲಪತಿ'ಗಳೂ ಆಗಿ ತಮ್ಮ ಕಾಣ್ಕೆಗಳನ್ನು ಮೂರ್ತರೂಪಕ್ಕಿಳಿಸಿ ನೋಡುವುದರ ಜೊತೆಗೇನೆ ಕುವೆಂಪು ಮಾಡಿದ ಅತಿದೊಡ್ಡ ಕೆಲಸ ಇಡೀ ಕನ್ನಡದ ಮನಸ್ಸನ್ನು ಆಧುನಿಕ ಸಂದರ್ಭಗಳಿಗೆ ಹದಗೊಳಿಸುವುದಾಗಿತ್ತು.

ಬೌದ್ಧಿಕ ಚಟುವಟಿಕೆಗಳಿಗೆ ಮಾತ್ರ ಭಾಷೆ ಬಳಸಿದರೆ ಸಾಲದು ಅದು ಭಾವನೆಗಳ ಜೊತೆ ವ್ಯವಹರಿಸುವ ಗುಣ, ರೀತಿ ಕೂಡ ಮುಖ್ಯ ಎಂಬ ಅಂಶ ಕುವೆಂಪು ಅವರನ್ನು ನೋಡುವಾಗ ಹೊಳೆಯುತ್ತದೆ. ಉಪಯುಕ್ತತಾವಾದಿ ಧೋರಣೆಯ ಜೊತೆಗೆ ಭಾವಕೋಶದ ನಿರ್ಮಾಣ ಅವರ 'ಕಥನ ಸಾಹಿತ್ಯ'ದ ಮೂಲಕ ಅರ್ಥಮಾಡಿಕೊಳ್ಳಲು ಸಾಧ್ಯ. ಹಾಗಾಗಿ ಆಧುನಿಕ ರಾಷ್ಟ್ರಗಳಲ್ಲಿ ಭಾಷೆಗೆ ಯಾವ ಸ್ಥಾನ ಎಂಬುದು ಬರೀ ಬೌದ್ಧಿಕ ಚಿಂತನೆಗಳಲ್ಲಿ ಮಾತ್ರ ನಿರ್ಮಾಣವಾಗುವಂಥದಲ್ಲ ; ಮಹಾಕಾವ್ಯ, ಮಹಾಕಾದಂಬರಿ, ಸಣ್ಣಕಥೆಗಳು, ನಾಡುನುಡಿಗಳ ಕುರಿತಾದ ಸೌಂದರ್ಯದ ಕವಿತೆಗಳೂ ಮುಖ್ಯವಾಗುತ್ತವೆ ಎಂದು ನಂಬಿದವರು ಕುವೆಂಪು.

ಹೊಸ ಸಮಾಜದ ನಿರ್ಮಾಣದಲ್ಲಿ ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ, ಆಧ್ಯಾತ್ಮಿಕ, ವೈಚಾರಿಕ ಆಯಾಮಗಳಂತೆಯೇ ಭಾವನೆ, ಕಲ್ಪನೆ, ಅನುಭವಗಳನ್ನು ಕಟ್ಟುವುದು ತುಂಬ ಮುಖ್ಯ ಎಂಬುದನ್ನು ವಚನಕಾರರು ಕನ್ನಡಕ್ಕೆ ತೋರಿಸಿಕೊಟ್ಟಿದ್ದಾರೆ. ಕುವೆಂಪು ಕೂಡ ಅಂಥದೇ ಕೆಲಸ ಮಾಡುತ್ತಿದ್ದಾರೆ. ಇದು ಕುವೆಂಪುರಂಥ ಸೃಜನಶೀಲ ಬರಹಗಾರರಿಗೆ ದಕ್ಕಿದ ಶಕ್ತಿ. ಕಾವ್ಯದಲ್ಲಿ, ಸಾಹಿತ್ಯದಲ್ಲಿ ಭಾಷೆಯನ್ನು ಬಳಸುವುದು, ಬಳಸುತ್ತಲೆ ಹೊಸ ನುಡಿಗಟ್ಟುಗಳನ್ನು, ಹೊಸ ಪರಿಭಾಷೆಗಳನ್ನು ರೂಪಿಸಿ ಕನ್ನಡಕ್ಕೆ ಹೊಸ ಶಕ್ತಿಯನ್ನು ಅವರು ಒದಗಿಸಿಕೊಟ್ಟರು. (ಆಧುನಿಕ ಸಂದರ್ಭದಲ್ಲಿ ಸಿನಿಮಾ ಮತ್ತು ಸಂಗೀತಗಳು ಕೂಡ ರಾಷ್ಟ್ರೀಯ ಮನಸ್ಸೊಂದನ್ನು ರೂಪಿಸುವಲ್ಲಿ ಕ್ರಿಯಾಶೀಲವಾಗಿರುತ್ತವೆ ಎಂಬ ಚಿಂತನೆಯೂ ನಡೆಯುತ್ತಿದೆ.)

ಕುವೆಂಪುರವರು ಕನ್ನಡ ಪ್ರಜ್ಞಾವಲಯವನ್ನು ವಿಸ್ತರಿಸುವ ಕೆಲಸ ಮಾಡುತ್ತಲೇ ಅಧಿಕಾರಸ್ಥ ಭಾಷೆಗಳ ಕುರಿತಾದ ಪಾತ್ರನಿರ್ಣಯದ ಜೊತೆಯಲ್ಲಿಯೇ ಕನ್ನಡದ ಒಳಗಿನ ಜನ ಭಾಷೆಗಳ ಕುರಿತಂತೆ ಯಾವ ನಿಲುವುಗಳನ್ನು ತಳೆಯುತ್ತಾರೆ ಎಂಬುದನ್ನು ಪರಿಶೀಲಿಸಬಹುದು :

"ದೇಶಭಾಷೆಗೆ ಪ್ರಥಮಸ್ಥಾನ ಸಲ್ಲಬೇಕು. ದೇಶ ಭಾಷೆ ಶಿಕ್ಷಣ ಮಾಧ್ಯಮವಾಗಬೇಕು. ಎಂದೊಡನೆ ಕೆಲವರು ಇಂಗ್ಲಿಷ್ ಭಾಷಾ ಸಾಹಿತ್ಯಗಳಿಗೆ ಸಂಪೂರ್ಣ ಅರ್ಧಚಂದ್ರ ಪ್ರಯೋಗವಾಗಿಬಿಡುತ್ತದೆ ಎಂದು ವ್ಯಾಖ್ಯಾನ ಮಾಡಿ ದೇಶ ಭಾಷಾವಾದಿಗಳನ್ನು ಸ್ವಭಾಷಾಭ್ರಾಂತರೆಂದೂ ವಿದ್ಯಾಸಂಸ್ಕೃತಿ ವಿದ್ವೇಷಿಗಳೆಂದೂ ಸಂಕುಚಿತ ಮನೋಭಾವದವರೆಂದೂ ಟೀಕಿಸಿ ಖಂಡಿಸುತ್ತಾರೆ. ಇಂಗ್ಲಿಷ್ ಮೋಡಿಗಳ ಈ ಪ್ರಥಮ ಭ್ರಾಂತಿ ಮೊದಲು ನಿರಸನಗೊಳ್ಳಬೇಕು. ಇಂಗ್ಲಿಷ್ ಭಾಷೆಯ ಯೋಗ್ಯತೆ, ಅದರ ವ್ಯಾಪ್ತಿ ಅದರಿಂದೊದಗುವ ಪ್ರಜ್ಞಾವೈಶಾಲ್ಯ, ಅದು ನಮ್ಮಲ್ಲಿ ಪ್ರಚೋದಿಸಿರುವ ವಿಚಾರಬುದ್ಧಿ, ಅದರಿಂದ ಮುಂದೆ ಎಂದೆಂದಿಗೂ ನಮಗೆ ಲಭಿಸಲಿರುವ ಸಂಪರ್ಕ ಸಹಾಯ ಮೊದಲಾದುವುಗಳನ್ನೆಲ್ಲ ಅರಿತವರಾರೂ ಬ್ರಿಟಿಷರನ್ನು ಓಡಿಸಿದಂತೆ ಇಂಗ್ಲಿಷ್ ಭಾಷೆಯನ್ನು ಓಡಿಸಬೇಕೆಂದು ಹೇಳುವ ಅವಿವೇಕಕ್ಕೆ ಹೋಗಲಾರರು. ಹಾಗೆ ಹೇಳುವವರನ್ನು

ಪ್ರಚ್ಛನ್ನ ದೇಶದ್ರೋಹಿಗಳೆಂದು ಕರೆಯಬೇಕಾಗುತ್ತದೆ. ಆದ್ದರಿಂದ ಇಂಗ್ಲಿಷ್ ನಮ್ಮೊಡನೆ ಉಳಿಯಬೇಕೆಂಬುದರಲ್ಲಿ ಭಿನ್ನಾಭಿಪ್ರಾಯವಿರುವುದಕ್ಕೆ ಅವಕಾಶವೇ ಇಲ್ಲ."[೧೯]

ವಿಚಾರಬುದ್ಧಿ, ಪ್ರಜ್ಞಾವೈಶಾಲ್ಯ, ಸಂಪರ್ಕ ಸಾಧ್ಯತೆಗಳ ಕಾರಣಕ್ಕೆ ಇಂಗ್ಲಿಷು ಇರಬೇಕೆಂಬ ಪ್ರತಿಪಾದನೆ ಮಾಡುತ್ತಿದ್ದಾರೆ. ಆದರೆ ದೇಶ ಭಾಷೆಗೆ ಪ್ರಥಮ ಆದ್ಯತೆ ಎಂಬ ನಿಲುವಿನಲ್ಲಿ ಕುವೆಂಪು ಎಂದೂ ರಾಜಿ ಮಾಡಿಕೊಂಡವರಲ್ಲ. ಕನ್ನಡವೇ ಅಂತಿಮ ಎಂಬ ಭಾಷಿಕ ಮೂಲಭೂತವಾದಿ ನಿಲುವೂ ಕಾಣುವುದಿಲ್ಲ. ಆಶ್ಚರ್ಯವೆಂದರೆ ಕುವೆಂಪು ಬರವಣಿಗೆ ಆರಂಭಿಸಿದ್ದು ಇಂಗ್ಲಿಷಿನಲ್ಲಿಯೇ. ೧೯೨೨ರಲ್ಲಿ 'ಬಿಗಿನರ್ಸ್ ಮ್ಯೂಸ್' ಹೆಸರಿನಲ್ಲಿ ಅವರ ಕುರಿತ ಕವಿತಾ ಸಂಕಲನ ಪ್ರಕಟಗೊಂಡಿತು. ಆದರೆ ಬ್ರಿಟನ್ ವಿರುದ್ಧ ರಾಷ್ಟ್ರೀಯತಾ ಹಕ್ಕಿಗಾಗಿ ಹೋರಾಟ ಮಾಡುತ್ತಿದ್ದ ಐರಿಷ್ ಲೇಖಕ ಜೆ.ಎಚ್.ಕಸಿನ್ಸ್ ಅವರಿಂದ ಕುವೆಂಪು ಕನ್ನಡದ ಕಡೆಗೆ ತಿರುಗುವಂತೆ ಆಗಿದ್ದು ಕೂಡ ಮಹತ್ವದ ಘಟನೆಯೆ.

ಇಂಗ್ಲಿಷ್ ಆಳುವವರ ಭಾಷೆ ಎಂಬ ಕಾರಣಕ್ಕೆ ತಿರಸ್ಕರಿಸದೆ ನೋಡುವ ಕುವೆಂಪು ಅದು ಶಿಕ್ಷಣ ಮಾಧ್ಯಮವಾಗಬೇಕು ಎಂದ ಕೂಡಲೇ ತಕರಾರು ತೆಗೆಯುತ್ತಾರೆ. ಅವರ ಕೆಲವು ನಿಲುವುಗಳು ಈ ರೀತಿ ಇವೆ :

೧. "ಇಂಗ್ಲಿಷ್ ಮಾಧ್ಯಮವನ್ನುಳಿಸಿಕೊಳ್ಳಬೇಕೆಂಬುದು ಪಟ್ಟಭದ್ರ ಹಿತಾಸಕ್ತಿಗಳ ಹತಾಶ ಪ್ರಯತ್ನವಾಗಿದೆ. ಇಂಗ್ಲಿಷ್ ಬೇಡವೆಂದಲ್ಲ, ಯಾರಿಗೆ ಬೇಕು, ಎಷ್ಟು ಬೇಕು ಎಂಬುದು ಮುಖ್ಯವಾದ ಪ್ರಶ್ನೆ. ಕೇವಲ ಹಿಡಿಮಂದಿಯ ಸುಖ ಸ್ವಾರ್ಥಗಳಿಗಾಗಿ ಇಂಗ್ಲಿಷಿನ ವದ್ಯಪೀಠದ ಮೇಲೆ ಕೋಟ್ಯಂತರ ಜನತೆಯ ಕಲ್ಯಾಣದ ಮಾರಣ ಹೋಮವಾಗುತ್ತಿರುವುದು ಪ್ರಜಾಪ್ರಭುತ್ವ ತತ್ತ್ವದ ಬುಡಕ್ಕೇ ಕಂಟಕಪ್ರಾಯವಾಗಿದೆ."[೨೦]

೨. "ಪ್ರತಿಯೊಬ್ಬರಿಗೂ ಬರಿಯ ಅನ್ನ ಬಟ್ಟೆಗಳನ್ನೊದಗಿಸುವಷ್ಟರಲ್ಲೇ ಪರ್ಯವಸಾನವಾಗುವುದಿಲ್ಲ. ಸಮಾಜವಾದ ಮತ್ತು ಸರ್ವೋದಯ ಸಮಷ್ಟಿ ಜೀವನಕ್ಕೆ ಎಲ್ಲ ಭೂಮಿಕೆಗಳಲ್ಲೂ ವಿಕಾಸ ತುಷ್ಟಿ ಪುಷ್ಟಿಗಳ ಅವಕಾಶವನ್ನೊದಗಿಸಬೇಕು. ದೇಶ ಭಾಷಾ ಮಾಧ್ಯಮವೇ ಅದಕ್ಕೆ ಏಕೈಕ ಸಾಧನ. ಇಂಗ್ಲಿಷ್ ಮಾಧ್ಯಮ ಸರ್ವೋದಯಕ್ಕೆ ಹಿಡಿದ ಶನಿಯಾಗಿದೆ. ಬಡಿದ ಅಶನಿಯಾಗಿದೆ. ಕನ್ನಡ ಮಾಧ್ಯಮ ಸಂಪೂರ್ಣವಾಗಿ ಯಶಸ್ವಿಯಾಗಿ ಪ್ರತಿಷ್ಠಾಪಿತವಾಗುವ ತನಕ ಕನ್ನಡಿಗರಿಗೆ ಉದ್ಧಾರವಿಲ್ಲ, ಮೋಕ್ಷವಿಲ್ಲ. ಇಂಗ್ಲಿಷಿನ ಮೂಲಕ ಪಡೆಯುವ ಶಿಕ್ಷಣ ಗಾಳಿ ಗೋಪುರವಲ್ಲದೆ ಮತ್ತೇನೂ ಆಗಲಾರದು."[೨೧]

ಕುವೆಂಪುರವರ ಮೇಲಿನ ಚಿಂತನೆಗಳಲ್ಲಿ ವ್ಯಕ್ತಗೊಳ್ಳುತ್ತಿರುವ ಮುಖ್ಯ ಧಾಟಿ, ಆಧುನಿಕ ಸಮಾಜದಲ್ಲಿ ಭಾಷೆಗೂ -ಆರ್ಥಿಕತೆಗೂ ಸಂಬಂಧಗಳಿವೆ. ಹಾಗಾಗಿ ದೇಶಭಾಷೆಯನ್ನು ನಿರಾಕರಿಸುವುದೆಂದರೆ ದೇಶಭಾಷೆಯಲ್ಲಿ ಜೀವನ ಕಟ್ಟಿಕೊಂಡಿರುವ ಜನಸಮುದಾಯದ ಬದುಕನ್ನು ನಿರಾಕರಿಸಿದ ಹಾಗೆಯೆ. ಕುವೆಂಪು ಬಹಳ ಸ್ಪಷ್ಟವಾಗಿ ಇದನ್ನು ಕೆಲವು ಪಟ್ಟಭದ್ರ ಹಿತಾಸಕ್ತಿಗಳ ಕೈವಾಡವೆಂಬಂತೆ ಕರೆಯುತ್ತಾರೆ. ಇಂಗ್ಲಿಷ್ ಮಾಧ್ಯಮದ ಪರಿಕಲ್ಪನೆಯೇ ಅಪ್ರಜಾಪ್ರಭುತ್ವಿಕವಾದದ್ದು. ರಾಷ್ಟ್ರದ ಸರ್ವೋದಯ ಮತ್ತು ಸಮಾನತಾ ಆಶಯಗಳಿಗೆ ವಿರುದ್ಧವಾದದ್ದು ಎಂದು ನಿರಾಕರಿಸುತ್ತಾರೆ. ಈ ಪರಿಕಲ್ಪನೆಯನ್ನು ವಿವರಿಸುವುದಕ್ಕೆ ಕುವೆಂಪು ಬಳಸುವ ರೂಪಕ ಕೂಡ ಭೀಕರವಾದುದಾಗಿದೆ. ಇಂಗ್ಲಿಷನ್ನು ಹೇರುವುದೆಂದರೆ, ಕೋಟ್ಯಂತರ ಜನರ ಪಾಲಿಗೆ

ಅದು ಬಲಿಪೀಠದ ಹಾಗೆಯೆ ಹಾಗೂ ಅನಿಷ್ಟದ ಸಂಕೇತವಾದ ಶನಿಯ ಹಾಗೆ.

ಆಧುನಿಕ ರಾಷ್ಟ್ರದಲ್ಲಿ ಸಾಂವಿಧಾನಿಕ ಆಶಯಗಳು ಸಾಕಾರಗೊಳ್ಳಬೇಕೆಂದರೆ ಅದರ ಶಿಕ್ಷಣ ಮತ್ತು ಆಡಳಿತದ ಮಾಧ್ಯಮ ದೇಶಭಾಷೆಗಳದ್ದಾಗಿರಬೇಕು ಎಂಬ ನಿಲುವು ಅವರಲ್ಲಿ ಕಾಣಿಸುತ್ತದೆ. (ಆದರೆ ಕುವೆಂಪು ಈ ಮಾತುಗಳನ್ನಾಡಿ ಸರಿಸುಮಾರು ಅರ್ಧ ಶತಮಾನದ ನಂತರ ಕರ್ನಾಟಕದ ಪ್ರಾಥಮಿಕ ಶಿಕ್ಷಣದಲ್ಲಿ ಇಂಗ್ಲಿಷನ್ನು ಭಾಷೆಯಾಗಿ ಕಲಿಸಬೇಕೆಂಬ ನಿರ್ಧಾರವನ್ನು ಹೇಗೆ ಸ್ವೀಕರಿಸಬೇಕೆಂಬ ಪ್ರಶ್ನೆ ಕೂಡ ಉದ್ಭವಿಸುತ್ತದೆ) ಕುವೆಂಪುರವರ ಇಂಗ್ಲಿಷ್ ಭಾಷೆಯ ಹೇರಿಕೆಯ ಹಿಂದೆ ಪಟ್ಟಭದ್ರ ಹಿತಾಸಕ್ತಿಗಳ ಪ್ರಚ್ಛನ್ನ ಭ್ರಷ್ಟಾಚಾರದ ಉದ್ದೇಶ ಎಂಬ ಮಾತಿನಂತೆಯೇ ಸಮಾಜವಾದಿ ಚಿಂತಕ ಡಾ. ರಾಮಮನೋಹರ ಲೋಹಿಯಾರ ಇಂಗ್ಲಿಷ್ ಕುರಿತಾದ ಅಭಿಪ್ರಾಯಗಳು ಇರುವುದು ಕೇವಲ ಕಾಕತಾಳೀಯವಿರಲಾರದು.

ಕುವೆಂಪುರವರ ಮೇಲಿನ ಗ್ರಹಿಕೆಗಳನ್ನು ಮತ್ತಷ್ಟು ವಿಸ್ತರಿಸಬೇಕೆಂದರೆ, ದೇಶ ಭಾಷೆಯನ್ನು ಬಿಟ್ಟುಕೊಡುವುದರಿಂದ ಒದಗಬಹುದಾದ ಅಪಾಯಗಳನ್ನೂ ನವವಸಾಹತು ಸಂದರ್ಭದಲ್ಲಿ ಕೀನ್ಯಾದ ಪ್ರಸಿದ್ಧ ಚಿಂತಕ ಗೂಗಿ ವಾ ಥಿಯಾಂಗೊ ತನ್ನ ದೇಶದ ಅನುಭವದ ಮೂಲಕ ಮಂಡಿಸುತ್ತಾನೆ :

"ಯಾವತ್ತೂ ವಸಾಹತುಶಾಹಿಯ ನಿಜವಾದ ಉದ್ದೇಶವೆಂದರೆ, ಜನತೆಯ ಸಂಪತ್ತನ್ನು ವಶಪಡಿಸಿಕೊಳ್ಳುವುದು ಜನ ಏನನ್ನು ಉತ್ಪಾದಿಸುತ್ತಾರೆ, ಹೇಗೆ ಉತ್ಪಾದಿಸುತ್ತಾರೆ, ಆ ಉತ್ಪಾದನೆಯ ಹಂಚಿಕೆಗೆ ಹೇಗೆ ನಡೆಯುತ್ತದೆ ಎಂಬುದರ ಗುಟ್ಟನ್ನು ವಶಪಡಿಸಿಕೊಳ್ಳುವುದು. ಒಟ್ಟಿನಲ್ಲಿ 'ನಿಜ ಜೀವನದ ಭಾಷೆ'ಯ ಇಡೀ ಲೋಕವನ್ನು ನಿಯಂತ್ರಣಕ್ಕೆ ತೆಗೆದುಕೊಳ್ಳುವುದು. ವಸಾಹತುಶಾಹಿಯ ಸಂಪತ್ತಿನ ಸಾಮಾಜಿಕ ಉತ್ಪಾದನೆಯ ಮೇಲೆ ತನ್ನ ನಿಯಂತ್ರಣವನ್ನು ಮೊದಲಿಗೆ ಸೈನಿಕ ವಿಜಯದ ಮೂಲಕ ಹೇರುತ್ತದೆ. ಅನಂತರ ಸೈನಿಕ ವಿಜಯದ ಹಿಂದೆಯೇ ಬರುವ ರಾಜಕೀಯ ಸರ್ವಾಧಿಕಾರದ ಮೂಲಕ ಹೇರುತ್ತದೆ. ಆದರೆ ವಸಾಹತುಶಾಹಿಯು ನಿಜವಾಗಿಯೂ ಆಳುವ ಕ್ಷೇತ್ರವೆಂದರೆ, ಸೋತವರ ಮನೋಲೋಕ. ಜನ ಸ್ವತಃ ತಮ್ಮನ್ನು ಹಾಗೂ ಜಗತ್ತಿನ ಜತೆ ತಮ್ಮ ಸಂಬಂಧವನ್ನು ಹೇಗೆ ಪರಿಭಾವಿಸಿಕೊಳ್ಳುತ್ತಾರೆ ಎಂಬುದನ್ನು ಸಂಸ್ಕೃತಿಯ ಮೂಲಕ ನಿಯಂತ್ರಿಸುವುದಕ್ಕೆ ಅದು ಗಮನ ಕೊಡುತ್ತದೆ. ಆರ್ಥಿಕ-ರಾಜಕೀಯ ನಿಯಂತ್ರಣಗಳು ಈ ರೀತಿಯ ಮಾನಸಿಕ ನಿಯಂತ್ರಣಗಳಿಲ್ಲದೆ ಪೂರ್ಣಗೊಳ್ಳುವುದಿಲ್ಲ, ಅಥವಾ ಫಲಕಾರಿಯಾಗುವುದಿಲ್ಲ. ಜನತೆಯ ಸಂಸ್ಕೃತಿಯನ್ನು ನಿಯಂತ್ರಿಸುವುದು ಎಂದರೆ ಜನರು, ಮತ್ತೊಬ್ಬರ ಜತೆಗಿನ ತಮ್ಮ ಸಂಬಂಧದ ಬಗ್ಗೆ ಕೊಟ್ಟುಕೊಂಡಿರುವ ವ್ಯಾಖ್ಯಾನವನ್ನು ನಿಯಂತ್ರಿಸುವುದಾಗಿದೆ.

ಈ ಕೆಲಸವನ್ನು ವಸಾಹತುಶಾಹಿಯು ಎರಡು ಬಗೆಗಳಲ್ಲಿ ಮಾಡುತ್ತದೆ. ಮೊದಲನೆಯದಾಗಿ ಜನತೆಯ ಸಂಸ್ಕೃತಿಯನ್ನು ನಾಶಮಾಡುವುದು. ಇಲ್ಲವೆ ಅದನ್ನು ಉದ್ದೇಶ ಪೂರ್ವಕವಾಗಿ ಅಪಮೌಲ್ಯಗೊಳಿಸುವುದು. ಜನತೆಯ ಕಲೆಗಳು, ನೃತ್ಯಗಳು, ಧರ್ಮಗಳು, ಚರಿತ್ರೆ, ಭೂಗೋಳ, ಶಿಕ್ಷಣ, ಸಾಹಿತ್ಯ, ಜಾನಪದ ಎಲ್ಲವನ್ನು ಹೀನಾಯಗೊಳಿಸುವುದು. ಎರಡನೆಯದಾಗಿ, ತನ್ನ ಭಾಷೆಯನ್ನು ಶ್ರೇಷ್ಠವೆಂದು ವ್ಯವಸ್ಥಿತವಾಗಿ ಪ್ರತಿಷ್ಠಾಪಿಸುವುದು. ವಸಾಹತೀಕರಣಕ್ಕೆ ಒಳಗಾದ ಜನರ ಮನೋಲೋಕವನ್ನು ಆಳಬೇಕಾದರೆ, ಜನಭಾಷೆಗಳ ಮೇಲೆ ವಸಾಹತುಶಾಹಿ ಭಾಷೆಗಳ ಯಜಮಾನಿಕೆಯು ತುಂಬ ನಿರ್ಣಾಯಕ ಪಾತ್ರ ವಹಿಸುತ್ತದೆ."[೨೨]

ತನ್ನ ಸಮುದಾಯದ್ದಲ್ಲದ ಭಾಷೆ ಹೇಗೆ ಮಗುವನ್ನು ಅಥವಾ ಅನ್ಯಭಾಷೆಯ ದಾಳಿಗೆ ಸಿಕ್ಕವನನ್ನು ಸಂಸ್ಕೃತಿಗಳಿಂದ ವಿಮುಖನನ್ನಾಗಿಸುತ್ತದೆ ಎಂಬ ಸಂಗತಿಯಿಂದ ಹಿಡಿದು, ವಸಾಹತು ಶಕ್ತಿಗಳು ತಾವು ಆಕ್ರಮಿಸಿಕೊಂಡ ಜನರ ಮಾರುಕಟ್ಟೆಯನ್ನೂ, ಉತ್ಪಾದನಾ ವಿಧಾನವನ್ನೂ ತನ್ನ ತೆಕ್ಕೆಗೆ ತೆಗೆದುಕೊಳ್ಳುವುದರ ಭಾಗವಾಗಿ ಕೂಡ ಭಾಷಾ ರಾಜಕಾರಣ ಕೆಲಸ ಮಾಡುತ್ತದೆ ಎಂಬ ಗೂಗಿಯವರ ಅನುಭವದ ಮಾತುಗಳಿಗೆ ಮುನ್ನುಡಿಯಂತೆ ಕುವೆಂಪುರವರು ಸಮಾಜವಾದ ಮತ್ತು ಸರ್ವೋದಯ ತತ್ವಗಳಿಗೆ ಹಿಡಿದ ಶನಿಯಾಗಿದೆ ಎಂದು ಗ್ರಹಿಸುತ್ತಾರೆ.

ಗೂಗಿಯವರ 'ಸಿದ್ಧಾಂತ'ವನ್ನು ಕನ್ನಡದ ಆರಂಭ ಕಾಲದ ವಿದ್ವಾಂಸರಾದ ಬಿ.ಎಂ.ಶ್ರೀಯವರ ನಿಲುವುಗಳ ಮೇಲೆ ಕೆಲಮಟ್ಟಿಗೆ ಅನ್ವಯಿಸಿ ನೋಡಬಹುದು. ತನ್ನ ಸಂಸ್ಕೃತಿ, ಭಾಷೆ ಮುಂತಾದವುಗಳೆಲ್ಲ ನಿಸ್ಸಾರಗೊಂಡಿದೆಯೆಂದು ಹೊರಡುವ ಬಿ.ಎಂ.ಶ್ರೀ ಕನ್ನಡ ಕಟ್ಟುವುದಕ್ಕೆ ಇಂಗ್ಲಿಷನ್ನು ಇಟ್ಟಿಗೆಯಾಗಿ, ಸಿಮೆಂಟಾಗಿ ಬಳಸಿಕೊಳ್ಳಬಹುದು ಎನ್ನುವ ಅರಿವಿಗೆ ತಲುಪುತ್ತಾರೆ. ಸಂಸ್ಕೃತಿಯ ವಿಶ್ಲೇಷಣೆಯ ಸಂದರ್ಭದಲ್ಲಿ ಸ್ವಲ್ಪ ಮಟ್ಟಿಗೆ ವಸಾಹತು ಸಂಸ್ಕೃತಿಯ ಕಡೆ ಕೊಂಚ ಪ್ರೀತಿ ಜಾಸ್ತಿ ಎನ್ನಿಸುತ್ತದೆ. ಆದರೆ ಅವರ ಶಿಷ್ಯರಾದ ಕುವೆಂಪುರವರು ಇಂಗ್ಲಿಷ್ ಮಾಧ್ಯಮವಾಗಿ ಆರ್ಥಿಕ -ರಾಜಕೀಯ ಚಲನೆಗಳನ್ನೂ, ಉದ್ದೇಶಗಳನ್ನು ಗ್ರಹಿಸಿ ವಿಶ್ಲೇಷಣೆ ಮಾಡುವಷ್ಟು ಸಮಾಜದಲ್ಲಿ ಭೀಕರ ಅಸಮಾನತೆ ಸೃಷ್ಟಿಯಾಗುವುದರ ಜೊತೆಗೆ ಸಮುದಾಯ ಮತ್ತು ವಿದ್ಯಾವಂತ ವರ್ಗದ ನಡುವೆ ಭೀಕರ ಕಂದರ ಸೃಷ್ಟಿಯಾಗುತ್ತದೆ ಎನ್ನುವ ನಿಲುವನ್ನಂತೂ ವ್ಯಕ್ತಪಡಿಸುತ್ತಾರೆ.

ಕುವೆಂಪು ಭಾಷೆಗಳ ಹೇರಿಕೆಯ ವಿಚಾರ ಬಂದಾಗ ಇಂಗ್ಲಿಷನ್ನಷ್ಟೇ ತಿರಸ್ಕರಿಸಿ ಭಾರತದ್ದೇ ಆದ ಹಿಂದಿ ಹೇರಿಕೆಯನ್ನೂ ಸಹ ಸಮರ್ಥಿಸುವುದಿಲ್ಲ. ಎಲ್ಲ ಅಪ್ರಜಾತಾಂತ್ರಿಕ ಬೆಳವಣಿಗೆಗಳ ಕುರಿತಂತೆ ತಮ್ಮ ಸಿಟ್ಟನ್ನು ವ್ಯಕ್ತಪಡಿಸುತ್ತಾರೆ. ಹಾಗಾಗಿಯೇ ಕರ್ನಾಟಕದ ಚಳವಳಿಗಳಲ್ಲಿ ಭೌತಿಕವಾಗಿ ಭಾಗವಹಿಸದಿದ್ದರೂ ಅವುಗಳಿಗೆ ನಿರಂತರ ಸ್ಫೂರ್ತಿಯಾಗುತ್ತಾ ಬಂದರು. ಹಿಂದಿ ಹೇರಿಕೆ ಕುರಿತಂತೆ ಅವರ ನಿಲುವುಗಳು ಹೀಗಿವೆ :

"ಐವತ್ತು ಕೋಟಿ ಭಾರತೀಯರೂ ಹಿಂದಿಯನ್ನು ಕಲಿಯಬೇಕೆನ್ನುವ ವಾದದಲ್ಲಿ ಗತ ಸಾಮ್ರಾಜ್ಯಶಾಹಿಯ ಮನೋಧರ್ಮದ ವಿನಾ ಇನ್ನಾವ ಅರ್ಥವೂ ಇಲ್ಲ. ಶೇಕಡ ಒಂದರಷ್ಟು ಜನಕ್ಕೆ ಅರ್ಧಮರ್ಧ ಇಂಗ್ಲಿಷ್ ಕಲಿಸಿ ಬ್ರಿಟಿಷರು ಇನ್ನೂರು ವರ್ಷಕ್ಕೂ ಮೇಲೆ ಸಮರ್ಥವಾಗಿ ರಾಜ್ಯಭಾರ ನಡೆಸಲಿಲ್ಲವೇ?"[೨೩]

ಭಾರತವನ್ನು 'ಫೆಡರಲ್ ಸ್ಟೇಟ್'ಗಳ ಮಾದರಿಯನ್ನಾಗಿ ಕಲ್ಪಿಸಿಕೊಂಡಿದ್ದ ಕುವೆಂಪುರವರು ಆಡಳಿತದ ನೆಪದಲ್ಲಿ ಒಂದು ಸಮುದಾಯದ ಭಾಷೆ ಇನ್ನೊಂದು ರಾಜ್ಯದ ಅಥವಾ ರಾಷ್ಟ್ರೀಯತೆಯ ಮೇಲೆ ಸವಾರಿ ಮಾಡಬಾರದು. ಹಾಗೇನಾದರೂ ಆದರೆ ಅದು ಸಾಮ್ರಾಜ್ಯಶಾಹಿ ಮನೋಭಾವವಾಗುತ್ತದೆ. ಹಾಗಾಗಿ ಕನ್ನಡ ಜನ ಸಮುದಾಯ ಅದರಲ್ಲೂ ನಾಡನ್ನು ಕಟ್ಟುವಲ್ಲಿ ತೊಡಗಿಸಿಕೊಂಡಿರುವ ವಿಶ್ವವಿದ್ಯಾಲಯಗಳು ಹಿಂದಿಯ ಭಾಷಾ ರಾಜಕಾರಣವನ್ನು ನಿರಾಕರಿಸಬೇಕು. ಅಲ್ಲದೆ ತನ್ನ ರಾಷ್ಟ್ರೀಯ ಹಿತಾಸಕ್ತಿಗೆ ವಿರುದ್ಧವಾದುದು. ತನ್ನದಲ್ಲದ ಭಾಷೆಯೊಂದನ್ನು ಹೇರಿಕೊಳ್ಳುವುದೆಂದರೆ ತನ್ನ ಸ್ವಾತಂತ್ರ್ಯವನ್ನೂ ಜನ ಸಮುದಾಯದ ಚೈತನ್ಯವನ್ನೂ ಒತ್ತೆಯಿಟ್ಟ ಹಾಗೆಯೇ ಎಂದು ಗ್ರಹಿಸಿದಂತಿದೆ. ಹಾಗಾಗಿ ಜನಭಾಷೆಯ ಕುರಿತಾದ ತನ್ನ ನಿಲುವನ್ನು ಕುವೆಂಪು ಹೀಗೆ ಮಂಡಿಸುತ್ತಾರೆ :

"ಕನ್ನಡಕ್ಕೆ ಅಗ್ರಸ್ಥಾನ ಒದಗಿ ಅದು ಅಗ್ರಮಾನ್ಯವಾಗಬೇಕು; ಜಗತ್ತಿನ ವಿದ್ಯೆ, ಸಾಹಿತ್ಯ, ಸಂಸ್ಕೃತಿ ಎಲ್ಲವೂ ಕನ್ನಡಿಗರಿಗೆ ಕನ್ನಡದಲ್ಲಿಯೇ ದೊರೆಯುವಂತಾಗಬೇಕು; ಕನ್ನಡ ನಾಡಿನಲ್ಲಿ ಕನ್ನಡ ಪ್ರಥಮ ಭಾಷೆಯಾಗಬೇಕು; ಎಲ್ಲ ವಿದ್ಯೆ ಸಂಸ್ಥೆಗಳಲ್ಲಿಯೂ ಕನ್ನಡ ಬೋಧಕ ಭಾಷೆಯಾಗಬೇಕು; ಕೋರ್ಟು, ಕಚೇರಿ, ಮೊದಲಾದ ಸರಕಾರದ ಸಂಸ್ಥೆಗಳ ವ್ಯವಹಾರವೆಲ್ಲ ಕನ್ನಡದಲ್ಲಿಯೇ ನಡೆಯಬೇಕು. ಒಂದು ಮಾತಿನಲ್ಲಿ ಹೇಳುವುದಾದರೆ, ಇಂಗ್ಲೆಂಡಿನಲ್ಲಿ ಇಂಗ್ಲಿಷ್ ಇರುವಂತೆ, ಫ್ರಾನ್ಸಿನಲ್ಲಿ ಫ್ರೆಂಚ್ ಇರುವಂತೆ ಕರ್ನಾಟಕದಲ್ಲಿ ಕನ್ನಡವಿರಬೇಕು. ಈ ಆಶ್ರಯದಲ್ಲಿ ಅಸ್ವಾಭಾವಿಕತೆ ಲವಲೇಶವೂ ಇಲ್ಲ; ಏನಾದರೂ ಅಸ್ವಾಭಾವಿಕತೆ ಇದ್ದರೆ ಅದು ಕನ್ನಡ ನಾಡಿನಲ್ಲಿ ಕನ್ನಡವಿರಲಿ ಎಂದು ಬೇಡ ಬೇಕಾಗಿರುವ ದುರವಸ್ಥೆಯೊಂದೇ."[೨೪]

ಏಕೀಕರಣ ಪೂರ್ವದಲ್ಲಿ ಕನ್ನಡವನ್ನು ಯಾವುದರ ಮೇಲೆ ಕಟ್ಟಿ ನಿಲ್ಲಿಸಬೇಕು ಎನ್ನುವ ಬಗ್ಗೆ ಆಡಿದ ಮಾತುಗಳಿವು. ವರ್ತಮಾನದ ಸ್ಥಿತಿ ಅಷ್ಟೇನೂ ಆಶಾದಾಯಕವಾಗಿಲ್ಲ. ಆದರೆ ಯುರೋಪಿನ ರಾಷ್ಟ್ರಗಳ ಮಾದರಿಯನ್ನೇ ಕನ್ನಡ ರಾಷ್ಟ್ರದಲ್ಲಿ ಕನ್ನಡವನ್ನು ಸ್ಥಾಪಿಸಬೇಕು ಎಂದು ಆತ್ಯಂತಿಕ ನಿಲುವು ಇಲ್ಲಿ ಮಂಡಿತವಾಗುತ್ತಿದೆ. ತನ್ನ ಭಾಷೆ ಮತ್ತು ಅದರ ಆಧಾರದ ಮೇಲೆ ತನ್ನ ನಾಡು ಎರಡೂ ಏಕಘಟಕವಾಗಿ ರೂಪುಗೊಳ್ಳಬೇಕೆಂಬ ಆಶಯ ಅವರದು.

ಈ ದೃಷ್ಟಿಯಲ್ಲಿ 'ರಾಷ್ಟ್ರಕವಿ' ಎಂಬ ಗೌರವ ಪಡೆದ ಕುವೆಂಪುರವರು ಅನ್ಯಭಾಷೆಗಳ ಹೇರಿಕೆಯನ್ನು ವಿರೋಧಿಸುವಾಗ ಕಾಣುವಷ್ಟು ಪ್ರಜಾತಾಂತ್ರಿಕ ನಿಲುವನ್ನು ತನ್ನದೇ ನಾಡಿನ ಇತರೆ ಜನಭಾಷೆಗಳ ಕುರಿತು ಏನು ಹೇಳುತ್ತಾರೆ. ಯಾವ ಕನ್ನಡ ಆಡಳಿತ ಭಾಷೆಯಾಗಬೇಕೆಂದು ಪ್ರತಿಪಾದಿಸುತ್ತಾರೆ. ಪರಿಶೀಲಿಸಬಹುದು. ಈ ಕುರಿತಂತೆ ಅವರ ಮಾತುಗಳಿವು :

"ಊರಿಗೊಂದು ಪ್ರದೇಶಕ್ಕೊಂದು ಕಾಲ ಕಾಲಕ್ಕೊಂದು ಪರಿಭಾಷೆ ಇರುವುದಾದರೆ ವಿಜ್ಞಾನವಾಗಲಿ ಯಾವ ಶಾಸ್ತ್ರವಾಗಲಿ ಅಸ್ತಿತ್ವಕ್ಕೆ ಬರುವುದು ಅಸಂಭವ; ಪ್ರಗತಿ ಹೊಂದುವುದಂತೂ ಸಾಧ್ಯವೆ ಇಲ್ಲ. ಆಕ್ಸಿಜನ್ ಎಂಬ ಅನಿಲ ಧಾರವಾಡದಲ್ಲಿ 'ಪ್ರಾಣವಾಯು'ವಾಗಿ ಪರಿಣಮಿಸಿದರೆ ಶಾಸ್ತ್ರಾಧ್ಯಯನದ ಗತಿ ಏನಾಗಬೇಕು? ಅಂತಹ ಅವಿವೇಕಕ್ಕೆ ಕರ್ನಾಟಕವಾಗಲಿ ಭಾರತದ ಯಾವ ಪ್ರಾಂತವಾಗಲಿ ಹೋಗದಿರುವುದು ನಮ್ಮ ವಿದ್ಯಾರ್ಜನೆಯ ಹಿತ ದೃಷ್ಟಿಯಿಂದ ಅತ್ಯಂತಾವಶ್ಯಕ. ಅಂತರರಾಷ್ಟ್ರೀಯವಾದ ವೈಜ್ಞಾನಿಕ ಪರಿಭಾಷೆಯನ್ನೆಲ್ಲ ಭಾಷಾಂತರಿಸುವುದು ವ್ಯರ್ಥ ಸಾಹಸ. ಅದರಿಂದ ಯಾವ ಪ್ರಯೋಜನವೂ ಇಲ್ಲ; ಗೊಂದಲಕ್ಕೆ ಮಾತ್ರ ಅವಕಾಶವಾಗುತ್ತದೆ. ಆದ್ದರಿಂದ ಎಲ್ಲ ಕಡೆಗೂ ಸರ್ವ ಸಮಾನವಾಗಿ ರೂಢಿಯಲ್ಲಿರಬಹುದಾದ ಎಲ್ಲಿಯೋ ಕೆಲವು ಪದಗಳ ಹೊರತು ಉಳಿದುದೆಲ್ಲವನ್ನು ಅಂತರರಾಷ್ಟ್ರೀಯವಾದ ಪರಿಭಾಷೆಯಿಂದಲೇ ವ್ಯವಹರಿಸುವುದು ಉಚಿತ."[೨೫]

ಎಲ್ಲ ರಾಷ್ಟ್ರೀಯವಾದಿ ಚಿಂತಕರಂತೆ 'ಪ್ರಮಾಣೀಕೃತ' ಭಾಷೆಯ ಅಗತ್ಯವನ್ನು ಕುವೆಂಪುರವರೂ ಪ್ರತಿಪಾದಿಸುತ್ತಾರೆ. ಆಲೂರರು ಈ ಪರಿಕಲ್ಪನೆಯನ್ನು ಭಾಷಾ ಸಮುದಾಯವನ್ನು ಬೆಸೆಯುವ ತಂತ್ರವಾಗಿ ಬಳಸಿದರೆ, ಬಿ.ಎಂ.ಶ್ರೀಯವರು ಕಲೆ, ಸಾಹಿತ್ಯ, ಚಿಂತನೆಗಳು ಜನರಿಗೆ ತಲುಪಬೇಕೆಂಬ ಉದ್ದೇಶದಿಂದ ಪ್ರತಿಪಾದಿಸುತ್ತಾರೆ. ಹಾಗಾಗಿ ಮಧ್ಯಮ ಕನ್ನಡದ ಪ್ರತಿಪಾದನೆ ಮಾಡುತ್ತಾರೆ. ವಿದ್ಯಾವಂತ ಮಧ್ಯಮ ವರ್ಗದ

ಬ್ರಾಹ್ಮಣರ ಕನ್ನಡವೆಂದೂ, ಮೈಸೂರು ಬೆಂಗಳೂರು ಕನ್ನಡವೆಂದೂ ಹಲವು ವಿದ್ವಾಂಸರು ಟೀಕೆಯನ್ನು ಮಾಡಿದ್ದಾರೆ. ಆದರೆ ಕುವೆಂಪುರವರು ಇವರಿಬ್ಬರಿಗಿಂತ ಸ್ವಲ್ಪ ಭಿನ್ನ ನಿಲುವು ತಳೆಯುತ್ತಾರೆ. ಶಾಸ್ತ್ರಾಧ್ಯಯನದ ದೃಷ್ಟಿಯಿಂದ ಅಂತರ ರಾಷ್ಟ್ರೀಯ ಪರಿಭಾಷೆಯನ್ನೇ ಬಳಸುವುದು ಸರಿಯಾದ ಕ್ರಮ ಎಂಬ ನಿಲುವು ಅದು. ಆ ಮೂಲಕ ಜ್ಞಾನ ಶಿಸ್ತುಗಳಲ್ಲಿ ಪ್ರಗತಿ ಕಾಣಬಹುದು ಕನ್ನಡದ ಶಬ್ದಕೋಶವನ್ನೂ ವಿಸ್ತರಿಸಬಹುದು ಎಂಬ ಗ್ರಹಿಕೆಗಳು ಇದ್ದಂತಿದೆ.

ಇಂಗ್ಲಿಷ್ ಭಾಷೆಯನ್ನು 'ಜ್ಞಾನಕ್ಕೆ' ಮತ್ತು 'ಸಂಪರ್ಕ'ಕ್ಕೆ ಮಾತ್ರ ಬಳಸಬೇಕೆಂಬ ನಿಟ್ಟಿನಲ್ಲಿ ಆ ಭಾಷೆಗೊಂದು ಸ್ಥಾನ ನಿರ್ಣಯ ಮಾಡುತ್ತಾರೆ. ಆದರೆ 'ಕನ್ನಡ ಕೇಂದ್ರಿತ' ಚಿಂತನೆಯ ನೆಲೆಗೆ ನಿಲ್ಲಿಸಿ ಚರ್ಚೆ ಮಾಡುವಾಗ ಪ್ರಗತಿಪರರಂತೆ ಕಾಣುತ್ತಾರೆ ನಿಜ. ಆದರೆ ಇದೇ ಕನ್ನಡ ಕೇಂದ್ರಿತವಾದ ಚಿಂತನೆಯು ಕರ್ನಾಟಕದಲ್ಲಿ ಕೊಡವ, ತುಳುವಿನಂತಹ ಸೋದರಭಾಷೆಗಳಿವೆ ಎಂಬುದನ್ನು ಮರೆತು ವರ್ತಿಸುತ್ತದೆ. ಕನ್ನಡಕ್ಕೆ ಹಿಂದಿಯ ಹೇರಿಕೆ ಹೇಗೆ ಸಾಮ್ರಾಜ್ಯಶಾಹಿಯ ಕುರುಹಾಗಿ ಕಾಣಿಸುತ್ತದೆಯೋ ಹಾಗೆಯೇ ತುಳುವಿಗೂ, ಕೊಡವಕ್ಕೂ, ಕೊಂಕಣಿ ಮುಂತಾದವಕ್ಕೆ ಅನ್ವಯಿಸುತ್ತದೆಯಲ್ಲವೆ ಎಂಬ ತಾತ್ವಿಕ ವ್ಯವಧಾನ ಕುವೆಂಪುರಲ್ಲಿ ಕಾಣದಿರುವುದು ವಿಷಾದದ ಸಂಗತಿಯೇ. ವೈವಿಧ್ಯತೆಯನ್ನು ನಾಶ ಮಾಡಬಾರದು ಎಂದು ಬಲವಾಗಿ ಪ್ರತಿಪಾದಿಸುವ ಕುವೆಂಪುರವರು ಜನಪದ ಭಾಷೆಗಳ ಕುರಿತಾಗಿ ಏನು ಹೇಳುತ್ತಾರೆ? ಯಾಕೆ ಮೌನವಹಿಸುತ್ತಾರೆ? ಅವರನ್ನು ನಿಯಂತ್ರಿಸುತ್ತಿದ್ದ ಒತ್ತಡಗಳಾವುವು? ಎಂಬುದನ್ನು ಯೋಚಿಸಬೇಕಾಗುತ್ತದೆ.

ಒಟ್ಟಾರೆ ಸೃಜನಶೀಲ ಬರಹಗಾರರಾಗಿ ಸಾಹಿತ್ಯ ಸೃಷ್ಟಿ, ವೈಚಾರಿಕ ಚಿಂತಕರಾಗಿ ಚಿಂತನೆಗಳ ಸೃಷ್ಟಿ ಮತ್ತು ಆಡಳಿತರೂಢರಾಗಿ ಅವುಗಳ ಅನ್ವಯಿಕತೆ ಈ ಮೂರರಲ್ಲೂ ಕನ್ನಡವನ್ನು ಧ್ಯಾನಿಸಿದ ಕುವೆಂಪು ಆಧುನಿಕ ಕನ್ನಡ ರಾಷ್ಟ್ರೀಯ ಚಿಂತನೆಗೆ 'ಆನೆ'ಯ ಬಲ ತಂದುಕೊಟ್ಟವರೆಂದು ಭಾವಿಸಬಹುದು.

**೩.೬ ಭಾಷೆ ಕುರಿತಂತೆ ಚಿದಾನಂದ ಮೂರ್ತಿಯವರ ನಿಲುವುಗಳು**

ಸ್ವತಃ ಭಾಷಾಶಾಸ್ತ್ರವನ್ನು ಅಭ್ಯಾಸಮಾಡಿರುವ ಮತ್ತು 'ದ್ರಾವಿಡ ಭಾಷೆ'ಗಳ ಅನನ್ಯತೆಯನ್ನು ಪ್ರತಿಪಾದಿಸಿದ ಡಾ. ಎಂ. ಚಿದಾನಂದ ಮೂರ್ತಿಯವರ ಭಾಷಿಕ ಚಿಂತನೆಗಳು ಆಧುನಿಕ ಕರ್ನಾಟಕದ ಅನೇಕ ತಲ್ಲಣಗಳಿಗೆ ಪ್ರತಿಕ್ರಿಯೆಯ ರೂಪದಲ್ಲಿ ಮಂಡಿತವಾಗುತ್ತಿವೆ. ಸಾಂಪ್ರದಾಯಕ ಭಾಷಾಶಾಸ್ತ್ರ ಮತ್ತು ಶಾಸನಗಳ ಅಧ್ಯಯನದಲ್ಲಿ ತೊಡಗಿದ್ದ ಇವರು ೮೦ರ ದಶಕದಲ್ಲಿ ವಿವಿಧ ಕಾರಣಗಳಿಂದ ಪುಟಿದೆದ್ದ ಕನ್ನಡಪರ ಸಂಘಟನೆಗಳಿಗೆ ಪ್ರಣಾಳಿಕೆ ಸ್ವರೂಪದ "ಕನ್ನಡ ಸಂಸ್ಕೃತಿ : ನಮ್ಮ ಹೆಮ್ಮೆ" ಪುಸ್ತಕವನ್ನು ರಚಿಸಿದರು. ಈ ಪುಸ್ತಕ ಅನೇಕ ಮುದ್ರಣಗಳನ್ನು ಕಂಡು ಇದರ ಸಾವಿರಾರು ಪ್ರತಿಗಳು ಕನ್ನಡ ಜನಸಮುದಾಯದ ಮಧ್ಯೆ ಹಂಚಲ್ಪಟ್ಟಿವೆ. ಕುವೆಂಪುರವರ ಶಿಷ್ಯರಾಗಿದ್ದು ಕನ್ನಡ ಅಧ್ಯಾಪಕ ವೃತ್ತಿಯಲ್ಲಿ ಬೆಳೆದುಬಂದ ಚಿದಾನಂದ ಮೂರ್ತಿಯವರು ಎಂಭತ್ತರ ದಶಕದ ನಂತರ ಕನ್ನಡ 'ಮೂಲಭೂತವಾದಿ' ಎನ್ನಬಹುದಾದ ರೂಪಾಂತರ ಪಡೆದರು. ಅರೆಶಿಕ್ಷಿತ, ಸ್ವಭಾವದಲ್ಲಿ ಭಾವಾವೇಶವಾದಿಯಾದ, ಅನ್ಯಭಾಷೆಗಳು ಮತ್ತು ಅನ್ಯ ಭಾಷಿಕರ ಮೇಲೆ ಆಕ್ರಮಣಕಾರಿಯಾದ ಕೃತ್ಯಗಳನ್ನೇ 'ಕನ್ನಡಪ್ರೇಮ' ಎನ್ನುವ ನಿಲುವುಗಳು ಈ ಸಂದರ್ಭದಲ್ಲಿ

ರೂಪುಗೊಂಡವು. ಈ ಸಂಘಟನೆಗಳಿಗೆ ತಾತ್ವಿಕತೆಯನ್ನು ಒದಗಿಸಿದವರು ಚಿದಾನಂದ ಮೂರ್ತಿಯವರು. ಕನ್ನಡಿಗರಿಗೆ ಕರೆಕೊಡುವ ಧಾಟಿಯಲ್ಲಿರುವ ಅವರ ಮಾತುಗಳಿವು :

"ಕನ್ನಡ ಜನರೆ, ಏಳಿ! ಎದ್ದೇಳಿ! ಬೌದ್ಧಿಕರೆಂದು ಕರೆದುಕೊಳ್ಳುವ ಜನರೂ ರಾಜಕಾರಣಿಗಳೂ ವಿಶ್ವಭ್ರಾತೃತ್ವ, ಭಾರತದ ಅಖಂಡತೆ, ಭಾಷಾಂಧತೆ ಇತ್ಯಾದಿ ಮಾತುಗಳಿಂದ ನಮ್ಮನ್ನು ವಂಚಿಸಲು ಯತ್ನಿಸುತ್ತಿರುವ ಬಗ್ಗೆ ಜಾಗೃತರಾಗಿರಿ. ಕನ್ನಡಿಗ ಎಂದೂ ಭಾಷಾಂಧನಲ್ಲ. ಅವನು ಎಂದೂ ದೇಶದ್ರೋಹಿಯಲ್ಲ. ನಿಮ್ಮ ಪರಂಪರೆ ಬಗ್ಗೆ ಹೆಮ್ಮೆ ಇರಲಿ. ತನ್ನತನವನ್ನು ಉಳಿಸಿಕೊಳ್ಳುವ ಪ್ರಾಂತಕ್ಕೆ ಉಳಿಗಾಲವಿಲ್ಲ. ಅನ್ಯಭಾಷೀಯ ಸೋದರರು ಕರ್ನಾಟಕಕ್ಕೆ ಬಂದು ಕರ್ನಾಟಕವು ತಮ್ಮ ವಸಾಹತುಗಳಾಗುವಂತೆ ಮಾಡುತ್ತಿದ್ದಾರೆ. ಇದನ್ನು ತಡೆಯದಿದ್ದರೆ ಕರ್ನಾಟಕವು ಸರ್ವನಾಶವಾಗುತ್ತದೆ. ಧೀರರಾದ ಅಸ್ಸಾಮ್ ಯುವಕರು ಹೋರಾಡಿ ತಮ್ಮ ಪ್ರಾಂತವನ್ನು ವಿನಾಶದಿಂದ ತಪ್ಪಿಸಿದರು. ಅಂತಹ ಹೋರಾಟಕ್ಕೆ ಕನ್ನಡದ ಜನ ಸಿದ್ಧವಾಗಬೇಕಿದೆ. ಗಡಿಗಳಲ್ಲಿ ಮರಾಠಿಗರು, ತಮಿಳರು, ಮಲಯಾಳಿಗಳು ಕನ್ನಡವನ್ನು ಲೆಕ್ಕಿಸುತ್ತಿಲ್ಲ. ಭವಿಷ್ಯದ ಬೆಂಗಳೂರು ಗಾಬರಿಯನ್ನು ಹುಟ್ಟಿಸುತ್ತದೆ. ಹಿಂದಿ ಅಧಿಕೃತ ಭಾಷೆಯ ಹೆಸರಲ್ಲಿ ವಿಜೃಂಭಿಸುತ್ತಿದೆ. ಕರ್ನಾಟಕದಲ್ಲಿ ಕನ್ನಡ ಮಕ್ಕಳು ನಿರುದ್ಯೋಗಿಗಳಾಗಿ ಅಲೆಯುತ್ತಿದ್ದಾರೆ. ಕೇಂದ್ರದಲ್ಲಿ ಕನ್ನಡಿಗರ ಧ್ವನಿ ದುರ್ಬಲದ ಮಾತಿರಲಿ ಅದು ಇಲ್ಲವೇ ಇಲ್ಲ" [೨೬]

ಕನ್ನಡದ ಚಿಂತಕ ಡಿ.ಆರ್.ನಾಗರಾಜರು 'ಆತಂಕ ಕೇಂದ್ರಿತ' ರಾಷ್ಟ್ರೀಯ ಚಿಂತನೆ ಎಂದು ಚಿದಾನಂದ ಮೂರ್ತಿಯವರ ನಿಲುವನ್ನು ವಿಶ್ಲೇಷಿಸಿದ್ದಾರೆ. ಆಶ್ಚರ್ಯವೆಂದರೆ ಮರಾಠಿಯ ಎದುರು ಚಿಂತನೆಗಳನ್ನು ರೂಪಿಸಿಕೊಂಡ ಆಲೂರು ವೆಂಕಟರಾಯರು ೨೦ರ ದಶಕದಲ್ಲಿ 'ಕರ್ನಾಟಕದ ವೀರರತ್ನಗಳು' ಕೃತಿಯನ್ನು ಬರೆದಾಗ ಬಳಸಿ ನಂತರ ಬಿಟ್ಟುಕೊಟ್ಟ ಭಾವಾವೇಶದ ಮಾತುಗಳನ್ನೇ ಚಿದಾನಂದಮೂರ್ತಿಯವರು ೮೦ ರ ದಶಕದ ಉತ್ತರಾರ್ಧದಲ್ಲಿ ಬಳಸುತ್ತಿರುವುದು. ಬೌದ್ಧಿಕರೆಂದು ಕರೆದುಕೊಳ್ಳುವ ಜನ ಕನ್ನಡ ಯುವಕರನ್ನು ನಿರ್ವೀರ್ಯ ಮಾಡ ಹೊರಟಿದ್ದಾರೆಂದು ಕನ್ನಡದ ಚಿಂತಕರನ್ನು ಅಣಕಮಾಡುತ್ತಾರೆ. ಪರ್ಯಾಯವಾಗಿ 'ಕ್ಷಾತ್ರ'ವನ್ನು ಪ್ರತಿಪಾದಿಸುವ ಚಿದಾನಂದಮೂರ್ತಿಯವರು ಅಸ್ಸಾಮ್‌ಯುವಕರ ರಕ್ತಸಿಕ್ತ ಹೋರಾಟಗಳು ಮಾದರಿಯಾಗಲಿ ಎಂದು ಕರೆಕೊಡುತ್ತಾರೆ. ಆದರೆ ಕೈಗಾರಿಕೆಗಳ ಕೇಂದ್ರೀಕರಣದ ಕಾರಣಕ್ಕೋ ನಗರ ವೇಗವಾಗಿ ಬೆಳೆಯುತ್ತಿದ್ದರಿಂದ ಕಟ್ಟಡ ನಿರ್ಮಾಣ ಮುಂತಾದವುಗಳ ಕಾರಣಕ್ಕೋ ವಲಸೆ ಬಂದ ಇತರೆ ರಾಜ್ಯಗಳ ದುಡಿವ ಜನರನ್ನು ಶತ್ರುವನ್ನಾಗಿ ಬಿಂಬಿಸುತ್ತಿರುವುದು ಈ ಚಿಂತನೆಗಳ ಬುನಾದಿ ಎಷ್ಟು ಶಿಥಿಲ ಎಂದು ತೋರಿಸುತ್ತದೆ. ಅಲ್ಲದೆ ಬೆಂಗಳೂರಿನ ತಲ್ಲಣಗಳನ್ನೇ ಇಡೀ ಕರ್ನಾಟಕ ಅನುಭವಿಸುತ್ತಿರುವ ತಲ್ಲಣಗಳೆಂದು ಬಿಂಬಿಸುವುದು ಹುಸಿ ನೆಲೆಗಟ್ಟಿನ ಮೇಲೆ ಹುಟ್ಟಿದ ಆತಂಕವೆನ್ನಿಸುತ್ತದೆ. ಆದರೆ ಕನ್ನಡವನ್ನು ನಿಜಕ್ಕೂ ಶೋಷಿಸುತ್ತಿರುವ ಬಂಡವಾಳಿಗರು ಚಿದಾನಂದ ಮೂರ್ತಿಯವರು ರೂಪಿಸಿದ ದೃಶ್ಯದಲ್ಲಿ ಪಾತ್ರಗಳಾಗಿ ಬರುವುದೇ ಇಲ್ಲ. ಬಂಡವಾಳಿಗರನ್ನು ಹಾಗೂ ಬಹುರಾಷ್ಟ್ರೀಯ ಕಂಪನಿಗಳನ್ನು ಕುರಿತು 'ಬೈಪಾಸು' ಮಾಡಿ ಹೊರಡುವ ಚಿದಾನಂದಮೂರ್ತಿಯವರ ಚಿಂತನೆ ಹಿಂದೆ, ಕೇವಲ ಈ ಕುರಿತ ಮುಗ್ಧತೆ ಇದೆಯೇ ಇಲ್ಲ. ಬಲಪಂಥೀಯ ರಾಜಕಾರಣದ ಭಾಗವಾದ ದುಡಿಯುವ ವರ್ಗಗಳ ಮಧ್ಯೆ ಬಿರುಕು ಸೃಷ್ಟಿಸುವ ಪ್ರಯತ್ನ

ಭಾಗವೋ ಎಂಬ ಸಂದೇಹಗಳು ಹುಟ್ಟಿಕೊಳ್ಳುತ್ತವೆ. ಹಾಗಾಗಿ ಕನ್ನಡದಂತೆಯೇ ದಮನಕ್ಕೊಳಗಾದ ಮತ್ತು ತನ್ನ ನ್ಯಾಯೋಚಿತ ಸ್ಥಾನವನ್ನು ಕಳೆದುಕೊಂಡ ತಮಿಳು, ತೆಲುಗು, ಮಲಯಾಳಂ, ಉರ್ದು ಮುಂತಾದ ಭಾಷೆಗಳನ್ನು ಕನ್ನಡದ ಶತ್ರುಪಾಳಯದಲ್ಲಿ ನಿಲ್ಲಿಸಿದ್ದು ಬಲಪಂಥೀಯ ನಿಲುವಿನ ಪರಿಣಾಮವೆಂದು ವಿಶ್ಲೇಷಿಸಬಹುದೆನಿಸುತ್ತದೆ. ಎಲ್ಲ ಬಲಪಂಥೀಯ ನಿಲುವುಗಳು ಕೂಡ ಹುಸಿ ಕಾರಣಗಳ ನೆಲೆಯಲ್ಲಿ ಸಂಗಾತಿ ಭಾಷೆ, ಧರ್ಮಗಳನ್ನೂ ದ್ವೇಷಿಸುತ್ತವೆ ಮತ್ತು ಅಧಿಕಾರಸ್ಥ ಸಿದ್ಧಾಂತಗಳು, ಅವು ಪರಕೀಯವಾಗಿದ್ದರೂ ಮಾನ್ಯಮಾಡುತ್ತವೆ. ಚಿದಾನಂದಮೂರ್ತಿಯವರೂ ಸಹ ಇಂಥದೇ ರಾಜಕಾರಣ ಮಾಡುತ್ತಾರೆ.

ಡಾ.ಚಿದಾನಂದ ಮೂರ್ತಿಯವರ ಚಿಂತನೆಗಳಲ್ಲಿ 'ಕನ್ನಡದ ತಳವರ್ಗದ ಜನರ ಅನುಭವಗಳೇ ಇಲ್ಲದಿರುವುದು ಮತ್ತು ಕೊಡುಕೊಳ್ಳುವಿಕೆಯಲ್ಲಿ ವಿಶ್ವಾಸವಿಡದೆ ಕೆರಳಿದ, ಆತಂಕಗೊಂಡ ರೀತಿಯಲ್ಲಿ ಭಾಷೆ ಮಂಡಿತವಾಗುತ್ತಿರುತ್ತದೆ. ರೊಚ್ಚಿಗೆಬ್ಬಿಸುವ, ಗತವನ್ನು ನೆನಪಿಸಿಕೊಂಡು ಪುಳಕಿತರಾಗುವ ಇವರಿಂದ ಕನ್ನಡ ಭಾಷೆಯ 'ಬಹುತ್ವ'ದ ನೆಲೆಯನ್ನು ಗುರುತಿಸಲು ಸಾಧ್ಯವಾಗುವುದಿಲ್ಲ.

ಜನರ ನಂಬಿಕೆ, ಆಚರಣೆಗಳ ಮೂಲಕವೇ ಭಾಷಾ ನುಡಿಗಟ್ಟುಗಳು ರೂಪುಗೊಳ್ಳುತ್ತವೆ ಎನ್ನುವುದರ ಕುರಿತು ನಂಬಿಕೆಯಿಲ್ಲದ ಚಿದಾನಂದ ಮೂರ್ತಿಯವರಿಗೆ ಕನ್ನಡವನ್ನು ಗಟ್ಟಿಗೊಳಿಸುವುದರಲ್ಲಿ ಇತರ ಭಾಷಿಕರು ಕೂಡ ಸಾಂಸ್ಕೃತಿಕ, ಧಾರ್ಮಿಕ ನೆಲೆಯ ಮೂಲಕ ಕನ್ನಡದ ಶಕ್ತಿಯನ್ನು ಹೆಚ್ಚಿಸಬಲ್ಲವು ಎನ್ನುವುದರಲ್ಲಿ ಚಿದಾನಂದ ಮೂರ್ತಿಯವರಿಗೆ ನಂಬಿಕೆ ಇಲ್ಲ. ಹಾಗಾಗಿ ಕನ್ನಡದ ಸಹಬಾಳ್ವೆಯಿಂದ ಸಾಧಿತವಾಗಿರುವ ಮತ್ತು ಕನ್ನಡಕ್ಕೆ ಅಗತ್ಯವಾಗಿರುವ ನುಡಿಗಟ್ಟುಗಳನ್ನು ರೂಪಿಸುವುದು ಹೇಗೆ ಎಂದು ಚಿಂತಿಸುತ್ತಿರುವ ಕನ್ನಡದ ಭಾಷಾ ಚಿಂತಕರಾದ ಕೆ.ವಿ.ನಾರಾಯಣ ಅಥವಾ ಡಿ.ಎನ್.ಶಂಕರಭಟ್ಟರ ರೀತಿಯಲ್ಲಿ ಚಿದಾನಂದ ಮೂರ್ತಿಯವರಿಂದ ಚಿಂತಿಸಲು ಸಾಧ್ಯವೇ ಆಗುವುದಿಲ್ಲ ಎಂಬುದು ವಿಷಾದ ಹುಟ್ಟಿಸುತ್ತದೆ.

ಹಾಗಾಗಿ ಅವರ ಒಟ್ಟು ಚಿಂತನೆಯಲ್ಲಿ ಕೊಡವ, ತುಳು, ಕೊಂಕಣಿ, ಉರ್ದು, ಬ್ಯಾರಿ ಭಾಷೆಗಳ ಕುರಿತಾದ ನಿಲುವುಗಳು ಕೂಡ ಆರೋಗ್ಯಕರವೆನ್ನಿಸುವುದಿಲ್ಲ. ಈ ಭಾಷೆಗಳಿಗೆ ಅಕಾಡೆಮಿ ಮುಂತಾದ ಸ್ಥಾನಮಾನ ನೀಡುವುದನ್ನು ಸಹ ಚಿದಾನಂದ ಮೂರ್ತಿಯವರು ವಿರೋಧಿಸುತ್ತಾರೆ. ಕದಂಬರಿಂದ ಆರಂಭಗೊಂಡು ವಿಜಯನಗರದ ಅರಸರವರೆಗೆ ಪ್ರಭುತ್ವಗಳ ಹಿನ್ನೆಲೆಯಲ್ಲಿ ಭಾಷೆ ಮತ್ತು ಸಂಸ್ಕೃತಿಗಳನ್ನು ಪರಿಶೀಲಿಸುವ ಚಿದಾನಂದ ಮೂರ್ತಿಯವರು ಪ್ರಭುತ್ವಗಳ ಏರಿಳಿತಗಳು ಭಾಷೆ, ಸಂಸ್ಕೃತಿಗಳ ಏರಿಳಿತಗಳಿಗೆ ಕಾರಣವಾಗುತ್ತವೆ ಎಂಬ ಪ್ರಭುತ್ವಪರ ಧೋರಣೆಯ ಮೂಲಕ ಗ್ರಹಿಸಲು ಪ್ರಯತ್ನಿಸಿದ್ದಾರೆ. ಇಷ್ಟೆಲ್ಲದರ ನಡುವೆ ಕೂಡ ಚಿದಾನಂದ ಮೂರ್ತಿಯವರು ಕನ್ನಡತ್ವ ಕುರಿತ ಧೋರಣೆಗಳಿಂದಾಗಿ 'ಹಿಂದುತ್ವ'ಕ್ಕೆ ಭಿನ್ನವಾದ ನೆಲೆಯಲ್ಲಿ ನಿಲ್ಲುತ್ತಾರೆ.

"ಕನ್ನಡವು ಸಂಸ್ಕೃತ, ಹಿಂದಿ, ಮರಾಠಿ, ಗುಜರಾತಿಗಳ ಆರ್ಯನ್ ಭಾಷಾವರ್ಗಕ್ಕಿಂತ ಭಿನ್ನವಾದ ದ್ರಾವಿಡ ಭಾಷಾವಂಶಕ್ಕೆ ಸೇರಿದೆ. ಅದಕ್ಕೆ ತನ್ನದೇ ಆದ ವೈಶಿಷ್ಟ್ಯಗಳಿವೆ. ಆದರೂ ಕನ್ನಡ ಭಾಷೆಯು ಎಲ್ಲ ಭಾಷೆಗಳಿಂದಲೂ ತನಗೆ ಅಗತ್ಯವಾದ ಪದಗಳನ್ನು ಸ್ವೀಕರಿಸುತ್ತ ಬೆಳೆದಿದೆ"[೨೨] ಎನ್ನುವ ನಿಲುವನ್ನು ತೆಗೆದುಕೊಳ್ಳುತ್ತಾರೆ.

ಚಿದಾನಂದ ಮೂರ್ತಿಯವರ ಈ ಕನ್ನಡಪರ ಧೋರಣೆಗಳಿಂದಾಗಿ ಕನ್ನಡ ರಾಷ್ಟ್ರೀಯತೆಗೆ ಸ್ವಲ್ಪ ಮಟ್ಟಿಗಾದರೂ ಆಪ್ತರೆನ್ನಿಸಿಕೊಳ್ಳುತ್ತಾರೆ. ಆದರೆ 'ವೀರಶೈವಧರ್ಮ ಮತ್ತು ಭಾರತೀಯ ಸಂಸ್ಕೃತಿ' ಕೃತಿ ರಚಿಸುವ ಹೊತ್ತಿಗೆ ಅವರ ನಿಲುವುಗಳಲ್ಲಿ ಗಮನಾರ್ಹ ಬದಲಾವಣೆಗಳು ಕಾಣಿಸಲಾರಂಭಿಸುತ್ತವೆ. ತೊಂಬತ್ತರ ದಶಕದ ಉತ್ತರಾರ್ಧದ ಹೊತ್ತಿಗೆ 'ಹಿಂದುತ್ವ' ಪ್ರಧಾನ ರಾಷ್ಟ್ರೀಯತೆಗೆ ಆಪ್ತರಾದ ಕಾರಣಕ್ಕೆ ಸಂಸ್ಕೃತಪರ ನಿಲುವುಗಳನ್ನು ತೆಗೆದುಕೊಳ್ಳಲು ಅವರು ಆರಂಭಿಸುತ್ತಾರೆ. ಬಹುಪಾಲು ವೀರಶೈವ ಮಠಗಳಲ್ಲಿ ಸಂಸ್ಕೃತ ಕಲಿಸುತ್ತಾರೆ. ವೇದ, ಉಪನಿಷತ್ತಿನ ತರಗತಿಗಳಿವೆ. ಸಂಸ್ಕೃತ ಪಾಠಶಾಲೆಗಳಿವೆ, ವೈದಿಕತೆಯನ್ನು ಎತ್ತಿ ಹಿಡಿಯುತ್ತವೆ. ಹಾಗಾಗಿ ವೀರಶೈವವು ಹಿಂದೂ ಧರ್ಮದ ಭಾಗ ಎನ್ನುವುದು ಅವರ ಒಟ್ಟಾರೆ ನಿಲುವು. ಕನ್ನಡತ್ವದ ಕಾರಣಕ್ಕಾಗಿ ಹಿಂದಿ ವಿರುದ್ಧದ ನಿಲುವುಗಳನ್ನು ರೂಪಿಸುತ್ತಾರಾದರೂ ಅಂತರಾಷ್ಟ್ರೀಯ ಭಾಗವಾದ 'ಇಂಗ್ಲಿಷ್'ನ ಕುರಿತಂತೆ ಸ್ಪಷ್ಟನಿಲುವುಗಳೇನೂ ಗೋಚರಿಸುವುದಿಲ್ಲ.

### ೩.೭ ಭಾಷೆ ಕುರಿತಂತೆ ಕರ್ನಾಟಕ ವಿಮೋಚನಾ ರಂಗದ ನಿಲುವುಗಳು

ಚಿದಾನಂದ ಮೂರ್ತಿಯವರು ತೀವ್ರವಾಗಿ ಕೆರಳಿದ ಸ್ಥಿತಿಯಲ್ಲಿ ಭಾಷೆ ಮತ್ತು ರಾಜಕಾರಣವನ್ನು ಮಂಡಿಸಿದ ತೊಂಬತ್ತರ ದಶಕದ ಆಚೀಚಿನ ವರ್ಷಗಳ ಬೆಳವಣಿಗೆಗಳು ಅವರನ್ನು ಕನ್ನಡ ಮೂಲಭೂತವಾದಿಯಾಗುವಂತೆ ಮಾಡಿದ ಚಾರಿತ್ರಿಕ ಬಿಕ್ಕಟ್ಟುಗಳೇ 'ಕರ್ನಾಟಕ ವಿಮೋಚನಾ ರಂಗ'ವೆಂಬ ಸಂಘಟನೆಯ ಹುಟ್ಟಿಗೆ ಕಾರಣವಾಗುತ್ತಿರುವುದು ಕುತೂಹಲದ ವಿಚಾರ. ಜಾಗತೀಕರಣಕ್ಕೆ ಪೂರ್ವಭಾವಿಯಾಗಿ 'ರಂಗತಯಾರಿ'ಯ ಕೆಲಸ ಆರಂಭವಾಗಿದ್ದ ಭಾರತದಲ್ಲಿ ಸಮುದಾಯಗಳ (ಭಾಷೆ, ಧಾರ್ಮಿಕ, ಜನಾಂಗಿಕ) ನಡುವೆ ಅಪನಂಬಿಕೆ ಹುಟ್ಟಿಸುವ, ಆ ಮೂಲಕ ಅವುಗಳ ಗಮನವೆಲ್ಲ ಭಾಷೆ, ಧರ್ಮಗಳ ಸಂಘರ್ಷದ ಪರಿಧಿಯಲ್ಲಿಯೇ ಸುತ್ತುವಂತೆ ಮಾಡುವ ಪ್ರಯತ್ನ ಕೂಡ ಆರಂಭವಾಗಿತ್ತು. ಚಿದಾನಂದಮೂರ್ತಿಯವರು 'ಕನ್ನಡ ಸಂಸ್ಕೃತಿ ನಮ್ಮ ಹೆಮ್ಮೆ' ಪುಸ್ತಕ ಪ್ರಕಟಗೊಂಡ ಎರಡು ವರ್ಷಗಳ ಅಂತರದ ಅವಧಿಯಲ್ಲಿಯೇ ಈ ಸಂಘಟನೆ ರೂಪುಗೊಂಡಿರುವುದು ಚಾರಿತ್ರಿಕ ವಿಶೇಷ. ಕುತೂಹಲದ ವಿಚಾರವೆಂದರೆ, ಆಲೂರರು ಆರಂಭಘಟ್ಟದಲ್ಲಿ ಬಳಸಿ ಬಿಟ್ಟಿದ್ದ ನುಡಿಗಟ್ಟುಗಳನ್ನು ಭಾವತೀವ್ರತೆಯನ್ನು ಚಿದಾನಂದಮೂರ್ತಿಯವರು ಎಂಭತ್ತು ತೊಂಭತ್ತರ ದಶಕಗಳಲ್ಲಿ (ಈಗಲೂ) ಮುಂದುವರಿಸುತ್ತಾರೆ. ಆದರೆ ಕರ್ನಾಟಕ ವಿಮೋಚನಾ ರಂಗದ ಬಹುಪಾಲು ಆಶಯಗಳು ಕುವೆಂಪುರವರ ಆಶಯಗಳಂತೆಯೇ ಕಾಣುತ್ತವೆ.

ಹಿಂದಿ ಮತ್ತು ಇಂಗ್ಲಿಷಿನ ಸಾಮ್ರಾಜ್ಯಶಾಹಿ ಮುಖಗಳನ್ನು ಅನಾವರಣಗೊಳಿಸಿ, ಸಂಸ್ಕೃತವೂ ಒಳಗೊಂಡಂತೆ ಮೇಲಿನ ಎರಡು ಭಾಷೆಗಳನ್ನು 'ಕನ್ನಡ ಬದುಕಿಗೆ ಕಂಟಕ'ಗಳು ಎಂಬಂತೆ ಗ್ರಹಿಸಲಾಗಿದೆ. ಮಾತೃಭಾಷಾ ಶಿಕ್ಷಣ, ಜನರ ಭಾಷೆಯಲ್ಲಿ ಆಡಳಿತ ಇವು ಅನೇಕ ಬಿಕ್ಕಟ್ಟುಗಳಿಗೆ ಔಷಧಿಯಾಗಬಲ್ಲವು ಎಂಬ ನಿಲುವುಗಳಂತೂ ಕುವೆಂಪುರವರ ಮಾತುಗಳಂತೆಯೇ ಕೇಳಿಸುತ್ತವೆ. ಹಿಂದಿ, ಇಂಗ್ಲಿಷ್ ಮತ್ತು ಸಂಸ್ಕೃತ ಭಾಷೆಗಳ ಹೇರಿಕೆಯ ಹಿಂದಿನ ಹುನ್ನಾರವನ್ನು ಕ.ವಿ.ರಂ ಹೀಗೆ ಅರ್ಥೈಸುತ್ತದೆ :

"ಕನ್ನಡ ರಾಷ್ಟ್ರೀಯತೆಯು ಎದುರಿಸಬೇಕಾಗಿರುವ ಸಮಸ್ಯೆಗಳಲ್ಲಿ ಕನ್ನಡದ ಉಳಿವು ಹಾಗೂ ಅಭಿವೃದ್ಧಿಯು

ಪ್ರಶ್ನೆ ಮುಖ್ಯವಾದುದು. ಇದು ಕರ್ನಾಟಕ ಮಾತ್ರವಲ್ಲದೆ ಭಾರತದ ಎಲ್ಲಾ ದಮನಿತ ರಾಷ್ಟ್ರೀಯತೆಗಳು ಎದುರಿಸುತ್ತಿರುವ ಸಮಸ್ಯೆಯಾಗಿದೆ. ತಮ್ಮ ಮಾತೃಭಾಷೆಗಳನ್ನು ಉಳಿಸಿಕೊಳ್ಳುವುದು, ಆಡಳಿತ, ಶಿಕ್ಷಣಗಳಲ್ಲಿ ಅವುಗಳನ್ನು ಯೋಗ್ಯವಾಗುವಂತೆ ರೂಢಿಸುವುದು ಇಂದು ಜನತೆಯ ಮುಂದಿರುವ ಕರ್ತವ್ಯವಾಗಿದೆ. ಕಾರಣವೇನೆಂದರೆ ಸರ್ಕಾರಗಳು ಇಂದು ಮಾತೃಭಾಷೆಗಳ ಪರವಾಗಿ ವರ್ತಿಸುತ್ತಿಲ್ಲ......... ಕೇಂದ್ರ ಸರ್ಕಾರ ಹತ್ತು ಹಲವು ರೀತಿಯಲ್ಲಿ ಹಿಂದಿಯನ್ನು ಹೇರುತ್ತಿದೆ. ಇಂಗ್ಲಿಷನ್ನು ಸಹಾಯಕ ಭಾಷೆಯೆಂದು ಕರೆದರೂ ಎಲ್ಲಾ ರಂಗದಲ್ಲಿ ಹಿಂದಿಗೆ ಮೊದಲು ಇಂಗ್ಲಿಷ್ ಪ್ರಮುಖ ಸ್ಥಾನದಲ್ಲಿದೆ. ಶೈಕ್ಷಣಿಕ ರಂಗದಲ್ಲಿ ಮುಖ್ಯವಾಗಿ ತಾಂತ್ರಿಕ ಶಿಕ್ಷಣ, ವಿಜ್ಞಾನ, ಇಂಜಿನಿಯರಿಂಗ್, ವೈದ್ಯಕೀಯ ಶಿಕ್ಷಣ ಹಾಗೂ ಐ.ಎ.ಎಸ್.ನಂತಹ ಪರೀಕ್ಷೆಗಳಿಗೆ ಪಠ್ಯಪುಸ್ತಕಗಳು ಇಂಗ್ಲಿಷ್‌ನಲ್ಲಿವೆ. ಇದರೊಂದಿಗೆ ಸಂಸ್ಕೃತ ಭಾಷೆ ಪ್ರಥಮ ಭಾಷೆಯಾಗಿ ಸೇರಿಸಲ್ಪಟ್ಟಿದೆ. ಎಲ್ಲರೂ ಇದನ್ನು ಕಲಿಯಬೇಕೆಂಬ ಒತ್ತಾಯವಿಲ್ಲದಿದ್ದರೂ ಈ ಭಾಷೆಯನ್ನು ಕಲಿಯುವವರಿಗೆ ಹೆಚ್ಚಿನ ಅಂಕಗಳನ್ನು ನೀಡುತ್ತಿದ್ದಾರೆ. ಇದರಿಂದಾಗಿ ಕನ್ನಡ ಪ್ರಯೋಜನಕ್ಕೆ ಬಾರದ ಭಾಷೆಯೆಂಬಂತಾಗಿದೆ. ಆದ್ದರಿಂದ ಕನ್ನಡ ಭಾಷಾಭಿವೃದ್ಧಿಗೆ ತಡೆಗಲ್ಲಾಗಿರುವ ಹಿಂದಿ, ಇಂಗ್ಲಿಷ್, ಸಂಸ್ಕೃತಗಳನ್ನು ತೀವ್ರವಾಗಿ ವಿರೋಧಿಸಬೇಕು.’’[೨೮]

ಕ.ವಿ.ರಂ ಭಾಷೆಗಳ ಉಳಿವು ಬದುಕಿನ ಉಳಿವು ಎಂಬ ಚಿಂತನೆಯನ್ನು ತೊಂಬತ್ತರ ದಶಕದ ಆರಂಭದಲ್ಲಿ ಮಂಡಿಸುತ್ತಿದೆ. ಕುವೆಂಪುರವರ ಧಾಟಿಯ ಮುಂದುವರಿದ ಭಾಗಗಳೆಂಬಂತೆ ಗೋಚರವಾಗುವ ಈ ಮಾತುಗಳಲ್ಲಿ ಕೇಂದ್ರ ಸರ್ಕಾರದ ಉದ್ದೇಶ ಪೂರ್ವಕ ಹುನ್ನಾರಗಳಿಂದಾಗಿ ಈ ರೀತಿಯ ಸ್ಥಿತಿ ಏರ್ಪಟ್ಟಿದೆ ಎಂಬ ಗ್ರಹಿಕೆ ಕೆಲಸ ಮಾಡುತ್ತಿದೆ. ಇಂಗ್ಲಿಷ್, ಹಿಂದಿ ಮತ್ತು ಸಂಸ್ಕೃತಗಳನ್ನು ಮಾರುಕಟ್ಟೆಯಂತೆ ಬಳಸುತ್ತಿರುವ ಅಧಿಕಾರಸ್ಥ ಕೇಂದ್ರವು ಜನಭಾಷೆಗಳಿಗೆ ವಿರುದ್ಧವಾಗಿದೆ ಹಾಗಾಗಿಯೇ ಬಿಕ್ಕಟ್ಟುಗಳು ತಲೆದೋರುತ್ತಿದೆ ಎಂಬ ಗ್ರಹಿಕೆ ಇದೆ. ಬಿ.ಎಂ.ಶ್ರೀ ಮುಂತಾದವರು ವಿವಿಧ ಜ್ಞಾನಶಿಸ್ತುಗಳಿಗೆ ಸೇರಿದ ಪಠ್ಯಗಳನ್ನು ಕನ್ನಡದಲ್ಲಿ ರೂಪಿಸುವ ಕೆಲಸ ಮಾಡಿದ್ದರು. ಆದರೆ ಬದಲಾದ ಸನ್ನಿವೇಶಗಳಲ್ಲಿ ಆ ಎಲ್ಲ ಪಠ್ಯಗಳು, ಇಂಗ್ಲೀಷ್‌ನಲ್ಲಿವೆ ಎಂದು ತನ್ನ ಸಿಟ್ಟುತೋರುತ್ತದೆ. ಸರ್ಕಾರಗಳು ಏಕೆ ಈ ಅಧಿಕಾರಸ್ಥ ಭಾಷೆಗಳನ್ನು ಜನರ ಮೇಲೆ ಹೇರಲು ಪ್ರಯತ್ನಿಸುತ್ತದೆ ಎಂಬುದಕ್ಕೆ ಕ.ವಿ.ರಂ. ನ ಕಾರಣಗಳು ಈ ರೀತಿ ಇವೆ :

‘‘ಹಿಂದಿ-ಇಂಗ್ಲಿಷ್ ಭಾಷೆಗಳನ್ನು ಕನ್ನಡದ ಮೇಲೆ ಹೇರುತ್ತಿರುವುದಕ್ಕೆ ಕಾರಣ ಸ್ಪಷ್ಟವಾಗಿದೆ. ಆಳುವ ವರ್ಗದ ಭಾಷೆಗಳೇ ಆಳುವ ಭಾಷೆಗಳಾಗಿರುತ್ತವೆ. ಭಾರತದ ಮೇಲೆ ದಲ್ಲಾಳಿ ಬಂಡವಾಳಿಗರ ಹಾಗೂ ಸಾಮ್ರಾಜ್ಯಶಾಹಿಗಳ ಆರ್ಥಿಕ, ರಾಜಕೀಯ ನಿಯಂತ್ರಣವಿದೆ. ಕೈಗಾರಿಕೆ, ವಾಣಿಜ್ಯರಂಗ, ಸಂಶೋಧನೆ ಮುಂತಾದ ಶೈಕ್ಷಣಿಕ ವಲಯಗಳಲ್ಲಿ, ಇದರಿಂದಾಗಿ ಇಂಗ್ಲಿಷ್ ತುಂಬಾ ಪ್ರತಿಷ್ಠಿತ ಸ್ಥಾನದಲ್ಲಿದೆ. ಅದರ ಜ್ಞಾನ, ತಂತ್ರಜ್ಞಾನಗಳ ಎರವಲಿನಲ್ಲಿ ಮುನ್ನಡೆಯಬೇಕಾದ ದಲ್ಲಾಳಿ ಬಂಡವಾಳಿಗರು, ಹೇಗಿದ್ದರೂ ಆಳುವ ವರ್ಗ ಸ್ವತಃ ಉತ್ಪಾದನಾ ಪ್ರಕ್ರಿಯೆಯಲ್ಲಿ ತೊಡಗುವುದಿಲ್ಲವಾದ್ದರಿಂದ ಎರವಲು ತಂದ ತಂತ್ರಜ್ಞಾನ ಹಾಗೂ ವಿಜ್ಞಾನವನ್ನು ಬಳಸಲಿಕ್ಕೆ ಸಾಧ್ಯವಾಗುವಷ್ಟು ಇಂಗ್ಲಿಷನ್ನು ಮಾಮೂಲು ಜನರಿಗೆ ಕಲಿಸಲು, ಆ ಭಾಷೆ ಬಹಳ ಶ್ರೇಷ್ಠ ಎಂಬುದನ್ನು ಮನವರಿಕೆ ಮಾಡಲು ನಮ್ಮ ಶಿಕ್ಷಣ ವ್ಯವಸ್ಥೆ ರೂಪುಗೊಂಡಿದೆ. ಅಂತಾರಾಷ್ಟ್ರೀಯ

ಮಟ್ಟದಲ್ಲಿ ನಿಯಂತ್ರಣ ಹೊಂದಿರುವ ದೇಶಗಳ ಸಾಮರ್ಥ್ಯದಲ್ಲಿ ಏರುಪೇರಾಗಿ, ಅಮೇರಿಕಾ ಬ್ರಿಟನ್‌ಗಳ ಆಧಿಪತ್ಯ ಕುಸಿದು ಜರ್ಮನಿಯೋ ಜಪಾನೋ ಆ ಸ್ಥಾನಕ್ಕೆ ಬಂದರೆ ಕ್ರಮೇಣ ಇಲ್ಲಿ ಜರ್ಮನಿ ಅಥವಾ ಜಪಾನಿ ಭಾಷೆಯ ಮೇಲಾಳ್ವಿಕೆ ಏರ್ಪಡುತ್ತದೆ. ಇಂಗ್ಲಿಷ್ ಅವಲಂಬನೆ ಇರುವುದು ಆ ಭಾಷೆಯ ಶ್ರೇಷ್ಠತೆಯನ್ನಾಧರಿಸದೆ ಐರೋಪ್ಯ ದೇಶಗಳ ಮೇಲೆ ನಮಗಿರುವ ಆರ್ಥಿಕ ಅವಲಂಬನೆಯನ್ನಾಧರಿಸಿದೆ.''[೨೯]

ಹಿಂದುಳಿದ ದೇಶಗಳ 'ಸೈಕಾಲಜಿ'ಯನ್ನು ವಿವರಿಸುವ ದಟ್ಟ ವಿಚಾರಗಳ ಕಥನದಂತೆ ಈ ಭಾಗ ಕಾಣುತ್ತದೆ. ಈ ವಿಚಾರಗಳ ಮುಂದುವರಿಕೆಯಂತೆಯೇ, ಸಾರಾಂಶದಂತೆಯೇ ಆಫ್ರಿಕಾದೇಶಗಳ ಅನುಭವ ಮಂಡಿಸುತ್ತಿರುವ ಗೂಗಿವಾ ಥಿಯಾಂಗೊರಲ್ಲಿ ಕಾಣಿಸುತ್ತದೆ. ಈ ದೀರ್ಘ ವಿಚಾರಗಳ ಹಿಂದೆ ಜಗತ್ತನ್ನು ಬಂಧಿಸಿಟ್ಟಿರುವ ಸೂತ್ರದ ಗಂಟುಗಳ ಕುರಿತಾದ ಮಾರ್ಮಿಕತೆ ತಲ್ಲಣ ಕಾಣಿಸುತ್ತದೆ. ಸಾಮ್ರಾಜ್ಯಶಾಹಿ ಭಾಷೆಯನ್ನು ಮಾರುಕಟ್ಟೆಯ ಸಾಧನವಾಗಿ ಬಳಸಿಕೊಳ್ಳುತ್ತಲೇ ತನ್ನ ನಿಯಂತ್ರಣದಲ್ಲಿರುವ ದೇಶಗಳ ಒಟ್ಟೂ ಮಾರುಕಟ್ಟೆಯನ್ನು ನಿಧಾನಕ್ಕೆ ಕೈಗೆ ತೆಗೆದುಕೊಳ್ಳುವ ಹುನ್ನಾರದಂತೆ ಕಾಣಿಸುತ್ತದೆ. ಆ ಕಾರಣಕ್ಕಾಗಿಯೇ ಭಾರತದಂತಹ ದೇಶಗಳಲ್ಲಿ ಕೆಲವು ಖಾಸಗಿ ಕಂಪೆನಿಗಳು ಮತ್ತು ಕೆಲವೇ ಸರ್ಕಾರಿ ಕ್ಷೇತ್ರಗಳ ಕೆಲವು ಉದಾಹರಣೆಗಳನ್ನು ಬಿಟ್ಟರೆ, 'ಸಂಶೋಧನೆ ಮತ್ತು ಅಭಿವೃದ್ಧಿ'ಗೆ ಅಂತಹ ಆದ್ಯತೆಗಳೇ ಕಾಣುವುದಿಲ್ಲ. ಮುಂದುವರಿದ ದೇಶಗಳ ಜನಸಂಖ್ಯೆಗೆ, ಈ ಪ್ರದೇಶಕ್ಕೆ, ಮಣ್ಣಿನ ಗುಣಕ್ಕೆ, ಹವಾಮಾನಕ್ಕೆ ಎಂದು ಸಂಶೋಧನೆ ಮಾಡಿ ಸಿದ್ಧಪಡಿಸಿದ 'ಹಸಿರುಕ್ರಾಂತಿ'ಯ ಪ್ರಯೋಗಗಳು ಇಂದೇಕೆ 'ದುರಂತ ಪ್ರಯೋಗದ ಭೀತಿಯಾಗಿ ಕಾಡುತ್ತಿದೆ' ಮತ್ತು ಎಂಡೋಸಲ್ಫಾನ್, ಡಿ.ಡಿ.ಟಿಯಂತಹ ಕೀಟ ನಾಶಕಗಳು ಭಾರತದ ನೆಲ-ಜಲ-ಜನ -ಪಶುಪಕ್ಷಿಗಳ ಮೇಲೆ ಮಾಡುತ್ತಿರುವ ಹಲ್ಲೆ ಯಾವ ಸ್ವರೂಪದ್ದು ಎಂದು ನಿರ್ಧರಿಸದೆ ಸ್ವೀಕರಿಸಲಾಗುತ್ತದೆ. ಇದೇ ಮಾತುಗಳನ್ನು ಶಿಕ್ಷಣದಿಂದ ಹಿಡಿದು ಯುದ್ಧಕ್ಷಿಪಣಿಯವರೆಗೆ ಅನ್ವಯಿಸಿ ನೋಡಲು ಸಾಧ್ಯವಿದೆ.

ಕ.ವಿ.ರಂ ಗುರುತಿಸುವಂತೆ ತಂತ್ರಜ್ಞಾನದ ಮೇಲೆ ಒಡೆತನ ಹೊಂದಿರುವ ಜಾಗತಿಕ ಧಣಿಗಳ ಭಾಷೆಯನ್ನು ಭಾರತವು ಅದರ ಎಲ್ಲ ರಾಷ್ಟ್ರೀಯತೆಗಳು 'ನೊಗ'ದಂತೆ ಹೊರುತ್ತಿವೆ. ಇದರ ದುಸ್ವಪ್ನಗಳು ಕುವೆಂಪುರಿಗೆ ಆಗಲೇ ಬಿದ್ದ ಕಾರಣಕ್ಕೊ ಏನೊ ಆಳುವ ಭಾಷೆಗಳ ಕುರಿತಾದ ವಿಮರ್ಶಾತ್ಮಕ ನಿಲುವು ತಾಳಿದ್ದರು ಎನ್ನಿಸುತ್ತದೆ. ಇಲ್ಲೆಲ್ಲ ಕುವೆಂಪು ಮತ್ತು ಕ.ವಿ.ರಂ. ವಿಚಾರಗಳು ಸಾರಾಂಶದಲ್ಲಿ ಜೊತೆಯಲ್ಲಿ ಸಾಗುತ್ತವೆ. ಆದರೆ ಜನ ಭಾಷೆಗಳ ವಿಚಾರದಲ್ಲಿ ಕ.ವಿ.ರಂ. ಕುವೆಂಪುರಿಗಿಂತ ಭಿನ್ನವಾಗಿ ಯೋಚಿಸುತ್ತಾರೆ.

"ಅಲ್ಪ ಸಂಖ್ಯಾತರ ಭಾಷೆಯೇ ಕನ್ನಡ ಭಾಷಾಭಿವೃದ್ಧಿಯನ್ನು ತಡೆಗಟ್ಟುತ್ತಿದೆ ಎನ್ನುವ ಅನಿಸಿಕೆಯು ಆಧಾರ ಸಹಿತವಾದುದಲ್ಲ. ಅಲ್ಪಸಂಖ್ಯಾತರ ಮೇಲೆ ಕನ್ನಡ ಭಾಷೆಯನ್ನು ಹೇರಲು ಮಾಡುವ ಪ್ರಯತ್ನಗಳು ಪರಸ್ಪರ ಸಂಶಯಗಳನ್ನು ಅಪನಂಬಿಕೆಗಳನ್ನು, ವೈಷಮ್ಯಗಳನ್ನು ಬಿತ್ತಿ ದುಡಿಯುವ ಜನರ ಐಕ್ಯತೆಯನ್ನು ನಾಶಮಾಡುತ್ತದೆ. ಕನ್ನಡವನ್ನು ಕಡ್ಡಾಯವಾಗಿ ಬೇರೆ ಮಾತೃಭಾಷೆಗಳ ಜನರ ಮೇಲೆ ಹೇರಲು ಪ್ರಯತ್ನಿಸುವುದು ಬಂಡವಾಳಶಾಹಿ ರಾಷ್ಟ್ರೀಯ ದುರಭಿಮಾನದ ಸಂಕೇತವಾಗುತ್ತದೆ."[೩೦]

ಕನ್ನಡ ರಾಷ್ಟ್ರೀಯತೆಯ ಒಳಗಿನ ಧಾರ್ಮಿಕ, ಭಾಷಿಕ ಅಲ್ಪಸಂಖ್ಯಾತರ ಮಾತೃಭಾಷೆಗಳನ್ನು ಕುರಿತಾದ ಕ.ವಿ.ರಂ.ನ ನಿಲುವು, ಕನ್ನಡದ ಸಂದರ್ಭದಲ್ಲಿ ಅತ್ಯಂತ ಪ್ರಗತಿಪರ ನಿಲುವು ಆಗಿ ಕಾಣಿಸಿಕೊಳ್ಳುತ್ತದೆ. ಶಿಕ್ಷಣ ಮುಂತಾದವು ಮಾತೃಭಾಷೆಯಲ್ಲಿಯೇ ನಡೆಯಬೇಕು. ಆದರೆ ಕನ್ನಡ ಆಡಳಿತ ಭಾಷೆಯಾದಾಗ

ಒತ್ತಡವಿಲ್ಲದೆ ಅಲ್ಪಸಂಖ್ಯಾತ ಸಮುದಾಯಗಳು ಪ್ರೀತಿಯಿಂದ ಕನ್ನಡ ಕಲಿಯುವ ಪರಿಸ್ಥಿತಿ ನಿರ್ಮಾಣವಾಗಬೇಕೆಂಬ ಪ್ರತಿಪಾದನೆ ಕಾಣುತ್ತದೆ. ಹಾಗಾಗಿಯೇ ಈ ಸಂಘಟನೆ ತುಳು ಮತ್ತು ಕೊಡವ ಭಾಷೆಯಗಳನ್ನು, ಸಂಸ್ಕೃತಿಯನ್ನು 'ಸ್ವಾಯತ್ತ'ವಾಗಲು ಅರ್ಹ ಎಂಬ ದೃಷ್ಟಿಕೋನದಲ್ಲಿ ಪ್ರತಿಕ್ರಿಯಿಸಿದೆ. ಮತ್ತು ಜನಸಮುದಾಯಗಳ ಭಾಷೆಗಳನ್ನು ಗೌರವದಿಂದ ಕಾಣಬೇಕು ಎನ್ನುವ ಎಚ್ಚರ ಸಂಘಟನೆಯಾದ ಕಾರಣದಿಂದ 'ಸ್ಟ್ರಾಟಜಿ'ಯಾಗಿ ಬಳಕೆಯಾದಂತೆಯೂ ಕಾಣುತ್ತದೆ.

ಅಂತಿಮವಾಗಿ, "ಭಾಷೆಯನ್ನೂ ಮತ್ತು ಭಾಷೆಮಾಡುತ್ತಿದ್ದವನನ್ನೂ ಒಂದೇ ಕಾರಣಕ್ಕಾಗಿ ದ್ವೇಷಿಸುವುದು ಪಶುಮನೋವೃತ್ತಿಯೆಂದು ನನ್ನ ಭಾವನೆ"[೨೦] ಎಂಬ ಕುವೆಂಪುರವರ ಮಾನವತಾವಾದದ ಅಂಶಗಳನ್ನು ಕ.ವಿ.ರಂ ನಲ್ಲಿಯೂ ಭಾಷೆಯ ವಿಚಾರವಾಗಿ ಕಾಣಲು ಸಾಧ್ಯ.

**೩.೮ ಚಿಂತನೆಗಳ ತೌಲನಿಕ ಸಮೀಕ್ಷೆ**

ಆಧುನಿಕ ಸಂದರ್ಭದಲ್ಲಿ ರಾಷ್ಟ್ರವೊಂದರ ಮುಖ್ಯ ಲಕ್ಷಣಗಳಲ್ಲಿ ಭಾಷೆ ಕೂಡ ಪ್ರಧಾನ ಪಾತ್ರ ನಿರ್ವಹಿಸುತ್ತದೆ. ಪಶ್ಚಿಮದಲ್ಲಿ ನಿರ್ದಿಷ್ಟ ಭೂಪ್ರದೇಶದಲ್ಲಿ ನೆಲೆಸಿ ಒಂದು ಭಾಷೆಯನ್ನು ಬಳಸುವ ಸಮುದಾಯ ರಾಷ್ಟ್ರಗಳಾಗಿವೆ ಎಂಬ ಗ್ರಹಿಕೆಯಿಂದಲೇ ಪ್ರಮುಖ ಚಿಂತನ ಧಾರೆಗಳೆಲ್ಲ ಹೊರಟಂತೆ ಕಾಣುತ್ತದೆ. ರಾಷ್ಟ್ರೀಯ ಚಾರಿತ್ರ್ಯ ನಿರ್ಮಾಣ ಕೂಡ ಇದೇ ನೆಲೆಯಲ್ಲಿ ಉದ್ಭವಿಸುತ್ತದೆ ಎಂದು ನಂಬಲಾಗುತ್ತದೆ. ಏಕ ಮಾದರಿಯ ರಾಷ್ಟ್ರಚಿಂತನೆಗಳಲ್ಲಿ ಈ ರೀತಿಯ ಚಿಂತನೆಗೆ ಬಹು ಮಹತ್ವವಿದ್ದರೂ ಬಹುತ್ವವನ್ನು ಒಡಲೊಳಗಿಟ್ಟುಕೊಂಡು ರಾಷ್ಟ್ರತ್ವವನ್ನು ಪ್ರತಿಪಾದಿಸುವ ಚಿಂತನೆಗಳು ಮೇಲಿನ ವಾದವನ್ನು ಅಪೂರ್ಣವೆಂದು ಭಾವಿಸುತ್ತವೆ.

ಕನ್ನಡದ ಸಂದರ್ಭದಲ್ಲಿ ಕೂಡ ಪ್ರಾತಿನಿಧಿಕ ಚಿಂತನೆಗಳನ್ನು ಚರ್ಚಿಸುವಾಗ ಪ್ರಧಾನ ಧಾರೆಯಾಗಿ ಪ್ರವಹಿಸುವುದು ಬಹುತ್ವವಾದಿ ರಾಷ್ಟ್ರೀಯ ಸಂಕಥನವೇ ಹೊರತು ಏಕರೂಪಿ ಆಗ್ರಹವಲ್ಲ. ಮೂಲಭೂತವಾದಿ ಸಂಕುಚಿತತೆಗಳು ಇಲ್ಲವೇ ಇಲ್ಲವೆಂದಲ್ಲ. ಧ್ವನಿ ಮಾತ್ರ ತೀರಾ ಸಣ್ಣದೆಂಬಂತೆ ಗೋಚರಿಸುತ್ತದೆ. ಇಡೀ ಅಧ್ಯಾಯದುದ್ದಕ್ಕೂ ಪರಿಶೀಲಿಸುವುದಾದರೆ ಏಕ ಕಾಲದಲ್ಲಿ ಕನ್ನಡತ್ವವನ್ನು ಪ್ರತಿಪಾದಿಸುವ ವಿಚಾರದಲ್ಲಿ ಎಲ್ಲಾ ಚಿಂತನ ಧಾರೆಗಳು ಕ್ರಿಯಾಶೀಲವಾಗುತ್ತವೆ. ಕನ್ನಡದ ಬಹುಪಾಲು ಚಿಂತನೆಗಳು ಭಾವನಾತ್ಮಕವೆಂಬಂತೆಯೂ ಸಾಹಿತ್ಯಾತ್ಮಕವೆಂಬಂತೆಯೂ ಬಿಂಬಿಸಲ್ಪಟ್ಟಿವೆಯಾದರೂ ವಾಸ್ತವದಲ್ಲಿ ಹಾಗಲ್ಲವೆನಿಸುತ್ತದೆ. ಭಾಷೆ ಮತ್ತು ಬದುಕು ಪೂರಕ ಸಂಬಂಧ ಹೊಂದಿದವುಗಳೆಂಬ ಪ್ರಾಥಮಿಕ ತಿಳುವಳಿಕೆಯ ಆಧಾರದ ಮೇಲೆ ನಿಂತಿರುವುದನ್ನು ಮನಗಾಣಬಹುದು. ಏಕಕಾಲದಲ್ಲಿ ಕನ್ನಡದ ಸ್ಥಾನ ನಿರ್ಣಯ ಮಾಡುವಾಗ ಅಧಿಕಾರಸ್ಥ ಭಾಷೆಗಳನ್ನು ಮತ್ತು ಶತ್ರು ಭಾಷೆಗಳನ್ನು ಗುರುತಿಸುವಾಗ ಮಾತ್ರ ಚಿಂತನ ಧಾರೆಗಳ ಸ್ವರೂಪ ಅರ್ಥವಾಗುತ್ತದೆ. ಸಾಮ್ರಾಜ್ಯಶಾಹಿ ಭಾಷೆಯನ್ನು, ಇಂಗ್ಲಿಷಿನ ಹೇರಿಕೆಯನ್ನು ಕನ್ನಡದ ಪ್ರಧಾನ ಚಿಂತನಧಾರೆ ನಿರಾಕರಿಸುತ್ತದೆಯಾದರೂ ಮೂಲಭೂತವಾದಿ ಆಶಯಗಳನ್ನುಳ್ಳ ಚಿಂತನೆ ಈ ಕುರಿತು ಮೌನವಾಗುತ್ತದೆ. ಪ್ರಧಾನ ಚಿಂತನ ಧಾರೆ ಸೋದರ ಭಾಷೆಗಳೆಂದು ಗುರುತಿಸಿದರೆ ಇದು ಅವುಗಳನ್ನೇ ಶತ್ರು ಭಾಷೆಗಳೆಂದು ಸಿದ್ಧಾಂತ ಮಾಡುತ್ತದೆ. ತನ್ನ ಕಾಲದ ಅನಿವಾರ್ಯ ಒತ್ತಡಗಳಿಂದ ಹುಟ್ಟಿದ ಈ ಚಿಂತನೆಗಳು ವಿಭಿನ್ನ ರಾಜಕೀಯ ತತ್ವಗಳ ಮೂಸೆಯಲ್ಲಿ ಕುದಿಯೊಡೆದವು ಮತ್ತು ತತ್ವಗಳನ್ನು ನಿರ್ಮಿಸುವ

ಶಕ್ತಿಯುಳ್ಳವು ಎಂಬುದು ಅರಿವಾಗುತ್ತದೆ. ಚಿಂತಕರುಗಳು ತಾವು ಬದುಕಿದ ಪ್ರದೇಶದ ಅಧಿಕಾರಸ್ಥ ಭಾಷೆಯನ್ನು ಶತ್ರು ಭಾಷೆಯೆಂಬಂತೆ ಗ್ರಹಿಸಿದ ಹಾಗೆ ಕಾಣುತ್ತದೆ. ಆದರೆ ಸಮುದಾಯ ಕೇಂದ್ರಿತವಾದ ಚಿಂತನೆ ಮಾತ್ರ ಹಾಗೆ ಗ್ರಹಿಸದೆ ಆರ್ಥಿಕತೆಯನ್ನು ನಿಯಂತ್ರಿಸುವ ಭಾಷೆಗಳನ್ನು ಮಾತ್ರ ಶತ್ರು ಭಾಷೆಗಳೆಂದು ಗುರುತಿಸುತ್ತದೆ. ಒಟ್ಟಾರೆ ಕನ್ನಡ ಭಾಷೆಯ ತಲ್ಲಣದ ಸ್ಥಿತಿಯನ್ನು ಮೂಲವಾಗಿಟ್ಟುಕೊಂಡೇ ಮುಂದಿನ ಚಿಂತನೆಗೆ ಹೊರಡುವಂತೆ ಕಾಣುತ್ತದೆ. ಅದಕ್ಕಾಗಿಯೇ ಅಧಿಕಾರಸ್ಥ ಭಾಷೆಗಳನ್ನು ಗುರುತಿಸುವುದು ಮತ್ತು ವಿರೋಧಿಸುವ ಕೆಲಸ ನಡೆಯುತ್ತಿರಬಹುದು.

ಎರಡನೆಯದಾಗಿ ರಾಷ್ಟ್ರೀಯತೆಯೊಂದನ್ನು ಪ್ರತಿಪಾದಿಸುವಾಗ ಪ್ರಮಾಣೀಕೃತ ಭಾಷೆಯ ಅಗತ್ಯವನ್ನು ಬಹುಪಾಲು ಎಲ್ಲಾ ಧಾರೆಗಳು ಪ್ರತಿಪಾದಿಸುತ್ತವೆ. ಅದು ಬಹುಪಾಲು ಆಡಳಿತ ಕೇಂದ್ರದ ಪರಿಸರದ ಭಾಷೆಯೇ ಆಗಿರುವುದನ್ನು ಗಮನಿಸಬಹುದು. ಒಂದೋ ಆ ಭಾಷೆಯನ್ನು ನೇರವಾಗಿ ಮಾನ್ಯ ಮಾಡುವಂತೆ ಪ್ರತಿಪಾದಿಸುತ್ತವೆ. ಇಲ್ಲವೇ ಬಳಸುವುದರ ಮೂಲಕ ವ್ಯಕ್ತಪಡಿಸುತ್ತವೆ. ಈ ವಿಚಾರದಲ್ಲಿ ಬಹುಮುಖೀ ವಾದಗಳೆಲ್ಲ ಬಹುಮಟ್ಟಿಗೆ ಅಪ್ರಸ್ತುತವಾಗುತ್ತವೆ. ಪ್ರಮಾಣೀಕೃತ ಭಾಷೆ ರಾಷ್ಟ್ರತ್ವದ ನಿರ್ಮಾಣಕ್ಕೆ ತೀರಾ ಅನಿವಾರ್ಯವಾದ ಅಂಶ ಎನ್ನುವುದು ಇದರಿಂದ ಅರಿವಾಗಬಹುದು.

ಕನ್ನಡ ರಾಷ್ಟ್ರೀಯತೆಯ ಚಿಂತನೆಗಳ ಮತ್ತೊಂದು ಮುಖ್ಯ ಆಯಾಮವೆಂದರೆ ಕರ್ನಾಟಕದೊಳಗೇ ಇರುವ ಭಾಷೆಗಳನ್ನು ಕುರಿತಂತೆ ಸ್ಥಾನ ನಿರ್ಣಯ ಮಾಡುವುದು. ಅಧಿಕಾರಸ್ಥ ಭಾಷೆಯನ್ನು ವಿರೋಧಿಸುವ ತಾನೇ ಅಧಿಕಾರಸ್ಥ ಭಾಷೆಯ ಸ್ಥಾನಕ್ಕೆ ಏರುವ ಅದನ್ನು ವಿರೋಧಿಸುವವರಿಗೊಂದು ಸ್ಥಾನನಿರ್ಣಯಿಸುವ ಅದ್ಭುತ ಪ್ರಕ್ರಿಯೆಗಳಲ್ಲೇ ರಾಷ್ಟ್ರೀಯ ಸಂಕಥನ ಅಡಗಿರಬಹುದೆನ್ನಿಸುತ್ತದೆ. ಅದರಲ್ಲೂ ತನ್ನಂಥದೇ ಸ್ಥಾನ ಹೊಂದಿರುವ ತುಳು, ಕೊಡವ, ಉರ್ದುಗಳನ್ನು ಭಿನ್ನ ಭಿನ್ನ ರೀತಿಯಲ್ಲಿ ಸಮಾಧಾನಿಸಲು ಯತ್ನಿಸಲಾಗಿದೆ. ಆದರೆ ಕನ್ನಡದ ಪ್ರಧಾನ ಚಿಂತನೆ ಮಾತ್ರ ಈ ಭಾಷೆಗಳನ್ನು ಮರೆತೇ ವರ್ತಿಸುತ್ತದೆ. ಜನಭಾಷೆಗಳ ಜೊತೆಯಲ್ಲಿ ಇವುಗಳನ್ನು ನಿರಾಕರಿಸಲು ಯತ್ನಿಸುವಂತೆ ತೋರುತ್ತದೆ. ಅಥವಾ ಇವುಗಳನ್ನು ಬಲಪಡಿಸುವುದು ತನ್ನ ಹಿತಾಸಕ್ತಿಗೆ ಧಕ್ಕೆ ಎಂಬಂತೆ ಭಾವಿಸುವ ರೀತಿಯಲ್ಲಿ ವರ್ತಿಸುವಂತೆ ತೋರುತ್ತದೆ.

ಒಟ್ಟಾರೆಯಾಗಿ ಈ ಎಲ್ಲವೂ ರಾಷ್ಟ್ರೀಯತಾ ಚರ್ಚೆಯಲ್ಲಿ ನಿರ್ಣಾಯಕ ಅಂಶಗಳು ಎನ್ನುವುದು ಕನ್ನಡ ಚಿಂತನೆಗಳ ಸಂದರ್ಭದಲ್ಲಿ ಅರಿವಿಗೆ ಬರುತ್ತದೆ.

**ಕೊನೆ ಟಿಪ್ಪಣಿಗಳು**

೧. ಡಾ.ಬಂಜಗೆರೆ ಜಯಪ್ರಕಾಶ್, ಕನ್ನಡ ರಾಷ್ಟ್ರೀಯತೆ, ಪುಟ ೩೩೩

೨. ಆಲೂರು ವೆಂಕಟರಾಯರು, ಕರ್ನಾಟಕತ್ವದ ವಿಕಾಸ, ಪುಟ ೧೪೭, ೧೪೮

೩. ಅದೇ, ಪುಟ ೧೪೯-೧೫೦

೪. ಅದೇ, ಪುಟ ೧೫೬

೫. ಅದೇ, ಪುಟ ೨೦೨

೬. ಕೆ.ರಾಘವೇಂದ್ರರಾವ್, ಕರ್ನಾಟಕ ಏಕೀಕರಣದ ನಾಲ್ವರು ಚಿಂತಕರು (ಅನು) ಆರ್ಯ, ಪುಟ ೧೧೪

೭. ಬಿ.ಎಂ.ಶ್ರೀಕಂಠಯ್ಯ, ಶ್ರೀಸಾಹಿತ್ಯ ಸಮಗ್ರ ಸಂಪುಟ, ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ, ಕನ್ನಡ ಮಾತು ತಲೆಯೆತ್ತುವ ಬಗೆ ಎಂಬ ಧಾರವಾಡದಲ್ಲಿ ಮಾಡಿದ ಭಾಷಣ ಭಾಗದಿಂದ, ಪುಟ ೨೫೦

೮. ಅದೇ, 'ಕನ್ನಡಕ್ಕೆ ಒಂದು ಕಟ್ಟು' ಬರೆಹ, ಪುಟ ೧೭

೯. ಅದೇ, ಪುಟ ೨೬೨

೧೦. ಎಚ್.ಎಸ್.ರಾಘುವೇಂದ್ರರಾವ್, ಕನ್ನಡ ನವೋದಯ ಮತ್ತು ಬಿ.ಎಂ.ಶ್ರೀ ಸಾಹಿತ್ಯ ಲೇಖನದಿಂದ ಶ್ರೀನಿಧಿ, ಬಿ.ಎಂ.ಶ್ರೀ ಜನ್ಮ ಶತಮಾನೋತ್ಸವದ ನೆನಪಿನ ಸಂಪುಟ (ಸಂ) ಡಾ.ಜಿ.ಎಸ್.ಶಿವರುದ್ರಪ್ಪ, ಪುಟ ೧೪೭

೧೧. ಬಿ.ಎಂ. ಶ್ರೀಕಂಠಯ್ಯ, ಶ್ರೀ ಸಾಹಿತ್ಯ ಸಮಗ್ರ ಸಂಪುಟ ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ, ಪುಟ ೨೯೦

೧೨. ಅದೇ, ಪುಟ ೩೦೪

೧೩. ಅದೇ, ಪುಟ ೨೪೬ ರ ಸಾರಾಂಶ

೧೪. 'ಆರಿಯ' ಎಂಬ ಪದಕ್ಕೆ ತುಳುವಿನಲ್ಲಿ 'ಬೀಜಹೊಡೆದ ಹೋರಿ' ಎಂಬ ಅರ್ಥವಿದೆಯೆಂದು ಡಾ.ನರೇಂದ್ರರೈ ದೇರ್ಲ ಮತ್ತು ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್ ಹೇಳುತ್ತಾರೆ.

೧೫. ಶಂಬಾಜೋಶಿ, ಶಂಬಾಕೃತಿ ಸಂಪುಟ (ಕರ್ನಾಟಕ ಸಂಸ್ಕೃತಿ-೩) (ಸಂ) ಮಲ್ಲೇಪುರಂ ಜಿ. ವೆಂಕಟೇಶ, ಹಾಲು ಮತದರ್ಶನ ಕೃತಿಯಿಂದ, ಪುಟ ೩೧

೧೬. ಅದೇ ಸಂಪುಟ, ಕರ್ನಾಟ ಸಂಸ್ಕೃತಿಯ ಪೂರ್ವ ಪೀಠಿಕೆಯಿಂದ, ಪುಟ ೩೧೩

೧೭. ಶಂಬಾ ಜೋಶಿ, ಶಂಬಾ ಕೃತಿಸಂಪುಟ-೨ (ಕನ್ನಡದ ನೆಲೆಯಿಂದ)(ಸಂ) ಮಲ್ಲೇಪುರಂ ಜಿ.ವೆಂಕಟೇಶ, ಪುಟ ೨೫ -೨೬

೧೮. ಅದೇ, ಪುಟ ೧೭

೧೯. ಕುವೆಂಪು, ಕುವೆಂಪು ಸಮಗ್ರಗದ್ಯ ಸಂಪುಟ ೨ ನಮಗೆ ಬೇಕಾದ ಇಂಗ್ಲೀಷು ಬರೆಹದಿಂದ, ಪುಟ ೧೯೫

೨೦. ಅದೇ ಸಂಪುಟ, ಕರ್ನಾಟಕ ಇಟ್ಟ ಹೆಸರು ಕೊಟ್ಟ ಮಂತ್ರ ಬರಹದಿಂದ, ಪುಟ ೫೧೩

೨೧. ಅದೇ, ಪುಟ ೫೧೩

೨೨. ಗೂಗಿ ವಾಥಿಯಾಂಗೊ (ಅನು) ರಹಮತ್ ತರೀಕೆರೆ, ವಸಾಹತು ಪ್ರಜ್ಞೆ ಮತ್ತು ವಿಮೋಚನೆ, ಪುಟ ೩೧

೨೩. ಕುವೆಂಪು, ಕುವೆಂಪು ಸಮಗ್ರಗದ್ಯ ಸಂಪುಟ - ೨ ಕರ್ನಾಟಕ ಇಟ್ಟ ಹೆಸರು ಕೊಟ್ಟ ಮಂತ್ರ ಬರೆಹದಿಂದ, ಪುಟ ೫೧೪

೨೪. ಅದೇ, ನಮ್ಮ ಮುನ್ನಡೆಯ ಮಂತ್ರ ಬರೆಹದಿಂದ, ಪುಟ ೫೯೫

೨೫. ಅದೇ, ಸಂಸ್ಕೃತಿ ಕರ್ನಾಟಕ; ಬರೆಹದಿಂದ, ಪುಟ ೫೮೫

೨೬. ಅದೇ, ಸಂಸ್ಕೃತಿ ಕರ್ನಾಟಕ ಬರೆಹದಿಂದ, ಪುಟ ೧೬೦

೨೭. ಡಾ.ಎಂ.ಚಿದಾನಂದಮೂರ್ತಿ, ಕನ್ನಡ ಸಂಸ್ಕೃತಿ, ನಮ್ಮ ಹೆಮ್ಮೆ, ಪುಟ ೨೫

೨೮. ಅದೇ, ಪುಟ ೧೧

೨೯. ಕರ್ನಾಟಕ ವಿಮೋಚನಾ ರಂಗ, ಪ್ರಣಾಳಿಕೆ ಹಾಗೂ ಸಂವಿಧಾನ, ಪುಟ ೩೫-೩೬

೩೦. ಅದೇ, ಪುಟ ೨೬

೩೧. ಅದೇ, ಪುಟ ೩೫

೩೨. ಕುವೆಂಪು, ಕುವೆಂಪು ಸಮಗ್ರಗದ್ಯ ಸಂಪುಟ-೨, ಭಾರತದಲ್ಲಿ ಇಂಗ್ಲಿಷಿನ ಸ್ಥಾನ ಬರೆಹದಿಂದ, ಪುಟ ೨೨೧

ಅಧ್ಯಾಯ ೪

# ಕನ್ನಡ ರಾಷ್ಟ್ರೀಯತೆ : ಚರಿತ್ರೆ ಕುರಿತ ಚಿಂತನೆ

೪.೧ ಪೀಠಿಕೆ

೪.೨ ಆಲೂರು ವೆಂಕಟರಾಯರ ಚಿಂತನೆಗಳು

೪.೩ ಬಿ.ಎಂ.ಶ್ರೀಯವರ ಚಿಂತನೆಗಳು

೪.೪ ಶಂಬಾ ಜೋಶಿಯವರ ಚಿಂತನೆಗಳು

೪.೫ ಕುವೆಂಪುರವರ ಚಿಂತನೆಗಳು

೪.೬ ಚಿದಾನಂದ ಮೂರ್ತಿಯವರ ಚಿಂತನೆಗಳು

೪.೭ ಕರ್ನಾಟಕ ವಿಮೋಚನಾ ರಂಗದ ನಿಲುವುಗಳು

೪.೮ ಚಿಂತನೆಗಳ ತೌಲನಿಕ ಸಮೀಕ್ಷೆ

ಅಧ್ಯಾಯ ೪

# ಕನ್ನಡ ರಾಷ್ಟ್ರೀಯತೆ : ಚರಿತ್ರೆ ಕುರಿತ ಚಿಂತನೆ

## ೪.೧ ಪೀಠಿಕೆ

'ನೆನಪುಗಳನ್ನು ಆಯ್ದು ಕಟ್ಟುವ ಕ್ರಮವನ್ನು' ರಾಷ್ಟ್ರೀಯತೆ ಎಂದು ಖ್ಯಾತ ಚಿಂತಕ ಡಿ.ಆರ್.ನಾಗರಾಜ್ ಕರೆಯುತ್ತಾರೆ. ಅಂದರೆ ಯಾವುದೇ ಸ್ವರೂಪದ ರಾಷ್ಟ್ರೀಯತೆಗೆ ಭೂತದ ಕುರಿತು ವಿಶೇಷ ಪ್ರೀತಿ. ನೆನಪುಗಳು ಆಳವಾಗುತ್ತಾ, ವಿಸ್ತಾರವಾಗುತ್ತಾ ಹೋದಷ್ಟು, ತನ್ನನ್ನು ದಮನಿಸುತ್ತಿರುವ ಶತ್ರುವಿನ ಎದುರು ಹೆಮ್ಮೆಯಿಂದ ತಲೆಯೆತ್ತಿ ನಿಲ್ಲಲು ಸಾಧ್ಯ ಎಂದು ಅದು ಭಾವಿಸುತ್ತದೆ. ಹಾಗಾಗಿ ನೆನಪುಗಳನ್ನು ಪರಂಪರೆಯನ್ನು ಅರಿಯಲು ಹಾಗೂ ಸಿಕ್ಕ ಪರಂಪರೆಗೆ ವಾರಸುದಾರನಾಗಲು ತೀವ್ರ ಪ್ರಯತ್ನ ಪಡುತ್ತವೆ. ಇಸ್ರೇಲ್, ಪ್ಯಾಲಸ್ತೈನ್, ಭಾರತದಲ್ಲಿ ತಮಿಳು-ಭಾರತ, ಕನ್ನಡ ಕೇಂದ್ರ ಇತ್ಯಾದಿಗಳನ್ನು ಈ ದೃಷ್ಟಿಯಿಂದ ನೋಡಲು ಸಾಧ್ಯ ಅಥವಾ ಜಗತ್ತಿನ ಎಲ್ಲ ರಾಷ್ಟ್ರಪ್ರಭುತ್ವ ಮತ್ತು ರಾಷ್ಟ್ರೀಯತೆಗಳಲ್ಲಿ ಈ ಆಸೆ ತೀವ್ರವಾಗಿ ವ್ಯಕ್ತವಾಗುತ್ತಿರುತ್ತದೆ.

ಕನ್ನಡದಂತಹ ರಾಷ್ಟ್ರೀಯತೆಗಳಲ್ಲಾದರೆ ಪ್ರಬಲ ಭಾಷಿಕ ಸಮುದಾಯ, ಉಳಿದ ರಾಷ್ಟ್ರೀಯತೆಗಳನ್ನು ಮರೆತೇ ಅಥವಾ ಅವು ತನ್ನೊಂದಿಗಿವೆ ಎಂಬ ದರ್ಪದಿಂದಲೇ ಹೊರಡುವಂತೆ ಕಾಣಿಸುತ್ತವೆ. ಹಾಗಾಗಿ ಕನ್ನಡ ಎಂದ ಕೂಡಲೇ ಕೊಡವ, ತುಳುಗಳಂತಹ ಸೋದರ ರಾಷ್ಟ್ರೀಯತೆಗಳನ್ನು ನಿರ್ಲಕ್ಷಿಸಿ ಬಿಡಲಾಗುತ್ತದೆ. ಕೆಲವೊಮ್ಮೆ ಅವುಗಳ ನೆನಪುಗಳನ್ನು ಮೂದಲಿಸುವ ಕೆಲಸವೂ ನಡೆಯುತ್ತದೆ. ಮಾಸ್ತಿಯವರ 'ಚಿಕವೀರ ರಾಜೇಂದ್ರ' ಕೃತಿಯನ್ನು ಈ ನೆಲೆಯಲ್ಲಿ ನೋಡಲು ಸಾಧ್ಯವಿದೆ. ಬ್ರಿಟಿಷ್ ವಸಾಹತುಶಾಹಿ ಪ್ರಭುತ್ವ ಭಾರತವನ್ನು ನೋಡಿದ್ದು ಹೀಗೆಯೇ. ಅವರು ಹಾವಾಡಿಗರ, ಮಾಂತ್ರಿಕರ, ಆಡಳಿತ ಇತಿಹಾಸವಿಲ್ಲದ ರಾಷ್ಟ್ರಗಳೆಂದು ತಾವಾಳುವ ದೇಶಗಳನ್ನು ನಂಬಿಸಲು ಪ್ರಯತ್ನಿಸಿದರು. ಆ ಮೂಲಕ ತನ್ನ ಮಾದರಿಯನ್ನು ಹೇರಲು ಪ್ರಯತ್ನಪಟ್ಟರು. ಇಡೀ ಉಪಖಂಡದ ಅನೇಕ ಬುದ್ಧಿಜೀವಿಗಳು ಇದನ್ನು ನಂಬಿಯೂ ಬಿಟ್ಟರು.

ಹಾಗಾದರೆ ನೆನಪುಗಳನ್ನು ಹೇಗೆ ಸಂಘಟಿಸಲಾಗುತ್ತದೆ ಎಂಬುದಕ್ಕೆ ಎರಡು ಮುಖ್ಯವಾದ ವಿಧಾನಗಳಿವೆ.

೧. ನಾಣ್ಯಗಳು, ಶಾಸನಗಳು, ಹಸ್ತಪ್ರತಿ, ಮೂರ್ತಿಶಿಲ್ಪಗಳು, ವಾಸ್ತು ಶಿಲ್ಪಗಳು, ಉತ್ಖನನಗಳು, ಬಖೈರುಗಳು, ಬರೆಹ ರೂಪಗಳು ಇತ್ಯಾದಿಗಳನ್ನು ಆಧರಿಸಿ ಕಾಲ, ಸ್ಥಳ, ವ್ಯಕ್ತಿ, ಘಟನೆಗಳನ್ನು ಹಿಡಿದು ಖಚಿತತೆಯನ್ನು ಪರಿಶೀಲಿಸಿ ಕಟ್ಟಲು ಪ್ರಯತ್ನಿಸುವುದು.

೨. ಜನರ ನಂಬಿಕೆ, ಆಚರಣೆ, ಸಂಕಥನಗಳು, ಮಿಥಕಗಳು, ಭಾಷೆ, ಸಂಕೇತ, ಪ್ರತಿಮೆ, ಸ್ಥಳದ ಹೆಸರುಗಳು, ಲಾವಣಿಗಳು, ಜೀವಂತವಿರುವ ಚಲನಾತ್ಮಕ ಅಂಶಗಳ ಮೂಲಕವೂ ಸಂಘಟಿಸಲಾಗುತ್ತದೆ.

ನೆನಪುಗಳನ್ನು ಅನುಕೂಲಕ್ಕೋಸ್ಕರ ಚರಿತ್ರೆ ಅಥವಾ ಇತಿಹಾಸ ಎಂದು ಭಾವಿಸಬಹುದು.

ರಾಷ್ಟ್ರಗಳ ನಿರ್ಮಾಣದಲ್ಲಿ ನಿರ್ಣಾಯಕ ಪಾತ್ರವಹಿಸುವ ಚರಿತ್ರೆಯನ್ನು ಕುರಿತಾಗಿ ಮುಖ್ಯವಾಗಿ ನಾಲ್ಕು ವಿಧಾನಗಳು ಅಥವಾ ದೃಷ್ಟಿಕೋನಗಳು ಚಾಲ್ತಿಯಲ್ಲಿವೆ.

**೧. ಮತೀಯವಾದಿ ದೃಷ್ಟಿಕೋನ**

ಈ ದೃಷ್ಟಿಕೋನದ ಮುಖ್ಯ ಸ್ವರೂಪವೆಂದರೆ ಚರಿತ್ರೆ ಮತ್ತು ಪುರಾಣಗಳನ್ನು ಅಭಿನ್ನವಾಗಿ ನೋಡುವುದು. ಆ ಮೂಲಕ ವರ್ತಮಾನದ ಸಮಸ್ಯೆಗಳನ್ನು, ಒತ್ತಡಗಳನ್ನು ಮರೆಮಾಚಲು ಹಾಗೂ ದಾರಿ ತಪ್ಪಿಸಲು ಪ್ರಯತ್ನಿಸುವುದು, ಅಲ್ಲದೆ ಜನರು ತಟಸ್ಥರು ಎಂಬ ನಿಲುವಿನಿಂದ ಇದು ಆರಂಭಗೊಳ್ಳುತ್ತದೆ. ಆಳುವವರ ಕತೆಯನ್ನು ಜನರ ಇತಿಹಾಸವೆಂದು ನಂಬಿಸಲು ಇಲ್ಲಿ ಪ್ರಯತ್ನಿಸಲಾಗುತ್ತದೆ. ಜೊತೆಗೆ ಗತವನ್ನು ಕುರಿತು ಅತ್ಯಂತ ರಂಜಕವಾಗಿ, ಭಾವನಾತ್ಮಕವಾಗಿ ಚಿತ್ರಿಸಲಾಗುತ್ತದೆ. ಅನ್ಯಪ್ರಭುತ್ವಗಳ ಆಕ್ರಮಣಕಾರಿ ಧೋರಣೆಯನ್ನು ಮರೆಮಾಚಿಸಲು ಪ್ರಯತ್ನಿಸಲಾಗುತ್ತದೆ. ಉದಾಹರಣೆಗೆ ಡಾ.ಚಿದಾನಂದ ಮೂರ್ತಿಯವರು ರಾಬರ್ಟ್ ಸಿವೆಲ್‌ನ ಬರಹಗಳ ಮೂಲಕವೇ ವಿಜಯನಗರ ಕಥೆಯನ್ನು ನೋಡಲು ಪ್ರಯತ್ನಿಸುವುದು.

**೨. ವಸಾಹತುವಾದಿ ದೃಷ್ಟಿಕೋನ**

ಇಲ್ಲಿ ಕಾಲಘಟ್ಟಗಳನ್ನು ಯಾಂತ್ರಿಕವಾಗಿ ಮತ್ತು ಕ್ರಮಬದ್ಧವಾಗಿ ಜೋಡಿಸಲು ಪ್ರಯತ್ನಿಸಲಾಗುತ್ತದೆ. ಗತದಲ್ಲಿ ನಡೆದಿರುವ ಸಂಘರ್ಷವನ್ನಿಟ್ಟುಕೊಂಡು ವರ್ತಮಾನದಲ್ಲಿ ಸಮುದಾಯಗಳ ನಡುವೆ ಅಪನಂಬಿಕೆ ಹುಟ್ಟಿಸಲು ಪ್ರಯತ್ನಿಸುತ್ತದೆ. ಆದರೆ ಅದರ ಇತ್ಯಾತ್ಮಕ ಆಯಾಮವೆಂದರೆ ಎಲ್ಲ ಸಮುದಾಯಗಳಿಗೂ ಚಾರಿತ್ರಿಕ ಪ್ರಜ್ಞೆ ಬರುವಂತೆ ಕೂಡ ಕೆಲಸ ಮಾಡಿದೆ. ಆ ಮೂಲಕ ಸಮುದಾಯಗಳ ನಡುವೆ ನಿರಂತರ ಸಂಘರ್ಷವನ್ನು ಕಾಪಾಡಿಕೊಳ್ಳುವ ಉದ್ದೇಶ ಇದ್ದಿರಬಹುದು.

ಚರಿತ್ರೆಯನ್ನು ಅತ್ಯಂತ ಶುಷ್ಕವಾಗಿ ನಿರೂಪಿಸಲು ಯತ್ನಿಸುವುದರ ಜೊತೆಗೆ ತನ್ನ ಆಡಳಿತವನ್ನು ಸಮರ್ಥಿಸಿಕೊಳ್ಳಲು ಸಹ ಇದು ಪ್ರಯತ್ನಿಸುತ್ತದೆ.

ಶಾಲಾ ಕಾಲೇಜುಗಳಲ್ಲಿ ರೂಪಿಸಿರುವ ಇತಿಹಾಸದ ಪಠ್ಯಗಳು ಬಹುಪಾಲು ಮೇಲಿನ ಈ ಎರಡು ದೃಷ್ಟಿಕೋನಗಳನ್ನು ಬಿಂಬಿಸುತ್ತವೆ.

**೩. ಮಾರ್ಕ್ಸ್‌ವಾದಿ ದೃಷ್ಟಿಕೋನ**

ಈ ದೃಷ್ಟಿಕೋನದಲ್ಲಿ ಚರಿತ್ರೆಯನ್ನು ವಿಕಾಸ ಗತಿಯಲ್ಲಿ ವಿವರಿಸಲು ಪ್ರಯತ್ನಿಸಲಾಗುತ್ತದೆ. ಆ ಮೂಲಕ ಈ ದೃಷ್ಟಿಕೋನದಲ್ಲಿ ಸಹ ಯಾಂತ್ರಿಕತೆ ಆವರಿಸಿಕೊಳ್ಳುತ್ತದೆ. ಆದರೆ ಇದರ ಅತ್ಯಂತ ಮುಖ್ಯವಾದ ಆಯಾಮವೆಂದರೆ, ಜನರು ಇತಿಹಾಸವನ್ನು ನಿರ್ಮಿಸುತ್ತಾರೆ ಎಂಬುದು. ಈ ಬರವಣಿಗೆಗಳಲ್ಲಿ ಪ್ರಭುತ್ವ ವಿರೋಧಿ, ಸಂಘರ್ಷಾತ್ಮಕ ನಿಲುವುಗಳು ದಟ್ಟವಾಗಿರುತ್ತವೆ. ಸಾಂಪ್ರದಾಯಿಕ ಮಾರ್ಕ್ಸ್‌ವಾದಿಗಳು ಬರೀ ಆರ್ಥಿಕ ರಾಜಕೀಯ ಆಯಾಮಗಳನ್ನಷ್ಟೇ ಕೊಟ್ಟು, ಶುಷ್ಕಗೊಳಿಸಲು ಯತ್ನಿಸುತ್ತಾರೆ.

**೪. ಮಿಥಕಗಳ ಮಾದರಿ**

ಈ ದೃಷ್ಟಿಕೋನದಲ್ಲಿ ಜನರ ನಡುವೆ ಜೀವಂತವಿರುವ ನಂಬಿಕೆ, ಆಚರಣೆ, ಜನಪದ ಪುರಾಣಗಳು, ಕಥೆಗಳು, ಲಾವಣಿಗಳು ಪ್ರತಿಮಾಲೋಕಗಳು, ಸಂಕೇತಗಳು ಮುಂತಾದವುಗಳನ್ನು ಬಳಸಿಕೊಂಡು ಚರಿತ್ರೆಯನ್ನು

ಕಟ್ಟಲು ಪ್ರಯತ್ನಿಸಲಾಗುತ್ತದೆ. ಕನ್ನಡದ ಬಹದೊಡ್ಡ ವಿದ್ವಾಂಸರಾದ ಶಂಬಾ ಜೋಶಿಯವರು ಮುಖ್ಯವಾಗಿ ಈ ಮಾದರಿಯಲ್ಲಿ ಚಿಂತಿಸಿದ್ದಾರೆ.

ಚರಿತ್ರೆಯ ರಚನೆಯ ಹಿಂದೆ ರಾಜಕೀಯ ಉದ್ದೇಶವೊಂದು ಗುಪ್ತವಾಗಿ ಕ್ರಿಯಾಶೀಲವಾಗಿರುತ್ತದೆ. ಅದನ್ನು ಕಟ್ಟಿಕೊಳ್ಳುವ ಉದ್ದೇಶವೆ ವರ್ತಮಾನದ ಅಗತ್ಯಕ್ಕೋಸ್ಕರವಾಗಿರುತ್ತದೆ. ಈ ಕಾರಣದಿಂದ ಮೇಲೆ ಹೇಳಿದ ನಾಲ್ಕು ದೃಷ್ಟಿಕೋನಗಳು ಕೂಡ ಗತದಲ್ಲಿನ ತಮಗೆ ಬೇಕಾದ ನಿದರ್ಶನಗಳನ್ನು ಮಾತ್ರ ಆರಿಸಿಕೊಂಡು ತಮಗೆ ಬೇಕಾದ ಹಾಗೆ ವ್ಯಾಖ್ಯಾನವನ್ನು ಮತ್ತು ಅರ್ಥ ತುಂಬುವ ಕೆಲಸವನ್ನು ಮಾಡುತ್ತವೆ.

ಉದಾಹರಣೆಗೆ ಕನ್ನಡ ರಾಷ್ಟ್ರೀಯತೆಯ ಮೊದಲ ರಾಜ್ಯವೆಂದು ಚಿದಾನಂದ ಮೂರ್ತಿಯವರು ಪ್ರತಿಪಾದಿಸುವ ಕದಂಬರನ್ನು ಮತ್ತು ಅದರ ಸ್ಥಾಪಕ ಮಯೂರವರ್ಮನನ್ನು ಆತ ಬ್ರಾಹ್ಮಣನೆಂದು ಮತ್ತು ಕನ್ನಡ-ತಮಿಳು ಸಂಘರ್ಷದಲ್ಲಿ ಸಾಮ್ರಾಜ್ಯ ಉದಿಸಿತೆಂದು ಮಾತ್ರ ಹೇಳಲಾಗುತ್ತದೆ. ಆದರೆ ಆತ ಮೌರ್ಯಮೂಲದವನು, ಅವನ ಪೂರ್ವಜರು ಅಹಿಚ್ಛತ್ರದಿಂದ ಬಂದವರು. ಹಲ್ಮಿಡಿ ಬಿಟ್ಟರೆ ಉಳಿದ ಶಾಸನಗಳು ಸಂಸ್ಕೃತ ಭೂಯಿಷ್ಠವಾಗಿವೆಯೆಂಬ ವಿಚಾರವನ್ನು ಮರೆಮಾಚಲಾಗುತ್ತದೆ. ಇಲ್ಲೆಲ್ಲ ತನ್ನ ನಿಲುವಿಗೆ ವಿರುದ್ಧವಾದ ಚಾರಿತ್ರಿಕ ಸಂಗತಿಗಳನ್ನು ಕೈಬಿಡುವುದು ಅಥವಾ ಬೇರೆ ವ್ಯಾಖ್ಯಾನ ಕೊಡುವ ಕೆಲಸವನ್ನಷ್ಟೇ ಮಾಡಲಾಗುತ್ತದೆ. ಚಿದಾನಂದ ಮೂರ್ತಿಯವರು ವೀರಗಲ್ಲುಗಳನ್ನು ವ್ಯಾಖ್ಯಾನಿಸುವುದು ಸಹ ಇದೇ ದೃಷ್ಟಿಕೋನದಲ್ಲಿ.

ಹಾಗಾಗಿ 'ಜನಾಧಾರಿತ ಮತ್ತು ಪ್ರಭುತ್ವಾಧಾರಿತ'ವೆಂಬ ಎರಡೂ ರೀತಿಯ ರಾಷ್ಟ್ರೀಯತೆಗಳೂ ಕೂಡ ವರ್ತಮಾನದಲ್ಲಿ ಎದುರಾಗಿರುವ ದೊಡ್ಡ ಬಿಕ್ಕಟ್ಟುಗಳಿಗೆ ಗತದಲ್ಲಿ ಮದ್ದು ಹುಡುಕುವ ಕೆಲಸ ಮಾಡುತ್ತಿರುತ್ತವೆ. ಆದ್ದರಿಂದಲೇ ಎಡ ಪಂಥೀಯ ನಿಲುವುಗಳಲ್ಲಿ ಒಲವುಳ್ಳ ರಾಷ್ಟ್ರೀಯ ಚಿಂತಕರು ವಚನ ಚಳುವಳಿಯನ್ನು 'ಆಪ್ತ ನೆನಪು' ಎಂಬಂತೆ ನೋಡುತ್ತಾರೆ. ಬಲಪಂಥೀಯ ವಿಚಾರಧಾರೆಯವರು ಕ್ಷಾತ್ರಗುಣವನ್ನು ಪ್ರಭುತ್ವಗಳಿಗೆ ತುಂಬಿ, ಇಂದು ಆ ಗುಣ ಮಾಯವಾಗಿರುವುದರಿಂದ ಸಹನಶೀಲತೆಯಂಥ ನಿರ್ವೀರ್ಯತೆ ಬಂದೊದಗಿರುವುದರಿಂದ ಅಸ್ಯಾಕ್ರಮಣಗಳಿಗೆ ತುತ್ತಾಗಿದ್ದೇವೆಂದು ಪ್ರತಿಪಾದಿಸುತ್ತಾರೆ. 'ರಾಮ'ನನ್ನು ಇಂಗ್ಲೀಷ್ ಸಿನಿಮಾಗಳ ನಾಯಕ 'ರ್‍ಯಾಂಬೊ'ನಂತೆ ಚಿತ್ರಿಸಿ ಜನಮಾನಸದ ಮೇಲೆ ಪ್ರಭಾವ ಬೀರಲು ಪ್ರಯತ್ನಿಸಲಾಗುತ್ತದೆ. ಇಷ್ಟೇ ಅಲ್ಲದೆ ಚರಿತ್ರೆಯು ನಮ್ಮ ನಡುವೆ ಮತ್ತೆರಡು ವಲಯಗಳಲ್ಲಿ ಕ್ರಿಯಾಶೀಲವಾಗಿರುವಂತಿದೆ.

೧. ಸೀಮಿತ ವಲಯ : ಒಂದು ಜಾತಿ, ಸಾಮಾಜಿಕ ನ್ಯಾಯ ಮತ್ತು ರಾಜಕೀಯ ಶಕ್ತಿ ಪ್ರತಿಪಾದನೆಯ ಹೆಸರಲ್ಲಿ ಚರಿತ್ರೆಯನ್ನು ಕಟ್ಟಿಕೊಳ್ಳುವುದು. ಉದಾಹರಣೆಗೆ ಕರ್ನಾಟಕದಲ್ಲಿ ಕುರುಬ ಮತ್ತು ಒಕ್ಕಲಿಗ ಸಮುದಾಯಗಳು

೨. ವಿಶಾಲ ನೆಲೆ : ಸಮುದಾಯಗಳ ಒಟ್ಟಾರೆ ಚಲನೆಯ ಮೂಲಕ ಒಂದು ರಾಷ್ಟ್ರೀಯತೆಯ ನೆನಪುಗಳನ್ನು ಕಟ್ಟುವುದು ಉದಾಹರಣೆಗೆ ಶಂಬಾಜೋಶಿಯವರು ಕನ್ನಡ ಸಮುದಾಯವನ್ನು ಮರಾಠಿಯ ವಿರುದ್ಧ ನಿಲ್ಲಿಸಿದಂತೆ.

ಮೇಲಿನ ಎಲ್ಲ ವಿವರಗಳನ್ನು ಪರಿಶೀಲಿಸಿದಾಗ ಗತಕಾಲಕ್ಕೆ ಚರಿತ್ರೆಯ ಯಾವ ಗುಣವೂ ಇರುವುದಿಲ್ಲ. ಆದರೆ ಘಟನೆಗಳು ನಡೆದಿರುವುದು ಮಾತ್ರ ಸತ್ಯ. ಅವುಗಳನ್ನು ವರ್ತಮಾನದ ಅಗತ್ಯಕ್ಕೆ ತಕ್ಕ ಹಾಗೆ ಮಾರ್ಪಾಟು ಮಾಡಿಕೊಳ್ಳುವ, ವ್ಯಾಖ್ಯಾನ ಕೊಡುವ ಕೆಲಸ ನಡೆಯುತ್ತದೆ ಎಂದು ಅರ್ಥ ಮಾಡಿಕೊಳ್ಳಬಹುದಾಗಿದೆ.

ಏನೇ ಆದರೂ ಆಧುನಿಕ ರಾಷ್ಟ್ರಿಕನಿಗೆ ಚರಿತ್ರೆಯ ಪ್ರಜ್ಞೆಯ ಅರಿವಿನ ಹಂಗು ಇರಲೇಬೇಕಾಗುತ್ತದೆಂದು ಶಂಬಾಜೋಶಿಯವರು ಪ್ರತಿಪಾದಿಸುತ್ತಾರೆ. "ವೇದಾಂತವು ವ್ಯಕ್ತಿಯ ಆತ್ಮ ದರ್ಶನವನ್ನು ಮಾಡಿಕೊಡುವುದಾದರೆ, ಇತಿಹಾಸವು ರಾಷ್ಟ್ರ-ಪುರುಷನ ನಿಜ ಸ್ವರೂಪವನ್ನು ಕಣ್ಣೆದುರು ನಿಲ್ಲಿಸಬಹುದು. ನಿಜವಾದ ಇತಿಹಾಸವನ್ನು ದುರ್ಲಕ್ಷಿಸಿದುದರಿಂದಲೇ ನಾವಿಂದು ಈ ಕೀಳು ಸ್ಥಿತಿಗೆ ಬಂದಿದ್ದೇವೆ"[೧] ಎಂದವರು ಪ್ರತಿಪಾದಿಸುತ್ತಾರೆ.

## ೪.೧. ಚರಿತ್ರೆ ಕುರಿತಂತೆ ಆಲೂರು ವೆಂಕಟರಾಯರ ಚಿಂತನೆಗಳು

ಆಧುನಿಕ ಕನ್ನಡ ರಾಷ್ಟ್ರೀಯತೆಯ ಸಂದರ್ಭದಲ್ಲಿ ಆಲೂರು ವೆಂಕಟರಾಯರನ್ನು ಮರೆತು ಮುಂದಕ್ಕೆ ಸಾಗಲು ಸಾಧ್ಯವಿಲ್ಲ. ಸ್ವತಃ ಕರ್ನಾಟಕ ಏಕೀಕರಣ ಚಳುವಳಿಯನ್ನು ಕಟ್ಟಿ, ಅದಕ್ಕೆ ಚಾರಿತ್ರಿಕ ಮಹತ್ವ ಒದಗಿಸಿ, ಮುನ್ನಡೆಸಿ, 'ಐಕ್ಯತೆ'ಯ ಬಹುಪಾಲು ಅಂಶವನ್ನು ತಮ್ಮ ಜೀವಿತಾವಧಿಯಲ್ಲಿ ಅನುಭವಿಸಿದರು. ರಾಷ್ಟ್ರದ ಕುರಿತಾದ ಅವರ ಚಿಂತನೆಗಳು ಪೂನಾದ ಫರ್ಗ್ಯೂಸನ್ ಕಾಲೇಜಿನಿಂದ ಆರಂಭಗೊಳ್ಳುತ್ತವೆ. ಮರಾಠಿ ಪ್ರಾಧಾನ್ಯದ ಸಂದರ್ಭದಲ್ಲಿ ಶಿಕ್ಷಣ ಕಲಿತರು ಮತ್ತು ದೇಶಭಕ್ತರ, ಸ್ವಾತಂತ್ರ್ಯ ಹೋರಾಟಗಾರರ, ಹಿಂದುತ್ವ ಪ್ರತಿಪಾದಿಸುತ್ತಿದ್ದ ಸಂಘಟನೆಗಳ ನಾಯಕರುಗಳು ರೂಪುಗೊಂಡ ಕಾಲೇಜಿನಲ್ಲಿ ಆಲೂರರು ವಿದ್ಯಾಭ್ಯಾಸ ಪಡೆದರು. ಸಹಜವಾಗಿ ಆಲೂರು ವೆಂಕಟರಾಯರಿಗೂ ಕೂಡ ಸಾವರಕರ್ ಮತ್ತು ಬಾಪಟ್ ಜೀವದ ಗೆಳೆಯರಾಗಿದ್ದರಂತೆ. ಜೀವನದುದ್ದಕ್ಕೂ ಗುಪ್ತವಾಗಿ ಇವರ ನಡುವೆ ಸಂಪರ್ಕ ಇಟ್ಟುಕೊಂಡಿದ್ದನ್ನು ಅವರು ಸ್ಮರಿಸಿಕೊಳ್ಳುತ್ತಾರೆ.

ಈ ಸಂದರ್ಭದಲ್ಲಿ ಎರಡು ಸಂಗತಿಗಳು ಆಲೂರರನ್ನು ರಾಷ್ಟ್ರ ಚಿಂತನೆಗೆ ತೊಡಗಿಸಿದಂತೆ ಕಾಣಿಸುತ್ತದೆ. ೧೯೦೫ ರಲ್ಲಿ ೧. ಆಲೂರರು ಆನೆಗೊಂದಿಯ ದರ್ಶನ ಮಾಡಿದ್ದು ೨. ವಂಗಭಂಗ ಚಳುವಳಿ ಆರಂಭಗೊಂಡಿದ್ದು. ಅವರ ಜೀವನದಲ್ಲಿ ಈ ಎರಡು ಘಟನೆಗಳಿಗೂ ಚಾರಿತ್ರಿಕ ಮಹತ್ವ ಇದೆ. ಎರಡನೇ ಘಟನೆಗೆ ಅವರು ತಕ್ಷಣ ಪ್ರತಿಕ್ರಿಯಿಸುತ್ತ "ಬಂಗಾಲವು ಎರಡೇ ಭಾಗಗಳಾಗಿ ಮಾಡಲ್ಪಟ್ಟರೆ ಬಂಗಾಲಿಗಳು ವಿಲಕ್ಷಣವಾದ ಚಳುವಳಿಯನ್ನು ಮಾಡುತ್ತಿರಲು ಕರ್ನಾಟಕವು ಭಿನ್ನ ವಿಭಿನ್ನವಾಗಿ ಹೋಗಿದ್ದರೂ ನಾವು ಎಚ್ಚತ್ತೇ ಇಲ್ಲವಲ್ಲ"[೨] ಎಂದು ಕರ್ನಾಟಕತ್ವದ ಕುರಿತು ಚಿಂತನೆಗೆ ತೊಡಗುತ್ತಾರೆ. ಅದೇ ಸಂದರ್ಭದಲ್ಲಿ ಅವರ ಈ ಚಿಂತನೆಗೆ ಪ್ರೇರಣೆ ಒದಗಿಸಿದ್ದು ಆನೆಗೊಂದಿಯ ದರ್ಶನ. ಮುಂದೆ ಆಲೂರರು ಹಂಪಿಯನ್ನು ಕೇಂದ್ರವಾಗಿಟ್ಟುಕೊಂಡು ಚಳುವಳಿಯನ್ನು ರೂಪಿಸುತ್ತಾರೆ. ಬಲಪಂಥೀಯ ಚಿಂತಕರಿಗೆ ಆಪ್ತ ನೆನಪೂ ಆದ ವಿಜಯನಗರ ಸಾಮ್ರಾಜ್ಯದ ವೈಭವದ ಕಥನ ಆಲೂರರಿಗೂ ಲಭಿಸಲಾರಂಭಿಸುತ್ತದೆ. ಆದರೆ ಆಧುನಿಕ

ರಾಷ್ಟ್ರರೂಪಿಸುವ ಚಳುವಳಿಯ ನಾಯಕತ್ವದ ಹೊಣೆಹೊತ್ತ ಇವರಿಗೆ ವಿದ್ವೇಷದ ರಾಜಕಾರಣವನ್ನು ಪಕ್ಕಕ್ಕಿಡಬೇಕಾದ ಅನಿವಾರ್ಯತೆಯಿತ್ತು, ಮತ್ತು 'ಒಳಗೊಳ್ಳುವ' ರಾಜಕಾರಣವನ್ನು ಮಾಡಲೇಬೇಕಾಗಿತ್ತು. ತನ್ನ ಸಮಕಾಲೀನರನೇಕರಿಗಿಂತ ಹೆಚ್ಚಾಗಿ ಕರ್ನಾಟಕವನ್ನು ತಿರುಗಿದ್ದರಿಂದ ರೈತಾಪಿ ಸಮುದಾಯಗಳು ತಮ್ಮಷ್ಟಕ್ಕೆ ವಿದ್ವೇಷದಲ್ಲಿ ತೊಡಗದೆ ಸಾಮರಸ್ಯದಿಂದ ಬದುಕುತ್ತಿದ್ದುದು ಅರಿವಿಗೆ ಬಂದಿರಬೇಕು: "ಸಾಮಾನ್ಯ ಜನರು ಗಹನವಾದ ವಿಚಾರಗಳನ್ನು ಗ್ರಹಣ ಮಾಡಲಾರರೆಂಬ ಭಯದಿಂದ, ಅವರೆದುರಿಗೆ ತಪ್ಪುಕಲ್ಪನೆಗಳನ್ನಿಡುವುದು ಎಂದಿಗಾದರೂ ಸರಿಯಾದೀತೆ? ಈ ತರಹದ ಅಂಜಿಕೆಯು ಯಾವ ವಿಷಯದಲ್ಲಿ ಇಲ್ಲ? ಪ್ರತಿಯೊಂದು ವಿಷಯದಲ್ಲಿಯೂ ಇದ್ದೇ ಇರುತ್ತದೆ. ಉತ್ಕಟವಾದ ಕರ್ನಾಟಕದ ಅಭಿಮಾನವು ತಾಮಸ ಜನರಲ್ಲಿ ಪರತಂತ್ರ ವಿಷಯಕವಾದ ದ್ವೇಷಬುದ್ಧಿಯನ್ನು ತಾಳುವ ಸಂಭವವುಂಟು. ಉತ್ಕಟವಾದ ಜಾತ್ಯಾಭಿಮಾನವು ಅನೇಕ ಸಲ ಅನ್ಯಜಾತಿಗಳ ದೂಷಣೆಯಲ್ಲಿ ಪರಿಣಮಿಸುತ್ತಿರುವುದನ್ನು ನಾವು ಈಗ ಕಾಣುವುದಿಲ್ಲವೇ? ಉತ್ಕಟ ಪ್ರೇಮವು ಅನ್ಯರ ದ್ವೇಷರೂಪವನ್ನು ಹೊಂದುವುದು. ಉತ್ಕಟ ದೇಶಾಭಿಮಾನವು ಪರದೇಶಗಳನ್ನು ತಿರಸ್ಕರಿಸುವುದರಲ್ಲಿ ಪರಿಣಮಿಸಬಹುದು. ಉತ್ಕಟವಾದ ಸ್ವಮತ ಭಕ್ತಿಯು ಅನ್ಯಮತಗಳ ಬಗ್ಗೆ ಹೇಯಬುದ್ಧಿಯನ್ನು ಹುಟ್ಟಿಸಬಹುದು. ಅವುಗಳ ವಿಷಯಕವಾದ ಅಸಹಕಾರವು ಸಹ್ಯವಾದ ರೂಪವನ್ನಾಂತು ಅಸಹಿಷ್ಣುತೆಯ ರೂಪವನ್ನು ಹೊಂದುವ ಸಂಭವವುಂಟು."[೩]

ಕನ್ನಡ ಕುಲ ಪುರೋಹಿತರೆಂಬ ಬಿರುದು ಹೊತ್ತಿದ್ದ ಆಲೂರರು ಆಶ್ಚರ್ಯವೆನ್ನಿಸುವಷ್ಟರ ಮಟ್ಟಿಗೆ ದೇಶ, ಭಾಷೆ, ಮತಗಳನ್ನು ಕುರಿತು 'ನೈತಿಕ' ಪರಿಭಾಷೆಯಲ್ಲಿ ವಿವರಿಸುತ್ತಿದ್ದಾರೆ. 'ಅನ್ಯ'ರ ಕುರಿತಾದ ದ್ವೇಷ 'ಸ್ವ'ದ ಕುರಿತಾದ ಉತ್ಕಟ ಪ್ರೇಮದಿಂದ ಉದಿಸುತ್ತದೆ ಎಂಬುದು ಸಂತನ ನೆಲೆಗೇರಿದವರಿಂದ ಮಾತ್ರ ಬರಬಲ್ಲವೆ? ಅಥವಾ ಇವುಗಳು ರಾಜಕೀಯ ಹಿತಾಸಕ್ತಿಗಳು ತಟಸ್ಥವಾಗಿರುತ್ತವೆ ಎಂದು ನಂಬುವುದು. ಆ ಕುರಿತಾದ ತಿಳವಳಿಕೆಯ ಕೊರತೆಯಿಂದ ಉದ್ಭವಿಸಿದಂತಲ್ಲವೇ? ಎಂದು ಅನ್ನಿಸದೇ ಇರದು.

ಏನೇ ಆದರೂ ಮೇಲಿನ ಮಾತುಗಳಲ್ಲಿ 'ಅನ್ಯ'ದ ಕುರಿತಾದ ಜನಮಾನಸದಲ್ಲಿ ದ್ವೇಷ ಬಿತ್ತುವುದನ್ನು ವಿರೋಧಿಸುವ ನಿಲುವು ಸ್ಪಷ್ಟವಾಗಿ ಕಾಣಿಸುತ್ತದೆ. ಈ ರೀತಿಯ ಚರಿತ್ರೆಯ ಪ್ರಜ್ಞೆಯಿಂದ ರೂಪುಗೊಳ್ಳಬೇಕಾದ ಕನ್ನಡ ರಾಷ್ಟ್ರೀಯತೆಯ ಅನಿವಾರ್ಯಗಳಲ್ಲೊಂದಾಗಿದೆ. ಅನ್ಯವನ್ನು ವಿರೋಧಿಸದೆ ಕಟ್ಟಿದ ರಾಷ್ಟ್ರಮಾತ್ರ ಆರೋಗ್ಯಕರ ಎಂಬ ಚಿಂತನೆ ಆಲೂರರಿಗಿರುವಂತಿದೆ. ಈ ನಿಲುವು ಕರ್ನಾಟಕ ಏಕೀಕರಣದ ತರುವಾಯವೇ ಕಾಣಿಸಿಕೊಳ್ಳುತ್ತದೆ. ಆಗ ಶೂದ್ರ ಸಮುದಾಯಕ್ಕೆ ಸೇರಿದವರು ಮೈಸೂರು ರಾಜ್ಯದಲ್ಲಿ ಮುಖ್ಯಮಂತ್ರಿಗಳು, ಹಾಗೂ ಜಾತ್ಯತೀತತೆಯನ್ನು ಬಲವಾಗಿ ಪ್ರತಿಪಾದಿಸುತ್ತಿದ್ದ ಜವಾಹರಲಾಲ ನೆಹರೂ ಕೇಂದ್ರದಲ್ಲಿ ಪ್ರಧಾನ ಮಂತ್ರಿಯಾಗಿದ್ದರೆನ್ನುವುದು ಗಮನಾರ್ಹ.

ಆದರೆ ಆಲೂರರಲ್ಲಿ ಚರಿತ್ರೆಯನ್ನು ಕುರಿತ ದೃಷ್ಟಿಕೋನದಲ್ಲಿ ವಸಾಹತುವಾದಿ ಮತ್ತು ಮತೀಯವಾದಿ ನಿಲುವುಗಳು ಢಾಳಾಗಿ ಗೋಚರಿಸುತ್ತವೆ. ಇದಕ್ಕೆ ಅವರ 'ಕರ್ನಾಟಕದ ವೀರರತ್ನಗಳು' ಮತ್ತು 'ಕರ್ನಾಟಕದ ಗತವೈಭವ' ಕೃತಿಗಳು ಉತ್ತಮ ಉದಾಹರಣೆಗಳಾಗಬಲ್ಲವು. ಕನ್ನಡ ರಾಷ್ಟ್ರೀಯತೆಯಲ್ಲಿ 'ಫ್ಯೂಡಲ್'

ಆಳ್ವಿಕೆ ನಡೆಸಿದವರಿಗೆ ವೀರತ್ವ ಆರೋಪಮಾಡಿ ಚರಿತ್ರೆಯನ್ನು ಕಟ್ಟುವ ಕ್ರಮ ಆಲೂರರಲ್ಲೂ ಇದೆ ಮತ್ತು ಎಲ್ಲ ಬಲ ಪಂಥೀಯರಂತೆ ಕ್ಲೀಷೆಯಾದ ರೀತಿಯಲ್ಲಿ ಚರಿತ್ರೆಯನ್ನು ಶತ್ರುಗಳನ್ನು ಎದುರಿಸಿದ ರಾಜರ ಕಥೆಯಂತೆ ನಿರೂಪಿಸುತ್ತಾರೆ. ಕನ್ನಡ ಕರ್ನಾಟಕತ್ವಗಳ ಕುರಿತಂತೆ ಬಹುಪಾಲು ಕಾಲ ಆಲೂರರ ಜೊತೆ ಇದ್ದ ಶಾಂತಕವಿಗಳ ಕವಿತೆಯೊಂದನ್ನು ತಮ್ಮ ಪುಸ್ತಕದಲ್ಲಿ ದಾಖಲಿಸಿದ್ದಾರೆ.

“ಕದಂಬಾದಿ ಸಂಪೂಜಿತ ಚರಣೆ
ಗಂಗಾರಾಧಿತ ಪದನಖ ಸರಣೆ
ರಾಷ್ಟ್ರಕೂಟ ಮಣಿ ಕಂಠಾಭರಣೆ!
ಚಾಲುಕ್ಯಾಂಶುಕ ಶೋಭಾವರಣೆ
ಮಾಧವ ಮಣಿ ಕಂಕಣಾಂಶು ಸುಂದರಿ!
ಬಲ್ಲಾಳರ ಭುಜ ಭೂಷಣ ಬಂಧುರೆ||
ವಿಜಯ ನಗರ ಮಂಗಳ ಮಣಿ ಕಂಧರೆ|
ಮೈಸೂರೊಡೆಯರ ಸುಕೀರ್ತಿ ಮಂದಿರೆ||
ಮಾಂಡಲಿಕಾವನ ಭಾರಧುರಂಧರೆ
ಮತಸ್ಥಾಪಕ ಸ್ಥಾಪಿತ ಪ್ರಾಣೆ!
ಶಿಲ್ಪಕಲಾ ಮಂಟಪ ಸುಸ್ಥಾನೆ!
ಕವಿಜನ ಕೀರ್ತಿತ ಸುಯಶಸ್ ಪ್ರಾಣೆ!
ಸಾಧು ಸತ್ಕಥಾ ಭೇರಿಧ್ವಾನೆ!
ಸ್ವೇತಿಹಾಸ ನೀ ರಾಜನ ರಾಣೆ”[೪]

ಆರ್ಥಿಕ, ರಾಜಕೀಯ, ಕೃಷಿ ಭೂಹಿಡುವಳಿ, ಕುಶಲಗಾರರು, ವ್ಯಾಪಾರಿಗಳು, ಶ್ರಮಿಕ ಸಮುದಾಯಗಳನ್ನೊಳಗೊಂಡ ಚರಿತ್ರೆಯೇ ನಮ್ಮಲ್ಲಿ ಕಡಿಮೆ. ರಾಜಕೀಯ ಧಾರ್ಮಿಕ ಚರಿತ್ರೆಯನ್ನು ಮಾತ್ರವೇ ನಾಡಿನ ಚರಿತ್ರೆಯೆಂದು ಉದ್ದಕ್ಕೂ ಬಿಂಬಿಸಲಾಗಿದೆ. ಬಲಪಂಥೀಯ ರಾಜಕಾರಣದ ಮುಖ್ಯ ತಂತ್ರವಾದ ಈ ಕಥನ ಕ್ರಮವನ್ನು ವಸಾಹತುವಾದಿ ಚಿಂತಕರುಗಳಿಗೆ ಮೊದಲೇ ರಾಜರ ಆಸ್ಥಾನಗಳಲ್ಲಿದ್ದ ಪ್ರಭುತ್ವ ಪರ ಧೋರಣೆಗಳನ್ನು ಹೊಂದಿದ್ದ ಹೊಗಳುಭಟ್ಟರ ರಚನೆಗಳನ್ನೇ ಚರಿತ್ರೆಯೆಂದು ನಂಬಿಸಲಾಗುತ್ತಿದೆ. ತಮಗೆ ಬೇಕಾದ್ದನ್ನು ಆಯ್ದು ಕಟ್ಟುತ್ತಿರುವ ಈ ಚರಿತ್ರೆಯ ಕಥನ ಕ್ರಮವನ್ನು ಈಗಿನ ಬಲಪಂಥೀಯ ರಾಜಕಾರಣ ಅಥವಾ ಸ್ಥಾಪಿತ ಹಿತಾಸಕ್ತಿಗಳು ಸಂಪತ್ತಿನ ಮೇಲಿನ ಹಿಡಿತವನ್ನು ಮುಂದುವರಿಸುವುದಕ್ಕೆ ಹಾಗೂ ತನ್ನ ವೈಭವವನ್ನು ಇಡೀ ನಾಡಿನ ವೈಭವವೆಂದು ಚಿತ್ರಿಸಲು ಪ್ರಯತ್ನಿಸುತ್ತದೆ. ಈ ಕ್ರಮವನ್ನು ನಿಧಾನಕ್ಕೆ ಎಲ್ಲರ ಕಥೆಯಾಗಿಸಲು ಪ್ರಯತ್ನಿಸಲಾಗುತ್ತದೆ. ಯಾವ ರಾಜರ ನಡುವೆ ಯುದ್ಧ ನಡೆಯಿತು, ಕಟ್ಟಿದ ದೇವಾಲಯಗಳು, ರಾಣಿಯರು, ಅರಮನೆಗಳ ವೈಭವ, ಕವಿಗಳಿಗೆ ನೀಡಿದ ಆಶ್ರಯ ಇವುಗಳೇ

ಪ್ರಧಾನವಾಗಿವೆ. ರಾಜನ ತೆರಿಗೆ ಮಾನದಂಡಗಳೇನು, ಅವನು ಯಾರಿಗೆ ಭೂದಾನ ಮಾಡಿದ, ಜನರನ್ನು ಸೈನ್ಯಕ್ಕೆ ಎಳೆದೊಯ್ಯುತ್ತಿದ್ದ ರೀತಿ ಹೇಗಿತ್ತು ಇತ್ಯಾದಿಗಳ ದಾಖಲೆಗಳೇ ಅಪರೂಪವಾಗಿಬಿಟ್ಟಿವೆ. ಆಧುನಿಕ ಪ್ರಭುತ್ವಗಳು ಕೂಡ ಇದೇ ಕ್ರಮವನ್ನು ಮುಂದುವರಿಸುತ್ತವೆ. 'ಕದಂಬೋತ್ಸವ' 'ಹೊಯ್ಸಳೋತ್ಸವ', 'ಬಾದಾಮಿ ಉತ್ಸವ' 'ವಿಜಯನಗರ ಉತ್ಸವ' ಗಳನ್ನು ಮುಂದುವರಿಸುತ್ತಿದೆ. ಮೈಸೂರಿನ ದಸರಾ ಕಾರ್ಯಕ್ರಮಗಳಂತೂ ಫ್ಯೂಡಲ್ ಸಂಸ್ಕೃತಿಯ ಮುಂದುವರಿಕೆಯ ಭಾಗವಾಗಿ ಕಾಣಿಸುತ್ತವೆ.

ಆಲೂರರು ಆಧುನಿಕ ಪ್ರಭುತ್ವಕ್ಕೆ ಮಾದರಿಯೆಂದು ಕಟ್ಟಿಕೊಡುತ್ತಿರುವ ಚರಿತ್ರೆ ಹೀಗಿದೆ :

"ಯತ್ರ ಯೋಗೀಶ್ವರಃ ಕೃಷ್ಣಃ.... ಎಂಬ ಗೀತಾವಾಕ್ಯವನ್ನನುಸರಿಸಿ, ಕೃಷ್ಣಾರ್ಜುನರ ಜೋಡಿಯಂಥ ಜೋಡಿಗಳು ನಮ್ಮ ದೇಶದಲ್ಲಿ ಕಾಲಕಾಲಕ್ಕೆ ಹುಟ್ಟುತ್ತಲೇ ಬಂದಿರುತ್ತವೆ. ಅತಿ ಪ್ರಾಚೀನ ಕಾಲದಲ್ಲಿ ದೇವೇಂದ್ರನಿಗೆ ಬೃಹಸ್ಪತ್ಯಾಚಾರ್ಯರೂ, ಜನಕರಾಜನಿಗೆ ಯಾಜ್ಞವಲ್ಕ್ಯರೂ ಶ್ರೀ ರಾಮಚಂದ್ರನಿಗೆ ವಶಿಷ್ಠ ಮಹಾಮುನಿಗಳೂ, ಅರ್ಜುನನಿಗೆ ಶ್ರೀಕೃಷ್ಣಪರಮಾತ್ಮನೂ ರಾಜಕೀಯ ಗುರುಗಳಾಗಿದ್ದರು. ಇಂಥ ಮಹಾ ವಿಭೂತಿಗಳ ಉಪದೇಶ ಮತ್ತು ಅನುಗ್ರಹದ ಮೂಲಕವೇ ದೇವೇಂದ್ರ, ಜನಕ, ಶ್ರೀರಾಮಚಂದ್ರ ಮತ್ತು ಅರ್ಜುನಾದಿ ಪ್ರಭೃತಿ ಸತ್ಪುರುಷರು ತಮ್ಮ ತಮ್ಮ ಲೋಕೋದ್ಧಾರದ ಕೃತ್ಯಗಳನ್ನು ನಿರ್ವಿಘ್ನದಿಂದ ಕೊನೆಮುಟ್ಟಿಸುವುದಕ್ಕೆ ಸಮರ್ಥರಾದರು. ಪಾಪ ನಿರತರಾದ ಮತ್ತು ಪರಪೀಡನದಲ್ಲಿ ಮಗ್ನರಾದ ಪಾಪಿಷ್ಠ ಜನರಿಗೆ ಶಾಸನ ಮಾಡಿ ಭೂಮಾತೆಯ ಭಾರವನ್ನು ಹಗುರ ಮಾಡಲು ಸಮರ್ಥರಾದರು.

ಅರ್ವಾಚೀನ ಇತಿಹಾಸದಲ್ಲಿ ಕೂಡ ಇಂಥ ಉದಾಹರಣೆಗಳು ಹೇರಳವಾಗಿ ದೊರೆಯುತ್ತವೆ. ಚಂದ್ರಗುಪ್ತನಿಗೆ ಚಾಣಕ್ಯ ಮುನಿಯೂ, ಹೊಯ್ಸಳ ಅರಸನಾದ ವಿಷ್ಣುವರ್ಧನನಿಗೆ ಶ್ರೀರಾಮಾನುಜಾಚಾರ್ಯರು.

ದಕ್ಷಿಣ ಹಿಂದುಸ್ತಾನದಲ್ಲಿ ಇಂದಿನವರೆಗೆ ಆಗಿ ಹೋದ ಸಾಮ್ರಾಜ್ಯಗಳಲ್ಲಿ ಶ್ರೇಷ್ಠವೆನಿಸಿಕೊಂಡ ಮತ್ತು ಅತ್ಯಂತ ವಿಸ್ತೃತವಾದ ವಿಜಯನಗರ ಸಾಮ್ರಾಜ್ಯ ರೂಪ ಮಹೋದರರಿಗೆ ಚಂದ್ರೋದಯದಂತಿರುವ ನಮ್ಮ ಚರಿತ್ರೆ ನಾಯಕರಾದ ಶ್ರೀ ವಿದ್ಯಾರಣ್ಯ ಮಹಾಮುನಿಗಳ ಚರಿತ್ರೆಗೆ ಮಿಕ್ಕೆಲ್ಲವುಗಳಿಗಿಂತಲೂ ಕೆಲವು ಕಾರಣಗಳ ಮೂಲಕ ಎಲ್ಲಕ್ಕೂ ಹೆಚ್ಚಿನ ಮಹತ್ವವು ಪ್ರಾಪ್ತವಾಗಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ

೧. ಉತ್ತರ ಕಡೆಯಿಂದ ಒತ್ತಿಬಂದ ಮುಸಲ್ಮಾನರನ್ನು ಹಿಮ್ಮೆಟ್ಟಿಸಿದ ಮೊಟ್ಟಮೊದಲಿನ ಸಾಮ್ರಾಜ್ಯವೆಂದರೆ ಕರ್ನಾಟಕದ ಈ ವಿಜಯನಗರದ ಸಾಮ್ರಾಜ್ಯ ಒಂದೇ! ಕರ್ನಾಟಕಸ್ಥರಿಗೆ, ಅದೇಕೆ ಇಡೀ ಭಾರತಕ್ಕೇನೇ ಇದೇನು ಕಡಿಮೆ ಅಭಿಮಾನದ ಸಂಗತಿಯೇ? ಆದರೆ ನಮ್ಮ ಕರ್ನಾಟಕಸ್ಥರ ಕಡುತರವಾದ ದುರ್ಭಾಗ್ಯದ ಮೂಲಕ, ಸ್ವತಃ ಕನ್ನಡಿಗರಿಗೇನೇ ಅದರ ಮಹತ್ವದ ಅರಿವೂ ಇಲ್ಲ ಅಭಿಮಾನವೂ ಇಲ್ಲ. ಇದೆಂಥ ಲಜ್ಜಾಸ್ಪದ ಸ್ಥಿತಿ ಮತ್ತು ಶೋಚನೀಯವೂ ಕರುಣಾಸ್ಪದವೂ ಆದ ಸ್ಥಿತಿ! ಆ ಶ್ರೀ ವಿದ್ಯಾರಣ್ಯರು ಉದ್ದಾಮ ರಾಜಕಾರಣಿಗಳು, ಅವರು ಹಕ್ಕ ಬುಕ್ಕರಲ್ಲಿ ಸ್ಫೂರ್ತಿ ತುಂಬಿ ಮುಸಲ್ಮಾನರನ್ನು ಹೊಡೆದೋಡಿಸಿ ಸಾಮ್ರಾಜ್ಯವನ್ನು ಕಟ್ಟಿಸಿದರು.

೨. ಅಲ್ಲದೆ, ಶ್ರೀ ಶಂಕರಾಚಾರ್ಯ ಧರ್ಮಸಾಮ್ರಾಜ್ಯವನ್ನು ಪ್ರಸಾರ ಮಾಡಿದರು.

೩. ಅವರು ಎಷ್ಟು ಸಂಸ್ಕೃತ ಗ್ರಂಥಗಳನ್ನು ಬರೆದಿರುವರೋ ಅಷ್ಟೊಂದು ಗ್ರಂಥಗಳನ್ನು ಬಹುಶಃ

ಇಡೀ ಭಾರತದಲ್ಲಿ, ಅದೇಕೆ ಜಗತ್ತಿನಲ್ಲಿ ಮತ್ತಾರೂ ಬರೆದಿರುವುದಿಲ್ಲವೆಂದು ಹೇಳಬಹುದು. ಆದರೆ ಕನ್ನಡಿಗರಿಗೊಬ್ಬರಿಗಾದರೂ ಅವರ ಇತಿಹಾಸವು ಗೊತ್ತಿದೆಯೇ? ಅಭಿಮಾನವಿದೆಯೆ? ಇಲ್ಲ ಅವರ ಹೆಸರೂ ಕೂಡ ನಮ್ಮವರು ಇನ್ನೂ ಕೇಳಿಲ್ಲ ಇತಿಹಾಸವಂತೂ ಒತ್ತಟ್ಟಿಗಿರಲಿ ನಮ್ಮಲ್ಲಿ ಇತಿಹಾಸವನ್ನು ಬರೆಯುವ ಕಲೆಯೇ ಆಗ ಇರಲಿಲ್ಲ. ಆದರೆ ಆಗಿನ ಕಾಲದ ಶತ್ರುಗಳಾದ ಮುಸಲ್ಮಾನರು ನಿರ್ದಯತೆಯಿಂದ ವಿಜಯ ನಗರವನ್ನು ವಿಧ್ವಂಸ ಮಾಡಿದ್ದರಿಂದಲೂ ಮತ್ತು ಕೆಲವಂಶದಿಂದ ಸರ್ವಭಕ್ಷಕ ಕಾಲದ ದವಡೆಯಲ್ಲಿ ಸಿಕ್ಕಿದ್ದರಿಂದಲೂ ಸಾಧನಗಳು ಪೂರ್ಣವಾಗಿ ನಷ್ಟವಾಗಿ ಹೋಗಿವೆ. ಆದರೂ ಅಲ್ಲಲ್ಲಿ ಸಿಗುವ ತಾಮ್ರ ಪಟದ ಶಿಲಾಲಿಪಿಗಳು, ಪರಂಪರೆ ಕಥೆಗಳು, ಪರದೇಶೀ ಪ್ರವಾಸಿಗಳ ಉಲ್ಲೇಖಗಳು, ಶತ್ರುಗಳ ಜಾತೀಯರು ಬರೆದ ಏಕದೇಶಿ ಇತಿಹಾಸಗಳು ಇವುಗಳ ಮೇಲೆ ಅವಲಂಬಿಸಿ ಬರೆದಿರುತ್ತೇನೆ...... ಆ ಕಾಲದಲ್ಲಿ ರಾಜಕಾರಣಕ್ಕೆ ಅತ್ಯಂತ ಮಹತ್ವದ ಸ್ಥಾನವಿತ್ತು ಏಕೆಂದರೆ ಭರತ ಭೂಮಿ ಪಾರತಂತ್ರ್ಯದಲ್ಲಿ ಸಿಕ್ಕು ವಿಲಿವಿಲಿ ಒದ್ದಾಡುವ ಪ್ರಸಂಗ ಬಂದಿತ್ತು ಮತ್ತು ಹಿಂದೂ ಧರ್ಮವೂ ನಷ್ಟಹೊಂದುತ್ತಿತ್ತು. ವಿದ್ಯಾರಣ್ಯರ ಉದಯದ ಸುಮಾರಕ್ಕೆ ಉತ್ತರ ಹಿಂದುಸ್ತಾನವೆಲ್ಲ ಪರತಂತ್ರವಾಗಿತ್ತು."[೫]

ಪ್ರಭುತ್ವ ಮತ್ತು ಇತಿಹಾಸದ ಜೊತೆಗೆ ಧರ್ಮವನ್ನು ಸೇರಿಸಿ ನೋಡುವ ಕ್ರಮ ಹೊಸದಲ್ಲವಾದರೂ, ಆಧುನಿಕ ಪ್ರಭುತ್ವವು ರಾಜರಿಲ್ಲದ, ಅಹಿಂಸೆಯ ಮೂಲಕ, ನಿರಂತರ ಸೋಲುಗಳ ಮೂಲಕ ಜನರೇ ಕಟ್ಟಿದ ರಾಷ್ಟ್ರ ಎಂಬ ಅರಿವಿದ್ದರೂ ಆಲೂರರು ಯಾಕೆ ಚರಿತ್ರೆಯನ್ನು ಏಕಪಕ್ಷೀಯವಾಗಿ ನೋಡುತ್ತಾರೆ? ಮಾಧ್ವ ಹಿನ್ನೆಲೆಯ ಆಲೂರರಿಗೆ ಪುರಾಣ ಮತ್ತು ಚರಿತ್ರೆಗಳನ್ನು ಬೆಸೆದು ಬ್ರಾಹ್ಮಣ ಕ್ಷತ್ರಿಯ ಹೊಂದಾಣಿಕೆ ಮೂಲಕವೇ ರಾಷ್ಟ್ರ ಚಾಲನೆಗೊಳ್ಳಬೇಕು ಎಂಬ ಹಂಬಲ ಉದ್ದಕ್ಕೂ ಕಾಣಿಸುತ್ತದೆ ಏಕೆ? ವಿಜಯನಗರ ಸಾಮ್ರಾಜ್ಯ 'ನಮ್ಮವರು' ರಚಿಸಿದ ಇತಿಹಾಸವೇ ಇಲ್ಲ ಎಂದು ನೆಲ ಅಗೆಯುವುದರ ಮೂಲಕ ಸಿಕ್ಕ ದಾಖಲೆ ಹಿಡಿದು ಚರಿತ್ರೆ ನಿರ್ಮಿಸುವಾಗ ಅಕ್ಕಪಕ್ಕದ ಜನರೇಕೆ ಇದಕ್ಕೂ ನಮಗೂ ಸಂಬಂಧವೇ ಇಲ್ಲವೆಂಬಂತೆ ತಟಸ್ಥರಾಗುತ್ತಾರೆ ? ಕುಮಾರರಾಮನ ಬಗ್ಗೆ, ಟಿಪ್ಪೂ ಬಗ್ಗೆ, ಮಂಟೇಸ್ವಾಮಿ ಕುರಿತು ಕಥೆ ಕಟ್ಟಿ ಹಾಡುವ ಜನ ವಿದ್ಯಾರಣ್ಯರನ್ನು ಯಾಕೆ ತಮ್ಮ ಸ್ಮೃತಿಕೋಶಗಳಿಂದ ಅಳಿಸಿ ಹಾಕುತ್ತಾರೆ? ಕೃಷ್ಣದೇವರಾಯನನ್ನು ನೆನಪಿಸಿಕೊಳ್ಳುವುದಿಲ್ಲವೇಕೆ? ಎಂಬ ಪ್ರಶ್ನೆಗಳು ಆಲೂರರಿಗೆ ಕಾಡಿದಂತೆ ಅನ್ನಿಸುವುದೇ ಇಲ್ಲ. ತೀವ್ರ ವಿಷಾದಕ್ಕೆ ಸಿಕ್ಕವರಂತೆ ಅವರು ಪರಿತಪಿಸುತ್ತಾರೆ. ಜನರು ನಿರ್ಮಿಸುವ ಇತಿಹಾಸದ ಕುರಿತು ಅರಿವಿಲ್ಲವಾದಾಗ ಅಥವಾ ಪ್ರಭುತ್ವಗಳನ್ನು ಜನತೆಯನ್ನು ಬೇರೆ ಬೇರೆ ಎಂಬ ನಿಲುವಿಗೆ ತಲುಪಲು ಸಾಧ್ಯವಿಲ್ಲದಿದ್ದಾಗ ಆ ಸಿದ್ಧಾಂತದ ಕುರಿತೇ ಗುಮಾನಿಗಳು ಹುಟ್ಟುತ್ತವೆ. ಆ ಸಿದ್ಧಾಂತ ಎಷ್ಟರ ಮಟ್ಟಿಗೆ ಜನಪರ ಎಂದು ಕೇಳಿಕೊಳ್ಳಬೇಕಾದ ಅನಿವಾರ್ಯತೆಯೂ ಎದುರಾಗುತ್ತದೆ.

### ೪.೨ ಚರಿತ್ರೆ ಕುರಿತಂತೆ ಬಿ.ಎಂ.ಶ್ರೀಯವರ ಚಿಂತನೆಗಳು

ಆಧುನಿಕ ರಾಷ್ಟ್ರೀಯತೆಯ ನಿರ್ಮಾತೃಗಳಲ್ಲೊಬ್ಬರಾದ ಬಿ.ಎಂ.ಶ್ರೀಯವರನ್ನು ಕನ್ನಡ ವಿಮರ್ಶಕರು ನೇತ್ಯಾತ್ಮಕ ದೃಷ್ಟಿಯಿಂದ ನೋಡಿರುವುದೇ ಹೆಚ್ಚು. ಕನ್ನಡ ನವ್ಯ ವಿಮರ್ಶಕರಿಗಿರುವ ಶುದ್ಧತೆಯ ವ್ಯಸನ

ಮತ್ತು ಜನಪ್ರಿಯ ಗ್ರಹಿಕೆಗಳಿಂದಾಗಿ ಹೀಗಾಗಿರಬಹುದು. ಅಲ್ಲದೆ ತಮ್ಮ ಸಾಹಿತ್ಯದಲ್ಲಿ ವೈದಿಕ ನಿಲುವುಗಳನ್ನು ಸಮರ್ಥಿಸದೆ, ಸಂಸ್ಕೃತಿಗಳ ಸಂಕರಶೀಲತೆಯನ್ನು ಪ್ರತಿಪಾದಿಸುತ್ತಿದ್ದ, 'ಹಳ್ಳಿಗಳ ಏಳಿಗೆ ', ಕುರಿತಾದಂತೆಲ್ಲ ಕೃತಿಗಳನ್ನು ಬರೆಸುತ್ತಿದ್ದ, ಅನೇಕ ಸಾರಿ ಸಂಸ್ಕೃತ ವಿರೋಧಿ ನಿಲುವು ತಳೆಯುತ್ತಿದ್ದ ಬಿ.ಎಂ.ಶ್ರೀಯವರನ್ನು ಬ್ರಾಹ್ಮಣ ಮನಸ್ಸಿನ ವಿದ್ವಾಂಸರು ಒಪ್ಪುವುದು ಸಹಜವಾಗಿ ಕಷ್ಟ. ಆದರೂ ಅವರು ಕಾವ್ಯ ಮುಂತಾದ ಹೊಸ ಪ್ರಯೋಗಗಳಿಂದಾಗಿ 'ಕನ್ನಡದ ಕಣ್ವ' ರೆಂದು ಕರೆಸಿಕೊಂಡರು.

ಸಾಹಿತ್ಯದ ಕುರಿತಾಗಿ ಮಾತ್ರವೇ ಚಿಂತಿಸದೆ ಬದುಕಿನ ಹತ್ತು ಹಲವು ಮುಖಗಳನ್ನು ಯೋಚಿಸಿ ಪ್ರತಿಕ್ರಿಯಿಸುವ ಆಧುನಿಕ ಕನ್ನಡದ ಸಾಹಿತಿಗಳಿಗೆ 'ಆದ್ಯ ಪ್ರವರ್ತಕ'ರಾದರು. ಶ್ರೀಯವರು ಹೊಸ ಲೇಖಕನ ಹೊಸ ಜವಾಬ್ದಾರಿಗಳ ಕುರಿತಂತೆ ಹೀಗೆ ಆರಂಭಿಸುತ್ತಾರೆ :

"ಈ ನಮ್ಮ ಹೊಸ ಲೇಖಕನು ಹಿರಿಯರ ಸೇವೆಯಲ್ಲಿ ಸಣ್ಣ ಮಕ್ಕಳನ್ನು ಮರೆಯುವುದಿಲ್ಲ. 'ಮನುಜನಿಗೆ ಮಗು ತಂದೆ' ಎಂಬ ತತ್ವವನ್ನು ಈತನು ಬಲ್ಲನು. ಆದ್ದರಿಂದ, ಆ ಚಿಕ್ಕ ಮಕ್ಕಳನ್ನು ತನ್ನ ಕಡೆಗೆ ಒಲಿಸಿಕೊಂಡು, ಅವರಿಗೆ ಬೇಕಾದ, ಪುಟ್ಟದಾದ, ಚಿತ್ರಗಳಿಂದ ಈಡೇರುವ, ಮುದ್ದಾದ ಬಾಲಶೈಲಿಯಲ್ಲಿ ಬರೆದಿರುವ ಸಾಹಸಕಥೆಗಳು, ಆಶ್ಚರ್ಯ ಕಥೆಗಳು, ದೇಶ ಸಂಚಾರಗಳು, ಸಮುದ್ರಯಾನಗಳು, ಪ್ರಕೃತಿಶಾಸ್ತ್ರದ ಅದ್ಭುತ ನಿರ್ಮಾಣಗಳು, ಭರತ ಖಂಡದ ಪೂರ್ವ ಚರಿತ್ರೆಯ ಸಾರಾಂಶಗಳು, ವೀರರ ನೈಜ ವೃತ್ತಾಂತಗಳು ಮುಂತಾದುವನ್ನು ಮೊದಲು ಸಿದ್ಧ ಮಾಡುವನು. ಆ ಬಳಿಕ ದೊಡ್ಡವರಿಗೆ ಬೋಧನೆ ಮಾಡುವುದಕ್ಕೆ ಹೊರಟು, ಕಾಲಗುಣ, ಸಮಾಜದ ನ್ಯೂನತೆಗಳು, ಸಂಸ್ಕರಣದ ಮಾರ್ಗಗಳು, ಸಾಧಕ ಬಾಧಕಗಳು, ಜಾತಿ ಮತಗಳ, ಪೂರ್ವ ಪದ್ಧತಿಗಳ ಮತ್ತು ಶಾಸ್ತ್ರವಿಧಿಗಳ ಗುಣ ದೋಷಗಳು, ಜನಾಂಗಗಳ ಸ್ವಾತಂತ್ರ್ಯ ಸಾಧನೆಯ ತತ್ವಗಳು, ಅದಕ್ಕೆ ಅತ್ಯಾವಶ್ಯಕವಾದ ಸ್ವಾರ್ಥತ್ಯಾಗ ಬುದ್ಧಿ, ರಾಜ್ಯಬಾರದ ಕ್ರಮಗಳು, ರಾಜಪ್ರಜೆಗಳ ಪರಸ್ಪರ ಧರ್ಮಗಳು, ಲೋಕದ ಜನಾಂಗಗಳೆಲ್ಲವೂ ಪರಸ್ಪರ ಸೌಹಾರ್ದದಿಂದಲೂ, ಸಹಕಾರ ಬುದ್ಧಿಯಿಂದಲೂ, ಯುದ್ಧದ ಕೆಟ್ಟಕನಸು ಬೀಳದ ಅವಿಚ್ಛಿನ್ನ ಶಾಂತಿಯಿಂದಲೂ, ಭ್ರಾತೃಭಾವದಲ್ಲಿ ವರ್ತಿಸುವಂತೆ ಮಾಡುವುದಕ್ಕೆ ನಡೆಸಬೇಕಾದ ಪ್ರಯತ್ನಗಳು ಇವೇ"[೬]

'ಲೋಕದ ಜನಾಂಗಗಳೆಲ್ಲವೂ ಪರಸ್ಪರ ಸೌಹಾರ್ದದಿಂದ ಮತ್ತು ಸಹಕಾರ ಬುದ್ಧಿಯಿಂದ ಯುದ್ಧದ ಕೆಟ್ಟ ಕನಸು ಬೀಳದ ಅವಿಚ್ಛಿನ್ನ ಶಾಂತಿಯಿಂದಲೂ, ಭ್ರಾತೃಭಾವದಲ್ಲಿ ವರ್ತಿಸುವಂತೆ ಮಾಡುವುದು. ಈ ಮಾತುಗಳನ್ನು ಪರಿಶೀಲಿಸುವುದಕ್ಕೆ ಬಿ.ಎಂ.ಶ್ರೀಯವರ ಬಗೆಗಿನ ಇದುವರೆಗಿನ ಗ್ರಹಿಕೆಗಳೆಲ್ಲವನ್ನೂ ಬಿಟ್ಟುಹೊರಡಬೇಕಾಗುತ್ತದೆ. ಶಂಬಾ, ತಮ್ಮ ಕಡೆಯ ದಿನಗಳಲ್ಲಿ ಪ್ರತಿಪಾದಿಸುತ್ತಿದ್ದ ತತ್ವ ಕೂಡ ಇದೇ ಆಗಿತ್ತು. ವಿಶ್ವಭ್ರಾತೃತ್ವದ ಮಾತುಗಳು ಸೋದರ ಧರ್ಮಗಳ ಕುರಿತಾದ ಸಹನೆಯ ಮಾತುಗಳು, ೨೦ನೆಯ ಶತಮಾನದ ಆರಂಭದ ದಶಕದಲ್ಲಿ ಎಷ್ಟು ಮುಖ್ಯ ಎಂಬುದು ಇವತ್ತಿನ ಅಸಹನೆಯ ಪರಿಸ್ಥಿತಿಗೆ ಮುಖಾಮುಖಿಯಾದಾಗ ಮಾತ್ರ ಅರ್ಥವಾಗುತ್ತದೆ. ಆಧುನಿಕ ರಾಷ್ಟ್ರ ಯಾವ ಅಡಿಪಾಯದ ಮೇಲೆ ನಿಲ್ಲಬೇಕು ಎಂದು ಅತ್ಯಂತ ಸಾವಧಾನದಿಂದ ಮಂಡಿಸುತ್ತಿರುವ ಮಾತುಗಳಿವು. ಸಾಹಿತ್ಯಸೃಷ್ಟಿ ಮತ್ತು ಜೀವನ ದೃಷ್ಟಿಗಳೆರಡೂ ಅಭಿನ್ನವಾಗಬಾರದೆಂಬ ನಿಲುವು ಬಿ.ಎಂ.ಶ್ರೀಯವರ ನಂತರದ ಅವರ ಶಿಷ್ಯ ಸಮುದಾಯದಲ್ಲಿ ಮುಖ್ಯವಾಗಿ ಕಾಣಬಹುದು.

ಇವುಗಳನ್ನು ಗಮನಿಸಿದಾಗ ಬಿ.ಎಂ.ಶ್ರೀ ಸ್ವಾತಂತ್ರ್ಯ ಹೋರಾಟಕ್ಕೆ ಪ್ರತಿಕ್ರಿಯಿಸಲಿಲ್ಲ. ಮೈಸೂರು ರಾಜಪ್ರಭುತ್ವವನ್ನು ಸಮರ್ಥಿಸಿ ಮಾತನಾಡುತ್ತಿದ್ದರು ಎನ್ನುವ ಆರೋಪಗಳು ಇಂದಿನ ಸಂದರ್ಭದಲ್ಲಿ ಮುಖ್ಯವೇ ಆಗುವುದಿಲ್ಲ.

ರಾಜ ಕೇಂದ್ರಿತವಾದ ರಾಜಕೀಯ ಚರಿತ್ರೆಯು ಮುಖ್ಯ ಎಂಬ ಚಿಂತನೆಯನ್ನು ನಿರಾಕರಿಸಿ ಹೊರಡುವ ಬಿ.ಎಂ.ಶ್ರೀಯವರಲ್ಲಿ ಆಧುನಿಕ ರಾಷ್ಟ್ರದಲ್ಲಿ ಸಾಮಾನ್ಯನನ್ನು ಕಡೆಗಣಿಸಲಾಗದು ಎಂಬ ಅರಿವು ಉದ್ದಕ್ಕೂ ಕೆಲಸ ಮಾಡಿದೆ. ಇದಕ್ಕೆ ಅವರ ಸಾಹಿತ್ಯ ಅಧ್ಯಯನದ ಹಿನ್ನೆಲೆಯ ಕಾರಣವೋ ಏನೋ, ಅವರು ಸಾಹಿತ್ಯ ಚರಿತ್ರೆ, ಧರ್ಮಗಳ ಛಂದಸ್ಸು, ಭಾಷೆ ಇತ್ಯಾದಿಗಳ ಇತಿಹಾಸವನ್ನು ನಿರ್ಮಿಸಲು ಹೊರಟರು. ಬಹುಶಃ ಈ ಕಾರಣಕ್ಕೆ ರಾಜರನ್ನು ಸ್ತುತಿಸುವ ಅಥವಾ ತೆಗಳುವ ದೊಡ್ಡ ಭಾರದಿಂದ ಹೊರಗೆ ಬರಲು ಅವರಿಗೆ ಸಾಧ್ಯವಾಗಿರಬಹುದು.

ಆದರೆ ಪ್ರಾಚೀನ ಪ್ರಭುತ್ವಗಳನ್ನು ನಿರಾಕರಿಸುತ್ತಲೇ ಹತ್ತಿರದ ರಾಜನನ್ನು ಹಾಡಿ ಹೊಗಳುತ್ತಾರೆ. ಬಹುಶಃ ಬಿ.ಎಂ.ಶ್ರೀ ಯವರಿಗೆ ಈ ಆಧುನಿಕ ರಾಜರ ನಿರ್ಮಾಣ ಕೆಲಸಗಳು ಅಣೆಕಟ್ಟುಗಳು, ವಿಶ್ವವಿದ್ಯಾಲಯ, ಕಾರ್ಖಾನೆಗಳು, ಪ್ರಜಾನಿಧಿಸ್ಥಾಪನೆ, ಶೂದ್ರಪರ ನಿಲುವುಗಳು ಮುಖ್ಯವಾಗಿರುವ ಸಾಧ್ಯತೆಗಳಿವೆ. ಬ್ರಿಟಿಷ್ ಪ್ರಭುತ್ವಕ್ಕೆ ಸಾಮಂತರಂತಿದ್ದ ಮೈಸೂರರಸರ ಈ ಕಲ್ಯಾಣ ಕೆಲಸಗಳು, ಜನರನ್ನು ದಮನಿಸಿದ, ಪ್ರತಿಭಟಿಸಿದವರ ಮೇಲೆ 'ಗೋಲಿಬಾರ್' ನಡೆಸಿ ಹತ್ಯೆಗೈದ ಕ್ರೌರ್ಯವನ್ನು ನಗಣ್ಯಗೊಳಿಸಿರಬೇಕು. ಎ.ಎನ್.ಮೂರ್ತಿರಾಯರು ಗುರುತಿಸಿರುವಂತೆ "ಹಳೆಯ ಕಾಲದ ಫ್ಯೂಡಲ್ ಎಳೆಯೊಂದು ಬಲವಾಗಿಯೇ ಇತ್ತು"[2] ಎಂಬ ಹೇಳಿಕೆ ಸರಿಯಾಗಿಯೇ ತೋರುತ್ತದೆ.

ರಾಜನನ್ನು ಮುಂದೆ ಇಟ್ಟುಕೊಂಡು ಸಾಹಿತ್ಯ ಸೃಷ್ಟಿಸುತ್ತಿದ್ದ ಬಿ.ಎಂ.ಶ್ರೀಯವರು ಆಧುನಿಕ ಪ್ರಭುತ್ವದಲ್ಲಿ ಏಕಲವ್ಯ ಮತ್ತು ಅಶ್ವತ್ಥಾಮರ ಸ್ನೇಹ ಮತ್ತು ಇಬ್ಬರ ದುರಂತದ ಪ್ರತಿಪಾದನೆ ಕುತೂಹಲಕರವೆನ್ನಿಸುತ್ತದೆ. ಬೇಡರ ಹುಡುಗ ಏಕಲವ್ಯ ಮತ್ತು ಪ್ರಭುತ್ವಗಳಿಗೆ ಮಹಾಗುರುವಾದ ದ್ರೋಣಾಚಾರ್ಯರ ಮಗ ಅಶ್ವತ್ಥಾಮ ಇಬ್ಬರೂ ಒಂದಿಲ್ಲೊಂದು ರೀತಿ ಪ್ರಭುತ್ವದ ಅಸಡ್ಡೆಗೆ ಒಳಗಾದವರೆ. ಪ್ರತಿಭಾವಂತರ ಕುರಿತಾದ ಅಸಡ್ಡೆ ತಂದೊಡ್ಡುವ ದುರಂತವೂ ಈ ಕಥಾನಕದ ಮುಖ್ಯಭಾಗವೇ ಆಗಿದೆ. ಮತ್ತು ಸಾಮಾಜಿಕ ಅಸಮಾನತೆಯ ಕುರಿತಂತೆ ಕ್ರೋಧವೊಂದು ಥಟ್ಟನೆ ಉರಿಯಲಾರಂಭಿಸುತ್ತದೆ. ವಚನ ಚಳುವಳಿಯ ನಂತರ ಅಲ್ಲಲ್ಲಿ ಮಿನುಗಿ ಮಾಯವಾಗಿದ್ದ ಈ ಸಿಟ್ಟು ಆಧುನಿಕ ಸಂದರ್ಭದಲ್ಲಿ 'ಸಿದ್ಧಾಂತ'ದ ಸ್ವರೂಪ ಪಡೆದುಕೊಂಡದ್ದು ಕಾಣುತ್ತದೆ. ಕುವೆಂಪು ಮುಂತಾದವರು ಅದನ್ನು ತಮ್ಮ ಸಾಹಿತ್ಯದ ಮುಖ್ಯ ದ್ರವ್ಯವನ್ನಾಗಿಸಿಕೊಂಡಿದ್ದಾರೆ.

ಹಾಗಾಗಿಯೇ ಬಿ.ಎಂ.ಶ್ರೀಯವರು 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' ಎಂದು ಮಾಡಿರುವ ಭಾಷಣದಲ್ಲಿ ಮೇಲಿನ ಮಾತುಗಳು ಆಧುನಿಕ ಸಂದರ್ಭಕ್ಕೆ ಅನ್ವಯವಾಗಿ ನಿಲ್ಲುವುದು. ಅತ್ಯಂತ ಸಾಮಾನ್ಯವಾದ ಕುರಿಕಾಯುವ ಹುಡುಗಿ, ಕಾರಿ ಹೆಗ್ಗಡೆಯ ಮಗಳು, ದೇಶಕ್ಕಾಗಿ ಪ್ರಾಣ ಕೊಡುವ ಸೈನಿಕರು, ಯುದ್ಧದ ಅಮಾನವೀಯತೆ ಮುಂತಾದ ವಸ್ತುಗಳನ್ನೊಳಗೊಂಡ ಇಂಗ್ಲಿಷ್ ಕವಿತೆಗಳ ಮಾದರಿಗಳನ್ನು ತಮ್ಮ ಅನುವಾದಗಳಲ್ಲಿ ಬಿ.ಎಂ.ಶ್ರೀಯವರು ತರುತ್ತಾರೆ. ಚರಿತ್ರೆಯ ಪುಸ್ತಕಗಳಲ್ಲಿ ಕಾಣೆಯಾಗುವ ವಿವರಗಳೆಲ್ಲ ಕನ್ನಡ ಸಾಹಿತ್ಯ ಸಂಸ್ಕೃತಿ ಚಿಂತನೆಗಳಲ್ಲಿ ರೂಪುಪಡೆಯಲಾರಂಭಿಸುತ್ತವೆ.

ತಮ್ಮ ಮುಂದೆ ಇರುವ ಅರಸರ ಉದ್ದೇಶವೂ ಇದೇ ಥರದ್ದೆಂದು ಬಿ.ಎಂ.ಶ್ರೀ ಅರ್ಥೈಸಿಕೊಂಡಿರುವಂತಿದೆ. ಹಾಗಾಗಿ ಈ ರಾಜರುಗಳನ್ನು ಉದಾತ್ತ ಪಾತ್ರಗಳಾಗಿಸಿ ಚಿತ್ರಿಸಲು ಅವರು ಪ್ರಾರಂಭಿಸುತ್ತಾರೆ. ಅಲ್ಲದೆ ಬಿ.ಎಂ.ಶ್ರೀಯವರಿಗೆ ಇಂಗ್ಲೆಂಡ್ ಮಾದರಿಯ ಪ್ರಭುತ್ವದ ಕಲ್ಪನೆ ತಾನು ಆಶಿಸುತ್ತಿರುವ ರಾಷ್ಟ್ರಕ್ಕೂ ಅನ್ವಯಿಸುತ್ತಿರುವಂತೆ ಕಾಣುತ್ತದೆ. ಪರಂಪರೆಯ ಪ್ರಜ್ಞೆಯ ಭಾಗವಾಗಿ ರಾಜನನ್ನು ಉಳಿಸಿಕೊಂಡು ಆಧುನಿಕ ರಾಜಕೀಯ ಸಿದ್ಧಾಂತವಾದ ಪ್ರಜಾಪ್ರಭುತ್ವವನ್ನು ನಿರ್ಮಿಸುವ 'ಫೆಡರಲ್' ಆದ ಆಶಯವೂ ಅವರಿಗೆ ಇದ್ದಿರಬೇಕೆನಿಸುತ್ತದೆ.

ವಸಾಹತುವಾದವನ್ನು ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ಗ್ರಹಿಸಿದ್ದ ಕಾರಣಕ್ಕಾಗಿ ಅದರ ವ್ಯಾಪಾರೀ ಉದ್ದೇಶಗಳು, ಆಕ್ರಮಣಕಾರೀ ಧೋರಣೆಗಳು ಅದಕ್ಕಾಗಿ ಸಮುದಾಯಗಳ ನಡುವೆ ಹುಟ್ಟಿಸುತ್ತಿದ್ದ ಅಪನಂಬಿಕೆಗಳು ಬಿ.ಎಂ.ಶ್ರೀಯವರಿಗೆ ಮುಖ್ಯವೆನ್ನಿಸಿಯೇ ಇಲ್ಲದಿರುವುದು ಆಶ್ಚರ್ಯ ಹುಟ್ಟಿಸುತ್ತದೆ. ಹೀಗೆ ಕನ್ನಡ ಚರಿತ್ರಕಾರರು ಶತ್ರುಗಳ ಪಟ್ಟಿಯಲ್ಲಿ ಸಿಲ್ಲಿಸಿರುವವರಿಂದಲೂ ತಮಗೆ ಬೇಕಾದ್ದನ್ನು, ಮಾನವೀಯವಾದದ್ದನ್ನು ಆರಿಸಿಕೊಳ್ಳುವುದರ ಜೊತೆಗೆ ವೇದ, ಉಪನಿಷತ್ತುಗಳಲ್ಲಿನ ಉದಾರವಾದಿ ಮತ್ತು ಮಾನವತಾವಾದಿ ಆಶಯಗಳನ್ನು ಆರಿಸಿ ಜೋಡಿಸುವ ಕ್ರಮವೊಂದು ಬಿ.ಎಂ.ಶ್ರೀಯವರಲ್ಲಿ ಕಾಣಿಸುತ್ತದೆ. ಹೊಸನಾಡನ್ನು ಕಟ್ಟಬೇಕಾದ್ದು ಹೀಗೆಯೇ ಎಂಬ ಅರಿವಿನಿಂದ ಹೊರಡುತ್ತಾರೆ. ವಿಶ್ವಮಾನವತೆಯ ಜೊತೆಗೆ ಮನುಕುಲದ ಸಂಕಟಗಳೆಲ್ಲವೂ ನಮ್ಮ ಸಂಕಟಗಳು ಎಂದು ತೀವ್ರವಾಗಿ ಭಾವಿಸಿದ ಕಾರಣಕ್ಕಾಗಿಯೇ 'ಭ್ರಾತೃಧರ್ಮದ ಧೀರ ಮುಸ್ಲಿಮ ಕುಳ' ಎಂಬಂತಹ ಮಾತುಗಳನ್ನು ಬರೆಯಲು ಅವರಿಗೆ ಸಾಧ್ಯವಾಯಿತು. ಈ ಕಾರಣಕ್ಕಾಗಿಯೇ ಇಂದು ನಿಂತು ನಾವು ಪರಂಪರೆಯ ಕಡೆಗೆ ದೃಷ್ಟಿ ಹರಿಸಿದಾಗ ಬಿ.ಎಂ.ಶ್ರೀಯವರು ತಮ್ಮ ಸಮಕಾಲೀನರೆಲ್ಲರಿಗಿಂತ ತುಂಬ ಎತ್ತರದಲ್ಲಿ ನಿಂತಿದ್ದಾರೆನ್ನಿಸುತ್ತದೆ.

ಕುತೂಹಲಕ್ಕಾಗಿ ಈ ಸಂದರ್ಭದಲ್ಲಿ ಅವರ ಆ ಎರಡು ಕವಿತೆಗಳನ್ನು ಪರಿಶೀಲಿಸಬಹುದು. 'ಕನ್ನಡದ ಬಾವುಟ, ಹೆಸರಲ್ಲಿ ೧೯೩೮ರಲ್ಲಿ ಬರೆದ ಕವಿತೆಯಿದು :

"ಮೌರ್‌ಯ ಕಳಚುರ್‌ಯರು, ಗಂಗರು, ಕದಂಬರು,
ರಟ್‌ಟರು ಚಳುಕ್‌ಯರು, ಹೊಯ್‌ಸಳರು, ಯೀದವರು,
ಇಳೆಗೆ ಮೇಲೀದವರು, ಬೀಣರು, ಜೀಣರು,
ಕೊಲೆಯ ಕೀಳ್‌ಕಿಚ್‌ಚಿಂಗೆ ತಂಪುಮಳೆ ತಳಿದು,
ಚೆಲುವು ನೆಲ ಸೀಲುತ್‌ತು, ಕಲೆಯ ಹೊಂಬೆಳೆಯಿಟ್‌ಟು,
ನಗಿಸಿದರು ನೀಡನು, ಕಡಿದು ಕಗ್‌ಗೇಡನು
ಮೀನವನ ದೇವತೆಗೆ ತಂ ಜಿನ ಭಕ್‌ತರು,
ಹಂಪೆಯ ವಿರೂಪೀಕ್‌ಷ ಪುತ್‌ರರು, ವಿರಕ್‌ತರು,
ವೀರ ನೀರೆಯಣನ ಕೃತಿಯೊಳೀಸಕತರು,
ಶ್‌ರೀಗೌರಿ ಕೀವಲಿಹ ರೀಯರನುರಕ್‌ತರು,

ನಮ್‌ಮ ತೇಯ ಮಕ್‌ಕಳು
ಬೀಳ ಬೆಳದಿಂಗಳಲಿ ಒಲಿದು ನಲಿದವರು
ಬೇವೋ ಬೆಲ್‌ಲವೊ ಬರಲಿ, ಮಲ್‌ಲಿಗೆಯೊ ಮುಳ್‌ಳೊ,
ಬನ ಬೆಳಕಿನಲಿ ಮನದಳುಕಿನಲಿ
ಚೆನ್‌ನು ಬದುಕನು ಕುಣಿಸಿ ಒಲಿದು ನಲಿದವರು
ನಮ್‌ಮ ತೇಯಣುಗರು
ಪಂಪನೋ, ರನ್‌ನನೋ, ಬಸವನೋ, ಮೇಧವನೊ
ಅಕ್‌ಕಮಹದೇವಿ, ನೇರಣಪ, ಚಿಕದೇವ,
ಜಕ್‌ಕಣ, ಹೊನ್‌ನಮ್‌ಮರು, ನಮ್‌ಮಮನೆಳೆಯರು
ಚೆಲುವ, ಚೆಲುವೆಯರು ಚಿನ್‌ನದ ಚಿಣ್‌ಣರು,
ಕಲಿಗಳು, ಕಪಿಗಳು, ಗಂಡರು, ಮೊಂಡರು
ನಲಿದೊಲಿದು ಚಚ್‌ಚೊಂದು, ನೆಚ್‌ಚಿಂಗೆ, ಮೆಚ್‌ಚಿಂಗೆ,
ಕಿಚ್‌ಚಿನಲಿ, ಹೇಯ್‌ದು ನಲ್‌ಲನ ಹಿಡಿದ ಹೆಂಡಿರು
ಸತಿಗಳು, ಯತಿಗಳು, ರತಿಗಳು,ಕೃತಿಗಳು
ಕನ್‌ನಡದ ಬೀವುಟವ ಹಿಡಿಯದವರೇರು
ಕನ್‌ನಡದ ಬೀವುಟಕೆ ಮಡಿಯದವರೇರು
ನಮ್‌ಮ ಈ ಬೀವುಟಕೆ ಮಿಡಿಯದವರೇರು”[೬]

ಇದು ಒತ್ತಕ್ಷರ ಮತ್ತು ದೀರ್ಘಾಕ್ಷರಗಳಿಲ್ಲದ ಭಾಷೆಯನ್ನು ಬರವಣಿಗೆಯಲ್ಲಿ ಪ್ರಯೋಗಿಸಿದ ಅಪರೂಪದ ಪದ್ಯಗಳಲ್ಲೊಂದು. ಇದು ಇಂಗ್ಲಿಷ್ ಭಾಷೆಯನ್ನಾಧರಿಸಿ ರೂಪಿಸಿದ ಮಾದರಿಯಂತಿದೆ. ಕಾವ್ಯದೃಷ್ಟಿಯಿಂದ ನೋಡಿದರೆ ನವ್ಯ ವಿಮರ್ಶಕರು ಕ್ಲೀಷೆಯೆಂದು ಕರೆಯಬಹುದಾದ ಶೈಲಿಯಲ್ಲಿದೆ. ಶೈಲಿಯನ್ನು ಬಿಟ್ಟು ಉಳಿದಂತೆ ಯಾರೂ ಕೂಡಾ ಈ ಪದ್ಯ ಕುರಿತು ಹೆಚ್ಚು ತಲೆಕೆಡಿಸಿಕೊಂಡಂತಿಲ್ಲ. ಆದರೆ ಸಣ್ಣ ಸಂಗತಿಗಳಾದರೂ ಆಧುನಿಕ ರಾಷ್ಟ್ರೀಯತೆಯನ್ನು ಕಟ್ಟುವ ಸಂದರ್ಭದಲ್ಲಿ ಎಷ್ಟೊಂದು ಮುಖ್ಯ ಅಂಶಗಳಾಗಿ ಬಿಡುತ್ತವೆಂಬುದು ಈ ಪದ್ಯವನ್ನು ಗಮನಿಸಿದಾಗ ಅರ್ಥವಾಗುತ್ತದೆ.

ನಾಡನ್ನು ಕುರಿತಂತೆ ಗೀತೆಗಳನ್ನು ರಚಿಸಿದ ಎಲ್ಲ ಕನ್ನಡದ ಕವಿಗಳಂತೆ ಮೌರ್ಯ, ಕಳಚೂರ್ಯ, ಗಂಗ, ಕದಂಬರಿಂದಲೇ ಆರಂಭವಾಗುತ್ತವೆ. ಪ್ರಭುತ್ವಗಳ, ಕಪಿಗಳ, ಧಾರ್ಮಿಕರ ವೃತ್ತಾಂತಗಳು ಕ್ಲೀಷೆ ಎನಿಸುವಷ್ಟರ ಮಟ್ಟಿಗೆ ಬಳಕೆಯಾಗುತ್ತವೆ.ನಾಡು ನುಡಿಗಳ ಕಥನಗಳೆಂದರೆ ರಾಜರ ಮತ್ತು ಆಚಾರ್ಯರುಗಳ ಕಥನಗಳೇ ಎನ್ನಿಸುವಷ್ಟರ ಮಟ್ಟಿಗೆ ಬಳಕೆಯಾಗಿವೆ. ಕನ್ನಡದ ಬಹುಪಾಲು ನಾಡು ನುಡಿ ಕುರಿತಾದ ಕವಿತೆಗಳು ಅಲ್ಲಿಗೇ ನಿಂತುಬಿಡುತ್ತವೆ. ಆದರೆ ಬಿ.ಎಂ.ಶ್ರೀಕಂಠಯ್ಯನವರು ಆಧುನಿಕ ಕಾಲಘಟ್ಟದಲ್ಲಿ ಚೆಲುವೆಯರು, ಚಿನ್ನದ ಚಿಣ್ಣರು, ಕಲಿಗಳು, ಕಿಡಿಗಳು, ಗಂಡರು, ಮೊಂಡರು, ಸರ್ವಜ್ಞ ಪ್ರತಿಪಾದಿಸುವ ಹೆಂಡಿರು, ಸತಿಗಳು ಯತಿಗಳು, ವ್ರತಿಗಳು, ಕೃತಿಗಳು ಕನ್ನಡ ಬಾವುಟವನ್ನು ಹಿಡಿದಿದ್ದಾರೆ, ಮಡಿದಿದ್ದಾರೆ, ಮಿಡಿದಿದ್ದಾರೆ.

ಚರಿತ್ರೆಯ ಚಲನಾತ್ಮಕತೆಯಲ್ಲಿ ನಂಬಿಕೆಯಿಟ್ಟ ರಾಜಕೀಯ ಎಚ್ಚರದ ಮನಸ್ಸುಗಳು ಮಾತ್ರ ಕಟ್ಟಬಹುದಾದ ನಿಲುವು ಇದು. ಆದರೆ ಇಲ್ಲೂ ಕೂಡ ಶಾತವಾಹನರಾಗಲಿ, ಹೈದರ್, ಟಿಪ್ಪುಗಳಾಗಲಿ, ಮಾಯವಾಗಿ ಬಿಡುತ್ತಾರೆ ಯಾಕೆ ಎಂಬ ಪ್ರಶ್ನೆ ಉಳಿದೇ ಉಳಿಯುತ್ತದೆ.

ಆಧುನಿಕ ಸಂದರ್ಭದಲ್ಲಿ ನಾಡನ್ನು ಮುನ್ನಡೆಸುವವರು ಸಾಮಾನ್ಯ ಜನರು ಎಂಬ ಸ್ಪಷ್ಟವಾದ ಗ್ರಹಿಕೆಯನ್ನು ೧೯೩೮ರ ಹೊತ್ತಿಗೆ ಬಿ.ಎಂ.ಶ್ರೀ ತಳೆದಂತೆ ತೋರುತ್ತದೆ. ೧೯೧೧ರ ಹೊತ್ತಿಗೆ ಕಾವ್ಯದಲ್ಲಿ ಸಾಮಾನ್ಯರ ಪಾತ್ರಗಳನ್ನು ತಂದ ಬಿ.ಎಂ.ಶ್ರೀಯವರಿಗೆ ಈ ವಿಚಾರ ಹೊಸದಲ್ಲವಾದರೂ ನಾಡಗೀತೆಗಳಲ್ಲಿ ಬೇರೆ ಯಾವ ಕವಿಗಳೂ ಗುರುತಿಸದ, ನಾಡಗೀತೆಯಲ್ಲಿ ಕನ್ನಡಾಂಬೆಯನ್ನು ಅಂಬಾರಿಯ ಮೇಲೆ ಇಟ್ಟು ಹಾಡುವ ಕವಿಗಳಿಗಿಂತ, ಬಿ.ಎಂ.ಶ್ರೀ ದುಡಿಯುವರ ಮಧ್ಯೆ ತಂದು ನಿಲ್ಲಿಸಿಬಿಡುತ್ತಾರೆ. ಇದರ ಹಿಂದೆ ಇಂಗ್ಲಿಷ್ ಕವಿಗಳ ದೇಶಭಕ್ತಿ ಗೀತೆಗಳ ಪ್ರಭಾವವೂ ಇದ್ದಿರಬಹುದು.

ಎರಡನೆಯ ಕವಿತೆ, 'ಕನ್ನಡ ತಾಯನೋಟ' ಹೆಸರಿನಲ್ಲಿ ೧೯೩೬ರಲ್ಲಿ ವಿಜಯನಗರ ಸಾಮ್ರಾಜ್ಯದ ಆರುನೂರು ವರ್ಷಗಳ ಹಬ್ಬದಲ್ಲಿ ರಚಿಸಿದ ಕವಿತೆ ಇದು.

ಕವಿತೆಯಲ್ಲಿ ನಾಯಕ ಕನ್ನಡ ನಾಡನ್ನೆಲ್ಲ ಸುತ್ತಿ ಬರುತ್ತಾನೆ. ಕೊನೆಗೆ

"ಇದೋ ಬಂದೆನೀ ಹಾಳು ಹಂಪೆಗಿಂದರಸುತ್ತ ಒಳಗಿರ್ಪುದಿನ್ನು ಒಳಗಿದ್ದು ಹೊರಗಣ್ಗೆ ಕಾಣಿಪುದು ಮತ್ತೊಮ್ಮೆ ಆ ತಾಯ ನೋಟಂ. ತುಂಗಭದ್ರೆಯ ತಡಿಯ ಚೆದರಿರುವ ಮೊರಡಿಗಳ ಕೊರಕಲಿನ ಬಿಸಿಲ ಬೇಗುದಿಯ ಬಿರುಕಿನಲಿ ಮುಳ್ಳೆಡೆಯ ಕಲ್ಲು ಹೂವಿಡಿದರೆಯ ಮೇಲೆ ಕುಳಿತಿದ್ದಳಾ ತಾಯಿ, ಕೈಮೇಲೆ ತಲೆಯೂರಿ, ಅಳಲಿನಾಳದಲೀ "ಯಾರವ್ವ ನೀತಾಯಿ? ಏತಕಿಂತೊಬ್ಬಳೇ ಕುಳಿತೆ ಕಾಡಿನಲಿ? ಏಕೆ ಮೊಗ ಬಾಡಿಹುದು, ಕಂದಿಹುದು, ನೊಂದಿಹುದು, ಕಾಂತಿಗುಂದಿಹುದು?" ಕಂಬನಿಗಳೂರುತಿಹ, ಕಳವಳದ, ಕೂರ್ಮೆ ನಡುಗುತ ನುಡಿಯಕೇಳಿ. ಕತ್ತೆತ್ತಿ, ಪಳಮೆಯಾಳದ ಕಣ್ಣನೆನ್ನ ಕಣ್ಣಲಿ ನೆಟ್ಟು, ಕಯ್ಯಕುಳ್ಳಿರಲು ಸನ್ನೆಗೈದೀ ಪರಿಯೊಳಾಡಿದಳು, ತೋಡಿದಳು ತೊಳಲ ಕಣ್ಣಾರ ಕಂಡುದನು, ತಾಯೆನ್ನೊಳಾಡಿದುದನಾಡುವೆನು, ಕೇಳಿ,

> ಕಿವಿಗೊಟ್ಟು ಕೇಳಿ
> ಎದೆಗೊಟ್ಟು ಕೇಳಿ
> ಏಳಿ, ಎಚ್ಚರವಾಗಿ, ಅರಳಿ ಬಾಳಿ!

ಕೇಳಣ್ಣ, ನಾನೊಬ್ಬ ಹಳೆಯ ಮುತ್ತೈದೆ ಹಿರಿದಾಗಿ ಬಾಳಿದವಳೊಮ್ಮೆ, ಈಗ ಬಡತನ, ಬಡವೆ, ಬಡವಾದೆ ಬಡವಾದ ಮಕ್ಕಳನು ನೋಡಿ, ಬತ್ತಿ, ಮತ್ತಿಮ್ಮಡಿಯ ನೊರಗಿನಲಿ ಬಡವಾದೆ -ಸಾವಿಲ್ಲ ನನಗೆ! ಸಾವಿಲ್ಲ -ಸಾಯುತಿಹೆ: ಹೊಸ ಮಳೆಗಳಾಗಿ, ನೆಲಹೊಸಹೊನಲು ಹರಿದು, ಹೊಸ ಹಮ್ಮು ಹಮ್ಮುತ್ತ, ಎಲ್ಲರೂ ನನ್ನಕ್ಕತಂಗಿಯರು ಚಿಗುರಿ ಎಲ್ಲರೂ ಚೆಲುವಾದರೆಲ್ಲರೂ ಚಿನ್ನವಾದರೂ-ನೋಡು, ನೋಡು ಅಕಡೆಗೆ, ಈ ಕಡೆಗೆ ತೂಗುವರು ತೊನೆಯುವರು, ಆ ಬಿಂಕ!

> ಪೇರೊಕ್ಕಲಾಗಿ ಪಾಡುವರು;
> ಅವರ ಮಕ್ಕಳು ಬೆಳೆದು ಕಳೆಗೂಡಿ ಮನೆಬೆಳಗಿ ಹಬ್ಬ ಮಾಡುವರು

ಪಾಪ ಮೊದಲು ಬದುಕಿ,
ತಾಯ್ ಮೊದಲು ಬದುಕಿ

ಹೆರರ ಹೊರೆಗಳ ನಿಳಿಸೆ, ಹೆರರ ಸೆರೆಗಳ ಬಿಡಿಸೆ, ಕಯ್ಯ ನೀಡುವರು, ಆ ಸಯ್ಪು, ಆ ಪುಣ್ಯ, ನನಗಿಲ್ಲ; ನನ್ನ ಮಕ್ಕಳಿಗಿಲ್ಲ ಹಬ್ಬ

ನನ್ನ ಮಕ್ಕಳಿಗಿಲ್ಲ ಹಬ್ಬ
ಮಳೆ, ಸುಗ್ಗಿ, ಬೆಳೆ, ಬೆಳಕು; ಹಾಡು, ಹಸೆ; ಕೂಗಾಟ, ಕುಣಿದಾಟ, ತಾಪ;
ಒಲೆದಾಟ, ನಲಿದಾಟ, ಒಲುಮೆ ಚೀರಾಟ,
ನನ್ನ ಮಕ್ಕಳಿಗಿಲ್ಲ ನನಗಿಲ್ಲ ಬಾಳ್ಗೆ ಆ ಅಕ್ಕತಂಗಿಯರು!
ನಮಗಿಲ್ಲ ಬಾಳು
ಎಲ್ಲರೂ ಬಾಳುವೆಡೆ ನಮಗೆ ಸಾವೇ?
ಎಲ್ಲರೂ ನಲಿವ ಕಡೆ ನಮಗೆ ನೋವೆ?
ಏನು ಕವಿಯಿತೋ ಮಂಕು, ಮಕ್ಕಳಿಗೆ ಯಾರೆರಚಿದರೊ ಬೂದಿ, ಕಾಣೆ,
ನನ್ನನೊಲ್ಲರು ನನ್ನ ಮಕ್ಕಳೇ! ತಾವು ಬಾಳಿ ತನ್ನ ಬಾಳಿಸರು.
ಹೆರರ ನುಡಿ, ಹೆರರನಡೆ, ಹೆರರ ಕೂಗೇ ಕೂಗು ಹೆರರದೇ ಹೆಮ್ಮೆ!
ನನ್ನ ಮನೆ ಹಾಳು
ನನ್ನ ನುಡಿ ಬೀಳು

ನನ್ನ ನಾಡಿನಲಿರುಳು; ನನ್ನ ತೋಟವನಗೆವ, ತೆಂಗಡಕೆಯಿಡುವ, ತಾವರೆಯ ಕಾಪಿಡುವ, ಮೊಲ್ಲೆ, ಮಲ್ಲಿಗೆ ನೆಡುವ, ಆನಂದ ಕೊಡುವ ಮಕ್ಕಳೆಲ್ಲಿ ಹರೆನಗೆ ಹೆರರೊತ್ತೆ ಗಡಿಬಿಡುತ ಹದುಗುತ್ತ, ನುಗ್ಗೆ ಕುಗ್ಗುತ್ತ, ಹೆರರ ಕೈ ಕಾಯುತ್ತ, ಸಾಯದೆಯೆ ಬದುಕದೆಯೆ ಬಾಳ ನೂಕುವೆನು."[೯]

ಬಿ.ಎಂ.ಶ್ರೀಯವರ ಕವಿತೆಗಳಲ್ಲಿಯೇ ಸ್ವಲ್ಪ ಹೊಸ ಧಾಟಿಯ ಕವಿತೆ ಇದು. ನಿರಂತರವಾಗಿ ಆರಂಭದಿಂದಲೂ ಸಮನ್ವಯದ ಮತ್ತು ಸಂಕರಶೀಲತೆಯನ್ನು ಬಿ.ಎಂ.ಶ್ರೀಯವರು ಆಧುನಿಕ ರಾಷ್ಟ್ರಕ್ಕೆ ಅಗತ್ಯವಾದ ಮೌಲ್ಯ ಎನ್ನುವಂತೆ ಪ್ರತಿಪಾದಿಸುತ್ತ ಬಂದವರು. ಈ ಪದ್ಯದಲ್ಲಿ ಕವಿಯೇ ಸ್ವತಃ ಕನ್ನಡ ನಾಡನ್ನು ಸುತ್ತಿ, ಸಹ್ಯಾದ್ರಿ ಪರ್ವತಗಳನ್ನು ದಾಟಿ ಹಂಪಿಗೆ ಬರುತ್ತಾರೆ. ಕನ್ನಡ ತಾಯಿ ದಯನೀಯ ಅವಸ್ಥೆಯಲ್ಲಿ ಹಾಳು ಹಂಪೆಯಲ್ಲಿ ಕುಳಿತು ಈ ಮೇಲಿನ ಮಾತುಗಳನ್ನಾಡುತ್ತಾಳೆ. ಬಿ.ಎಂ.ಶ್ರೀಯವರ ಕವಿತೆಗಳಲ್ಲಿ ಅಪರೂಪಕ್ಕೆ ಕಾಣಿಸುವ 'ಗತ'ವನ್ನು ಕುರಿತಾದ ಹಳಹಳಿಕೆ ಇಲ್ಲಿರುವಂತಿದೆ. ಸಂವಾದ ಮಾದರಿಯಲ್ಲಿರುವ ಈ ಕವಿತೆಗೆ ವಿಷಾದವೂ ಮುಖ್ಯ ಸ್ವರೂಪವಾಗಿದೆ. ಒಂದೊಮ್ಮೆ ಸಿರಿವಂತಿಕೆಯಲ್ಲಿ ಮೆರೆದ ತಾನು ಈಗ ದಟ್ಟದಾರಿದ್ರ್ಯದಲ್ಲಿ ಅಸಹಾಯಕತೆಯಿಂದ ನರಳುತ್ತಿದ್ದೇನೆ. ಆದರೆ ತನ್ನ ಅಕ್ಕ ತಂಗಿಯರೆಲ್ಲರೂ ಸುಖವಾಗಿದ್ದಾರೆ ಎಂಬುದೇ ವಿಷಾದ. ಉದಾರ ಮಾನವತಾವಾದಿಯಾಗಿದ್ದ ಬಿ.ಎಂ.ಶ್ರೀಯವರ ಈ ಕವಿತೆ ತನ್ನ ಕಾಲದ ಅನೇಕ ಅಪಾಯಕಾರಿ ಆಯಾಮಗಳನ್ನು ಮೀರಲು ಯತ್ನಿಸಿದೆ.

ವಿಜಯ ನಗರ ಎಂದ ಕೂಡಲೇ ಅನೇಕ ಚಿಂತಕರು ಗದ್ಗದಿತರಾಗುವುದರ ಜೊತೆಗೆ ಇಸ್ಲಾಂ ಪ್ರಭುತ್ವಗಳ ಕುರಿತಂತೆ ಆಕ್ರೋಶಭರಿತರಾಗುತ್ತಿದ್ದರು. ಆದರೆ ಬಿ.ಎಂ.ಶ್ರೀಯವರು ಆ ಅವಸ್ಥೆಗೆ ತಲುಪುವುದೇ ಇಲ್ಲ. ನಮ್ಮ ಸ್ಥಿತಿಗೆ ನಾವೇ ಕಾರಣ, ಅದನ್ನು ನಾವೇ ಸರಿಪಡಿಸಿಕೊಳ್ಳಬೇಕು ಎನ್ನುವ ಧಾಟಿ ಇಲ್ಲಿ ಪ್ರಧಾನವಾದುದು. ಅಕ್ಕ ಪಕ್ಕದ ರಾಷ್ಟ್ರೀಯತೆಗಳನ್ನು 'ಸೋದರಿ' ಎನ್ನುವ ಪರಿಭಾಷೆಯಲ್ಲಿ ವ್ಯಾಖ್ಯಾನಿಸುವುದೂ ಇಲ್ಲಿನ ವೈಶಿಷ್ಟ್ಯಗಳಲ್ಲೊಂದು. ಈ ಕವಿತೆಯ ಮತ್ತೊಂದು ವಿಶಿಷ್ಟತೆಯೆಂದರೆ ಪರರು ತನ್ನ ಸದ್ಯದ ದುಃಖಕ್ಕೆ ಕಾರಣ ಎಂಬ ವಿವರ ನೇರವಾಗಿ ವಸಾಹತು ಆಡಳಿತವನ್ನು ಕುರಿತದ್ದು. ಅಕ್ಕ ತಂಗಿಯರ ಮಕ್ಕಳು ಆ ಹೆರರ ಕಪಿಮುಷ್ಟಿಯಿಂದ ತಮ್ಮ ತಾಯಂದಿರನ್ನು ಪಾರು ಮಾಡಲು ಪ್ರಯತ್ನಿಸುತ್ತಿದ್ದರೆ, ತನ್ನ ಮಕ್ಕಳು ಹೆರರನ್ನು ಓಲೈಸುತ್ತಿದ್ದಾರೆಂಬಂತೆ ಬ್ರಿಟಿಷ್ ಪ್ರಭುತ್ವದ ನೇರ ಆಳ್ವಿಕೆಗೆ ಒಳಪಡದ ಪ್ರಾಂತವೊಂದರಲ್ಲಿರುವ ಬಿ.ಎಂ.ಶ್ರೀ ಈ ಮೇಲಿನ  ಮಾತನಾಡುತ್ತಿದ್ದಾರೆ. ವಸಾಹತು ಪ್ರಭುತ್ವದ ಕುರಿತಂತೆ ಬಿ.ಎಂ.ಶ್ರೀ ಅವಿಮರ್ಶಾತ್ಮಕ ನಿಲುವು ಹೊಂದಿದ್ದರು ಎನ್ನುವ ಟೀಕೆಗಳ ಮಧ್ಯೆಯೆ ಇರುವ ಅಪರೂಪದ ಕವಿತೆಯಿದು. ಬಲಪಂಥೀಯ ಚಿಂತಕರ ಕೈಯಲ್ಲಿ ದ್ವೇಷದ ಕೆಂಡದಲ್ಲಿ ಮುಳುಗಿಸುತ್ತಿದ್ದ ವಸ್ತುವೊಂದನ್ನು ಬಿ.ಎಂ.ಶ್ರೀ ನಿರ್ವಹಿಸುವ ರೀತಿಯನ್ನು ಅವರ ಉಳಿದ ಚಿಂತನೆಗಳಿಗೂ ಅನ್ವಯಿಸಿ ನೋಡಲು ಸಾಧ್ಯವಿದೆ.

### ೪.೪ ಚರಿತ್ರೆ ಕುರಿತಂತೆ ಶಂಬಾ ಜೋಶಿಯವರ ಚಿಂತನೆಗಳು

ವೃತ್ತಿಯಲ್ಲಿ ಶಿಕ್ಷಕರಾಗಿದ್ದುಕೊಂಡು ಪ್ರೌಢಶಾಲೆಯ ಮಕ್ಕಳಿಗೆ ವಿಜ್ಞಾನ ಮುಂತಾದ ವಿಷಯಗಳನ್ನು ಬೋಧಿಸುತ್ತಿದ್ದ ಶಂಬಾ ಜೋಶಿಯವರು, ಬ್ರಿಟಿಷರ ವಿರುದ್ಧ ಸೊಲ್ಲೆತ್ತಿ ಸೆರೆಮನೆಗೂ ಹೋಗಿ ಬಂದವರು. ಆಲೂರರಂತೆ ಶಂಬಾ ಜೋಶಿಯವರೂ ಕೂಡ ಪುಣೆಯ ವಾತಾವರಣದಲ್ಲಿ - ಆಲೂರರು ಫರ್ಗ್ಯೂಸನ್ ಕಾಲೇಜಿನಲ್ಲಿ, ಶಂಬಾ ಡೆಕ್ಕನ್ ಕಾಲೇಜಿನಲ್ಲಿ - ದೇಶ ಭಕ್ತರ ನಡುವೆ ಕಲಿತವರು, ಸಾಂಪ್ರದಾಯಿಕ ಚಿತ್ಪಾವನ ಬ್ರಾಹ್ಮಣ ಸಮುದಾಯದಲ್ಲಿ ಬೆಳೆದ ಶಂಬಾ ಆರಿಸಿಕೊಂಡ ದಾರಿ ಸಂಶೋಧನೆಯ ಕಡೆಗಿತ್ತು.  ಕನ್ನಡ ಮರಾಠಿ ಸಂಘರ್ಷದಲ್ಲಿ ಆಲೂರರು 'ಕರ್ನಾಟಕತ್ವ' ಚಿಂತನೆ ಪ್ರತಿಪಾದಿಸುತ್ತಿದ್ದರೆ, ಅದೇ ಸಂಘರ್ಷವನ್ನು ಆಧಾರವಾಗಿಟ್ಟುಕೊಂಡು ಶಂಬಾ ಆರ್ಯ ಅನಾರ್ಯ ಜನಾಂಗಗಳ ಜೀವನ ವಿಧಾನದ ಮೂಲಕ ಸಿದ್ಧಾಂತ ಕಟ್ಟುವುದಕ್ಕೆ, ಕನ್ನಡದ ಪರಿಕಲ್ಪನೆಯನ್ನು ರೂಪಿಸಿದಂತೆ ಕಾಣುತ್ತದೆ. ಮರಾಠಿಯಲ್ಲಿ ವಿದ್ವತ್ ಪರಂಪರೆ ದಟ್ಟವಾಗಿ ಬೆಳೆದಿತ್ತಾದರೂ ಕನ್ನಡದಲ್ಲಿ ಗೋವಿಂದ ಪೈಗಳು ಮತ್ತು ಶಂಬಾ ಜೋಶಿಯವರೇ ಆರಂಭಿಕರು ಎಂದು ಹೇಳಬಹುದೇನೋ. ಹಾಗಾಗಿ ಶಂಬಾ ಜೋಶಿಯವರು ಬಹುಮಟ್ಟಿಗೆ ತಮ್ಮ ಸಿದ್ಧಾಂತಗಳಿಗೆ ವಾಗ್ವಾದಗಳಿಲ್ಲದೆ ಉಳಿದುಬಿಟ್ಟಿರಬಹುದೆನ್ನಿಸುತ್ತದೆ. ಈ  ಕಾರಣಕ್ಕೋ ಏನೋ ಅವರ ಬರವಣಿಗೆಯ ಮುಖ್ಯ ಧಾಟಿ ಪ್ರತಿಕ್ರಿಯಾತ್ಮಕ  ಮಾದರಿಯಲ್ಲಿದೆ. ಒತ್ತಡಗಳು ಮತ್ತು ಘಟನೆಗಳ ಸ್ವರೂಪದ ಆಧಾರದ ಮೇಲೆ ಅವರು ಪ್ರತಿಕ್ರಿಯಿಸುತ್ತಾರೆ. ಹಲವು ಸಂದರ್ಭಗಳಲ್ಲಿ ಅದು ಅವರ ಖಚಿತ ನಿಲುವಿನ ನಿರಂತರತೆಯಿಂದ ಹುಟ್ಟಿದ್ದು ಎಂದು ಹೇಳುವುದಕ್ಕೆ ಆಗುವುದಿಲ್ಲ.

ಚರಿತ್ರೆಯ ಕುರಿತಂತೆ ಕೂಡ ಇದೇ ಮಾತುಗಳನ್ನು ದಾಖಲಿಸಲು ಸಾಧ್ಯ. ಶಂಬಾ ವರ್ತಮಾನದ ಸಂಗತಿಗಳಿಗೆ ಭಿನ್ನ ಭಿನ್ನ ರೀತಿಯಲ್ಲಿ ಪ್ರತಿಕ್ರಿಯಿಸಿದ್ದಾರೆ. ಆದರೆ ಚರಿತ್ರೆಯ ಕುರಿತಂತೆ ಇದುವರೆಗಿನ ಸಿದ್ಧ ಮಾದರಿಗಳನ್ನೆಲ್ಲ

ಮುರಿದು ಹೊಸ 'ವಿಧಾನ'ವೊಂದನ್ನು ರೂಪಿಸುತ್ತಾರೆ. ಮತ್ತು ಕನ್ನಡದಲ್ಲಿ ಮೊಟ್ಟ ಮೊದಲಬಾರಿಗೆ ಮಧ್ಯಕಾಲೀನ ರಾಜಪ್ರಭುತ್ವವನ್ನು ಪಟ್ಟಿಮಾಡಿ ಮೆರೆಸುವ ಕ್ಲೀಷೆಯನ್ನು ಎಚ್ಚರದಿಂದ ತಪ್ಪಿಸಿಕೊಳ್ಳುತ್ತಾರೆ. ಚರಿತ್ರೆಯನ್ನು ಇಂದು ಹೇಗೆ ನೋಡಬೇಕು ಎಂಬ ಕುರಿತು ಹೀಗೆ ಬರೆಯುತ್ತಾರೆ :

"ಆದ ಘಟನೆಗಳನ್ನು ಕಾಲಾನುಕ್ರಮದಲ್ಲಿ ಹೇಳುವುದು ಮಾತ್ರ ಇತಿಹಾಸವಲ್ಲ. ತತ್ಕಾಲೀನ ಜೀವನದ ಅರ್ಥವು ಮನದಲ್ಲಿ ಮೂಡುವಂತೆ ಮಾಡುವುದು ಇತಿಹಾಸಕಾರರ ಮುಖ್ಯ ಕಾರ್ಯ. ಘಟನೆಗಳಿಗೆ ಸ್ವಂತದ ಅರ್ಥವಿರುವುದಿಲ್ಲ. ಸಾಮಾಜಿಕ ರಾಜಕೀಯ ಜೀವನದ ಪರಿಸರದಲ್ಲಿ ಆ ಘಟನೆಗಳಿಗೆ ವಿಶಿಷ್ಟ ಅರ್ಥವು ಪ್ರಾಪ್ತವಾಗುತ್ತದೆ. ಒಂದು ವಿಶಿಷ್ಟ ಸಂದರ್ಭದಲ್ಲಿ ಆ ಘಟನೆಗಳಿಗೆ ಸಂಭವಿಸುತ್ತಿರುವ ಅರ್ಥ ಪ್ರತೀತಿಯಾಗುವಂತೆ ಅವನ್ನು ಸ್ಥಳ ಕಾಲದ ಸಂಬಂಧದೊಡನೆ ಹೊಂದಿಸಿ ಅನ್ವಯಾರ್ಥವಾಗುವಂತೆ ಹೇಳುವುದು ಇತಿಹಾಸಕಾರನ ಕರ್ತವ್ಯವಿರುತ್ತದೆ. ನಿನ್ನೆಗಳ ಒಳಗಿಂದಲೇ ಇಂದು ಮೈವೆತ್ತುವುದರಿಂದ, ಗತೇತಿಹಾಸವನ್ನು ಓದುವಾಗ ಇಂದಿನೊಳಗಿನ ಕೆಲವೊಂದು ಸಮಸ್ಯೆಗಳ ಮೇಲೂ ಬೆಳಕು ದೊರೆಯುವ ಅನುಭವವೂ ಬರುತ್ತಿರಬೇಕು. ನಾಳೆ ಪಡೆಯಲಿರುವ ಆಕೃತಿಯ ಉಪಸ್ಪರ್ಶವೂ ಅಶಕ್ಯವಲ್ಲ. ಏಕೆಂದರೆ ನಿನ್ನೆ ಇಂದು ನಾಳೆಗಳಲ್ಲಿ ಅವಿಚ್ಛಿನ್ನ ಸಂಬಂಧ, ಒಂದು ಬಗೆಯಲ್ಲಿ ಕಾರ್ಯ ಕಾರಣ ಸಂಬಂಧವೇ ಇದೆ! ಇಂದಿನ ಸ್ವರೂಪ ಜ್ಞಾನಕ್ಕೆ ನೆರವಾಗದ ಇತಿಹಾಸವು ಇತಿಹಾಸವೇ ಅಲ್ಲ."[೧೦]

ಇಲ್ಲಿ ಇರುವ ಗ್ರಹಿಕೆಗಳಿವು :

೧. ಘಟನೆಗಳನ್ನು ಕಾಲಾನುಕ್ರಮದಲ್ಲಿ ಹೇಳುವುದು ಮಾತ್ರ ಇತಿಹಾಸವಲ್ಲ.

೨. ಘಟನೆಗಳಿಗೆ ಸ್ವಂತದ ಅರ್ಥವಿರುವುದಿಲ್ಲ.

೩. ಸಾಮಾಜಿಕ ರಾಜಕೀಯ ಜೀವನ ಪರಿಸರದಲ್ಲಿ ಅರ್ಥ ಪ್ರಾಪ್ತವಾಗುತ್ತದೆ

೪. ಸ್ಥಳ ಕಾಲದ ಸಂಬಂಧದೊಡನೆ ಹೊಂದಿಸಿ ಹೇಳಬೇಕು

೫. ಇತಿಹಾಸದ ಓದು ಇಂದಿನ ಸಮಸ್ಯೆಗಳ ಮೇಲೂ ಬೆಳಕು ಬೀರಬೇಕು

೬. ಒಟ್ಟಾರೆಯಾಗಿ ಇಂದಿನ ಸ್ವರೂಪ ಜ್ಞಾನಕ್ಕೆ ನೆರವಾಗಬೇಕು ಹಾಗೆ ಆಗದಿದ್ದಲ್ಲಿ ಅದು ಇತಿಹಾಸವಲ್ಲ.

೨೧ನೇ ಶತಮಾನದಲ್ಲಿ ನವ ವಸಾಹತುವಾದಕ್ಕೆ ಪ್ರತಿಕ್ರಿಯಿಸುವಾಗ ಅಲ್ಲೊಬ್ಬರು, ಇಲ್ಲೊಬ್ಬರು ಇತಿಹಾಸಕಾರರು ಅನುಸರಿಸುತ್ತಿರುವ ವಿಧಾನವನ್ನು ಶಂಬಾ ಐವತ್ತು ವರ್ಷಗಳ ಹಿಂದೆಯೇ ಮಾಡಿದ್ದಾರೆ.

ಮೇಲಿನ ಒಟ್ಟೂ ಹೇಳಿಕೆಯನ್ನು ಪರಿಶೀಲಿಸುವುದಾದರೆ ಶಂಬಾ ಜೋಶಿಯವರು ಗತ ಕೇಂದ್ರಿತವಾದ ರಾಷ್ಟ್ರೀಯತಾ ಚಿಂತನೆಯನ್ನು ನಿರಾಕರಿಸುತ್ತಿದ್ದಾರೆ. ಚರಿತ್ರೆಯು ವರ್ತಮಾನದ ಅಗತ್ಯಗಳಿಗೋಸ್ಕರವೇ ಸೃಷ್ಟಿಯಾದದ್ದು ಎಂಬ ಅರಿವೇ ಕನ್ನಡ ರಾಷ್ಟ್ರೀಯತೆಗೆ ಹೊಸದೊಂದು ಆಯಾಮ. ಬಲಪಂಥೀಯ ರಾಜಕಾರಣದ ಅಥವಾ 'ಹಿಂದುತ್ವ'ವಾದಿ ರಾಷ್ಟ್ರೀಯ ಚಿಂತನೆಯ ಗತ ಕೇಂದ್ರಿತವಾದ ಪ್ರಭುತ್ವಗಳ ವೈಭವದ ಕಥೆ ಚರಿತ್ರೆಯಾಗಲಾರದು, ಅದು ವರ್ತಮಾನದ ತಲ್ಲಣಗಳಿಗೆ ಸ್ಪಂದಿಸದಿದ್ದರೆ ಅದರಿಂದ ಯಾವ ಪ್ರಯೋಜನವೂ ಇಲ್ಲ ಎಂಬ ತಿಳಿವಳಿಕೆಯೇ ಜನಕೇಂದ್ರೀತವಾದ ರಾಷ್ಟ್ರೀಯತಾ ಚಿಂತನೆಗೆ ಶಕ್ತಿ.

ಇಲ್ಲಿ ವಿರಾಟ್ ಸ್ವರೂಪದ, ಅಖಿಲ ಭಾರತೀಯವೆಂದೆನ್ನುವ ಚೌಕಟ್ಟುಗಳನ್ನೆಲ್ಲ ಒಡೆದು ಚರಿತ್ರೆಯನ್ನು ಸ್ಥಳೀಯಗೊಳಿಸಲಾಗುತ್ತಿದೆ. ನೇರವಾಗಿ ಭಾವಿಸುವುದಾದರೆ 'ಕನ್ನಡ ಸಮುದಾಯ ಕೇಂದ್ರ'ದ ಆಧಾರದ ಮೇಲೆ ನಿಲ್ಲಿಸಲು ಹೊರಟಂತೆ ಕಾಣಿಸುತ್ತದೆ. ಹಾಗಾಗಿಯೇ ಸಿದ್ಧಮಾದರಿಗಳನ್ನು ನಿರಾಕರಿಸುವುದಲ್ಲದೆ ಚರಿತ್ರೆ ಬರೆಯುತ್ತಿರುವವರು ಯಾರು ಮತ್ತು ಈ ಶಿಸ್ತಿನ ದುರ್ಗತಿಗೆ ಕಾರಣವೇನು ಎಂಬುದನ್ನು ಗುರುತಿಸಲು ಶಂಬಾ ಪ್ರಯತ್ನಿಸುತ್ತಾರೆ.

"ಇದು ಕಲಿಯುಗದ ಪ್ರಭಾವ! ಎಂದು ಮಿಡುಕಿ ಶ್ರೀಮದ್ ಗಾಂಭೀರ್ಯದಿಂದ ವ್ಯಾಸಪೀಠದ ಉಪನ್ಯಾಸ, ಪಾಠಪ್ರವಚನ ನಡೆಯುವುದುಂಟು. ಇದಕ್ಕೆ ಮುಖ್ಯ ಕಾರಣ ವಾಸ್ತವ ಸತ್ಯವನ್ನು ಅರಿಯುವುದಕ್ಕಾಗಿ ಇತಿಹಾಸದ ಕಡೆಗೆ ನೋಡುವ ಬುದ್ಧಿಯು ನಮ್ಮಲ್ಲಿ ಇನ್ನೂ ಮೂಡಿ ಬಂದಿಲ್ಲ. ಇತಿಹಾಸವನ್ನು ಪರೀಕ್ಷೆ ಪಾಸಾಗಲು ಓದಲೇ ಬೇಕಾದ 'ಕರ್ಮ' ಎಂದು ಓದಲಾಗುತ್ತದೆ. ಪಠ್ಯ ಪುಸ್ತಕವಾಗಲು ಅರ್ಹತೆ ಪಡೆಯುವ ಲೆಕ್ಕದಿಂದಲೇ ಮುಖ್ಯವಾಗಿ ಇತಿಹಾಸ ಲೇಖನ ನಡೆಯುತ್ತದೆ. ಇದು ನಮ್ಮ ನಾಡಿನಲ್ಲಿ ಬೆಳೆದು ಬಂದಿರುವ ವಾಡಿಕೆ" ೧೧

ಪುರಾಣ, ಪ್ರಭುತ್ವಗಳಲ್ಲಿ ನಂಬಿಕೆಯಿಟ್ಟ ಮಂದಿಯಿಂದಾಗಿಯೋ ಅಥವಾ ಪುರೋಹಿತಶಾಹಿ ಮನೋಭಾವದಿಂದಾಗಿಯೋ ಸಾಮಾನ್ಯರ ಬದುಕು ಚರಿತ್ರೆಗೆ ವಸ್ತುವಾಗಲಿಲ್ಲ ಎಂಬ ತಿಳುವಳಿಕೆ ಶಂಬಾರದು. ಹಾಗಾಗಿಯೇ ಭಾಷೆ, ಧರ್ಮ, ನಂಬಿಕೆ, ಆಚರಣೆ, ಸಂಸ್ಕೃತಿ ಇತ್ಯಾದಿಗಳಿಗೂ ದೀರ್ಘ ಚರಿತ್ರೆಯಿದೆ ಎಂದು ಅವರು ಸಂಶೋಧನೆಗೆ ಹೊರಡುತ್ತಾರೆ. ಸ್ಥಳೀಯರ ಭಾಷೆ, ಕಸುಬು, ಸ್ಥಳನಾಮಗಳು, ಕಥನಗಳು, ಮಿಥಕಗಳು, ಪ್ರತಿಮೆಗಳು, ಸಂಕೇತಗಳು, ಆಚರಣೆಗಳ ಮೂಲಕ ಚರಿತ್ರೆ ಕಟ್ಟಲು ಹೊರಡುತ್ತಾರೆ. ಬರಹ ಮತ್ತು ದಾಖಲೆಗಳನ್ನು ನಂಬಿ ಕೂತ ಕರ್ಮಠಶಾಹಿ ಮತ್ತು ಪವಿತ್ರವಾದಿ, ಜಾತಿವಾದಿ ಬರವಣಿಗೆಗಳನ್ನು ನಿರಾಕರಿಸುವುದರಿಂದ ವೈದಿಕವಲ್ಲದ, ರಾಜಾಸ್ಥಾನಕೇಂದ್ರವಲ್ಲದ ಸಂಸ್ಕೃತವಲ್ಲದ, ದತ್ತಿಗಳು, ಜಹಗೀರುಗಳಿಲ್ಲದ ಪಶುಪಾಲಕ ಮತ್ತು ವ್ಯವಸಾಯಿಕ ಸಮುದಾಯಗಳು ಭಾರತದ ಸಂಸ್ಕೃತಿಗಳ ತಾಯಿಬೇರುಗಳು, ಅದು ಕನ್ನಡ ನೆಲದ್ದು, ಜನದ್ದು ಎಂದು ಹೇಳಿ ಕನ್ನಡ ರಾಷ್ಟ್ರೀಯತೆಗೆ 'ವಿರಾಟ್ ಅಸ್ಮಿತೆ'ಯನ್ನು ದಕ್ಕಿಸಿಕೊಡುತ್ತಾರೆ. ಮರಾಠಿಯ ಅಸ್ತಿತ್ವವನ್ನು ನಿರಾಕರಿಸುತ್ತಲೇ 'ಆರಿಯ'ವಾದದ್ದೆಲ್ಲವನ್ನೂ ನಿರಾಕರಿಸುತ್ತಾರೆ..

ಕನ್ನಡ ರಾಷ್ಟ್ರೀಯತೆಯ ಪರಿಕಲ್ಪನೆಯ ಚರ್ಚೆಯಲ್ಲಿ ಶಂಬಾರ ಈ ವಿಧಾನ ತುಂಬ ಮುಖ್ಯವೆನ್ನಿಸಿದರೂ, ಪ್ರಭುತ್ವಗಳು ಭಾಷೆ, ಆರ್ಥಿಕತೆ, ಸಂಸ್ಕೃತಿ, ರಾಜಕೀಯ ಇತ್ಯಾದಿಗಳನ್ನು ನಿಯಂತ್ರಿಸುತ್ತವೆ ಮತ್ತು ರೂಪಿಸುತ್ತವೆ. ಆದರೆ ಶಂಬಾ ಜೋಶಿಯವರು ಪ್ರಜ್ಞಾಪೂರ್ವಕವಾಗಿ ಈ ವಿಚಾರಗಳನ್ನು ಪಕ್ಕಕ್ಕೆ ತಳ್ಳಲೆತ್ನಿಸುತ್ತಿರುವಂತೆ ಕಾಣುವುದರಿಂದ ಅವರ ಗ್ರಹಿಕೆಗೆ ಮಿತಿಗಳಿವೆ. ಹಾಗೆಂದು ಶಂಬಾ ಈ ವೈರುಧ್ಯಗಳನ್ನು ಗಮನಿಸುವುದೇ ಇಲ್ಲವೆಂತಲ್ಲ. ಪ್ರಭುತ್ವಗಳ ಮೇಲಾಟದಲ್ಲೇ ಭಾಷೆ, ಧರ್ಮಗಳು ರೂಪುಗೊಳ್ಳುತ್ತವೆ ಎಂಬುದನ್ನು ಅವರು ಗುರುತಿಸಬಲ್ಲವರಾಗಿದ್ದರು. ಆದರೆ ಆಕರಗಳ ವಿಷಯವಾಗಿ ಮಾತ್ರ ಈ ಕೊರತೆ ಕಾಣಿಸಬಲ್ಲುದು. ಈ ವಿಧಾನದಿಂದ ಕಂಡುಕೊಂಡ ದರ್ಶನಗಳಿಂದ ಸಮಕಾಲೀನ ಸಮಾಜದ ತಲ್ಲಣಗಳಿಗೆ ಹೇಗೆ ಅನ್ವಯಿಸಿ ನೋಡುವುದು ಎಂಬ ಸಮಸ್ಯೆ ಕೂಡ ಕಾಡುತ್ತದೆ.

ಶಂಬಾ ಬಳಸುವ ಚರಿತ್ರೆಯ ವಿಧಾನದಲ್ಲಿ 'ಸಂಘರ್ಷ'ದ ಪಾತ್ರ ಕಡಿಮೆ. ಭಾಷಾ ಶಾಸ್ತ್ರೀಯ ಮತ್ತು ಮಾನವಶಾಸ್ತ್ರೀಯ ಶಿಸ್ತುಗಳಲ್ಲಿ ಕೂಡ 'ಸಂಘರ್ಷದ' ದಾಖಲೆಗಳು ನಗಣ್ಯ. ಇಲ್ಲೆಲ್ಲ ಪ್ರಕ್ರಿಯೆಗಳು ಮತ್ತು ಪ್ರಭಾವಗಳು ವಿಕಾಸಗತಿಯತ್ತ ಕರೆದೊಯ್ಯುತ್ತವೆ ಎಂದು ಜ್ಞಾಪಿಸಲಾಗುತ್ತದೆ. ಶಂಬಾ ಜೋಶಿಯವರು ಕೂಡ ಭಾಷಾ ವಿಜ್ಞಾನಿಗಳಿಂದ, ಮಾನವ ಶಾಸ್ತ್ರಜ್ಞರಿಂದ, ಸಂಸ್ಕೃತಿ ಚಿಂತಕರಿಂದ ಪ್ರೇರಣೆ ಪಡೆದ ಹಾಗೆ ಕಾಣುತ್ತದೆ. ಮರಾಠಿ ಚಿಂತಕ ರಾ.ಚಿಂ.ಡೇರೆ ಮತ್ತು ಸೊಂತಾಮೈರರಂತಹ ಭಾರತವಾದಿ, ಪೌರ್ವಾತ್ಯವಾದಿ ಚಿಂತಕರೂ ಸಹ ರಾಜಕೀಯ ಚರಿತ್ರೆಯನ್ನು ಮುಖ್ಯ ಎಂದು ಭಾವಿಸುವುದಿಲ್ಲ. ಇವರ ಜೊತೆ ಮುಖಾಮುಖಿ ನಡೆಸುತ್ತಿದ್ದ ಶಂಬಾ ಕೂಡ ಅದೇ ದಾರಿ ಹಿಡಿಯುತ್ತಾರೆ.

ಆದರೆ ಇಂದು ತೀವ್ರವಾಗಿ ಕ್ರಿಯಾಶೀಲವಾಗಿರುವ ಚರಿತ್ರೆಯ ಗ್ರಹಿಕೆಗೆ ಎರಡು ವಿಧಾನಗಳಿವೆ. ಒಂದು ರಾಜಕೀಯಾರ್ಥಿಕ ನೆಲೆಯ ಮೇಲೆ ಗ್ರಹಿಸುವ ಗತಿತರ್ಕದ ವಿಧಾನ ಅಥವಾ ವರ್ಗ ಸಂಘರ್ಷದ ವಿಧಾನ. ಮತ್ತೊಂದು ಆತಂಕ ಕೇಂದ್ರಿತವಾದ ಸಾಂಸ್ಕೃತಿಕ ವಿಶ್ಲೇಷಣಾ ವಿಧಾನ. ಮೊದಲನೆಯದು ಪ್ರಭುತ್ವ ಪರವಾಗಿದ್ದ ಚರಿತ್ರೆಯನ್ನು ಜನತೆಯ ಕಡೆಗೆ ತಿರುಗಿಸಲು, ಜನತೆಯ ಪಾಲ್ಗೊಳ್ಳುವಿಕೆಯಿಂದಲೇ ಚರಿತ್ರೆ ಆರಂಭವಾಯಿತೆಂದು ಹೇಳಲು ಪ್ರಯತ್ನಿಸುತ್ತದೆ. ಇಲ್ಲಿ ಚರಿತ್ರೆ ವಸಾಹತುಶಾಹಿ ಗ್ರಹಿಕೆಯಾಚೆಗೆ ವಿಸ್ತರಿಸಿಕೊಳ್ಳಲು ಸೂಕ್ಷ್ಮವಾಗಲು, ಸಂಕೀರ್ಣವಾಗಲು ಯತ್ನಿಸುತ್ತದೆ. ಎರಡನೆಯದು ಅಧಿಕಾರಸ್ಥರ ಧರ್ಮ ಮತ್ತು ಸಂಸ್ಕೃತಿಗಳು ಎದುರಿಸುತ್ತಿರುವ ಕಷ್ಟಗಳ ಸರಣಿಯನ್ನು ಹೇಳಲು ಉಪಕ್ರಮಿಸುತ್ತದೆ. ಪ್ರಧಾನವಾಗಿ ಪುರಾಣ ಮತ್ತು ನೈಜತೆಗಳು ಬೇರ್ಪಡದೆ ಅವುಗಳನ್ನು ಸಂಕೇತಗಳ ದೃಷ್ಟಿಯಿಂದಲೂ ಗ್ರಹಿಸದೇ ನೋಡುವುದು ಇಲ್ಲಿನ ಪ್ರಧಾನ ಅಭ್ಯಾಸ. ಮೊದಲನೆಯದು ರೋಚಕವಾದುದಾದರೆ ಎರಡನೆಯದು ಉದ್ರೇಕಕಾರಿಯಾದುದು. ಇಲ್ಲಿಯೂ ಸಂಘರ್ಷವಿದೆ. ಅದು ಧರ್ಮಾಧಾರಿತವಾದ ಮತ್ತು ವಿಭಿನ್ನ ಸಮುದಾಯಗಳ ನಡುವೆ ಬಿರುಕು ಹುಟ್ಟಿಸುವ, ಗತದಲ್ಲಿ ಪ್ರಭುತ್ವಕ್ಕೂ ಜನತೆಗೂ ವ್ಯತ್ಯಾಸವಿಲ್ಲದಂತೆ ನೋಡುವ ಕ್ರಮ ಏರ್ಪಡುತ್ತದೆ.

ಶಂಬಾ ಜೋಶಿಯವರು ಈ ಎರಡು ವಿಧಾನಗಳಿಂದ ಆಚೆಗೆ ವಿಸ್ತರಿಸಿಕೊಳ್ಳುತ್ತಾರೆ. ತತ್ವದಲ್ಲಿ ಸ್ವಲ್ಪಮಟ್ಟಿಗೆ ಮೊದಲನೆಯ ದೃಷ್ಟಿಕೋನಕ್ಕೆ ಹತ್ತಿರವೆನ್ನಿಸಿದರೂ ಸಂದರ್ಭಗಳ ಆಧಾರದ ಮೇಲೆ ನಿಲುವು ಬದಲಾಯಿಸುವ ಕಾರಣಕ್ಕೆ 'ಅರಾಜಕ' ಸ್ಥಿತಿಯಲ್ಲಿ ಮಾತ್ರ ನಿಂತುಬಿಡುತ್ತಾರೆ.

ಶಂಬಾ ಬಳಸಿದ ವಿಧಾನದ ಸೀಮಿತ ಅರ್ಥದಲ್ಲಿ ದಮನಿತ ಸಮುದಾಯಗಳು ಭವಿಷ್ಯದಲ್ಲಿ ಹೊಸ ಆತ್ಮವಿಶ್ವಾಸವನ್ನು ಪಡೆಯಲು ತನ್ನ ಚಾರಿತ್ರಿಕ ನೆನಪುಗಳನ್ನು ಕಟ್ಟಿಕೊಳ್ಳಲು ಪ್ರಯತ್ನಿಸುತ್ತಿರುತ್ತವೆ. ಇದು ಎಲ್ಲ ಸಮುದಾಯಗಳ ಬಿಡುಗಡೆಯ ತುಡಿತವೆಂಬ 'ರಾಷ್ಟ್ರೀಯ ಸಂಕಥನದ ಮಾದರಿಗೆ ಬಂದು ಥುತ್ತನೆ ನಿಂತು ಬಿಡುತ್ತವೆ. ಇದು ಸಮುದಾಯಗಳ ಚಾರಿತ್ರಿಕ ನಡಿಗೆ ಕುರಿತದ್ದು. ಈ ವಿಧಾನ ಅವರ ಮೊದಲ ಹಂತದ್ದು.

ಶಂಬಾ ಜೋಶಿಯವರಲ್ಲಿ ನಾವು ಮೂರು ಮುಖ್ಯ ಹಂತಗಳನ್ನು ಗಮನಿಸಲು ಸಾಧ್ಯವಿದೆ.

೧. ೧೯೪೭ಕ್ಕೆ ಮೊದಲಿನ ಹಂತ ಭಾಷಿಕ, ಸಾಮುದಾಯಿಕ ಸಂಶೋಧನೆಯ ಹಂತ.

೨. ೧೯೪೭ರಿಂದ ೧೯೭೦ರವರೆಗಿನ ಪ್ರಕ್ಷುಬ್ಧಕಾರಿ ವಿದ್ಯಮಾನಗಳಿಗೆ ಪ್ರತಿಕ್ರಿಯಿಸಿದ ಹಂತ.

೩. ೧೯೭೦ರ ನಂತರ ಸಂಸ್ಕೃತಿ ಮೀಮಾಂಸೆ ಕಡೆಗೆ ತುಡಿದ ಹಂತ.

೧. ಮೊದಲ ಹಂತದ ಚಿಂತನೆಗಳಲ್ಲಿ ಶಂಬಾ ಕನ್ನಡ ಸಮುದಾಯಕ್ಕೆ ತಮ್ಮ ಮೂಲಬೇರುಗಳಾವುವು ಎಂದು ಹುಡುಕಿ ತೋರಿಸುವ ಕೆಲಸ ಆರಂಭಿಸುತ್ತಾರೆ. ಜತೆಗೆ ಆಧುನಿಕ ರಾಷ್ಟ್ರದ ರಾಜನಿಲ್ಲದ, ಜನರೇ ಆಡಳಿತ ನಡೆಸಲು ಬೇಕಾದ ಮನಸ್ಥಿತಿಯೊಂದನ್ನು ಪ್ರತಿಪಾದಿಸುತ್ತಾರೆ.

''ಸತ್ಯವೇ ದೇವರು ಸತ್ಯದ ಸಾಕ್ಷಾತ್ಕಾರವಾಗುವುದಕ್ಕೆ ಇತಿಹಾಸಶಾಸ್ತ್ರವು ಒಂದು ದಿವ್ಯವಾದ ಕೈದೀಪ. ನಮ್ಮ ಇತಿಹಾಸದ ವಿದ್ಯುದ್ದೀಪವು ನಮ್ಮ ನಾಡಿನಲ್ಲಿ ತೊಳಗಿ ಬೆಳಗುತ್ತಿಲ್ಲವಾದುದರಿಂದಲೇ ಜಾತಿ, ಕುಲ, ಧರ್ಮ, ಮತ ಪಂಥಗಳ ದುರಭಿಮಾನದ ಕಗ್ಗತ್ತಲೆಯಲ್ಲಿ ನಮ್ಮ ಜನಗಳು ಮುಗ್ಗರಿಸುತ್ತಲಿದ್ದುದು ಕಂಡು ಬರುತ್ತಲಿದೆ. ಧರ್ಮದ ಹೆಸರಿನಲ್ಲಿ ಅಧರ್ಮವು ನಡೆದಿದೆ. ನಮ್ಮ ನಾಡಿನ ಏಳಿಗೆಗೆ ಅಡ್ಡ ಬರುತ್ತಲಿರುವ ಜಾತಿ, ಕುಲ, ಧರ್ಮ, ಮತ, ಪಂಥಗಳ ದುರಭಿಮಾನಗಳನ್ನು ತೊಡೆದು ಹಾಕುವುದಕ್ಕೆ ಸತ್ಯ ಇತಿಹಾಸದಂಥ ಅಮೋಘವಾದ ಸಾಧನವು ಬೇರೊಂದಿಲ್ಲ. ನಮ್ಮ ನಾಡಿನಲ್ಲಿ ಹಿಂದಕ್ಕೆ ಆದ ಅನುಲೋಮ, ಪ್ರತಿಲೋಮ ವಿವಾಹಗಳ ಇತಿಹಾಸವು ಬೆಳಕಿಗೆ ಬಂದರೆ ನಮ್ಮ ಜನಗಳ ಜಾತಿಯ ಹೆಮ್ಮೆ, ಕುಲದ ಬಿಂಕಗಳೆಲ್ಲವೂ ಸಡಿಲದೆ ಇರಲಾರವು. ನಮ್ಮ ದೇವತೆಗಳು ಒಡಮೂಡಿದುದು, ಮಾಯವಾದುದು ಇವುಗಳ ಗುಟ್ಟು ಗೊತ್ತಾದರೆ ಧರ್ಮ-ಧರ್ಮಗಳ ಎಷ್ಟೋ ಹೊಡೆದಾಟಗಳು ಕಡಿಮೆಯಾಗುವುದು ನಿಶ್ಚಿತ.''[೧೨]

''ಆರ್ಯರು ಅನಾರ್ಯರು (ದಸ್ಯುಗಳು -ರಾಕ್ಷಸರು) ಎಂಬ ತಂಡಗಳ ಕಾಲವೊಂದು ಹಿಂದಾಯ್ತು. ವೈದಿಕರು ಅವೈದಿಕರು (ಬೌದ್ಧ, ಜೈನ) ಎಂಬ ಮತಗಳ ಯುಗವು ಉರುಳಿ ಹೋಯ್ತು; ಹಿಂದೂ ಮುಸಲ್ಮಾನವೆಂಬ ಧರ್ಮಕಲಹಗಳ ಅವಧಿಯೂ ಮುಗಿಯುತ್ತ ಬಂತು. ಇದೀಗ ದೇಶಾಭಿಮಾನದ ಮೆಟ್ಟಿಲನ್ನೇರಿ ಮಾನವಕುಟುಂಬದ ಐಕ್ಯದ ಹಿರಿಗುರಿಯ ಕಡೆಗೆ ವೇಗದಿಂದ ಸಾಗಿದ್ದೇವೆ. ಯುಗ ಧರ್ಮವನ್ನರಿತುಕೊಂಡು ಕಾಲಕ್ಕೆ ತಕ್ಕಂತೆ ತಮ್ಮನ್ನು ಮಾರ್ಪಡಿಸಿಕೊಳ್ಳುವುದರಲ್ಲಿಯೇ ಜಾಣ್ಮೆಯಿದೆ.''[೧೩]

ಜಾತಿ, ಜನಾಂಗಗಳ ಸಂಕರಶೀಲತೆ ಚರಿತ್ರೆಯ ತುಂಬೆಲ್ಲ ಹರಡಿಬಿದ್ದಿದೆ. ಅಂಥ ಚರಿತ್ರೆಯನ್ನು ಶೋಧಿಸಬೇಕಾಗಿದೆ ಎಂಬ ಬ್ರಾಹ್ಮಣವಾದಿ ಅಹಂಕಾರದ ಹೆಡೆಯನ್ನು ಮೆಟ್ಟಿ ತುಳಿಯುತ್ತಿರುವುದರ ಜೊತೆಗೆ ಆಧುನಿಕ ಕಾಲಘಟ್ಟದಲ್ಲಿ ಸಂಘರ್ಷದ ಅವಧಿ ಮುಗಿದಿದ್ದರಿಂದ 'ಮಾನವ ಕುಟುಂಬದ ಐಕ್ಯ'ದ ಹಿರಿ ಗುರಿಯ ಕಡೆಗೆ ಸಾಗಿದ್ದೇವೆ ಎಂಬ ನಿಲುವಿಗೆ ತಲುಪಿದ್ದಾರೆ. ಇಂಥ ಕಡೆಯಲ್ಲೆಲ್ಲ ಶಂಬಾ, ಅವರ ಅವೈದಿಕ ಚಿಂತನೆಗಳಿಂದಾಗಿ ಜನಪರ ಕನ್ನಡ ರಾಷ್ಟ್ರೀಯತೆಗೆ ಅತ್ಯಂತ ಆಪ್ತರು ಮತ್ತು ಸಮುದಾಯ ಕೇಂದ್ರೀತವಷ್ಟೇ ಅಲ್ಲದ 'ವಸುದೈವ ಕುಟುಂಬಕಂ' ಎನ್ನುವ ನೆಲೆಗೆ ತಲುಪಿದಂತೆ ಕಾಣುತ್ತಾರೆ.

ಎರಡನೇ ಅಂದರೆ - ಭಾರತದಲ್ಲಿ ಆಧುನಿಕ ರಾಷ್ಟ್ರದಲ್ಲಿ ಅತ್ಯಂತ ರಕ್ತಸಿಕ್ತ ಅಧ್ಯಾಯಗಳ ಪ್ರಕ್ಷುಬ್ಧಕಾರಿ - ಹಂತದಲ್ಲಿ ಇಲ್ಲಿ ಶಂಬಾ ಬಲಪಂಥೀಯರಿಗೆ ಆಪ್ತವಾಗುವ ಕ್ಷಾತ್ರ ಕೇಂದ್ರಿತ ರಾಷ್ಟ್ರಪ್ರಭುತ್ವದ ಅನ್ವೇಷಣೆಗೆ ತೊಡಗುತ್ತಾರೆ. ಮೊದಲ ಹಂತದಲ್ಲಿ ಜಾತಿ, ಧರ್ಮಗಳ ಆಧಾರದ ಮೇಲೆ ನಿಂತಿದ್ದ ಪರಿಶುದ್ಧವಾದಿ ಅಥವಾ ಅಹಂಕಾರ ಕೇಂದ್ರಿತ ಬಲಪಂಥೀಯ ನಿಲುವುಗಳನ್ನು ರಚನಾತ್ಮಕವಾಗಿ ಒಡೆಯುವ ಕೆಲಸ ಮಾಡಿದರೆ, ಈ

ಹಂತದಲ್ಲಿ ಸಾವರಕರ ಮುಂತಾದ ಹಿಂದೂ ಮಹಾಸಭೆಯ ನಾಯಕರ ಕುರಿತಾಗಿ ಅವರ ಚಟುವಟಿಕೆಯ ಕುರಿತಾಗಿ ಅಲ್ಲಲ್ಲಿ ಸಹಮತ ವ್ಯಕ್ತಪಡಿಸುವ ಹಂತಕ್ಕೆ ತಲುಪುತ್ತಾರೆ. ('ಜಯಕರ್ನಾಟಕ' ಪತ್ರಿಕೆಗೆ ಬರೆದ 'ಹಿಂದೂ ಮುಸಲ್ಮಾನ ತೊಡಕು' ಎಂಬ ಬರೆಹ ಈ ದೃಷ್ಟಿಯಿಂದ ಉಲ್ಲೇಖನಾರ್ಹ) ಇನ್ನೊಂದು ಸಂಗತಿಯೆಂದರೆ, ಎಲ್ಲ ವೇದಾಂತಗಳು, ವಿರಕ್ತಪಂಥಗಳು, ಬೌದ್ಧರು ಉಪನಿಷತ್ಕಾರರು ಭಾರತದ ಸಮುದಾಯಗಳ ಬದುಕನ್ನು ಜೀವ ಪ್ರೇಮದಿಂದ ಹಿಮ್ಮುಖಗೊಳಿಸಿದರೆಂದು ಶಂಬಾ ಪ್ರತಿಪಾದಿಸುವುದು. ಕ್ಷಾತ್ರ ಗುಣವನ್ನು ಕೊಂದು ಶತ್ರುಗಳ ಬಾಯಿಗೆ ದೇಶವನ್ನು ದೂಡಿದರೆಂದು ಕಟುವಾದ ನಿಲುವಿಗೆ ಅವರು ತಲುಪುತ್ತಾರೆ. ಬೌದ್ಧನಾಗಿ ಪರಿವರ್ತನೆಗೊಂಡ ಅಶೋಕನನ್ನು ಕುರಿತು, "ದೇವನಾಂಪ್ರಿಯ (ಒಂದು ಕಡೆ ಇದನ್ನು ಮೂರ್ಖತ್ವ ವಾಚಕ ಎನ್ನುತ್ತಾರೆ) ನಾಗಲು ದೇಶವನ್ನೇ ನಿಃಕ್ಷತ್ರಿಯವಾಗಿಸಿದನು. ಬಳಿಕ ಭಾರತವು ಪರಕೀಯರ ದಾಳಿಗಳ ಆಘಾತಗಳಿಗೆ ಒಳಗಾಗಿ ಶೋಕ ಸಾಗರದಲ್ಲಿ ಮುಳುಗಿತು. ಅಶೋಕನ ತರುವಾಯ ಭಾರತದಲ್ಲಿ ಪ್ರಭಾವಶಾಲಿಯಾದ ಒಬ್ಬ ರಾಜನು ಮೌರ್ಯರಲ್ಲಿ ತಲೆಯೆತ್ತಲಿಲ್ಲ. ಪುಷ್ಯಮಿತ್ರನು ರಾಜನ ಕೊಲೆ ಮಾಡಿ ತಾನೆ ಪಟ್ಟಕ್ಕೆ ಬರುತ್ತಾನೆ. ಅಶ್ವಮೇಧಯಾಗಮಾಡಿ ತಾನು ಸಾಮ್ರಾಟನಾದುದನ್ನು ಸೂಚಿಸುತ್ತಾನೆ."[೧೪]

ಆರಂಭದ ಹಂತದಲ್ಲಿ ಅವೈದಿಕ ದರ್ಶನಗಳನ್ನು, ಅವುಗಳ ಸಮಾನತಾ ಚಿಂತನೆಗಳ ಕಾರಣಕ್ಕೆ ಮೆಚ್ಚುತ್ತಿದ್ದ ಶಂಬಾ ಈ ಹಂತದಲ್ಲಿ ಧುತ್ತನೆ ಮಗ್ಗುಲು ಹೊರಳಿಸುವುದೇಕೆ? ವಾಸ್ತವವು ಶಂಬಾ ಜೋಶಿಯವರಂಥ ಧೀಮಂತ ವಿದ್ವಾಂಸರ ಸಿದ್ಧಾಂತವನ್ನೆ ಬದಲಾಯಿಸಿಬಿಡುವಷ್ಟರ ಮಟ್ಟಿಗೆ ಘೋರವಾಗಿತ್ತೆ ಅಥವಾ ಆಳುವ ವರ್ಗವನ್ನು ತಟಸ್ಥಗೊಳಿಸಿ ಜನಾಂಗ ಕೇಂದ್ರಿತವಾಗಿ ಚಿಂತನೆ ಆರಂಭಿಸುವಷ್ಟು, ಚಿಂತನೆಗಳಲ್ಲೇ ದೋಷಗಳಿದ್ದವೇ? ಅಂತೂ ಅವೈದಿಕ ದರ್ಶನಗಳ ಕುರಿತಾದ ಸಿಟ್ಟಿನಷ್ಟೇ ಇಸ್ಲಾಂ ಪ್ರಭುತ್ವಗಳ ಕುರಿತು ಅವರು ದ್ವೇಷ ಕಾರುತ್ತಾರೆ.

ಇಸ್ಲಾಂ ಕುರಿತಾದ ಸಣ್ಣ ಅಸಹನೆಯೊಂದು ಶಂಬಾರಿಗೆ ಮೊದಲಿನಿಂದಲೂ ಇತ್ತಾದರೂ, ಅದು ೧೯೪೭ರ ದೇಶ ವಿಭಜನೆಯ ಕಾಲಕ್ಕೆ ದ್ವೇಷದ ರೂಪ ಪಡೆದುಕೊಂಡಿತು. ಈ ಸಂದರ್ಭದಲ್ಲಿ ಅವರು ಟಿಪ್ಪುವಿನಿಂದ ಹಿಡಿದು ಬಹುತೇಕ ಆಧುನಿಕ ರಾಷ್ಟ್ರೀಯವಾದಿ ಮುಸ್ಲಿಮರನ್ನು ಧರ್ಮಾಂಧರೆಂದು ಕರೆಯುತ್ತಾರೆ. ಅದಕ್ಕೆ ಭಾರತದಲ್ಲಿ ಇದ್ದ ತೀವ್ರ ಧಗೆಯ ವಾತಾವರಣವೂ ಕಾರಣವಿರಬಹುದು.

ಮೂರನೆಯ ಹಂತಕ್ಕೆ ತಲುಪುವ ಹೊತ್ತಿಗೆ ಶಂಬಾ ಪರಿಪಕ್ವತೆಯ ಸ್ಥಿತಿಗೆ ತಲುಪಿದ ಹಾಗೆ ಕಾಣುತ್ತಾರೆ. ಆರಂಭ ಕಾಲಕ್ಕೆ ಕಾಣಿಸಿ ನಂತರ ಮರೆಯಾದ ವಿಶ್ವಬಂಧುತ್ವದ ಅತ್ಯಂತ ಉದಾತ್ತವಾದ ನೆಲೆಗೆ ಅವರು ತಲುಪುತ್ತಾರೆ :

"ಈ ಗೀತೆ ಮನು-ಜನಿಗೆ ಅಲ್ಲ! ನರ-ಪಾತಳಿಯ ಪುರೋಹಿತ ವರ್ಗಕ್ಕೆ. ಗೀತೆ ನರನಿಗೆ ಸಂಬೋಧಿಸಿ ಹೇಳಿದ್ದಾಗಿದೆ! ನಿಜವೆ, ನೋಡಿಕೊಳ್ಳಿ, 'ನರಜಂತುವೇ, ನೀನೇನು ಮಾಡಬಲ್ಲೆ,' 'ನನಗೆ ಶರಣು ಬಾ' ಎಂದು ಹೇಳುವ ಕೃಷ್ಣಭಕ್ತಿ, ಕ್ರಿಸ್ತ ಭಕ್ತಿಯೊಳಗಿನ ಈ ಸಾಮ್ಯವು, ಇನ್ನೊಂದು ಬಗೆಯಲ್ಲಿ ಕರುಣ ಭಕ್ತಿಯಲ್ಲಿಯೂ ಇಲ್ಲದಿಲ್ಲ. ಶುದ್ಧ ಪ್ರತಿಪದಾ-ದ್ವಿತೀಯೆಯ ಅರ್ಧ- ಚಂದ್ರಪ್ರತಿಮೆಯು ಭಕ್ತಿಯ

ಇಸ್ಲಾಮಿನಷ್ಟು ಬೇರಾವ ಏಕಂ= ಸತ್‌ಪಂಥವು, ಬಹಿರಂಗವಾಗಿ ಜೀವಂತವಾಗಿ ಉಳಿಸಿಕೊಂಡು ಬಂದಿದೆ? ಈಜಿಪ್ಟ್‌ನಿಂದ ಭಾರತ, ಜಪಾನಿನವರೆಗೂ ಒಂದು ಕಾಲಕ್ಕೆ ತತ್ ಏಕಂ ಸ್ವರೂಪೀ 'ಸತ್ಯ'ದ ಅವೈಚಾರಿಕ ಆಕೃತಿಯೆ ಜನಜೀವನವನ್ನು-ಅಲ್ಲಲ್ಲಿಯ ಸಂಸ್ಕೃತಿಯನ್ನು ರೂಪಿಸಿದೆ.''[೧೫]

ಚಂದ್ರ, ಸರ್ಪ ಇತ್ಯಾದಿ ಪ್ರತಿಮೆಗಳ ಮೂಲಕ ಜಗತ್ತಿನ ಸಂಸ್ಕೃತಿಗಳ ಬೇರುಗಳಲ್ಲಿ ಕೈಯಾಡಿಸಿ ಚರಿತ್ರೆಯನ್ನು ವಿಶಾಲಭಿತ್ತಿಗೆ ಕೊಂಡೊಯ್ಯಲು ಶಂಬಾ ಪ್ರಾರಂಭಿಸುತ್ತಾರೆ. ದ್ವೇಷಾಸೂಯೆಗಳನ್ನು ಮರೆತ ಉದಾರ ಮಾನವತಾವಾದದ ನೆಲೆಗೂ ತಲುಪುತ್ತಾರೆ ಮತ್ತು ಈ ಪ್ರತಿಮಾ ಸಂಸ್ಕೃತಿ ಸ್ಥಳೀಕೃತಗೊಂಡು ಸ್ಥಳೀಯ ರಾಷ್ಟ್ರಪ್ರಜ್ಞೆ ಆರಂಭಗೊಂಡುದನ್ನು ಸಹ ಸೂಚಿಸುತ್ತದೆ. ಅಷ್ಟರ ಮಟ್ಟಿಗೆ ಈ ಚಿಂತನೆ ಕನ್ನಡ ರಾಷ್ಟ್ರೀಯತೆಗೆ ಉಪಯೋಗಕರ.

### ೪.೫ ಚರಿತ್ರೆ ಕುರಿತಂತೆ ಕುವೆಂಪುರವರ ಚಿಂತನೆಗಳು

ಆಗಿ ಹೋದ ಚರಿತ್ರೆಗಿಂತ, ಆಗಬೇಕಾದ ಚರಿತ್ರೆಯ ಕುರಿತು ಸಂಕೀರ್ಣವಾಗಿ ಚಿಂತಿಸಿದವರು ಕುವೆಂಪು. ಅವರು ತಮ್ಮ ಗುರುಗಳಾದ ಬಿ.ಎಂ.ಶ್ರೀಯವರಂತೆ ರಾಜಕೀಯ ಚರಿತ್ರೆಯನ್ನು ನಗಣ್ಯ ಎಂದು ಭಾವಿಸಿ, ತಾವು ಆಶಿಸುತ್ತಿರುವ ಕನ್ನಡ ರಾಷ್ಟ್ರೀಯತೆಯ ರೂಪುರೇಷೆಗಳು ಹೇಗಿರಬೇಕು ಎಂಬ ಬಗ್ಗೆ ಚಿಂತಿಸಿದಂತೆ ಕಾಣುತ್ತದೆ. ಕುವೆಂಪು ಅವರ ಬರವಣಿಗೆಯ ಆರಂಭಕಾಲದ ನಾಡಗೀತೆಯಂಥ ಕವಿತೆಗಳನ್ನು ಬಿಟ್ಟರೆ ಅವರ ಗದ್ಯ ಬರಹಗಳಲ್ಲಿ ರಾಜಕೀಯ ಚರಿತ್ರೆ ಸುಳಿಯುವುದೇ ಇಲ್ಲ. ಆಧುನಿಕ ರಾಷ್ಟ್ರದಲ್ಲಿ 'ಯಾರೂ ಮುಖ್ಯರಲ್ಲ' ಮತ್ತು 'ಯಾರೂ ಅಮುಖ್ಯರಲ್ಲ' ಎಂಬ ಸೆಕ್ಯುಲರ್ ಆದ, ಪ್ರಜೆಯೇ ಪ್ರಭುವಾಗುವ ಪ್ರಕ್ರಿಯೆಯನ್ನು ಹೇಳುತ್ತದೆ.

ಸಾಂಸ್ಕೃತಿಕವಾಗಿ ಭಾರತವನ್ನು, ಕರ್ನಾಟಕವನ್ನು ವ್ಯಾಖ್ಯಾನ ಮಾಡುತ್ತಾರೆ. ಈ ಸಾಂಸ್ಕೃತಿಕ ವ್ಯಾಖ್ಯಾನ ಕೂಡ ಮತೀಯವಾದಿಗಳು ನೋಡುವುದಕ್ಕಿಂತ ಭಿನ್ನವಾದುದು. ಶೂದ್ರ ದೃಷ್ಟಿಯಿಂದ, ಸಾಮಾಜಿಕ ನ್ಯಾಯದ ದೃಷ್ಟಿಯಿಂದ ನೋಡುತ್ತಾರೆ. ಆದರೆ ಈ ಎರಡೂ ದೃಷ್ಟಿಕೋನಗಳ ಹಿಂದೆ ಇರುವ ಆಕರಗಳಲ್ಲಿ ಮಾತ್ರ ಅಂಥ ವ್ಯತ್ಯಾಸವಿಲ್ಲ. ಹಾಗಾಗಿಯೆ ಕೆಲವು ಚಿಂತಕರು ಕುವೆಂಪು ಅವರದು 'ಹಿಂದೂ ಮನಸ್ಸು' ಎಂದು ವ್ಯಾಖ್ಯಾನಿಸುವ ಪ್ರಯತ್ನ ಮಾಡಿದ್ದಾರೆ. ವೇದ, ಮಹಾಕಾವ್ಯ, ಉಪನಿಷತ್ತುಗಳನ್ನು ಆಕರವಾಗಿ ಬಳಸುವ ಕುವೆಂಪು, ಅವುಗಳಲ್ಲಿನ ವ್ಯಕ್ತಿ ಚೈತನ್ಯದ ಆಶಯಗಳನ್ನು ಮಾತ್ರ ಹೆಕ್ಕಿ ತೆಗೆದು ವ್ಯಾಖ್ಯಾನ ಮಾಡುತ್ತಾರೆ. ಈ ಆಶಯಕ್ಕೆ ಪೂರಕವಾಗಿಯೇ ಅವರ ನಾಟಕ, ಕಾದಂಬರಿ, ಕಾವ್ಯ, ಭಾಷಣ, ಮಹಾಕಾವ್ಯಗಳೆಲ್ಲವೂ ಒಂದಕ್ಕೊಂದು ಪೂರಕವಾಗಿ ಕ್ರಿಯಾಶೀಲವಾಗುತ್ತಾ ಸಾಗುತ್ತವೆ.

ರಾಜಕೀಯ ಚರಿತ್ರೆಯನ್ನು ನಿರಾಕರಿಸಿದ್ದರಿಂದ, ಕುವೆಂಪು ಅವರಿಗೆ ಶತ್ರುಗಳ ಕುರಿತಾದ ವ್ಯಾಖ್ಯಾನವು ಬದಲಾಗಿಬಿಡುತ್ತದೆ. ಶತ್ರುಗಳು ಪರಕೀಯರೋ ಅನ್ಯರೋ ಅಲ್ಲ ನಮ್ಮ ಮಧ್ಯೆಯೇ ಇದ್ದಾರೆ. ಸ್ವಾಭಿಮಾನವನ್ನು ನಿರಾಕರಿಸುವ ಶತ್ರುವೇ ದೊಡ್ಡ ಶತ್ರುವೆಂದು ಅವರು ಭಾವಿಸಿದಂತೆ ಕಾಣುತ್ತದೆ. ಶಂಬೂಕ, ಏಕಲವ್ಯ, ಹೂವಯ್ಯ ಮೂರೂ ಜನ ವಿದ್ಯಾಕಾಂಕ್ಷಿಗಳು ಅಸಮಾನತೆಯನ್ನು ಪ್ರಶ್ನಿಸುವವರು ಮತ್ತು

ಹಕ್ಕು ಪ್ರತಿಪಾದನೆ ಮಾಡುವವರು. ಈ ಕಡೆಗಳಲ್ಲೆಲ್ಲ ಕುವೆಂಪು ಕೂಡ 'ಕ್ಷಾತ್ರ ಗುಣದ ಪ್ರತಿಪಾದನೆ ಮಾಡುತ್ತಾರೆ. ಆದರೆ ಇಲ್ಲಿ ಬಳಕೆಯಾಗುವ ಕ್ಷಾತ್ರ ಅನ್ಯರನ್ನು ಕೊಲ್ಲುವುದಕ್ಕೊ, ನಾಶಮಾಡುವುದಕ್ಕೊ ಪ್ರತಿಪಾದಿತವಾಗುವ ರಕ್ತ ಪಾತದ ಕ್ಷಾತ್ರವಲ್ಲ. ಬದಲಿಗೆ 'ವೈಚಾರಿಕ ಕ್ಷಾತ್ರ'. ಆಧುನಿಕ ರಾಷ್ಟ್ರಕ್ಕೆ ಅಗತ್ಯವಾಗಿರುವ ಮನಸ್ಸುಗಳನ್ನು ಅಣಿಗೊಳಿಸುವುದು ಇದರ ಘೋಷಿತ ಉದ್ದೇಶ. ಹಾಗಾಗಿಯೇ ಕರೆಕೊಡುವ ಧಾಟಿಯಲ್ಲಿರುವ ಅವರ ಪದ್ಯಗಳಲ್ಲಿಯೂ ಅವುಗಳ ಮುಂದುವರಿಕೆಯಂತೆ ಭಾಸವಾಗುವ ಭಾಷಣಗಳಲ್ಲಿಯೂ ಪ್ರತಿಪಾದಿತವಾಗುವ ಶತ್ರುಗಳು ಬ್ರಿಟಿಷರೊ, ಮುಸಲ್ಮಾನರೊ ಅಲ್ಲ. ಬದಲಿಗೆ ಉತ್ಪಾದಕ ವರ್ಗದ ರಕ್ತಹೀರಿ ಬೆಳೆದ ಸಂಗ್ರಾಹಕವರ್ಗ ಕೂಡ ತನ್ನ ಜಡಗಟ್ಟಿದ ಸ್ವಭಾವದಿಂದ ನಿರ್ವೀರ್ಯಗೊಂಡಿದೆ. ಶೋಷಿತವರ್ಗ ಎಚ್ಚೆತ್ತುಕೊಳ್ಳುವ ಮೂಲಕ ಶೋಷಕವರ್ಗವನ್ನೂ ಜಾಗೃತಿಗೆ ಕರೆದೊಯ್ಯಬಹುದು ಎಂಬ ನಿಲುವು ನಿತ್ಯ ಕ್ರಿಯಾಶೀಲವಾಗಿರುತ್ತದೆ. ಹಾಗಾಗಿಯೇ 'ಕೋಗಿಲೆ ಮತ್ತು ಸೋವಿಯೆಟ್ ರಷ್ಯಾ' ಕವನದ ಕೋಗಿಲೆ ತಾನು ಗೂಡು ಕಟ್ಟಿ ಮರಿಮಾಡಬೇಕಾದ ಅನಿವಾರ್ಯತೆಗೆ ಸಿಲುಕುತ್ತದೆ.

ಜಾತಿ ಪದ್ಧತಿ, ಪುರೋಹಿತಶಾಹಿ, ವರ್ಣಾಶ್ರಮಧರ್ಮ, ಬ್ರಾಹ್ಮಣವಾದ ಇತ್ಯಾದಿಗಳು ಮನುಷ್ಯನ ಧೀಶಕ್ತಿಯನ್ನು ನಾಶಮಾಡಿವೆ ಎಂಬ ವಿವೇಕಾನಂದರ ನಿಲುವುಗಳು ಕುವೆಂಪುರವರಿಗೂ ಒಪ್ಪಿಗೆಯಾಗುತ್ತವೆ. ಶೂದ್ರ ಸಂನ್ಯಾಸಿಗಳಾದ ವಿವೇಕಾನಂದರ ದಾರಿಯನ್ನು ಶೂದ್ರ ಚಿಂತಕರಾದ ಕುವೆಂಪು ಅನುಸರಿಸುತ್ತಾರೆ. ಪರಂಪರೆಯನ್ನು ತಿರಸ್ಕರಿಸದೆ ವರ್ತಮಾನದ ಅಗತ್ಯಕ್ಕೆ ತಕ್ಕಂತೆ ಮಾರ್ಪಡಿಸಿಕೊಳ್ಳಲು ಯತ್ನಿಸುತ್ತಾರೆ. ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಒಕ್ಕೂಟ ಸಭೆಯಲ್ಲಿ ಮಾಡಿದ ಭಾಷಣದಲ್ಲಿ ಅವರು ಹೇಳುವ ಮಾತುಗಳು ಈ ದೃಷ್ಟಿಯಿಂದ ಗಮನಾರ್ಹವಾದವು :

"ನೀವು ಹಳೆಯ ಸಾಹಿತ್ಯ, ಹಳೆಯ ಇದು ಅದು, ಹಳೆಯ ಧರ್ಮ ಇದೆಲ್ಲವೂ ನಮ್ಮನ್ನು ಇದುವರೆಗೆ ಅಡಿಯಾಳುಗಳನ್ನಾಗಿ ಮಾಡಿ ನಮ್ಮನ್ನು ತುಳಿದುಬಿಟ್ಟಿದೆ ಆದ್ದರಿಂದ ಇದನ್ನೆಲ್ಲ ಸಂಪೂರ್ಣವಾಗಿ ತಿರಸ್ಕರಿಸಿ ಬಿಡುತ್ತೇವೆ ಅಂತ ಹೊರಟರೆ ತುಂಬಾ ನಷ್ಟಕ್ಕೆ ಒಳಗಾಗಬೇಕಾಗುತ್ತದೆ. ನನ್ನನ್ನೊಮ್ಮೆ ದ್ರಾವಿಡ ಕಜಗಂನವರು ಯಾವುದೋ ಒಂದು ಅಧ್ಯಕ್ಷ ಸ್ಥಾನಕ್ಕೆ ಕರೆಯಲು ಬಂದಿದ್ದರು. ನಾನು ಅವರನ್ನು "ನಿಮ್ಮ ಈ ಚಳುವಳಿ ಇದೆಲ್ಲ ಸರಿಯೆ. ಆದರೆ ಏತಕ್ಕೆ ನೀವು ನಮ್ಮ ಹಿಂದಿನ ಮಹಾಕಾವ್ಯಗಳನ್ನು ಸುಟ್ಟು ಹಾಕುತ್ತೀರಾ ಅಥವಾ ಅಲ್ಲಿ ನಾವು ಗೌರವಿಸುವಂತಹ ವ್ಯಕ್ತಿಗಳಿಗೆ ಅವಮಾನ ಮಾಡುತ್ತೀರಿ? ಅಂತ ಕೇಳ್ದೆ. ಅದಕ್ಕವರು "ಅವೆಲ್ಲ ಬ್ರಾಹ್ಮಣರಿಗಾಗಿ, ಆ ಬ್ರಾಹ್ಮಣ ವರ್ಗದಿಂದ ಮಾತ್ರ ಆದದ್ದು. ಅವರು ಕಥೆಗಳನ್ನೆಲ್ಲ ಕಟ್ಟಿ, ಮಾಡಿ, ಆ ಋಷಿಗಳು ಈ ಋಷಿಗಳು ಅಂತ ಹೇಳಿಬಿಟ್ಟು, ರಾಮಾಯಣದಲ್ಲಿ ನಮ್ಮನ್ನೆಲ್ಲ ಹೀಗಳೆದಿದ್ದಾರೆ. ಆದ್ದರಿಂದ ನಾವು ಅವುಗಳನ್ನೆಲ್ಲ ತಿರಸ್ಕರಿಸುವುದಕ್ಕೋಸ್ಕರ ಜನಗಳನ್ನು ಈ ರೀತಿ ಎತ್ತಿ ಕಟ್ಟುತ್ತಿದ್ದೇವೆ." ಅಂತ ಹೇಳಿದರು. ನಾನು ಅವರಿಗೊಂದು ಪ್ರಶ್ನೆ ಕೇಳಿದೆ. "ನೀವು ಆಧುನಿಕರು ಅಲ್ಲಿ ಬಂದಿದ್ದವರು ನಿಮ್ಮ ಹೆಂಡತಿ ಅತ್ಯಂತ ಆಧುನಿಕ ಸ್ತ್ರೀ. ನಿಮ್ಮ ಮನೆಯಲ್ಲಿ ನಿಮ್ಮ ಅಜ್ಜಿ ಹಾಕುತ್ತಿದ್ದಂತಹ ಚಿನ್ನದ ಆಭರಣಗಳು, ಬುಗುಡಿಯೋ

ಬೆಂಡೋಲೆಯೋ ಅವೆಲ್ಲ ಇರುತ್ತವಲ್ಲ, ಆ ಆಭರಣಗಳನ್ನೆಲ್ಲ ನಿಮ್ಮ ಹೆಂಡತಿ ತೆಗೆದು ಒಲೆಗೆ ಹಾಕಿದರೇನು? ಬಿಸಾಕಿದರೇನು?....'' ''ಇಲ್ಲ, ಇಲ್ಲ, ಯಾಕೆ ಬಿಸಾಕ್ತಾರೆ? ...'' ''ಮತ್ತೇನು ಮಾಡಿದರು?....'' ''ಏನು ಮಾಡಿದರು ಅಂದ್ರೆ ಅದನ್ನೆಲ್ಲ ಕರಗಿಸಿ ಆ ಚಿನ್ನಾನ ಇಷ್ಟಕ್ಕೆ ಅನುಸಾರವಾಗಿ ನಾವು ಬೇರೆ ರೀತಿಯಲ್ಲಿ ಆಭರಣ ಮಾಡಿಸಿಕೊಂಡು ಉಪಯೋಗಿಸುತ್ತಿದ್ದೇವೆ.'' ಅಂದರೆ, ಆಭರಣ ರೂಪ ಯಾವುದಾದರೂ ಇರಲಿ ಆಭರಣದ ವಸ್ತು ಇದೆಯಲ್ಲಾ ಅದು ತುಂಬಾ ಬೆಲೆಯುಳ್ಳದ್ದು, ಅದನ್ನು ಎಸೆದರೆ ಮೂರ್ಖರಾಗುತ್ತೀರಿ. ಹಾಗೆಯೆ ರಾಮಾಯಣ ಮಹಾಭಾರತ ಇತರ ಯಾವುದೇ ಕತೆಗಳಾಗಿರಲಿ ಅವನ್ನು ಬಿಸಾಡುವುದಲ್ಲ. ಅವನ್ನು ಕರಗಿಸಿ ನಮ್ಮ ಹೊಸ ಧ್ಯೇಯಕ್ಕೆ ಹೊಸ ಇಷ್ಟಗಳಿಗೆ ಅನುಸಾರವಾಗಿ ಅವುಗಳನ್ನು ನಿಮ್ಮ ಸಾಹಿತ್ಯದಲ್ಲಿ ಎರಕ ಹೊಯ್ಯುಬೇಕು.''[೧೬]

ಬಹುಪಾಲು ನವ್ಯದೊಳಗಿನ ಶೂದ್ರ ಮತ್ತು ತರುಣ ಸಾಹಿತಿಗಳು ಸೇರಿದ್ದ ಬರಹಗಾರರು ಮತ್ತು ಕಲಾವಿದರಿಗೆ ಹೇಳುತ್ತಿರುವ ಮಾತುಗಳಿವು. ಪರಂಪರೆ (ಚರಿತ್ರೆ?) ಯನ್ನು ವರ್ತಮಾನದ ತುರ್ತುಗಳಿಗೆ ತಕ್ಕಂತೆ ವ್ಯಾಖ್ಯಾನ ಮಾಡಬೇಕಾದ ಅಗತ್ಯವನ್ನು ಹೇಳುತ್ತಿದ್ದಾರೆ. ಇಲ್ಲಿ, ಈ ಕತೆಗಳ ಮೂಲಕ ಜನರನ್ನು ಬೇಗ ತಲುಪಬಹುದು ಎಂಬ ಉಪಯುಕ್ತತಾವಾದಿ ಧೋರಣೆ ಇರುವುದರ ಜೊತೆಗೆ, ಪರಂಪರೆಯಿಂದ ನಿರಾಕರಿಸುವುದರಿಂದ ಕಳೆದುಕೊಳ್ಳುವುದೇ ಹೆಚ್ಚು ಎಂಬ ಧೋರಣೆ ಕೂಡ ಕೆಲಸ ಮಾಡುತ್ತಿದೆ. ಅಜ್ಜಿಯ ಒಡವೆಯ ರೂಪಕದಲ್ಲಿ ಪ್ರತಿಪಾದಿಸುತ್ತಿರುವ ಮೀಮಾಂಸೆಯೇ ಕುವೆಂಪುರನ್ನು ಕಡೆಯವರೆಗೆ ಕೈಹಿಡಿದು ನಡೆಸಿದಂತಿದೆ. ರಾಮನನ್ನು ಉದಾತ್ತೀಕರಿಸುವ, ಸ್ತ್ರೀ ಪಾತ್ರಗಳಿಗೆ ಜೀವ ತುಂಬುವ, ವೈದಿಕ ಆಚರಣೆಗಳಿಗೆ ಬದಲಾಗಿ 'ಅಹಿಂಸಾತತ್ವ' ಪ್ರತಿಪಾದಿಸುವ, ಶಂಬೂಕನ ಪರ ನಿಲ್ಲುವ, ಏಕಲವ್ಯನ ಹಕ್ಕು ಪ್ರತಿಪಾದನೆಯನ್ನು ಎತ್ತಿ ಹಿಡಿಯುವ, ಶಿವನನ್ನು  ಜಲಗಾರನನ್ನಾಗಿಸುವ, ಗೀತೆಯಲ್ಲಿ ಮಾನವೀಯ ಮೌಲ್ಯ ಹುಡುಕುವ, ಶಂಕರಾಚಾರ್ಯರಲ್ಲಿ ಪ್ರೀತಿಕಾಣುವ, ಮನು ಹಾಗೆಲ್ಲ ಹೇಳಿರಲಾರ ಎಂದು ವ್ಯಾಖ್ಯಾನಿಸುವ, ಸಂಸ್ಕೃತ ಕಲಿಯುವ, ಬಳಸುತ್ತಿರುವ ಭಾಷೆಗೆ ಸಂಸ್ಕೃತದ ಕೆನೆ ಹಚ್ಚುವ ಕೆಲಸವನ್ನು ಕುವೆಂಪು ಮಾಡುತ್ತಲೇ ಹೋದರು. ಆದರೆ ವರ್ತಮಾನದ ಪುರೋಹಿತ ಶಾಹಿಯನ್ನು, ಪರಂಪರೆಯಲ್ಲಿ ಆಗಿ ಹೋದ ಪುರೋಹಿತಶಾಹಿ ಮೌಲ್ಯಗಳನ್ನು ಉಗ್ರವಾಗಿ ವಿರೋಧಿಸಿದರು. ಆ ಮೂಲಕ ಹಿಂದಿನ ಪಠ್ಯಗಳನ್ನು ಕೇವಲ ಬ್ರಾಹ್ಮಣಶಾಹಿ ಪಠ್ಯಗಳೆಂದು ನೋಡದೆ ಮನುಕುಲದ ಕಥಾನಕವಾಗಿಸಲು ಯತ್ನಿಸಿದ್ದು, ಕನ್ನಡ ರಾಷ್ಟ್ರೀಯತೆಯ ಭಿತ್ತಿ ಇನ್ನಷ್ಟು ವಿಸ್ತರಿಸಿಕೊಳ್ಳಲು, ಉದಾತ್ತವಾಗಲು ಕಾರಣವಾಯಿತು. ಇಲ್ಲೆಲ್ಲ ವೈದಿಕ ಪ್ರತಿಮೆಗಳು ಕೆಳಮುಖವಾಗಿ ಚಲಿಸುವಂತೆ ಮಾಡುವುದರ ಜೊತೆಗೆ, ಐತ, ಪೀಂಚಲುರಂಥ ಪಾತ್ರಗಳನ್ನು 'ಶಿವ-ಶಿವಾಣಿ'ಯರ ನೆಲೆಗೆ ಏರಿಸಲು ಪ್ರಯತ್ನ ಪಟ್ಟರು. ಆ ಮೂಲಕವೇ ಸಮಾನತೆಯ ಕಡೆಗೆ ಚರಿತ್ರೆಯನ್ನು ನೂಕಲು ಯತ್ನಿಸಿದಂತೆ ಕಾಣಿಸುತ್ತದೆ. ಡಿ.ಆರ್.ನಾಗರಾಜ ಮುಂತಾದವರು ಕುವೆಂಪುರವರ ಗದ್ಯ-ಪದ್ಯಗಳನ್ನು ಬೇರೆ ಬೇರೆ ಘಟಕವಾಗಿ ನೋಡುತ್ತಾರೆ. ಆದರೆ ಇಂದು ನಿಂತು ನೋಡಿದಾಗ ಹಾಗನ್ನಿಸುವುದಿಲ್ಲ. ಅವು ಪೂರಕ ನಡಿಗೆಗಳಂತೆ ಕಾಣುತ್ತವೆ.

ಹಾಗಾಗಿಯೇ ಕುವೆಂಪು ರಾಜಕೀಯ ಚರಿತ್ರೆಗಿಂತ, 'ಸಾಮಾಜಿಕ ಚರಿತ್ರೆ' ಕಟ್ಟುವುದು ಅತ್ಯಂತ ಅಗತ್ಯ ಎಂದು ಭಾವಿಸಿದಂತೆ ಕಾಣುತ್ತದೆ. ಈ ಚಲನೆಯ ಮೂಲಕವೇ ಆಧ್ಯಾತ್ಮಿಕ ಸಮಾನತೆ ದಕ್ಕಿಸಿಕೊಳ್ಳಲು ಸಾಧ್ಯ ಎಂದು ಅವರು ಭಾವಿಸಿದಂತಿದೆ.

ಮೇಲಿನ 'ಅಜ್ಜಿ ಒಡವೆಯ ರೂಪಕವನ್ನು ಮತ್ತಷ್ಟು ವಿಸ್ತರಿಸಿ ನೋಡುವುದಾದರೆ, ಅದರಲ್ಲಿ ಸಮುದಾಯಗಳಿಗೂ ಪರಂಪರೆ ಇದೆ ಅದನ್ನೂ 'ಒಡವೆ'ಯಂತೆಯೇ ಗ್ರಹಿಸಬೇಕು ಎಂಬ ನಿಲುವು ಗೈರುಹಾಜರಾಗುತ್ತದೆ. ಇದು ಕುವೆಂಪುರಲ್ಲಿ ಉದ್ದಕ್ಕೂ ಕಾಣಬಹುದಾದ ಕೊರತೆ. ಈ ಮನಸ್ಥಿತಿ ಅವರ ಆಶ್ರಮ ಸಹವಾಸದಿಂದಲೋ ಅಥವಾ ಸಮುದಾಯಗಳ ಅಸ್ಮಿತೆಗಳು ಸಮಗ್ರತೆಗೆ ವಿರೋಧವೆಂತಲೋ, ಮೌಢ್ಯ ತುಂಬಿದ ಕಂತೆಗಳೆಂತಲೋ ಕುವೆಂಪುರವರು ಭಾವಿಸಿದಂತೆ ಕಾಣುತ್ತದೆ.

ಋಷಿ, ಯೋಗಿ ಸಂತ, ಪರಿಭಾಷೆಯಲ್ಲಿ ಪರಂಪರೆಯ ಮುಖ್ಯವಾದದ್ದನ್ನು ನೋಡುವಾಗ (ರೈತನನ್ನು ಕೂಡ) ಯಾಕೆ ಹೀಗೆ ಎಂದು ಅನ್ನಿಸದೇ ಇರದು. ಆಧ್ಯಾತ್ಮಿಕ ಸಮಾನತೆಯಿಂದ ವಂಚಿತಗೊಂಡ ಶೂದ್ರ ಸಮುದಾಯಗಳಿಗೆ (ವಿವೇಕಾನಂದರಿಗೂ ಕೂಡ) 'ಆಧ್ಯಾತ್ಮಿಕ ಸಮಾನತೆ' ಸಾಧಿಸುವುದೂ ಮುಖ್ಯವಾಗುತ್ತದೆ. ವಿದ್ಯೆಗಾಗಿ ಹಾತೊರೆಯುವ, ಕಲಿಕೆಯ ಹಸಿವು ಅವರ ಅನೇಕ ಪಾತ್ರಗಳ ದೊಡ್ಡ ಆಶಯ. ಸಾಮಾಜಿಕ ಸಮಾನತೆ ಮುಖ್ಯವೇ ಹೊರತು, ಆರ್ಥಿಕವಾದುದ್ದಲ್ಲ. ಅಥವಾ ಮೊದಲು ವಿದ್ಯೆ ಆನಂತರವೇ ಆರ್ಥಿಕ ಸಮಾನತೆ ಇರಬಹುದು.

ತಮ್ಮ ವಿದ್ಯಾಗುರುಗಳಾದ ಬಿ.ಎಂ.ಶ್ರೀ ಮತ್ತು ಮಾನಸಿಕ ಗುರುಗಳಾದ ವಿವೇಕಾನಂದರಂತೆ ಪಶ್ಚಿಮದಿಂದ ಗಳಿಸಬಹುದಾದ ವಿವೇಕವನ್ನೂ ವೈಚಾರಿಕ ಎಚ್ಚರವನ್ನೂ 'ಉಪನಿಷತ್' ಮುಂತಾದ ಪರಂಪರೆಯ ಮೂಲಗಳಿಂದ ದಕ್ಕಬಹುದಾದ ಮಾನವೀಯ ಅರಿವನ್ನು ಎತ್ತಿಕೊಂಡು ಬೆರೆಸಿ ಕುವೆಂಪು ಚಿಂತನೆಗಳನ್ನು ಕಟ್ಟುತ್ತಾರೆ. ತಮ್ಮ ಸಮಕಾಲೀನರಿಗಿಂತ ಭಿನ್ನವಾಗಿ ಕ್ರಾಂತಿಕಾರಕವಾಗಿ ಕಾಣುವ ಕುವೆಂಪು ವಿದ್ವೇಷದ ರಾಜಕಾರಣವನ್ನು ಬಿಟ್ಟು ಕೊಟ್ಟವರು. 'ಇಸ್ಲಾಂ ಸಂಸ್ಕೃತಿ' ಕೃತಿಗೆ ಬರೆದಿರುವ ಮುನ್ನುಡಿಯಲ್ಲಿನ ಮಾತುಗಳು ಉಲ್ಲೇಖನಾರ್ಹವಾಗಿವೆ :

"ಹಿಂದು ಮುಸ್ಲಿಮನ ಮೇಲೆ, ಮುಸ್ಲಿಂ ಹಿಂದುವಿನ ಮೇಲೆ ಕತ್ತಿ ಹಿರಿದಿದ್ದಾನೆ ನಿಜ. ಆದರೆ ಬಹುಮಟ್ಟಿಗೆ ಇದು ಸಂಕುಚಿತ ಧರ್ಮಾಂಧತೆಯಿಂದಲ್ಲ, ಮತ ವೈಷಮ್ಯದಿಂದಲ್ಲ. ಮುಸ್ಲಿಮ ಮುಸ್ಲಿಮರೂ, ಹಿಂದು ಹಿಂದುಗಳೂ ಎಂತಹ ಪ್ರಮಾಣದಲ್ಲಿ ಹಲವಾರು ಬಾರಿ ಸ್ವಯೂಥ ಕಲಹದಲ್ಲಿ ಪ್ರಮುತ್ತರಾದರೋ ಅಂತಹ ಪ್ರಮಾಣದಲ್ಲಿಯೆ ಮುಸ್ಲಿಂ-ಹಿಂದುಗಳಲ್ಲಿಯೂ ಸಮರ ಮಸೆದಿದೆ. ಆದರೆ ಮತಾಂಧತಾ ಮೂಲವಾದ ವೈರ ವೈಮನಸ್ಸುಗಳು ಪ್ರತಿ ದ್ವಂದ್ವಗಳಾಗಿದ್ದ ಅಂದಿನ ಹಿಂದು ಅಥವಾ ಮುಸ್ಲಿಮ ಯೋಧರ ಮನಸ್ಸನ್ನು ಬಹಿರಂಗವಾಗಿ ಹೊಕ್ಕು ಕೆಡಿಸಲಿಲ್ಲವೆಂದೇ ಹೇಳಬಹುದು."[೧೭]

"ಇಂದು ಪ್ರಚಾರದಲ್ಲಿರುವ ಭರತ ಖಂಡದ ಇತಿಹಾಸ ಗ್ರಂಥಗಳೆಲ್ಲ ಹಿಂದೂ ಮುಸ್ಲಿಮರಿಗೆ ನಡೆದ ಹೋರಾಟಗಳಿಗೂ ನೈಸರ್ಗಿಕ ಕಾರಣಕ್ಕಾಗಿ ಬಂದ ಭಿನ್ನತೆಗಳಿಗೂ ಅಸ್ವಾಭಾವಿಕವಾದ ಪ್ರಾಧಾನ್ಯತೆ ಕೊಟ್ಟಿವೆ. ಆದರೆ ಆ ಸಮರಕಥೆಯನ್ನು ನೆನೆಯುವ ಹವ್ಯಾಸದಲ್ಲಿ ಎರಡೂ ಜನ ಕೂಡಿ ಬಾಳಿ ಕಟ್ಟಿದ ಸಮರಸ

ಕಥೆಯನ್ನು ಮರೆತಿವೆ. ಇಲ್ಲ ಕೈ ಬಿಟ್ಟಿವೆ. ರಾಜಮನೆತನಗಳ ಉದಯಾಭ್ಯುದಯ ಪತನಗಳ ಕಥೆಯನ್ನು ವಿಸ್ತೃತ ರೂಪದಲ್ಲಿ ಲಂಬಿಸಿ ಉಲ್ಲೇಖಿಸುತ್ತವೆ ; ಹೊರನಾಡುಗಳಿಂದ ತೆರೆ ತೆರೆಯಾಗಿ ಬಂದ ತಂಡ ತಂಡಗಳ ವಿಜಯಯಾತ್ರಾ ಪರಂಪರೆಗಳನ್ನೂ ಉಗ್ರ ದಬ್ಬಾಳಿಕೆ ಕೊಲೆ, ಸುಲಿಗೆ ಕ್ರೌರ್ಯಗಳನ್ನೂ ಒತ್ತಿ ಒತ್ತಿಬಿತ್ತರಿಸುತ್ತವೆ. ಆದರೆ ಇಲ್ಲಿ ನೆಲೆಸಿ ನಿಂತ ಜನ ಜನಾಂಗಗಳ ಘನಿಷ್ಠವಾದ ಸಂಸರ್ಗದಿಂದ ಅನಿವಾರ್ಯವಾಗಿ ಆವಿರ್ಭವಿಸಿ ಸಂಸ್ಕೃತಿ ಶ್ರೀ ಸಂವರ್ಧನೆಯ ಅಮೋಘವಾದ ಆಖ್ಯಾನದ ಉಲ್ಲೇಖವೆ ಸಾಕಷ್ಟು ಪ್ರಮಾಣದಲ್ಲಿ ನಡೆದಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ.

ಪ್ರಚಲಿತ ಭಾರತೇತಿಹಾಸ ಗ್ರಂಥಗಳಲ್ಲಿ ಉಲ್ಲೇಖನಾಭಾವದಿಂದಾದ ಅನಾಹುತ ಅಷ್ಟಿಷ್ಟಲ್ಲ. ಈಗ ನಮಗೆ ಬಂದಿರುವ ಸಂಸ್ಕೃತಿ ಪರಂಪರೆ ಶುದ್ಧ ಹಿಂದೂ ಸಂಸ್ಕೃತಿ, ಅದು ವಿಕಾಸಗೊಂಡದ್ದು ಮುಸ್ಲಿಂ ಪೂರ್ವದ, ಅಚ್ಚ ಹಿಂದೂ ಯುಗದಲ್ಲಿ ಎಂಬ ಅಪೂರ್ಣ ಭಾವನೆ ಹಿಂದುಗಳನೇಕರಲ್ಲಿ ಮನೆ ಮಾಡಿದೆ. ಮುಸ್ಲಿಮರಿಗೂ ತಮ್ಮ ಸಂಸ್ಕೃತಿಯನ್ನು ಕುರಿತು ಇದೇ ತೆರನಾದ ಭ್ರಾಂತಿ ಬಲವಾಗಿದೆ.

ಈ ಶತಮಾನಗಳ ದೀರ್ಘಾವಧಿಯಲ್ಲಿ ಎರಡೂ ಜನರ ಸಂಸ್ಕೃತಿಗಳೂ ಯಮಳ ನದಿಗಳಂತೆ ಜೊತೆ ಜೊತೆಗೆ ಸಾಗಿಯೂ ಒಂದನ್ನೊಂದು ವರ್ಧಿಸದೆ, ಒಂದರ ಮುನ್ನಡೆಗೆ ಮತ್ತೊಂದು ನೆರವಾಗದೆ ಒಂದನ್ನೊಂದು ಸಂಗಮಿಸದೆ ಅಪರಿಚಿತರಂತೆ ಮಾರ್ಮಲೆತು ಮೊಗದಿರುಹಿ ದೂರ ದೂರವೆ ನಿಲ್ಲುವುದು ಅಸಾಧ್ಯವೆಂಬ ಮಾತು ಎಂತಹವರಿಗೂ ಸುಸಂವೇದ್ಯ. ಆದರೆ ಇಂದು ಏನಾಗಿದೆ? ಹಿಂದುಗಳು-ಮುಸ್ಲಿಮರು ಇಬ್ಬರಲ್ಲೂ ವಿಶೇಷತಃ ಇಸ್ಲಾಂ ಬಂಧುಗಳಲ್ಲಿ ಪ್ರತ್ಯೇಕತಾ ಮನೋಭಾವ ಉಲ್ಬಣವಾಗಿ, ಪರಸ್ಪರ ಸಂದೇಹಕ್ಕೂ ತಿರಸ್ಕಾರಕ್ಕೂ ವಿದ್ವೇಷ ದೃಷ್ಟಿಗೂ ಅವಕಾಶವಿತ್ತಿರುವುದರ ಮೂಲ ಕಾರಣ, ಮುಖ್ಯವಾಗಿ ಇತಿಹಾಸದ ಬುದ್ಧಿ ಲೋಪ. ಇಂದಿನ ಭರತಖಂಡದ ಸಂಸ್ಕೃತಿ ವಿಕಾಸಕ್ಕೆ ಪ್ರೇರಕ ಶಕ್ತಿ ಇಲ್ಲಿಯ ಹಿಂದೂ ಮುಸ್ಲಿಮಾದಿ ಎಲ್ಲ ಜನತೆಯ ಮಧುರ ಮೈತ್ರಿ ಸಹಕಾರಗಳೆಂಬುದರ ಅರಿವಿಲ್ಲದಿರುವುದೆ ನಮ್ಮ ಬೀಳಿಗೆ ಕಾರಣವಾಗಿದೆ. ಈ ಅಜ್ಞಾನ ಕಾರ್ಕೋಟಕ ತನ್ನ ಪ್ರತ್ಯೇಕತಾ ಭಾವದ ಹೆಡೆಯನ್ನೆತ್ತಿ ಇಂದು ರಾಜಕೀಯದಲ್ಲಿ ವಿರೂಪ ಕಾರಕವಾದ ಮಾರಕ ವಿಷವನ್ನು ಕಾರಿ, ಅಖಂಡ ರಾಷ್ಟ್ರ ಪುರುಷನನ್ನು ಇಬ್ಭಾಗ ಮಾಡಿದೆ.

ಇದು ರಾಷ್ಟ್ರದ ದುರದೃಷ್ಟ. ಭಾರತ ಮಹಾಮಾನಸದಲ್ಲಿ ಆರ್ಷೇಯ ಸಂಸ್ಕೃತಿಯೊಡನೆ ಅನ್ಯ ಸಂಸ್ಕೃತಿಗಳು ಮಧುರವಾಗಿ ಕೂಡಿಕೊಂಡು, ಬೆಳೆದು, ಬೆಳಗಿ ಬಾಳಿದುದನ್ನು ಅರಿಯದೆ ಹೋದುದು ನಿಜವಾಗಿಯೂ ನಮ್ಮ ನಾಡಿನ ದೌರ್ಭಾಗ್ಯ. ವಿಚಾರಿಸಿ ನೋಡಿದರೆ ಒಂದು ರಾಷ್ಟ್ರದ ಇತಿಹಾಸದ ತಿರುಳಿರುವುದು ಅಲ್ಲಿ ಸಂಧಿಸಿದ ವಿವಿಧ ಜನಾಂಗಗಳ ಸಮರಸ ಜೀವನದಿಂದ ಹೊಮ್ಮುವ ಸಂಸ್ಕೃತಿಯ ಸಾರ ಸೌರಭದಲ್ಲಿ"[೧೮]

ಇಲ್ಲಿ ಚರಿತ್ರೆಯ ವಿದ್ವೇಷಕಾರಿ ಬರವಣಿಗೆಯ ಧಾಟಿಯನ್ನು ವಿರೋಧಿಸುತ್ತಾ ನಿಜವಾದ ಚರಿತ್ರೆ ಹೇಗಿರಬೇಕಿತ್ತು, ಪರಂಪರೆಯನ್ನು ಹೇಗೆ ನೋಡಬೇಕು ಎಂದು ಮಾರ್ಗದರ್ಶಿ ಸೂತ್ರವನ್ನು ಕುವೆಂಪು ಗುರುತಿಸುತ್ತಿದ್ದಾರೆ. ಇವತ್ತಿನ ಅಸಹನೆಯ ಸಂದರ್ಭದಲ್ಲಿ ಅತ್ಯಂತ ಕ್ರಾಂತಿಕಾರಕವಾಗಿ ಕಾಣುವ ಈ ಮಾತುಗಳನ್ನು ಕುವೆಂಪು ಮತ್ತು ಬಿ.ಎಂ.ಶ್ರೀಯವರು ಕಳೆದ ಶತಮಾನದ ಪ್ರಥಮಾರ್ಧದಲ್ಲೇ ಪ್ರತಿಪಾದಿಸಿರುವುದು ಉಲ್ಲೇಖನೀಯ. ಮೈಸೂರು ವಿಶ್ವವಿದ್ಯಾಲಯದಿಂದ, ೧೯[illegible]ರಲ್ಲಿ ಪ್ರಕಾಶನಗೊಂಡ

ಪುಸ್ತಕ ಇದು. ಇಡೀ ಉಪಖಂಡವೇ ವಿದ್ವೇಷದಲ್ಲಿ ಮುಳುಗಿ ಹೋಗಿರುವಾಗ, ಶಂಬಾ ಜೋಶಿಯವರಂಥ ಚಿಂತಕರೂ ತಮ್ಮ ಮಾನಸಿಕ ಸ್ಥಿಮಿತ ಕಳೆದುಕೊಂಡು ಪ್ರತಿಕ್ರಿಯಿಸುತ್ತಿರುವಾಗ, ಗುರು ಶಿಷ್ಯರಿಬ್ಬರೂ ಸೇರಿ ಪರ್ಷಿಯನ್ ವಿದ್ವಾಂಸರಿಂದ ಪುಸ್ತಕ ಬರೆಸಿ, ಎರಡೂ ಸಂಸ್ಕೃತಿಗಳ ಸಂಕರಶೀಲತೆಯ ಅಗತ್ಯತೆಯನ್ನು ಪ್ರತಿಪಾದಿಸುತ್ತಾರೆ. ಆ ಮೂಲಕ ಭಾರತವೆಂದರೆ ಹಿಂದೂ ಮುಸ್ಲಿಂ ಎಂಬ ಎರಡು ಗೂಳಿಕಾಳಗದಂತೆ ಗ್ರಹಿಸದೆ ನದಿಗಳ ರೂಪಕವನ್ನು ಕುವೆಂಪು ನೀಡುತ್ತಿದ್ದಾರೆ. ನದಿಗಳು ಬೆರೆತು ರೂಪುಗೊಂಡ ಸಂಸ್ಕೃತಿಗಳಿವು, ಅಲ್ಪಮತಿಗಳು ಮತ್ತು ಸಂಕುಚಿತವಾದಿಗಳು ಮಾತ್ರ 'ಶುದ್ಧತೆ' ಕುರಿತು ಮಾತಾಡುತ್ತಿದ್ದಾರೋ ಎಂಬಂತೆ ಚಿತ್ರಿಸಿ ತಮ್ಮ ಸಮಕಾಲೀನ ಚಿಂತಕರಿಗೆ ಪ್ರತಿಕ್ರಿಯಿಸುತ್ತಿದ್ದಾರೆ.

ಕನ್ನಡ ರಾಷ್ಟ್ರೀಯತೆಯ ಚಿಂತನೆಗಳು ಯಾಕೆ ಭಿನ್ನ ಮತ್ತು ನಿರ್ಮಾಣ ಹಂತದಲ್ಲಿರುವ ರಾಷ್ಟ್ರೀಯತೆ ಯಾವ ಭಿತ್ತಿಯ ಮೇಲೆ ನಿಲ್ಲಬೇಕು ಎಂಬ ಆರಂಭಗೀತೆಯನ್ನು ಕುವೆಂಪು ಬರೆಯುತ್ತಿದ್ದಾರೆ.

ಇವತ್ತಿನ ಚರಿತ್ರಕಾರರೂ ಸಮಾಜೋ ರಾಜಕೀಯ ಚಿಂತಕರೂ ಅನುಸರಿಸಬೇಕಾದ ದಾರಿಯೆಂದರೆ, ಪ್ರಭುತ್ವಗಳ ಸಂಘರ್ಷವನ್ನು ಧಾರ್ಮಿಕ ಸಂಘರ್ಷವಾಗಿ ಪರಿಭಾವಿಸಬಾರದು ಎನ್ನುವ ವಿವೇಕ. ಕನ್ನಡದ ಪ್ರಧಾನ ಚಿಂತನ ಪರಂಪರೆಯ ಲಕ್ಷಣವಿದು. ಆರ್ಥಿಕ -ರಾಜಕೀಯ ಹಿತಾಸಕ್ತಿಗಳಿಗಾಗಿ ಸಂಘರ್ಷ ವಿಭಿನ್ನ ಸಾಮ್ರಾಜ್ಯಗಳ ನಡುವೆಯೂ ನಡೆದಿದೆ. ಅದು ಧರ್ಮಾತೀತವಾಗಿದೆ ಎಂಬ ನಿಲುವಿನಲ್ಲಿ ಕುವೆಂಪು ಮಾತನಾಡುತ್ತಾರೆ. "ವಿಜಿಗೀಷುವಾದ ಘುಸ್ನೀ ಮಹಮೂದನು ಖುರಸಾನ ತುರ್ಕಿಸ್ಥಾನಗಳನ್ನು ತೊತ್ತಳದುಳಿದಂತೆಯೇ ಈ ಸ್ವರ್ಣ ಭೂಮಿಯನ್ನು ಸೂರೆಗೊಂಡದ್ದೂ ತನ್ನ ರಾಜ್ಯದ ರಾಜಧಾನಿಯ ಶೃಂಗಾರ ವೈಭವ ವರ್ಧನೆಗಾಗಿ ಅಫ್‌ಘನ್ನರು ತಂಡೋಪತಂಡವಾಗಿ ಇಲ್ಲಿಗೆ ವಲಸೆ ಬಂದದ್ದು ಮಧ್ಯ ಏಷ್ಯಾನಿವಾಸಿಗಳ ಒತ್ತಡದ ಫಲವಾಗಿ ಪ್ರಾಚೀನ ಯುಗದ ಆರ್ಯರ ಆಗಮನದ ಕಥೆಯೂ ಇದರಂತೆಯೇ ದಿಲ್ಲೀಶ್ವರನಾದ ಬಾಬರನ ಆತ್ಮವೃತ್ತವೂ ಈ ಮಾತಿನ ಸತ್ಯತೆಯನ್ನೇ ಸಮರ್ಥಿಸುತ್ತದೆ."[೧೯] ಈ ಮಾತುಗಳು ಮುಸ್ಲಿಂ ಪ್ರಭುತ್ವಗಳು ಬಂದಿದ್ದೇ ಧರ್ಮಪ್ರಸಾರಕ್ಕಾಗಿ ಎಂಬ ಮತೀಯವಾದಿ ಚಿಂತಕರ ವಾದಗಳನ್ನು ತಿರಸ್ಕರಿಸುತ್ತವೆ.

"ಮುಸ್ಲಿಮರ ಜಯಮುಷ್ಟಿ ಕಾಲಕ್ರಮದಲ್ಲಿ ಸಡಲಿ ಹಿಂದೂ-ಮುಸ್ಲಿಮರಲ್ಲಿ ಚಿಗುರಿದ ಸೌಹಾರ್ದದ ಬೆಳೆಯಲ್ಲಿ ಈ ನವ ಚೈತನ್ಯವನ್ನು ಗುರುತಿಸಬಹುದಾಗಿದೆ. ಈ ಸಮನ್ವಯ ಕ್ರಿಯೆ ಪಠಾಣರ ಕಾಲದಿಂದ ಕ್ರಮವಾಗಿ ಸಾಗಿ, ಮೊಗಲರ ಕಾಲಕ್ಕೆ ಮೇಲ್ನೆಲೆ ಮುಟ್ಟಿತು. ವಿಶೇಷವಾಗಿ ಉತ್ತರ ಭಾರತದ ಮುಸ್ಲಿಮ ಹಿಂದುಗಳಿಬ್ಬರ ಜೀವನ ಪದ್ಧತಿಗಳಲ್ಲಿ, ಧರ್ಮರಂಗದಲ್ಲಿ, ಕಲಾಕ್ಷೇತ್ರದಲ್ಲಿ, ಸಾಮಾಜಿಕ ಜೀವನದಲ್ಲಿ, ಗೃಹ ಜೀವನದಲ್ಲಿ, ವೇಷ ಭೂಷಣಗಳಲ್ಲಿ ಪರಸ್ಪರ ಪ್ರಭಾವ ಎದ್ದು ಕಾಣುತ್ತದೆ. ಇಸ್ಲಾಂ ಸಂಸ್ಕೃತಿಯ ಭಾರತೀಕರಣದಿಂದ ರೂಪುಗೊಂಡ ಈ ನವೀನ ಜೀವನ ರೀತಿಯನ್ನು ಬಾಬರನು "ಹಿಂದೂಸ್ಥಾನಿ ರೀತಿ" ಎಂದು ಹೆಸರಿಸಿದ್ದಾನೆ.

ಈ ಇಸ್ಲಾಂ ಸಂಸ್ಕೃತಿಯ ಭಾರತೀಕರಣವು ಲೋಕೋತ್ತರ ಫಲವನ್ನೇ ಕೊಟ್ಟಿತು. ದೂರದರ್ಶಿಯಾದ ಮೊಗಲರ ಮೂಲ ಪುರುಷ ಬಾಬರನು ಈ ಎರಡು ಜನಾಂಗಗಳಲ್ಲಿ ಮೂಡಬೇಕಾದ ಸಹಕಾರವನ್ನು ಗುರುತಿಸಿಕೊಂಡು, ಹಿಂದೂಗಳನ್ನು ಪ್ರೀತಿಗೌರವಗಳಿಂದ ನಡೆಸಿಕೊಂಡರೇನೆ ಭಾರತದಲ್ಲಿ ಮೊಗಲ ಸಾಮ್ರಾಜ್ಯ

ಸ್ಥಾಯಿಯಾದೀತೆಂದು ತನ್ನ ಉಯಿಲಿನಲ್ಲಿ ನೆಚ್ಚಿನ ಪುತ್ರ ಹೂಮಾಯಾನನಿಗೆ ಸಂದೇಶವಿತ್ತಿದ್ದಾನೆ. ಈ ಉಪದೇಶದಂತೆ ಅಕ್ಬರ ಸಾಮ್ರಾಟನು ಹಾಗೂ ಜೀವನದಲ್ಲಿ ಒಂದಾಗಿ ಪಾಲುಗೊಂಡು ಬರುವ ತಲೆಮಾರುಗಳಿಗೆ ಮೇಲ್ಪಂಕ್ತಿ ಹಾಕಿದನು. ಹಿಂದುಗಳ ಮೇಲಿನ ಅಪಮಾನಕರವಾದ ತೆರಿಗೆಗಳನ್ನು ತೆಗೆದುಹಾಕಿ, ಅವರನ್ನೂ ಆತ್ಮೀಯರನ್ನಾಗಿ ಕಂಡು, ಹಿಂದೂ ಧರ್ಮ ಪಾಲಕರೆಂದು ಹೆಸರಾಂತ ರಾಜಪುತ್ರ ಮನೆತನಗಳೊಡನೆ ಸ್ನೇಹ ಸಂಬಂಧದ ಜೊತೆಗೆ ರಕ್ತ ಬಾಂಧವ್ಯವನ್ನೂ ಬೆರೆಸಿದನು. ಅವನ ತರುವಾಯ ಬಂದ ಜಹಾಂಗೀರ್, ಷಹಜಹಾನ್, ಇವರು ಹೆಸರಿಗೆ ಮೊಗಲರಾದರೂ ವಾಸ್ತವವಾಗಿಯೂ ರಜಪೂತ ಬಳ್ಳಿಯ ಸುಳಿಗಳು. ಹಿಂದುಗಳು ವಿಶಾಲಮತಿ ಅಕ್ಬರನ ಸ್ನೇಹಾಶ್ರಯದಲ್ಲಿ ಮೊಗಲ ಸಾಮ್ರಾಜ್ಯದ ಭದ್ರತೆಗೆ ರಕ್ಷಕರೂ ಪಾಲಕರೂ ಆದರು. ಅಕ್ಬರನದು ಬಹು ದೂರದೃಷ್ಟಿ. ಅಸಹನೀಯ ಮತ ವೈಷಮ್ಯವನ್ನು ತೊಡೆದು ಹಾಕಿ ಎಲ್ಲರೂ ಏಕಧರ್ಮವನ್ನು ಪಾಲಿಸುವ ಒಂದು ಜನಾಂಗದ ನಿರ್ಮಾಣದ ಕನಸೇ ಅವನ ಹೃದಯ ಮಂದಿರದಲ್ಲಿ ಮೂಡಿದ 'ದೀನಿ ಇಲ್ಲಾಹಿ' ಮತ. ಈ ಜೀವನ ದೀಪ್ತಿಯಿಂದ ಉದ್ದೀಪಿತರಾಗಿ ಮುನ್ನಡೆದ ಜಹಾಂಗೀರ್, ಷಹಜಹಾನರು ಹಿಂದುಗಳ ಹೃದಯವನ್ನು ಸೂರೆಗೊಂಡು, ಭಾರತದಲ್ಲಿ ಮೆರೆಸಿದ ಒಂದು ರಸೋಜ್ವಲ ಕಲಾವೈಭವದ ಕೀರ್ತಿ ದಿಗಂತ ವ್ಯಾಪಿಯಾಯ್ತು.

ಇದೇ ಸಮನ್ವಯ ಸೌಹಾರ್ದ ಗೀತೆಯನ್ನು ಅಮೀರ್‌ಖುಸ್ರು, ರಮಾನಂದ, ಕಬೀರ, ನಾನಕ, ಚೈತನ್ಯರ ಜೀವನಗಳು ಹಾಡಿವೆ. ಸೂಫಿ ಪಂಥದಲ್ಲಿಯೂ ಬಂಗಾಳ ಮಹಾರಾಷ್ಟ್ರಗಳಲ್ಲಿ ಮೈದೋರಿದ ಭಕ್ತಿ ಪಂಥಗಳಲ್ಲಿಯೂ ಪ್ರಕಟವಾದ ಸಮಾನತಾಭಾವಗಳು ಪೂರ್ವೋಕ್ತ, ಸಮನ್ವಯ ದೃಷ್ಟಿಯ ಪ್ರತಿಬಿಂಬಗಳಾಗಿವೆ."[೨೦]

ಕುವೆಂಪುರವರು ಮೇಲೆ ವಿವರಿಸಿದ ವಿವರಣೆಯನ್ನು ಗಮನಿಸಿದವರಿಗೆ, ಅವರು ಚರಿತ್ರೆಯನ್ನು ಜನ ಜೀವನದ ಮಧ್ಯೆ ಹೇಗೆ ಪ್ರಭಾವಿಸಿದೆ ಎಂದು ನೋಡುವುದರ ಜೊತೆಗೆ ಕಲಾ ಕೇಂದ್ರಿತವಾಗಿಯೂ ನೋಡುವ ಕ್ರಮ ತಿಳಿಯುತ್ತದೆ. ಉದ್ದಕ್ಕೂ ರಾಜಕೀಯ ಪ್ರಬುದ್ಧ ನಿಲುವು ಕಾಣಿಸಿಕೊಳ್ಳುತ್ತದೆ. ಈ ಮಾತುಗಳ ಮುಂದೆ ಅವರ ಆರಂಭಕಾಲದ ರಚನೆಗಳಲ್ಲಿ ಒಂದಾದ ನಾಡಗೀತೆಯಲ್ಲಿ ವ್ಯಕ್ತವಾದ ರಾಜಕೀಯ ನಿಲುವೇ ಅಂತಿಮ ಎಂಬಂತೆ ಗ್ರಹಿಸಿ ಮಾತನಾಡುವ ಅನೇಕ ವಿಮರ್ಶಕರು ನಿರುತ್ತರವಾಗಬೇಕಾಗಬಹುದು. ಅಲ್ಲಿ ಹೈದರ್ ಟಿಪ್ಪುಸುಲ್ತಾನರ ಹೆಸರನ್ನು ಬರೆದು ಅಳಿಸಲಾಗಿದೆ. ಜನಪದರನ್ನೂ ಫ್ಯೂಡಲ್ ಪ್ರಭುಗಳನ್ನೂ, ವೈದಿಕ ಶಾಹಿ ಪ್ರತಿಪಾದಕರನ್ನೂ ಒಂದೇ ದೋಣಿಯಲ್ಲಿ ಕೂರಿಸಿಕೊಂಡು ಯಾತ್ರೆ ಹೊರಟಂತೆ ಕುವೆಂಪು ಕಾಣುತ್ತಾರೆ ಎಂಬೆಲ್ಲ ನಿಲುವುಗಳು ವ್ಯಕ್ತವಾಗುತ್ತಿವೆ. 'ಕರ್ನಾಟಕ ರಾಷ್ಟ್ರಗೀತೆ' ಎಂಬ ಶೀರ್ಷಿಕೆಯಲ್ಲಿ ಬರೆದ ಗೀತೆ ಅದು. ರಾಷ್ಟ್ರವನ್ನು ಕುರಿತ ಎಲ್ಲ ಗೀತೆಗಳಂತೆ ಸಡಿಲ ಬರಹವಾದರೂ ಕಟ್ಟುತ್ತಿರುವ ರಾಷ್ಟ್ರದಲ್ಲಿ ಯಾರನ್ನೂ ಬಿಡದೆ ಅಜ್ಜಿಯ ಒಡವೆಯಂತೆ ಎಲ್ಲರನ್ನೂ ಸಮಕಾಲೀನ ರಾಷ್ಟ್ರೀಯತೆಗೆ ಪೂರಕವಾಗಿ ಬಳಸಬೇಕು ಎಂಬ ನಿಲುವಿನಿಂದ ಹೊರಟಂತೆ ಕಾಣುತ್ತದೆ. ಅಥವಾ ಶತ್ರುವಿನ ಎದುರು ಪರಂಪರೆಯ ಈ ಸ್ಮೃತಿಗಳ ಮೂಲಕ ಕಟ್ಟುತ್ತಿರುವ ರಕ್ಷಣಾ ಗೋಡೆಯೂ ಇರಬಹುದು.

ಕವಿ ರವೀಂದ್ರನಾಥ ಠಾಗೂರರ ಭಾರತ ರಾಷ್ಟ್ರಗೀತೆಯ ಪ್ರಭಾವದಿಂದ ಪ್ರೇರಿತನಾಗಿ ಕರ್ನಾಟಕ ರಾಷ್ಟ್ರಗೀತೆ ಬರೆದೆ ಎಂದು ಕುವೆಂಪು ಹೇಳುತ್ತಾರೆ. ಈಗಾಗಲೇ ಸ್ಥಾಪಿತವಾಗಿದ್ದ ಕನ್ನಡ ಭಾರತಗಳನ್ನು ತಾಯಿ-ಮಗಳ

ಸಂಬಂಧದಲ್ಲಿ ನೋಡುತ್ತಿದ್ದ ದೃಷ್ಟಿಕೋನವನ್ನೆ ಕುವೆಂಪು ಇಲ್ಲಿ ಮುಂದುವರಿಸುತ್ತಾರೆ. "ಇಲ್ಲಿ ಕರ್ಣಾಟ ಮಾತೆಗೆ ಸಲ್ಲುವ ಜಯಕಾರ ಆಕೆ ಭಾರತ ಜನನಿಯ ತನುಜಾತೆಯಾಗಿರುವುದರಿಂದಲೆ. ಭಾರತಾಂಬೆಯ ಅಂಗೋದ್ಭವೆಯಾಗಿ ಕರ್ನಾಟಕಕ್ಕೆ ಬೇರೆಯ ಅಸ್ತಿತ್ವವೆಲ್ಲಿ? ಈ ತನುಜಾತೆ ಆ ಮಾತೆಯ ತನುವಿನ ಎಂದರೆ ಐಹಿಕ ಆಧ್ಯಾತ್ಮಿಕ ಎರಡೂ ಸೇರಿದ ತನುವಿನ ಸಕಲ ಲಕ್ಷಣಗಳನ್ನು ಪಡೆದು, ಸಮರೂಪೆ ಮಾತ್ರವಲ್ಲ, ಸರ್ವಸಮರೂಪೆಯಾಗಿದ್ದಾಳೆ."[೮೧] ರಾಷ್ಟ್ರದ ರೂಪ ಸಾದೃಶ್ಯಗಳಲ್ಲಿ ಭಾರತ -ಕರ್ನಾಟಕಗಳು ಏಕರೀತಿಯವು ಎಂಬ ಅರಿವು ಇಲ್ಲಿ ಕೆಲಸ ಮಾಡಿರುವಂತಿದೆ. ಕುವೆಂಪು ರಾಷ್ಟ್ರವನ್ನು, ಅನೇಕ 'ಧರ್ಮ, ಮತ, ಪಂಥಗಳನ್ನೊಳಗೊಂಡ ಶಾಂತಿಯ ತೋಟ ಎಂಬ ಉದ್ಯಾನದ ಕಲ್ಪನೆಯಲ್ಲಿ ಮೂಡಿಸುತ್ತಾರೆ. ಇಲ್ಲಿ ಧರ್ಮ, ಸಂಸ್ಕೃತಿಗಳು ವೈವಿಧ್ಯತೆಯೇ ಹೊರತು ಬಲಪಂಥೀಯರು ಗುರುತಿಸುವಂತೆ ಕುರೂಪಗಳಲ್ಲ. ಇಲ್ಲಿನ 'ಬಹುತ್ವ'ದ ಕಲ್ಪನೆಯೇ ರೋಮಾಂಚಕವಾದದ್ದು. ಆಧುನಿಕ ರಾಷ್ಟ್ರಗಳಿಗೆ ಕುವೆಂಪುರ ಈ ನಿಲುವುಗಳು ಮಾರ್ಗದರ್ಶಿ ನಿಲುವುಗಳಾಗಿ ಕಾಣುತ್ತವೆ.

### ೪.೬ ಚಿದಾನಂದ ಮೂರ್ತಿಯವರ ಚರಿತ್ರೆ ಕುರಿತಾದ ಚಿಂತನೆಗಳು

ಕನ್ನಡದ ದೊಡ್ಡ ಸಂಶೋಧಕರಲ್ಲಿ ಒಬ್ಬರಾದ ಡಾ.ಚಿದಾನಂದ ಮೂರ್ತಿಯವರು ಕನ್ನಡ ರಾಷ್ಟ್ರೀಯತೆಯ ಆಧುನಿಕ ಚರ್ಚೆಗಳನ್ನು ವಿಭಿನ್ನ ದಾರಿಗೆ ತಿರುಗಿಸುತ್ತಿರುವವರು. ಚರಿತ್ರೆಯನ್ನು ಬರಹರೂಪದ ಅಥವಾ ದಾಖಲೆಗಳ ಮೂಲಕ ವಿಶ್ಲೇಷಿಸುವ ವಸಾಹತುವಾದಿ ಚಿಂತನೆಗಳ ಮುಖ್ಯಮಾದರಿ ಇವರದು. 'ಶಾಸನಗಳು, ಬಖೈರುಗಳು, ನಾಣ್ಯಗಳು, ವೀರಗಲ್ಲುಗಳು, ಮಾಸ್ತಿಗಲ್ಲುಗಳು, ಸ್ತಂಭಗಳು, ಸ್ತೂಪಗಳು, ಚಿತ್ರ, ಶಿಲ್ಪಗಳು, ಬರೆಹದ ದಾಖಲೆಗಳನ್ನು ಆಧರಿಸಿ ಚರಿತ್ರೆಯನ್ನು ಸಾಂಸ್ಕೃತಿಕವಾಗಿ ಗ್ರಹಿಸಲು ಇವರು ಪ್ರಯತ್ನಿಸುತ್ತಾರೆ. ಶಂಬಾ ಮುಂತಾದವರು ತಿರಸ್ಕರಿಸುವ 'ಕ್ರಮಬದ್ಧತೆ'ಯನ್ನು ಚಿದಾನಂದ ಮೂರ್ತಿಯವರು ಒಪ್ಪಿ ಚರಿತ್ರೆಯನ್ನು ವ್ಯಾಖ್ಯಾನಿಸುವ ಕಾರ್ಯಕ್ಕೆ ಕೈಹಾಕುತ್ತಾರೆ. ಸಹಜವಾಗಿಯೇ ಪ್ರಭುತ್ವದ ಪರವಾದ ಚರಿತ್ರೆಯನ್ನು ಚರಿತ್ರೆ ಎಂದು ಭಾವಿಸಿ ನಡೆಯುತ್ತಾರೆ. ಜೊತೆಗೆ ಪ್ರಭುತ್ವಗಳ ಆರ್ಥಿಕ ಮಹದಾಸೆಗಳನ್ನು ಕಡೆಗಣಿಸಿ 'ಧಾರ್ಮಿಕ ದಿಗ್ವಿಜಯ'ಗಳ ಆಯಾಮ ಕೊಡುತ್ತಾರೆ. ಇಲ್ಲೆಲ್ಲ ಬಲಪಂಥೀಯ ಮತೀಯವಾದಿ ದೃಷ್ಟಿಕೋನಕ್ಕೆ ಪೂರಕ ಸಾಮಗ್ರಿಯಾಗಿ ಚಿಂತನೆಗಳನ್ನು ರೂಪಿಸಿ ಕೊಡುತ್ತಿದ್ದಾರೆ. ಹಾಗಾಗಿ 'ಅನ್ಯದ' ಕುರಿತಾದ ದ್ವೇಷ, ಅಸಹನೆಗಳು ತೀವ್ರರೂಪದಲ್ಲಿ ವ್ಯಕ್ತಪಡಿಸುವ ಚಿದಾನಂದ ಮೂರ್ತಿಯವರ ಚಿಂತನೆಗಳನ್ನು ಕನ್ನಡದ ಜನಪ್ರಿಯ ಪತ್ರಿಕೆಗಳಲ್ಲಿ ನಿರಂತರವಾಗಿ ಕಾಣುತ್ತಲಿದ್ದೇವೆ. ಕನ್ನಡ ಸಾಹಿತ್ಯ ಪರಂಪರೆಯ ಭಾಗವಾಗಿ ಬೆಳೆದ ಚಿದಾನಂದ ಮೂರ್ತಿಯವರ ನಿಲುವುಗಳಿಗೆ ಕಾರಣಗಳೇನು? ಏಕೆ ಪರಭಾಷಿಕರು, ಪರಧಾರ್ಮಿಕರನ್ನು ಕಂಡರೆ ದ್ವೇಷಕಾರುತ್ತಾರೆ? ಇವುಗಳ ಹಿಂದೆ ಕ್ರಿಯಾಶೀಲವಾಗಿರುವ ರಾಜಕೀಯ ಗ್ರಹಿಕೆಗಳು ಯಾವುವು? ಎಂಬ ಪ್ರಶ್ನೆಗಳು ಹುಟ್ಟುತ್ತವೆ.

ಕನ್ನಡ ರಾಷ್ಟ್ರೀಯತೆಯನ್ನು ಪ್ರಭುತ್ವಗಳ ಸಾತತ್ಯದಲ್ಲಿ ಮಂಡಿಸುವ ಚಿದಾನಂದಮೂರ್ತಿಯವರಿಗೆ ವರ್ತಮಾನದ ಬಿಕ್ಕಟ್ಟುಗಳನ್ನು ಜೀರ್ಣಿಸಿಕೊಳ್ಳಲಾಗುವುದಿಲ್ಲ. ಡಿ.ಆರ್.ನಾಗರಾಜ ಅವರು ಸ್ಪಷ್ಟವಾಗಿ

ಗುರುತಿಸುವಂತೆ, "ಚಿದಾನಂದ ಮೂರ್ತಿ ಅವರಲ್ಲಿ ಕರ್ನಾಟಕ ಮಧ್ಯಯುಗದಲ್ಲಿ ನಿಂತುಹೋಗಿದೆ. ಅವರು ಕನಸು ಕಾಣುತ್ತಿರುವ ಕರ್ನಾಟಕ ಕದಂಬರ, ಹೊಯ್ಸಳರ, ಚಾಲುಕ್ಯರ ಕಾಲದ್ದು. ಅದು ವಿಜಯನಗರ ಸಾಮ್ರಾಜ್ಯವನ್ನು ಹಿಂದೂ ಸಾಮ್ರಾಜ್ಯ ಪರಿಭಾಷೆಯಲ್ಲಿ ವಿಶ್ಲೇಷಿಸುವ ಸೈದ್ಧಾಂತಿಕ ಅಭ್ಯಾಸದ್ದು. ಆ ಸಾಮ್ರಾಜ್ಯದ ಅವನತಿ ಹಿಂದುತ್ವದ ಹಾಗೂ ಕನ್ನಡತ್ವದ ಜೋಡಿ ನಿರ್ನಾಮ ಎಂಬ ನಿಲುವಿನಿಂದ ಹೊರಟದ್ದು. ಹೀಗಾಗಿ ಕರ್ನಾಟಕ ಆಧುನಿಕ ಯುಗಕ್ಕೆ ಕಾಲಿಟ್ಟು ಪರಿವರ್ತನೆಯಾದ ಕ್ರಮಗಳ ಪ್ರಸ್ತಾಪಕ್ಕೆ "ಕನ್ನಡ ಸಂಸ್ಕೃತಿ, ನಮ್ಮ ಹೆಮ್ಮೆ" ಕೃತಿಯಲ್ಲಿ ಜಾಗವೇ ಇಲ್ಲ"[೨೨]

ವಸಾಹತುಶಾಹಿ ವ್ಯವಸ್ಥೆ ಸೃಷ್ಟಿಸಿದ ಬಿಕ್ಕಟ್ಟುಗಳನ್ನು ಒಪ್ಪಿಕೊಂಡ ಚರಿತ್ರೆಯ ಕ್ರಮ ಚಿದಾನಂದ ಮೂರ್ತಿಯವರದು. ಚರಿತ್ರೆಯಲ್ಲಿ ತಮ್ಮ ಸಿದ್ಧಾಂತಗಳ ಪೂರಕವಾದ ಅಂಶಗಳನ್ನು ಮಾತ್ರ ಜಾಣತನದಿಂದ ಆರಿಸಿಕೊಂಡು, ತಾವು ವಿರೋಧಿಸುವ ಶತ್ರುವಿನ ಉಳಿದ ಮುಖಗಳನ್ನು 'ಬೈಪಾಸು' ಮಾಡಿಬಿಡುತ್ತಾರೆ. ಹಾಗಾಗಿಯೇ ಚಿದಾನಂದ ಮೂರ್ತಿಯುವರು ಪ್ರತಿಪಾದಿಸುತ್ತಿರುವ ಕನ್ನಡ ರಾಷ್ಟ್ರೀಯತೆಯಲ್ಲಿ ಬೌದ್ಧಮತಾನುಯಾಯಿಗಳಾದ ಶಾತವಾಹನರು, ಹುಟ್ಟಿನಿಂದ ಮುಸ್ಲಿಮರಾದ ಹೈದರ್-ಟಿಪ್ಪು ಸುಲ್ತಾನರು ಕಾಣೆಯಾಗಿ ಬಿಡುತ್ತಾರೆ. ಅಥವಾ ಮತಾಂಧರಾಗಿ ಕ್ರೂರಿಗಳಾಗಿ ಕನ್ನಡ ವಿರೋಧಿಗಳಾಗಿ ಮಾತ್ರ ಕಾಣಿಸಿಕೊಳ್ಳುತ್ತಾರೆ. ಟಿಪ್ಪುವನ್ನು 'ರಾಕ್ಷಸೀಕರಿಸಲು' ಚಿದಾನಂದ ಮೂರ್ತಿಯವರು ನಿರಂತರ ಪ್ರಯತ್ನ ಮಾಡುತ್ತಲೇ ಇದ್ದಾರೆ. ತಮ್ಮ ವಿರೋಧಿಗಳನ್ನು 'ರಾಕ್ಷಸೀಕರಿಸಿ', ಏಕಾಂಗಿಯಾಗಿಸಿ ದಮನಮಾಡುವ ತಂತ್ರಗಾರಿಕೆ ಭಾರತದ ಬ್ರಾಹ್ಮಣಶಾಹಿಗೆ ಹೊಸದಲ್ಲ. ಪ್ರಸ್ತುತದಲ್ಲೂ ಅದೇ ದಾರಿ ಹಿಡಿದಿರುವ 'ಹಿಂದುತ್ವ'ವಾದಿಗಳು 'ಹಿಂದು' ಎಂಬುದರ ಎದುರಿಗೆ ಉಳಿದೆಲ್ಲ ಸಮುದಾಯಗಳನ್ನು ಹೀಗೆ ರಾಕ್ಷಸೀಕರಿಸಲು ಪ್ರಯತ್ನಿಸುತ್ತಿರುವುದು ಗುಟ್ಟಿನ ವಿಷಯವೇನೂ ಅಲ್ಲ. ಅಂತಹ ಸಿದ್ಧಾಂತದ ಪ್ರತಿಪಾದಕರಲ್ಲಿ ಕನ್ನಡದ ಚಿಂತಕ ಮತ್ತು ಸಂಶೋಧಕ ಚಿದಾನಂದ ಮೂರ್ತಿಯವರು ಮುಂಚೂಣಿ ಸ್ಥಾನದಲ್ಲಿ ನಿಲ್ಲುತ್ತಾರೆ.

ಎಡಪಂಥೀಯ ಮತ್ತು ಉದಾರವಾದಿ ಚಿಂತಕರು ಟಿಪ್ಪುವನ್ನು ವಸಾಹತು ಶಕ್ತಿಯ ವಿರುದ್ಧ ಹೋರಾಡಿದ 'ಧೀಮಂತ'ನೆಂದೂ, ಆತ ಕನ್ನಡ ರಾಷ್ಟ್ರೀಯತೆಯನ್ನು ಆಧುನಿಕ ಕಾಲದ ಅಗತ್ಯಕ್ಕೆ ತಕ್ಕಹಾಗೆ ರೂಪಿಸಲು ಸುಧಾರಿಸಿ ಕಂದಾಯ ವ್ಯವಸ್ಥೆ, ಕೈಗೆಟಕುವಂತೆ 'ತಕ್ಕಾವಿ ಸಾಲ ವ್ಯವಸ್ಥೆ' ಇತ್ಯಾದಿಗಳ ವ್ಯವಸ್ಥೆ ರೂಪಿಸಿ ಕರ್ನಾಟಕ ಕೃಷಿಯನ್ನೂ ಕೈಗಾರಿಕೆಗಳನ್ನು, ನೀರಾವರಿ ವ್ಯವಸ್ಥೆಯನ್ನು, ಶಿಕ್ಷಣ ಪದ್ಧತಿಯನ್ನು ಜಾರಿಗೊಳಿಸಿದ್ದನೆಂದೂ, ಪಾಳೇಗಾರಿ ವ್ಯವಸ್ಥೆಯನ್ನು ಮಟ್ಟ ಹಾಕಿ ಭೂ ಸುಧಾರಣೆಯ ಅಗತ್ಯ ಮನಗಂಡ, ಶೃಂಗೇರಿ, ನಂಜನಗೂಡು ಮುಂತಾದ ದೇವಾಲಯಗಳಿಗೆ ದತ್ತಿ ನೀಡಿದ್ದನೆಂದೂ ಗುರುತಿಸಿದರೆ, ಚಿದಾನಂದ ಮೂರ್ತಿಯವರು ಕೊಡಗಿನಲ್ಲಿ ಎಷ್ಟು ಮತಾಂತರ ಮಾಡಿದ, ಕನ್ನಡ ನಿರ್ನಾಮ ಮಾಡುವತ್ತ ಸಾಗಿದ್ದ ಎಂದು ಗುರುತಿಸುತ್ತಾರೆ. ಟಿಪ್ಪು ಮುಸ್ಲಿಮನಾದ ಕಾರಣಕ್ಕೇ ಮತಾಂಧನಂತೆ ಕಾಣಲಾರಂಭಿಸುತ್ತಾನೆ. ಇದು ಚಿದಾನಂದಮೂರ್ತಿಯವರನ್ನು ನಿಯಂತ್ರಿಸುತ್ತಿರುವ ನಿಲುವುಗಳ ದೋಷವಿರಬಹುದು. ಕುವೆಂಪು ಹೇಳುವಂತೆ 'ನಿರ್ದಿಷ್ಟ ಧರ್ಮಕ್ಕೆ ಸೇರಿದ ಕಾರಣಕ್ಕೆ ವ್ಯಕ್ತಿಯೊಬ್ಬ ಒಳ್ಳೆಯವನೂ ಆಗುವುದಿಲ್ಲ, ಕೆಟ್ಟವನೂ ಆಗುವುದಿಲ್ಲ'

ಎಂಬ ತಿಳುವಳಿಕೆ ಚಿದಾನಂದ ಮೂರ್ತಿಯವರಿಗೆ ಯಾವಾಗಲೂ ಕೈಕೊಡುತ್ತದೆ. ಅಥವಾ ಅದು ಅವರಲ್ಲಿ ಇಲ್ಲದೇ ಇರಬಹುದು.

ಕನ್ನಡ ಚರಿತ್ರೆಯನ್ನು ಕದಂಬರ ಮಯೂರಶರ್ಮನಿಂದ ಡಾ.ಡಿ.ಆರ್.ನಾಗರಾಜರ ಅಭಿಪ್ರಾಯದಂತೆ, ತಮಿಳುನಾಡಿನ ಕಂಚಿಗೆ ಹೋದ ಕದಂಬರ ಮಯೂರಶರ್ಮ ಅಲ್ಲಿ ಪಲ್ಲವರಿಂದ ಅವಮಾನಿತನಾಗುತ್ತಾನೆ. ಒಂದು ಚಿಕ್ಕ ಕುಸ್ತಿ ಎನ್ನಬಹುದಾದ ಘಟನೆಯನ್ನು ಚಿ.ಮೂ. ಚಾರಿತ್ರಿಕ ರೂಪಕದ ಮಟ್ಟಕ್ಕೆ ಏರಿಸುತ್ತಾರೆ. ಜಗತ್ತಿನ ಯಾವುದೇ ಸಂಸ್ಕೃತಿಗಳ ಜತೆ ಎಲ್ಲ ದೃಷ್ಟಿಗಳಿಂದ ಸಮನಾಗಿ ನಿಲ್ಲಬಲ್ಲ ಕನ್ನಡ ಸಂಸ್ಕೃತಿಯ ಪ್ರಾರಂಭ ಇಂಥ ಕ್ಷುದ್ರ ಘಟನೆಯಿಂದಲೇ ಎನ್ನಿಸಿ ಮನಸ್ಸು ಪೆಚ್ಚಾಗಿ ಬಿಡುತ್ತದೆ.”[೨೩]

ಚಿದಾನಂದ ಮೂರ್ತಿಯವರ ಇಡೀ ಚಿಂತನೆಗಳು ‘ಹೊರಗಿಡುವ’ ನಿಲುವಿನಿಂದಲೇ ರೂಪುಗೊಳ್ಳುತ್ತವೆ. ಆಳದಲ್ಲಿ ಬ್ರಾಹ್ಮಣ ಚಿಂತನೆಗಳು ತುಂಬಿ ಅತ್ಯಂತ ಸಂಕುಚಿತ ಚಿಂತನೆಗಳನ್ನು ಮಂಡಿಸುತ್ತಿದ್ದಾರೆಂದು ಕಾಣುವ ಇವರು, “ಕನ್ನಡಜನರೆ, ಏಳಿ, ಎದ್ದೇಳಿ! ಬೌದ್ಧಿಕರೆಂದು ಕರೆದುಕೊಳ್ಳುವ ಜನರ ರಾಜಕಾರಣಿಗಳೂ ವಿಶ್ವಭ್ರಾತೃತ್ವ ಭಾರತದ ಅಖಂಡತೆ, ಭಾಷ್ಯಾಂಧತೆ ಇತ್ಯಾದಿ ಮಾತುಗಳಿಂದ ನಮ್ಮನ್ನು ವಂಚಿಸಲು ಯತ್ನಿಸುತ್ತಿರುವ ಬಗ್ಗೆ ಜಾಗೃತರಾಗಿರಿ” [೨೪] ಎಂದು ಕರೆಕೊಡುತ್ತಾರೆ. ಇಡೀ ಕನ್ನಡ ಚಿಂತನಾ ಪರಂಪರೆಯನ್ನೇ ಅಣಕಿಸುವ ದಾಟಿಯಲ್ಲಿರುವ ಈ ಮಾತುಗಳು ಎಂಭತ್ತರ ದಶಕದ ಬೆಂಗಳೂರಿನ ತಲ್ಲಣಗಳ ಫಲ ಎಂದು ಅನ್ನಿಸುತ್ತದೆ. ಆಳುವ ಪ್ರಭುತ್ವಗಳು ಕೈಗಾರಿಕೆಗಳನ್ನು ಲಾಭದ ದೃಷ್ಟಿಯಿಂದ ಒಂದೇ ಕಡೆ ಆರಂಭಿಸಿದ್ದರಿಂದ ಅತಿಯಾದ ಅಕ್ಕಪಕ್ಕದ ರಾಜ್ಯಗಳ ದುಡಿವ ಜನರ ವಲಸೆ, ಕನ್ನಡಿಗ ಯುವಜನತೆಯ ನಿರುದ್ಯೋಗ ಇತ್ಯಾದಿ ಸಮಸ್ಯೆಗಳಿಗೆ ಚಿದಾನಂದ ಮೂರ್ತಿಯವರು ಸೂಚಿಸುವ ಪರಿಹಾರ ಅಸ್ಸಾಂ ಯುವಕರ ಮಾದರಿಯದು. ಅಂದರೆ ಸೋದರ ರಾಷ್ಟ್ರೀಯತೆಗಳ ದುಡಿಯುವ ಸಮುದಾಯವನ್ನು ಶತ್ರುಗಳೆಂದು ಭಾವಿಸಿ ಕೊಲ್ಲುವ ಮೂಲಕ ಸಮಸ್ಯೆಯನ್ನು ನಿವಾರಿಸಬಹುದೆಂದು ಪ್ರತಿಪಾದಿಸುವ ಸಿದ್ಧಾಂತದ್ದು. ಇಂಥ ಕಡೆಗಳಲ್ಲೆಲ್ಲ ಇವರು ಕನ್ನಡತ್ವದ ಕಾರಣಕ್ಕಾಗಿ ‘ಹಿಂದುತ್ವ’ದ ಸಮಗ್ರತೆಯ ಕಲ್ಪನೆಗೆ ವಿರುದ್ಧವಾಗಿಯೂ ಕಾಣುತ್ತಾರೆ. ವರ್ತಮಾನವೆಂಬುದು ಇವರಿಗೆ ಅಶಾಂತಿಯ ಅಗ್ನಿಕುಂಡದಂತೆ ಗೋಚರಿಸುತ್ತದೆ. ಪ್ರಜಾಪ್ರಭುತ್ವವನ್ನು, ಸಾಮಾಜಿಕ ನ್ಯಾಯದ ಕಲ್ಪನೆಯನ್ನು ಜೀರ್ಣಿಸಿಕೊಳ್ಳಲು ಒದ್ದಾಡುತ್ತಿರುವಂತೆ ಕಾಣುತ್ತದೆ. ಇದರ ಕುರಿತಂತೆ ಅವರು ವ್ಯಕ್ತಪಡಿಸುವ ಅಭಿಪ್ರಾಯ ಹೀಗಿದೆ :

“ಆಧುನಿಕ ನಾಗರಿಕತೆ ನಮ್ಮ ಬದುಕನ್ನು ಪ್ರವೇಶ ಮಾಡುವ ಮುನ್ನ ಇದ್ದ ಒಂದು ಆರೋಗ್ಯಕರ ವಾತಾವರಣವನ್ನು ಇಲ್ಲಿ ಹೇಳಲೇಬೇಕು. ಆಗ ಜಾತಿಗಳ ಕಟ್ಟು ಪಾಡುಗಳು ಕಠಿಣವಾಗಿದ್ದುವು ಎಂಬುದು ನಿಜ. ಆ ಕಟ್ಟುಪಾಡುಗಳು ಆಹಾರ, ರಕ್ತ ಸಂಬಂಧಗಳಿಗೆ ಮಾತ್ರ ಸೀತವಾಗಿದ್ದುವು. ಆದರೆ ಹಳ್ಳಿಗಳಲ್ಲಿ ಪ್ರೀತಿಯ ಸಂಬಂಧಗಳು ರಕ್ತಸಂಬಂಧದ ಗಡಿಗಳನ್ನು ದಾಟಿ ಹೋಗಿದ್ದುವು. ವೀರಶೈವರಲ್ಲಿ ಜಂಗಮರು, ಸಾದರು, ಬಣಜಿಗರು, ಕ್ಷೌರಿಕರು (ಕಾಯಕದವರು) ಪರಸ್ಪರ ಅಣ್ಣ, ತಮ್ಮ, ಅತ್ತೆ ಮಾವ, ಚಿಕ್ಕಪ್ಪ, ಅತ್ತಿಗೆ ಇತ್ಯಾದಿ ಸಂಬಂಧಗಳನ್ನು ಏರ್ಪಡಿಸಿಕೊಂಡು ವ್ಯವಹರಿಸುವುದಕ್ಕಿಂತ ಆಶ್ಚರ್ಯವೆಂದರೆ ಅಂತಹ ಸಂಬಂಧಗಳು ವೀರಶೈವ, ವೀರಶೈವೇತರ (ಬಡಗಿ, ಅಕ್ಕಸಾಲಿ, ಬೇಡ, ಕುರುಬ, ಪಿಂಜಾರ, ಮುಸಲ್ಮಾನ,

ದಲಿತ ಇತ್ಯಾದಿ) ಮಧ್ಯೆಯೂ ಏರ್ಪಾಟಾಗಿ ಅದೇ ಬಾಂಧವ್ಯ ಸೂಚಕ ಪದಗಳನ್ನು ಬಳಸಿ ಸಂಬೋಧಿಸುತ್ತಿದ್ದುದು. ಆ ಸಂಬಂಧಗಳು ಪ್ರೀತಿಯ ಸಂಬಂಧಗಳಾಗಿದ್ದುವು. ಇದು ಹಿಂದೂ ಧರ್ಮದ ಮೂಲ ಸ್ವಭಾವವೇ ಆಗಿದೆ. ಇದನ್ನು ನಾವು ಗುರುತಿಸದಿದ್ದರೆ ಮೊದಲಿನಿಂದ ಹಿಂದೂ ಸಮಾಜವು ಜಾತಿ ಜಾತಿಗಳ ಜಗಳಗಳ ದ್ವೇಷಪೂರಿತ ವಾತಾವರಣದಲ್ಲಿ, ಶೋಷಕ-ಶೋಷಿತ ಸಂಬಂಧಗಳ ಮಧ್ಯೆಯೇ ಬಾಳನ್ನು ನಡೆಸಿದ ಕಪ್ಪು ಚರಿತ್ರೆಯನ್ನು ಹೊಂದಿದೆ ಎಂದು ಭಾವಿಸುತ್ತೇವೆ. ಈಗ ಬಹು ಕಡೆ ಕೊಡುತ್ತಿರುವ ತಪ್ಪು ಚಿತ್ರವೂ ಅದೇ ಆಗಿದೆ.''[೨೪]

ಆಧುನಿಕವಾದದ್ದೆಲ್ಲ ಅಪವಿತ್ರವಾದುದು ಎಂಬ ಗ್ರಹಿಕೆಗಳಿಂದ ನೋಡುವ ಕ್ರಮದಲ್ಲೇ ದೋಷಗಳಿರುವಂತೆ ಕಾಣುತ್ತದೆ. ಪುರೋಹಿತ ಶಾಹಿ ವ್ಯವಸ್ಥೆಯನ್ನು ಸಮರ್ಥಿಸುವ ಚಿದಾನಂದಮೂರ್ತಿಯವರಿಗೆ ಪರಂಪರೆಗೆ ಸೇರಿದ್ದೆಲ್ಲವೂ ಪ್ರೀತಿ ಪೂರ್ವಕವೆ. ಆಧುನಿಕತಾ ಪೂರ್ವ ಸಮಾಜಗಳು ಕ್ರೌರ್ಯ ತುಂಬಿದ, ಊಳಿಗಮಾನ್ಯತೆಯನ್ನು ಸಮರ್ಥಿಸುತ್ತಿದ್ದ ಅಸಮಾನತೆಯ ಕಲ್ಪನೆಯ ಮೇಲೆ ನಿಂತಿದ್ದ ವ್ಯವಸ್ಥೆಯೆಂದೂ, ಇವರಿಗೆ ಅನ್ನಿಸುವುದಿಲ್ಲ. 'ಸಮಾಜೋ-ಧಾರ್ಮಿಕ' ವಾದದ್ದು ಪವಿತ್ರವೆಂತಲೂ 'ರಾಜಕೀಯೋ -ಆರ್ಥಿಕ' ವಾದದ್ದೆಲ್ಲವೂ ಒಪ್ಪಲಾಗದ ಮೌಲ್ಯಗಳೆಂಬಂತೆಯೂ ವ್ಯಾಖ್ಯಾನ ಮಾಡುತ್ತಾರೆ.

ಅವರ ಕನ್ನಡ ಪರ ಚಿಂತನೆಗಳೂ ಕೂಡ ನಾವು ದುರ್ಬಲರು, ಅಸಹಾಯಕರು, ಸಜ್ಜನರು. ಹೊರಗಿನಿಂದ ಬಂದವರೆಲ್ಲ ಆಕ್ರಮಣಕಾರರು, ಲೂಟಿಕೋರರು, ಕ್ರೂರಿಗಳು ಎಂಬ ನೆಲೆಯಿಂದ ಆಚೀಚೆ ಕದಲದಂತೆ ಆರಂಭಗೊಳ್ಳುತ್ತವೆ(ಇಸ್ಲಾಮಿನ ಕುರಿತಾಗಿ ಹಿಂದುತ್ವದ ಧಾಟಿ ಕೂಡ ಇದೇ ಆಗಿರುತ್ತದೆ). ಚಿದಾನಂದ ಮೂರ್ತಿಯವರು ಈ ಚಿಂತನೆಯನ್ನು ಅನ್ಯಭಾಷಿಕರ ಮೇಲೆ ಅಲ್ಲದೆ, ಅನ್ಯ ಧರ್ಮದವರ ಮೇಲೂ ಪ್ರಯೋಗಿಸುತ್ತಾ ಅಸ್ಸಾಮಿನ ಯುವಕರ ಮಾದರಿಯನ್ನು ಕನ್ನಡಿಗರ ಮುಂದೆ ಮಂಡಿಸುವ ಇವರು ಅಂತಿಮವಾಗಿ ಬಲಿಕೇಳುವ, ರಕ್ತಪಾತವನ್ನು ಬಿಂಬಿಸುವ 'ಕ್ಷಾತ್ರ'ವನ್ನು ಪ್ರತಿಪಾದಿಸುತ್ತಾರೆ. ತಮಿಳರ, ಹಿಂದೀಭಾಷಿಕರ ವಿಸ್ತರಣವಾದಿ ಧೋರಣೆಯನ್ನು ವಿರೋಧಿಸುವ ಚಿದಾನಂದ ಮೂರ್ತಿಯವರು 'ಕನ್ನಡಿಗ' ರಾಜರುಗಳು ಈಶಾನ್ಯ ಭಾರತದವರೆಗೂ, ನೇಪಾಳವನ್ನೂ ಆಳಿದರೆಂದು ಸಂಶೋಧನೆಯನ್ನೂ ಮಾಡುತ್ತಾರೆ. ಇಳಿವಯಸ್ಸಿನಲ್ಲೂ ಸಂಶೋಧನೆಯ ಕುರಿತ ಅವರ ಬತ್ತದ ಆಸಕ್ತಿಗಳು ಗೌರವ ಹುಟ್ಟಿಸುತ್ತವೆ. ಆದರೆ ಅದರ ಹಿಂದೆ ಹುದುಗಿರುವ ತರ್ಕ ಯಾವುದು? ಅವರ ಅಖಿಲ ಭಾರತ ಚೌಕಟ್ಟನ್ನು ವಿರೋಧಿಸಬೇಕೆಂಬ ನಿಲುವನ್ನು ಕರ್ನಾಟಕದ ಪ್ರಗತಿಪರ ಚಿಂತಕರೆಲ್ಲ ಒಪ್ಪುತ್ತಾರೆ. ಅಷ್ಟರ ಮಟ್ಟಿಗೆ ಕರ್ನಾಟಕತ್ವಕ್ಕೆ ವಿಶಾಲ ಭಿತ್ತಿಯನ್ನು ನೀಡಲು ಪ್ರಯತ್ನಿಸಿದ್ದಾರೆ. ಆದರೆ ಕೊಲೆಯ ರಕ್ತಲೇಪನವನ್ನು ಕನ್ನಡದ ಸಾಹಿತ್ಯ ಚಿಂತನೆ ಮತ್ತು ಪರಂಪರೆ ವಿರೋಧಿಸುತ್ತವೆ.

ಅಲ್ಲದೆ ಚಿದಾನಂದ ಮೂರ್ತಿಯವರ ಚರಿತ್ರೆಯ ಚಿಂತನೆಗಳಲ್ಲಿ ಜನಸಾಮಾನ್ಯರು ಕಾಣೆಯಾಗುತ್ತಾರೆ. ಅವರಿಗೆ ಪಾತ್ರವೇ ಇರುವುದಿಲ್ಲ. ಅದಕ್ಕೆ ಶಾಸನ ಮುಂತಾದ ಅಧ್ಯಯನಗಳ ಫಲ ಇರಬಹುದು. ಆದರೆ ಈ ಅರಿವೂ ಕೂಡ ಅವರಿಗಿದೆ. "ಬಹಳ ನಿರಾಸೆ ಹುಟ್ಟಿಸುವ ಆಕರವೆಂದರೆ ಶಾಸನಗಳು. ಕನ್ನಡಿಗರ ಬದುಕಿನ ವಿವಿಧ ಮುಖಗಳನ್ನು ಸವಿಸ್ತಾರವಾಗಿ ಬಿಚ್ಚಿ ತೋರುವ ಶಾಸನಗಳಲ್ಲಿ ಅಸ್ಪೃಶ್ಯರ ಬಗೆಗಿನ ಸಾಮಗ್ರಿ ತೀರಾ

ಬಡಕಲೆಂದರೆ ಅದು ತಪ್ಪಾಗದು. ಇಲ್ಲವೇ ಇಲ್ಲವೆಂದರೂ ಸರಿಯೇ. ದಾನ, ದೇವಾಲಯ ನಿರ್ಮಾಣ ಕ್ಷಾತ್ರತೇಜಸ್ಸು, ಕೀರ್ತಿ, ಪ್ರಶಸ್ತಿ, ಸಾಮಾಜಿಕ ಕಾರ್ಯ ಈ ಸಮಾಜೋ ಸಾಂಸ್ಕೃತಿಕ ಚಟುವಟಿಕೆಗಳೆಲ್ಲ ಮೇಲ್ಜಾತಿಯವರಿಗೆ ಮೀಸಲಾಗಿರುವಾಗ ಮತ್ತು ಅಂತಹ ಸಂಗತಿಗಳನ್ನೆ ಶಾಸನಗಳು ಒಳಗೊಂಡಿರುವಾಗ ಅಸ್ಪೃಶ್ಯರ ನೇರವಾದ ಉಲ್ಲೇಖಗಳನ್ನು ಶಾಸನಗಳಲ್ಲಿ ನಿರೀಕ್ಷಿಸುವಂತಿಲ್ಲ."[೨೬] ಈ ತಾತ್ವಿಕ ಎಚ್ಚರವೂ ಅವರಿಗಿದೆ. ಆದರೆ ಈ ಮಿತಿಯನ್ನು ಮೀರಲಾಗದಂತೆ ಅವರನ್ನು ಆಳಕ್ಕೆ ಸೆಳೆದುಕೊಳ್ಳುತ್ತಿದೆ. ತಮ್ಮ ನೆಚ್ಚಿನ ಅಧ್ಯಯನ ಶಿಸ್ತು ಜನಪರವಲ್ಲ, ಮೇಲ್ಜಾತಿಗಳ, ರಾಜರಪರವಾದದ್ದು ಎಂದ ಕೂಡಲೇ ಉಳಿದ ಅವರ ವಾದಗಳೆಲ್ಲ ಚೆಲ್ಲಾಪಿಲ್ಲಿಯಾಗಿ ಚದುರಿ ಹೋಗಬೇಕು. ಆದರೆ ಹಾಗಾಗುವುದಿಲ್ಲ. ಈ ಥರದ ಹೇಳಿಕೆಗಳು ಕೇವಲ ಸಾಂದರ್ಭಿಕ ಪ್ರತಿಕ್ರಿಯಾತ್ಮಕತೆಯ ಮಟ್ಟಿಗೆ ಮಾತ್ರ ತಲುಪಿ ನಿಂತು ಬಿಡುತ್ತವೆ. ಆದರೂ ಚರಿತ್ರೆಯಲ್ಲಿನ ಕುರೂಪಗಳಲ್ಲೊಂದಾದ, ಹಿಂದುತ್ವವಾದಿಗಳಿಗೆ ಅಪ್ರಿಯವಾದ ಸಂಗತಿಯನ್ನು ಕುರಿತು ಕನ್ನಡ ಮನಸ್ಸು ಚಿಂತಿಸುವಂತೆ ಮಾಡುತ್ತದೆ. ಇದನ್ನೂ ಕೂಡ 'ಹಿಂದುತ್ವ' ಜೀರ್ಣಿಸಿಕೊಳ್ಳಲು ಕಷ್ಟಪಡುತ್ತದೆ. ಚಿದಾನಂದ ಮೂರ್ತಿಯವರು ಗಕ್ಕನೆ ಕನ್ನಡ ರಾಷ್ಟ್ರೀಯತೆಯ ಭಿತ್ತಿಗೆ ಬಂದು ನಿಂತು ಬಿಡುತ್ತಾರೆ.

### ೪.೭ ಚರಿತ್ರೆ ಕುರಿತಂತೆ ಕರ್ನಾಟಕ ವಿಮೋಚನಾ ರಂಗದ ನಿಲುವುಗಳು

ಜಾಗತೀಕರಣ ಮತ್ತು ಕೋಮುವಾದಿ ಚಟುವಟಿಕೆಗಳು ತೀವ್ರಗೊಂಡ ಸಮಯದಲ್ಲಿ ಅವುಗಳಿಗೆ ಪ್ರತಿಕ್ರಿಯಿಸುವುದಕ್ಕೆ ಆರಂಭವಾಯಿತೇನೋ ಎಂಬಂತೆ ಕಾಣುವ ಈ ಸಂಘಟನೆ ಕೇಂದ್ರದ ಅತಿಯಾದ ಕೇಂದ್ರೀಕರಣವನ್ನು ವಿಮರ್ಶಾತ್ಮಕವಾಗಿ ನೋಡುವ ಕೆಲಸ ಮಾಡಿದೆ. 'ಅಖಿಲ ಭಾರತೀಯ' ಪರಿಕಲ್ಪನೆಗಳನ್ನು ತನ್ನ ಪರಿಮಿತಿಯಲ್ಲಿ ವಿರೋಧಿಸಿ ಸ್ಥಳೀಯ ಚಿಂತನೆಗಳನ್ನು ಮತ್ತು ಅಂಚಿನಲ್ಲಿರುವ ಸಮುದಾಯಗಳ ಆಕಾಂಕ್ಷೆಗಳನ್ನು ಕುರಿತು ಮಾತನಾಡುತ್ತದೆ. ವರ್ತಮಾನದ ಬಿಕ್ಕಟ್ಟುಗಳು ಅಡಗಿರುವುದೆಲ್ಲಿ? ಎಂಬ ಪ್ರಶ್ನೆಗೆ ವಿಶ್ವಬ್ಯಾಂಕು ಮತ್ತು ವಿಶ್ವ ಸಂಸ್ಥೆಗಳವರೆಗೂ ಹರಡಿರುವ ಶೋಷಕ ಜಾಲವನ್ನು ಕನ್ನಡ ಜನತೆಗೆ ಅರ್ಥೈಸುವ ಕೆಲಸ ಮಾಡಿದ್ದು ಸಾಧಾರಣ ಸಂಗತಿಯೇನಲ್ಲ. ಅದುವರೆಗೂ ಚಿದಾನಂದ ಮೂರ್ತಿಯವರಂಥ ಕನ್ನಡ ಸಂಶೋಧಕರುಗಳು ವಲಸೆ ಮುಂತಾದ ಪರ ರಾಜ್ಯಗಳ ಜನರ ಚಲನೆಯನ್ನು ಆಕ್ರಮಣಕಾರಿ, ಧೋರಣೆಯೆಂದೇ, ವಿಸ್ತರಣವಾದಿ ಮನೋಭಾವವೆಂದೇ ವ್ಯಾಖ್ಯಾನ ಮಾಡುತ್ತಿದ್ದಾಗ, ಪಕ್ಕದ ರಾಜ್ಯಗಳೂ ಇದೇ ಬಗೆಯ ಸಮಸ್ಯೆ ಅನುಭವಿಸುತ್ತಿವೆ. ಅಲ್ಲಿನ ಸ್ಥಳೀಯರಲ್ಲೂ ನಿರುದ್ಯೋಗ ಮತ್ತು ಅಸಮಾನತೆಗಳು ಹೆಚ್ಚುತ್ತಿವೆ. ಹಾಗಾಗಿ ಈ ಸಮಸ್ಯೆ ಸೃಷ್ಟಿಸುತ್ತಿರುವವರು ಅನ್ಯಭಾಷಿಕರೂ, ಅಥವಾ ರಾಜ್ಯಗಳೇ ಅಲ್ಲ. ಬಂಡವಾಳದ ಅಸಮಾನ ಹಂಚಿಕೆಯಂಥ ಕಾರಣಗಳಿಂದಾಗಿ ಈ ಸಮಸ್ಯೆ ಉಂಟಾಗಿದೆ ಎಂದು ವ್ಯಾಖ್ಯಾನಿಸಿದೆ. ಈ ಸಂಘಟನೆಯ ಚರಿತ್ರೆಯ ಕುರಿತಾದ ವ್ಯಾಖ್ಯಾನಗಳೂ ಕೂಡ ಕುವೆಂಪು ಮತ್ತು ಬಿ.ಎಂ.ಶ್ರೀಯವರು ಮಾಡಿದ ಪ್ರಯತ್ನಗಳ ಸುಧಾರಿತ ರೀತಿಯೆಂದು ಅನ್ನಿಸದೇ ಇರದು. ಸಂಘರ್ಷಗಳ ಹಿಂದೆ ಅಡಗಿರುವ ಸಂಪತ್ತು ಅಥವಾ ಆರ್ಥಿಕ ಕಾರಣಗಳ ವಿಶ್ಲೇಷಣೆಯೇ ಇದರ ತಾತ್ವಿಕತೆ.

ಚರಿತ್ರೆಯೆಂದರೆ 'ಉಳ್ಳವರು ಮತ್ತು ಇಲ್ಲದವರ ನಡುವಿನ ಸಂಘರ್ಷ'ವೆಂದು ಸರಳೀಕರಿಸಿ ವ್ಯಾಖ್ಯಾನಿಸುವ ಕಾರ್ಲ್‌ಮಾರ್ಕ್ಸ್‌ನ ವ್ಯಾಖ್ಯಾನವನ್ನು ಬಳಸಿಕೊಂಡಿದೆಯಾದರೂ, ಅದರ ಅರ್ಥವನ್ನು ಇನ್ನಿತರೆ ಆಯಾಮಗಳಿಂದ ವಿಸ್ತರಿಸಿ ಸಂಕೀರ್ಣಗೊಳಿಸಲು ಪ್ರಯತ್ನಿಸಿದೆ. ಸಮುದಾಯಗಳ ಸಾಂಸ್ಕೃತಿಕ ಸ್ಥಿತ್ಯಂತರಗಳು,

ಅವೈದಿಕ ಪರಂಪರೆಗಳ ಜನಮುಖೀ ಚಲನೆಗಳು, 'ಅಖಿಲ ಭಾರತ' ಪರಿಕಲ್ಪನೆಯಲ್ಲಿ ಮಂಡಿತವಾಗುತ್ತಿರುವ ಹಿಂದುತ್ವವಾದದ ಹಿಂದೆ ಇರುವ ಕುರೂಪಗಳು, ಜನಪರವಲ್ಲದ ಆದರೆ ಕುಲೀನ ವರ್ಗಗಳ ಹಿತಾಸಕ್ತಿಗಳನ್ನು ಕಾಪಾಡುವ ಗುಪ್ತ ಉದ್ದೇಶಗಳೆಲ್ಲವನ್ನು ಸಂಕೀರ್ಣವಾಗಿ ಕನ್ನಡ ಜನಸಮುದಾಯದ ಮುಂದೆ ಮಂಡಿಸಲು ಪ್ರಯತ್ನಿಸಿದೆ. ಚರಿತ್ರೆಯ ವರ್ತಮಾನದ ಅಗತ್ಯಗಳಿಗೆ ಸ್ಪಂದಿಸಬೇಕು ಎಂಬ ಶಂಬಾ ಜೋಶಿಯವರ ಚಿಂತನೆಗೆ ಪೂರಕವಾಗಿ ಇಡೀ ಕನ್ನಡ ಪರಂಪರೆಯಲ್ಲಿ ಅಡಗಿರುವ, ಜನಪರ ಮತ್ತು ಕನ್ನಡಪರ ಆಶಯಗಳನ್ನು ಆರಿಸಿ ತನ್ನ ಸಿದ್ಧಾಂತಕ್ಕೆ ಹೊಂದುವಂತೆ ಪೋಣಿಸಲು ಯತ್ನಿಸುತ್ತದೆ :

"ಕನ್ನಡ ರಾಷ್ಟ್ರೀಯತೆ ಸುದೀರ್ಘ ಇತಿಹಾಸ ಹೊಂದಿದೆ. ತನ್ನದೇ ಆದಂತಹ ಭಾಷೆ, ಸಂಸ್ಕೃತಿ ಕಲೆ, ಹಾಗೂ ಸಾಹಿತ್ಯವನ್ನು ಶತಮಾನಗಳಿಂದ ಹೊಂದಿದೆ. ಇಂದು ಮಾನವ ನಾಗರಿಕತೆಯ ಉನ್ನತ ಸ್ಥಾನದಲ್ಲಿ ಇರುವುದಾಗಿ ಹೇಳಿಕೊಳ್ಳುವ ಪಶ್ಚಿಮ ಯುರೋಪ್ ಮಧ್ಯಯುಗದ ಊಳಿಗಮಾನ್ಯತೆಯ ಕತ್ತಲಲ್ಲಿ ಮುಳುಗಿದ್ದ ವೇಳೆಯಲ್ಲಿ ಇಲ್ಲಿ ಮಾನವ ಇತಿಹಾಸದ ಚಕ್ರಗಳನ್ನು ಅಭ್ಯುದಯದ ಕಡೆ ಕೊಂಡೊಯ್ಯುವ ರೀತಿಯಲ್ಲಿ ಹಲವಾರು ಪ್ರಗತಿಪರ ಪರಿಕಲ್ಪನೆಗಳನ್ನೊಳಗೊಂಡ ತತ್ವಗಳು, ಚಳುವಳಿಗಳು ಹುಟ್ಟಿಕೊಂಡವು. ೧೨ನೇ ಶತಮಾನದ ಬಸವಣ್ಣನವರ ನೇತೃತ್ವದ ಕಾಯಕ ಜೀವಿಗಳ ಚಳವಳಿ ಇದರ ಪ್ರಾರಂಭ ಬಿಂದುವಾಗಿತ್ತು. ಕನ್ನಡ ರಾಷ್ಟ್ರೀಯತೆಯ ಸಂರಚನಾ ಪ್ರಕ್ರಿಯೆ ಇಲ್ಲಿಂದಲೇ ಆರಂಭವಾಯಿತೆನ್ನಬಹುದು. ರಾಷ್ಟ್ರೀಯ ಭಾಷೆ ಎಂಬುದು ಯಾವುದೇ ಒಂದು ರಾಷ್ಟ್ರೀಯತೆಯ ಸಂರಚನೆ ಹಾಗೂ ಅಭಿವೃದ್ಧಿಗೆ ಅತ್ಯಗತ್ಯವಾದ ಅಂಶಗಳಲ್ಲೊಂದು. ಅದುವರೆಗೂ ರಾಜರು, ಪಂಡಿತರು, ಪುರೋಹಿತರು, ರಾಜಾಧಿಕಾರಿಗಳು ಮುಂತಾದವರು ಆಸ್ಥಾನ ಭಾಷೆಯಾಗಿ ಉಪಯೋಗಿಸಿದ್ದ ಸಂಸ್ಕೃತ ಭಾಷೆಯ ಅಧಿಪತ್ಯವನ್ನು ವಿರೋಧಿಸಿ ಕನ್ನಡ ಭಾಷೆಯಲ್ಲಿ ತಮ್ಮ ಬ್ರಾಹ್ಮಣಶಾಹಿ ವಿರೋಧಿ, ಊಳಿಗಮಾನ್ಯ ವಿರೋಧಿ ವಿಚಾರಗಳನ್ನು ಜನರ ಮಧ್ಯೆ ಈ ಚಳುವಳಿ ಪ್ರಚಾರಗೊಳಿಸಿತು. ಲಿಂಗಾಯತ ಚಳುವಳಿಯಲ್ಲಿ ಭಾಗವಹಿಸಿದ ಬಹು ಸಂಖ್ಯಾತರು ಹಿಂದುಳಿದ ಜಾತಿಗೆ ಸೇರಿದ ಕುಶಲಕರ್ಮಿಗಳಾಗಿದ್ದ ಕಾರಣಗಳಿಂದ ಚಳವಳಿಯಲ್ಲಿ ಭಾಗವಹಿಸಿದ ಬಹು ಸಂಖ್ಯಾತರು ಹಿಂದುಳಿದ ಜಾತಿಗೆ ಸೇರಿದ ಕುಶಲಕರ್ಮಿಗಳಾಗಿದ್ದ ಕಾರಣಗಳಿಂದ ಚಳುವಳಿಯಲ್ಲಿ ಬ್ರಾಹ್ಮಣಶಾಹಿ ಹಾಗೂ ರಾಜವಿರೋಧಿ ಧೋರಣೆಗಳು ಬಲಿಷ್ಠವಾಗಿದ್ದವು. ತಮ್ಮ ಹಿತಾಸಕ್ತಿಗಳ ಬಗ್ಗೆ ಪ್ರಜ್ಞಾವಂತರಾದ ಕುಶಲಕರ್ಮಿಗಳು ಸಾಮಂತಶಾಹಿಯ ಹತೋಟಿಯಿಂದ ಬಿಡಿಸಿಕೊಳ್ಳಲು ಹೋರಾಡಿದರು. ಹೀಗಾಗಿ ಕುಶಲಕರ್ಮಿಗಳು ಸಾಮಂತಶಾಹಿಗಳ ಹಿಡಿತದಿಂದ ಹೊರಬಂದು ಪಟ್ಟಣಗಳಲ್ಲಿ ವಾಸಿಸಲಾರಂಭಿಸಿದರು. ಇದರಿಂದ ಸರಕು ಉತ್ಪಾದನೆ ವಾಣಿಜ್ಯಗಳ ಬೆಳವಣಿಗೆಗೆ ಸೂಕ್ತ ಅವಕಾಶ ವಾಯಿತು"[೨೭]

ವಚನ ಚಳುವಳಿಯೆಂದು ಸಾಹಿತ್ಯ ಅರ್ಥದಲ್ಲಿ, ಲಿಂಗಾಯತ ಚಳುವಳಿಯೆಂದು ಧಾರ್ಮಿಕ ಅರ್ಥದಲ್ಲಿ, ಕಾಯಕ ಚಳುವಳಿಯೆಂದು ಅದರ ಆರ್ಥಿಕ ಅರ್ಥದಲ್ಲಿ ಕರೆಯುತ್ತಿದ್ದ ೧೨ ನೇ ಶತಮಾನದ ಬಹುರೂಪಿಯಾದ ಈ ಚಳುವಳಿಗೆ ಕರ್ನಾಟಕ ವಿಮೋಚನಾರಂಗ ಹೊಸ ವ್ಯಾಖ್ಯಾನವನ್ನು ನೀಡಲು ಪ್ರಯತ್ನಿಸುತ್ತಿದೆ. ಇತಿಹಾಸದ ಪುಸ್ತಕದಲ್ಲಿ ಅಲ್ಲೊಂದು, ಇಲ್ಲೊಂದು ಕಡೆ ಮಿಂಚಿ ಕಣ್ಮರೆಯಾಗುತ್ತಿದ್ದ ಈ ವ್ಯಾಖ್ಯಾನಕ್ಕೆ ತಾತ್ವಿಕ ರೂಪ

ನೀಡಲು ಕ.ವಿ.ರಂ. ಯತ್ನಿಸುತ್ತಿರುವಂತೆ ತೋರುತ್ತದೆ. ಈ ಸಂಘಟನೆಯು ವಚನ ಚಳುವಳಿಯನ್ನು 'ಕನ್ನಡ ರಾಷ್ಟ್ರೀಯತೆ ಸಂರಚನೆಗೊಳ್ಳಲಾರಂಭಿಸಿದ ಕಾಲ' ಎಂದು ವ್ಯಾಖ್ಯಾನಿಸುತ್ತದೆ. ಪ್ರಭುತ್ವದ ಭಾಷೆಯನ್ನು ನಿರ್ಲಕ್ಷಿಸಿ ಜನಭಾಷೆಯಲ್ಲಿ ತನ್ನ ನಿಲುವುಗಳನ್ನು ಹೇಳಬೇಕಾದ ಅನಿವಾರ್ಯತೆಯಾದರೂ ಏನು? ಎಂಬುದಕ್ಕೆ ಸರಕು ಉತ್ಪಾದನೆಯಲ್ಲಿ ತೊಡಗಿದ್ದ ಕುಶಲಕರ್ಮಿಗಳ ರೈತರ ಸಣ್ಣ ಪುಟ್ಟ ವ್ಯಾಪಾರಿಗಳ ಬೆಂಬಲದಿಂದ ಆರಂಭಗೊಂಡ ಈ ಸಮೂಹ ಚಳುವಳಿ, ತಮ್ಮ ಉತ್ಪಾದನೆಯ ಬಹುಭಾಗವನ್ನು ಕಬಳಿಸುತ್ತಿದ್ದ ಮಠ ಮಂದಿರಗಳ, ವಿರುದ್ಧ ನಿಂತವು. ಆ ಮೂಲಕ ತೀವ್ರವಾಗಿ ಕ್ರಿಯಾಶೀಲವಾಗಿ ಮಧ್ಯವರ್ತಿಗಳ ವಿರುದ್ಧವೂ ತಿರುಗಿಬಿದ್ದರು. ವೈದಿಕ ಧರ್ಮದಲ್ಲಿ ನಿಷ್ಠೆಯುಳ್ಳ, ವರ್ಣಾಶ್ರಮಧರ್ಮವನ್ನು ಪ್ರತಿಪಾದಿಸುತ್ತಿದ್ದ ಸ್ಥಾಪಿತ ಹಿತಾಸಕ್ತಿಗಳ ವಿರುದ್ಧವೂ ತಿರುಗಿಬಿದ್ದರು. ಜನರ ಶ್ರಮವನ್ನು ದೋಚಿ, ಜನರನ್ನು ಶಾಶ್ವತ ಬಡತನದಲ್ಲೂ ಬೇಯುವಂತೆ ಮಾಡಿದ್ದ ಪುರೋಹಿತಶಾಹಿಗೂ ಈ ಕಾಯಕ ಜೀವಿಗಳಿಗೂ ನಡೆದ ಸಂಘರ್ಷ ಕೇವಲ ಸಮಾಜದ ಕಟ್ಟುಪಾಡುಗಳಿಗೋಸ್ಕರ ನಡೆದಿತ್ತೆ? ವೈದಿಕ ಸಂಕೇತಗಳನ್ನೆಲ್ಲ ಕಟುವಾಗಿ ಟೀಕಿಸಿ ತಿರಸ್ಕರಿಸುವ ಅಗತ್ಯವೇನಿತ್ತು? ಸಂಸ್ಕೃತವನ್ನು, ದೇವಾಲಯಗಳನ್ನು, ವರ್ಣಾಶ್ರಮಧರ್ಮವನ್ನು, ಹೆಣ್ಣು ಗಂಡಿನ ನಡುವಣ ಭೇದವನ್ನು, ರಾಜಾಸ್ಥಾನವನ್ನೂ ವಿರೋಧಿಸಿ, ಕನ್ನಡವನ್ನು ದೇಹವೇ ದೇಗುಲವೆಂಬ ಪರಿಕಲ್ಪನೆಯನ್ನು, ಸ್ತ್ರೀ ಪುರುಷ ಸಮಾನತೆಯನ್ನು, ಇಷ್ಟಲಿಂಗ ಪದ್ಧತಿಯನ್ನು ಸಹಪಂಕ್ತಿ ಭೋಜನ, ಅಂತರ್‌ಜಾತಿ ವಿವಾಹವನ್ನು ಪ್ರತಿಪಾದಿಸುವ ಅಗತ್ಯವೇನು? ಎಂಬ ಪ್ರಶ್ನೆಗಳಿಗೆ ಕ.ವಿ.ರಂ. ದುಡಿಮೆಯನ್ನು ದೋಚುತ್ತಿದ್ದುದನ್ನು ವಿರೋಧಿಸುವ ಅನಿವಾರ್ಯತೆಯಲ್ಲಿ ಶತ್ರುವಿನ ಎಲ್ಲ ಅಸ್ತ್ರಗಳನ್ನು ವಿರೋಧಿಸುವ ಛಲದೊಂದಿಗೆ ಹುಟ್ಟಿಕೊಂಡವಾಗಿದ್ದವು ಎಂದು ವಿವರಿಸಲು ಯತ್ನಿಸುತ್ತದೆ. ೧೫ನೇ ಶತಮಾನದ ಹೊತ್ತಿಗೆ 'ವಿಜ್ಞಾನ'ದ ಬೆಳವಣಿಗೆಯ ಮೂಲಕ 'ಚರ್ಚುಗಳ' ಅಧಿಪತ್ಯವನ್ನು ವಿರೋಧಿಸಿದ ಯುರೋಪಿನಂತೆಯೇ ೧೨ನೇ ಶತಮಾನದಲ್ಲೇ ಕರ್ನಾಟಕದಲ್ಲಿ ಆರಂಭಗೊಂಡ ಈ ಚಳುವಳಿಗೆ ಕ.ವಿ.ರಂ.ನ ದೃಷ್ಟಿಯಲ್ಲಿ ವಿಶೇಷ ಮಹತ್ವವಿದೆ. ಅದಕ್ಕಾಗಿ ಈ ಚಳುವಳಿಯನ್ನು ತುಂಬ ಆಪ್ತವಾಗಿ ನೋಡಲಾಗುತ್ತದೆ.

ಕನ್ನಡ ರಾಷ್ಟ್ರೀಯತೆಯ ಚರಿತ್ರೆ ೧೯ನೇ ಶತಮಾನದಲ್ಲಿ ಆರಂಭಗೊಂಡ ಬಂಡವಾಳದ ಸಂಚಲನೆ ವಸಾಹತುಶಾಹಿ ಶಕ್ತಿಗಳ ಆಗಮನದವರೆಗೆ ನಿರಂತರ ಮುಂದುವರಿಯಿತು ಎಂದು ನೋಡುವ ಈ ಸಂಘಟನೆ "೧೪ನೇ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಯಿತು. ವೀರಶೈವ ಚಳುವಳಿಯ ಕಾಲದಲ್ಲಿ ಮುನ್ನಡೆ ಆರಂಭಿಸಿದ ಸರಕು ಉತ್ಪಾದನೆ ಹಾಗೂ ವಾಣಿಜ್ಯ ಮತ್ತಷ್ಟು ಬೆಳವಣಿಗೆ ಹೊಂದಿದವು. ವಾಣಿಜ್ಯದ ಬೆಳವಣಿಗೆಯಿಂದ ಸರಕಾರಕ್ಕೆ ಲಭಿಸುವ ತೆರಿಗೆ ಪ್ರಮಾಣ ಹೆಚ್ಚಿತು. ಇದರಿಂದ ಸರಕಾರವೇ ಕೈಗಾರಿಕೆ ಹಾಗೂ ವಾಣಿಜ್ಯವನ್ನು ಪ್ರೋತ್ಸಾಹಿಸಿತು.

ವಾಣಿಜ್ಯ ಬೆಳವಣಿಗೆಯ ಮೂಲಕ ಸರಕು ಉತ್ಪತ್ತಿಯಲ್ಲೂ, ವಿನಿಮಯದಲ್ಲೂ ಹಲವಾರು ಮಾರ್ಪಾಡುಗಳು ಉಂಟಾದವು. ಮೊಟ್ಟ ಮೊದಲ ಬಾರಿಗೆ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಸಂಕೇತಗಳು ರೂಪುಗೊಂಡವು. ಇದುವರೆಗೂ ಪಟ್ಟಣಗಳು ರಾಜನ ರಾಜಕೀಯ ಮುಖ್ಯಸ್ಥಾನವಾಗಿ ಮಾತ್ರವೇ ಉಳಿದಿದ್ದವು. ಆದರೆ ವಾಣಿಜ್ಯದ ಅಭಿವೃದ್ಧಿ ಹಾಗೂ ಮಾರುಕಟ್ಟೆಯ ಸೃಷ್ಟಿಯಿಂದ ದೊಡ್ಡ ಪಟ್ಟಣಗಳು

ವಾಣಿಜ್ಯವಹಿವಾಟಿನ ಕೇಂದ್ರ ಸ್ಥಾನಗಳಾಗಿಯೂ ರೂಪುಗೊಂಡವು. ಊಳಿಗಮಾನ್ಯತೆಯ ಗರ್ಭದೊಳಗೆ ಒಂದು ಬಲಿಷ್ಠವಾದ ವಾಣಿಜ್ಯವರ್ಗ ಸೃಷ್ಟಿಯಾದುದನ್ನು ಇದು ಭಾವಿಸುತ್ತದೆ. ವಾಣಿಜ್ಯವನ್ನು ಊರ್ಜಿತಗೊಳಿಸುವ ರೀತಿಯಲ್ಲಿ ಸರಕಾರವೇ ತಾಮ್ರದ ನಾಣ್ಯಗಳನ್ನು ಟಂಕಿಸಿತು. ಮೊಟ್ಟಮೊದಲ ಬಾರಿಗೆ ವಿಜಯನಗರ ಸಾಮ್ರಾಜ್ಯ ಈ ಕಾರ್ಯಭಾಗವನ್ನು ನೆರವೇರಿಸಿತು.

ಈ ಸಂದರ್ಭದಲ್ಲಿ ಭಕ್ತಿ ಚಳುವಳಿ ಹೊಸ ಆಯಾಮವನ್ನು ತಲುಪಿತು. ಪ್ರಧಾನವಾಗಿ ಬ್ರಾಹ್ಮಣವಾದ ವಿರೋಧಿ, ರಾಜವಿರೋಧಿ ಪ್ರಚಾರವನ್ನು ಈ ಚಳುವಳಿ ಕೈಗೊಂಡಿತು. ಪುರಂದರದಾಸರು, ಕನಕದಾಸರ ನಾಯಕತ್ವದಲ್ಲಿ ಕನ್ನಡ ಭಾಷೆ ಹಾಗೂ ಸಾಹಿತ್ಯದ ಅಭಿವೃದ್ಧಿಯಲ್ಲಿ ಈ ಚಳವಳಿ ಒಂದು ಮಹತ್ವದ ಪಾತ್ರವನ್ನು ನಿರ್ವಹಿಸಿತು ಇದೇ ಅವಧಿಯಲ್ಲಿ ಸೂಫಿಗಳ ಚಳುವಳಿಯೂ ಆರಂಭವಾಯಿತು. ಇದು ಮುಸ್ಲಿಂ ದಾಸರುಗಳ ಚಳುವಳಿ. ಒಟ್ಟಾರೆ ಸಾರದಲ್ಲಿ ಇದು ವ್ಯವಸ್ಥೆಯ ವಿರೋಧಿಯಾಗಿತ್ತು"[೨೮]

'ಹಿಂದೂ ಸಾಮ್ರಾಜ್ಯ'ದ ಉದಯವೆಂದು, ಧರ್ಮಗಳ ಸಂಘರ್ಷದಲ್ಲಿಯೇ ವಿಜಯನಗರ ಇತಿಹಾಸವನ್ನು ನೋಡುವ ಸಾಂಸ್ಕೃತಿಕ ಚರಿತ್ರಕಾರರಿಗೆ ಮೇಲಿನ ವಿಚಾರಗಳು ಹೊಳೆಯುವುದೇ ಇಲ್ಲ. ಕನ್ನಡ ರಾಷ್ಟ್ರೀಯತೆಯಲ್ಲಿ ವಾಣಿಜ್ಯವೆಂಬುದು ಮಧ್ಯಕಾಲದಲ್ಲಿ ತುರೀಯಾವಸ್ಥೆಗೆ ಮುಟ್ಟಿದ್ದರೆ ಅದು ವಿಜಯನಗರದ ಕಾಲದಲ್ಲಿ ಎಂದು 'ಕನ್ನಡ ರಾಷ್ಟ್ರೀಯತೆ' ಕೃತಿಯಲ್ಲಿ ಡಾ.ಬಂಜಗೆರೆ ಜಯಪ್ರಕಾಶರು ಚರ್ಚಿಸುತ್ತಾರೆ. ಬಂದರುಗಳ ಕೈವಶ, ತೂಕ, ಅಳತೆ ಮಾನದಂಡಗಳು, ನಾಣ್ಯ ಮುದ್ರಣ, ವ್ಯಾಪಾರೀ ಕೇಂದ್ರವಾದ ಕಾರಣ ಸೂಳೆಗೇರಿಗಳು ಅವರ ಮೇಲೆ ವಿಧಿಸುತ್ತಿದ್ದ ತೆರಿಗೆಗಳು, ವ್ಯಾಪಾರೀ ಬಜಾರುಗಳು, ಬೃಹದಾಕಾರದ ದೇವಾಲಯಗಳು ಆರಂಭಗೊಂಡವು ಮತ್ತು ಕ.ವಿ.ರಂ. ಗುರುತಿಸುವ ಹಾಗೆ ಹರಿದಾಸ ಚಳುವಳಿ, ಸೂಫಿ ಚಳುವಳಿಗಳು ಸ್ಥಾಪಿತ ಮೌಲ್ಯಗಳನ್ನು ಪ್ರಶ್ನಿಸಲಾರಂಭಿಸಿದವು. ಆದರೆ ಕನ್ನಡ ಸಂಶೋಧಕ ಶಂಬಾಜೋಶಿಯವರು, ಈ ಚಳುವಳಿ ಆಳದಲ್ಲಿ ಧಾರ್ಮಿಕವಾದುದಾಗಿತ್ತು, ವೈದಿಕ ಮೌಲ್ಯಗಳನ್ನು ಪ್ರತಿಪಾದಿಸಿತು ಎನ್ನುತ್ತಾರೆ. ಜೊತೆಗೆ ಡಾ.ರಹಮತ್ ತರೀಕೆರೆಯವರೂ ಸಹ ಈ ಚಳುವಳಿಯ ಜನಪರ ಆಶಯಗಳ ಕುರಿತು ಅನೇಕ ಪ್ರಶ್ನೆಗಳನ್ನು ಎತ್ತಿದ್ದಾರೆ. ಆದರೂ ವಾಣಿಜ್ಯ ಚಟುವಟಿಕೆಗಳು, ಹೆಚ್ಚಾದವು ಜೊತೆಗೆ ನಿಧಾನಕ್ಕೆ ಪಾಳೆಗಾರರೆಂಬ ಜನಪೀಡಕ ವರ್ಗ ಕೂಡ ಹುಟ್ಟಿಕೊಳ್ಳಲಾರಂಭಿಸಿತು, ವಸಾಹತು ಶಕ್ತಿಗಳು ಭಾರತದ ಕಡೆಗೆ ಮುಖಮಾಡಲಾರಂಭಿಸಿದವು. ಈ ಹೆಜ್ಜೆಗಳನ್ನು ಕ.ವಿ.ರಂ ತನ್ನ ಬರಹಗಳಲ್ಲಿ ದಾಖಲಿಸಿದೆ.

ಆನಂತರದ ಕನ್ನಡ ರಾಷ್ಟ್ರೀಯತೆಯಲ್ಲಿ ವಸಾಹತು ವಿರೋಧಿ ಹೋರಾಟವಾಗಿ ಗುರುತಿಸಲಾಗುತ್ತದೆ. ಪಾಳೇಗಾರರನ್ನು ಸ್ವಲ್ಪಮಟ್ಟಿಗೆ ನಿಯಂತ್ರಿಸಿದ ಚಿಕ್ಕದೇವರಾಜ ಒಡೆಯರ್, ಸಂಪೂರ್ಣ ನಿಯಂತ್ರಿಸಿ ವಸಾಹತುಶಕ್ತಿಗೆ ಸಮಸ್ಪರ್ಧಿಯಾಗಿ ನಿಂತ ಹೈದರ್ ಅಲಿ ಮತ್ತು ಟಿಪ್ಪು ಸುಲ್ತಾನರನ್ನು ಚಿದಾನಂದ ಮೂರ್ತಿಯಂತಹ ಬಲಪಂಥೀಯ ಚರಿತ್ರಕಾರರು ದುಷ್ಟನೆಂಬಂತೆ ಚಿತ್ರಿಸಿದರೆ, ಕರ್ನಾಟಕ ವಿಮೋಚನಾ ರಂಗವು ಕನ್ನಡ ರಾಷ್ಟ್ರೀಯತೆಯ ಧೀಮಂತ ನಾಯಕನೆಂಬಂತೆ ಗ್ರಹಿಸುತ್ತದೆ. ಮತ್ತು ಹಲಗಲಿ ಬೇಡರಾದಿಯಾಗಿ ಅನೇಕ ಜನರ ಹೋರಾಟಗಳನ್ನು, ಕಾಂಗ್ರೆಸ್‌ನಲ್ಲಿದ್ದೂ ಮಡಿದ ಮೈಲಾರ ಮಹದೇವಪ್ಪನನ್ನು, ಸಂಗೊಳ್ಳಿರಾಯಣ್ಣ ರಾಣಿ ಚೆನ್ನಮ್ಮರಂತಹ ನಾಯಕರನ್ನು ಸ್ಮರಿಸಿಕೊಳ್ಳುತ್ತದೆ.

ಈ ಸಂಘಟನೆಯು ತನ್ನ ಎಡಪಂಥೀಯ ಚಿಂತನೆಗಳ ನೆಲೆಯಿಂದ ಕನ್ನಡ ರಾಷ್ಟ್ರೀಯತೆಯ ಚರಿತ್ರೆಗೆ ಹೊಸದೊಂದು ಆಯಾಮ ನೀಡಲು ಪ್ರಯತ್ನಿಸಿದೆ. ಆ ಮೂಲಕ ಕನ್ನಡ ರಾಷ್ಟ್ರೀಯತಾ ಚರ್ಚೆಗೆ ಬಹುತ್ವವನ್ನು, ನೀಡುವುದಲ್ಲದೆ ಚರಿತ್ರೆಯನ್ನು ಹೀಗೂ ನೋಡಬೇಕಾಗುತ್ತದೆ ಎಂಬುದನ್ನು ತೋರಿಸಿಕೊಟ್ಟಿದೆ. ಆದರೆ ಚರಿತ್ರೆಯ ನಡಿಗೆಗಳು ಇಷ್ಟೊಂದು ಏಕ ಮುಖವೇ ಎಂಬ ಪ್ರಶ್ನೆಯೂ ಉಳಿದುಕೊಳ್ಳುತ್ತದೆ.

**೪.೮ ಚರಿತ್ರೆ : ಚಿಂತನೆಗಳ ತೌಲನಿಕ ವಿವೇಚನೆ**

ರಾಷ್ಟ್ರನಿರ್ಮಾಣದ ಮಹಾಪ್ರಕ್ರಿಯೆಗೆ ಅತ್ಯಂತ ಅವಶ್ಯಕವಾದ ಮತ್ತು ಮೂಲಭೂತವಾದ ಕೆಲಸವನ್ನು ಪರಂಪರೆಯ ನಿರ್ಮಾಣ ಅಥವಾ 'ನೆನಪುಗಳ ನಿರ್ಮಾಣ'ವೆಂದು ಕರೆಯಲಾಗುತ್ತದೆ. ನೆನಪುಗಳನ್ನು ನಿರ್ಮಿಸುತ್ತಲೇ 'ರಾಷ್ಟ್ರೀಯ ಪ್ರಜ್ಞೆ'ಯೊಂದನ್ನು ರೂಪಿಸಲು ಪ್ರಯತ್ನಿಸಲಾಗುತ್ತದೆ. ಇದು ಪರೋಕ್ಷವಾಗಿ ತಾನು ಇತರರಿಗಿಂತ ಭಿನ್ನ ಎಂದು ಭಾವಿಸಲು ಸಹ ಕಾರಣವಾಗುತ್ತದೆ. ತನ್ನ ರಾಷ್ಟ್ರಕರಲ್ಲಿ ಮಾಡುವ ಈ ಪ್ರಜ್ಞೆಯ ಆಧಾರದ ಮೇಲೆಯೆ 'ತಾವೆಲ್ಲ ಒಂದು' ಎನ್ನುವುದು ರೂಪುಗೊಳ್ಳುತ್ತದೆ. ಅಂತಿಮ ರಾಷ್ಟ್ರೀಯ ಮಾನಸವೊಂದು ನಿರ್ಮಾಣಗೊಳ್ಳಲೆತ್ನಿಸುತ್ತದೆ. ಯೂರೋಪಿನ ಚಿಂತಕರು ಇದನ್ನೆಲ್ಲ ಪರಿಗಣಿಸಿಯೇ 'ಕಲ್ಪಿತ ಕುಲ' ಎನ್ನುವ ಪರಿಕಲ್ಪನೆಯನ್ನು ಪ್ರತಿಪಾದಿಸಿರಬಹುದು. ಯೂರೋಪಿನಲ್ಲಾದರೆ ಪ್ರತಿ ವಿಷಯಗಳಿಗೂ ಒಂದು ಚರಿತ್ರೆಯಿದೆಯೆಂದು ಭಾವಿಸಿ ಅವುಗಳನ್ನು ಶಾಸ್ತ್ರೀಯಗೊಳಿಸಲೆತ್ನಿಸುತ್ತದೆ. ಆದರೆ ಭಾರತದಲ್ಲಿ ವಸಾಹತೋತ್ತರ ಕಾಲದಲ್ಲಿ ಯೂರೋಪನ್ನು ಅನುಕರಣೆ ಮಾಡಲೆತ್ನಿಸಿರುವ ಕ್ರಮ ಅಷ್ಟೊಂದು ಸಾವಯವ ಎಂದೆನ್ನಿಸುವುದಿಲ್ಲ. ಏಕೆಂದರೆ ಭಾರತದ ರಾಷ್ಟ್ರೀಯತೆಗಳ ಸಂದರ್ಭದಲ್ಲಿ ಚರಿತ್ರೆಯನ್ನು ಕಟ್ಟುವುದೆಂದರೆ ಅದು ಬರೀ ಶಾಸ್ತ್ರೀಯವಿದ್ಯಮಾನವಷ್ಟೇ ಅಲ್ಲ. ಸಮಗ್ರದೊಳಗೆ ಹೊಕ್ಕು ಬರುವುದೆಂದೇ ಭಾಸವಾಗುತ್ತದೆ. ಪುರಾಣ ಮಿಥಕ ಇತ್ಯಾದಿಗಳೆಲ್ಲ ಏಕೀಭವಿಸಿ ರೂಪುತಾಳಲಾರಂಭಿಸುತ್ತದೆ. ಅನೇಕ ಬಾರಿ ಇದನ್ನು ಬಲಪಂಥೀಯ ಚರಿತ್ರಕಾರರು ತಮ್ಮ ಕುಲೀನ ವರ್ಗಗಳ ಹಿತಾಸಕ್ತಿಯನ್ನು ಕಾಪಾಡುವುದಕ್ಕೆ ಅತ್ಯಂತ ರಮ್ಯವಾಗಿ ಚಿತ್ರಿಸಲೆತ್ನಿಸಿದ್ದಾರೆ. ಹಾಗಾಗಿಯೇ ಕನ್ನಡ ರಾಷ್ಟ್ರೀಯತೆಯ ಆರಂಭವನ್ನೂ ಸಹ ಒಂದು ರಾಜ ಮನೆತನದ ಆಧಾರದ ಮೇಲೆ ನಿರ್ಮಿಸಲು ಪ್ರಯತ್ನಿಸಲಾಗಿದೆ.

ಕನ್ನಡ ರಾಷ್ಟ್ರೀಯತೆಯ ಚರಿತ್ರೆ ಎನ್ನುವುದನ್ನು ಕನ್ನಡ ಮೂಲದ ಅಥವಾ ಕರ್ನಾಟಕವನ್ನಾಳಿದ ಅರಸರ ಚರಿತ್ರೆ ಎನ್ನುವಂತಹ ಸಾಮಾನ್ಯ ತಿಳುವಳಿಕೆಯೇ ಚಾಲ್ತಿಯಲ್ಲಿರುವಂತಿದೆ. ಸಹಜವಾಗಿಯೇ ಇಲ್ಲೆಲ್ಲಾ ಜನತೆಯ ಪಾತ್ರ ತಟಸ್ಥಗೊಂಡಿರುತ್ತದೆ. ಆದರೆ ಇದಕ್ಕೆ ವಿರುದ್ಧ ದಿಕ್ಕೆಂಬಂತೆ ಚರಿತ್ರೆಯನ್ನು ಜನರೇ ನಿರ್ಮಿಸುತ್ತಾರೆ ಎಂಬ ನಿಲುವು ಸಹ ಚಾಲ್ತಿಯಲ್ಲಿದೆ. ಆಶ್ಚರ್ಯವೆಂದರೆ ಮೇಲೆ ಚರ್ಚಿಸಿದ ಇಡೀ ಅಧ್ಯಾಯದಲ್ಲಿ ಈ ನಿಲುವೇ ಪ್ರಧಾನವಾಗಿ ಚಲಿಸುತ್ತಿರುವುದು ಕಾಣುತ್ತದೆ. ಮೊದಲನೆಯ ಚಿಂತನೆಯಲ್ಲಿ ಪ್ರಭುವಿನದೇ ಪ್ರಧಾನ ಪಾತ್ರವಾಗಿ ಕಂಡರೆ ಎರಡನೆಯದರಲ್ಲಿ 'ದಾಸನೀಶನಾಗಲೇಬೇಕು' ಎಂಬ ನಿಲುವಿನಿಂದಾಗಿ ಪ್ರಜೆಯ ಪಾತ್ರ ಪ್ರಾತಿನಿಧಿಕವಾಗ ತೊಡಗುತ್ತದೆ. ಸಾಂಪ್ರದಾಯಕ ಎಡಪಂಥೀಯರಿಗಿಂತ ಇಲ್ಲಿನ ಚಿಂತನೆ ತುಸು ಭಿನ್ನವಾಗುತ್ತದೆ. ಪ್ರಜೆಯೇ ಚರಿತ್ರೆಯನ್ನು ಕಟ್ಟುತ್ತಾನೆ ಎನ್ನುವುದರ ಜತೆಗೆ ಪ್ರಭುಪರ ಪ್ರಭುತ್ವವನ್ನು ಜೊತೆ ಸೇರಿಸಿಯೇ ವಿವರಿಸಲು ಪ್ರಯತ್ನಿಸಲಾಗಿದೆ. ಅನೇಕ ಬಾರಿ ಇದು ದ್ವೇಷ ರಹಿತವಾದಂತಹ ರಾಷ್ಟ್ರ ನಿರ್ಮಾಣಕ್ಕೆ ಆಶಿಸುವುದನ್ನೂ ಕಾಣುತ್ತೇವೆ.

ಕೆಲವೊಮ್ಮೆ ಕನ್ನಡದ ಚಿಂತಕರು ಚರಿತ್ರೆ ನಿರ್ಮಾಣದ ಕಾರ್ಯವನ್ನು ರಾಜಪ್ರಭುತ್ವದ ಕೈಯಿಂದ ಕಸಿದು ಜನತೆಯತ್ತ ತರಲು ಯತ್ನಿಸಿರುವಂತೆ ಕಾಣುತ್ತದೆ.

**ಕೊನೆ ಟಿಪ್ಪಣಿಗಳು**

೧. ಶಂಬಾ ಜೋಶಿ, ಕನ್ನಡದ ನೆಲೆ (ಸಮಗ್ರ ಸಂಪುಟ -೯ -ಸಂಪಾದನೆ ಮಲ್ಲೇಪುರಂ ಜಿ.ವೆಂಕಟೇಶ), ಪುಟ ೬

೨. ಆಲೂರು ವೆಂಕಟರಾಯರು 'ಕರ್ನಾಟಕತ್ವದ ವಿಕಾಸ' ಪುಟ ೫೫ ರಲ್ಲಿ ಕೊಡುವ ಉಪಮೆ ಆಕರ್ಷಕವಾಗಿದೆ : 'ಕೋಲಂಬಸನು ಅಮೇರಿಕೆಯನ್ನು ಹುಡುಕಿ ತೆಗೆದಂತೆ ನಾನೂ ಕರ್ನಾಟಕವನ್ನು ಹುಡುಕಿ ತೆಗೆಯಬೇಕಾಯಿತು'

೩. ಅದೇ, ಪುಟ ೧೭೬

೪. ಅದೇ, ಪುಟ ೧೭೭

೫. ಅದೇ, ಪುಟ ೫೮-೫೯, ೯೦ ಮತ್ತು ೯೧ ರಿಂದ ಕೆಲವು ಭಾಗಗಳನ್ನು ಆರಿಸಿಕೊಳ್ಳಲಾಗಿದೆ.

೬. ಬಿ.ಎಂ.ಶ್ರೀಕಂಠಯ್ಯ, ಶ್ರೀಸಾಹಿತ್ಯ (ಸಮಗ್ರಸಂಪುಟ) ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ, ಪುಟ ೨೭೬

೭. ಎ.ಎನ್.ಮೂರ್ತಿರಾವ್, ಬಿ.ಎಂ.ಶ್ರೀಕಂಠಯ್ಯ, ಪುಟ ೪೦

೮. ಬಿ.ಎಂ.ಶ್ರೀಕಂಠಯ್ಯ, ಶ್ರೀ ಸಾಹಿತ್ಯ ಸಮಗ್ರ ಸಂಪುಟ, ಕನ್ನಡದ ಬಾವುಟ, ಪುಟ ೧೩೭

೯. ಬಿ.ಎಂ.ಶ್ರೀಕಂಠಯ್ಯ, ಶ್ರೀ ಸಾಹಿತ್ಯ ಸಮಗ್ರ ಸಂಪುಟ, ಕನ್ನಡ ತಾಯ ನೋಟ (ಕವಿತೆ)ಹೊಂಗನಸುಗಳು ಪುಟ ೧೩೪ -೧೩೫

೧೦. ಶಂಬಾಜೋಶಿ (ಶಂಬಾ ಕೃತಿ ಸಂಪುಟ -೩ (ಸಂ) ಮಲ್ಲೇಪುರಂ.ಜಿ. ವೆಂಕಟೇಶ) ಕರ್ನಾಟಕ ಸಂಸ್ಕೃತಿ ಪೂರ್ವಪೀಠಿಕೆ, ಪುಟ ೪೪೨

೧೧. ಅದೇ, ಪುಟ ೪೪೨

೧೨. ಶಂಬಾ ಜೋಶಿ (ಶಂಬಾ ಕೃತಿ ಸಂಪುಟ ೨, (ಸಂ) ಮಲ್ಲೇಪುರಂ. ಜಿ. ವೆಂಕಟೇಶ), ಕನ್ನಡ ನೆಲೆ, ಪುಟ ೭

೧೩. ಅದೇ, ಪುಟ ೭ ಮತ್ತು ೮

೧೪. ಶಂಬಾ ಜೋಶಿ (ಶಂಬಾ ಕೃತಿ ಸಂಪುಟ-೩, (ಸಂ) ಮಲ್ಲೇಪುರಂ. ಜಿ. ವೆಂಕಟೇಶ), ಕರ್ನಾಟ ಸಂಸ್ಕೃತಿಯ ಪೂರ್ವಪೀಠಿಕೆ, ಪುಟ ೪೪೫

೧೫. ಶಂಬಾ ಜೋಶಿ (ಶಂಬಾಕೃತಿ ಸಂಪುಟ-೪) (ಸಂ) ಮಲ್ಲೇಪುರಂ.ಜಿ. ವೆಂಕಟೇಶ) ಋಗ್ವೇದ ಸಾರ: ನಾಗಪ್ರತಿಮಾಚಾರ, ಪುಟ ೧೧೯, ೧೨೦

೧೬. ಕುವೆಂಪು, ಕುವೆಂಪು ಸಮಗ್ರಗದ್ಯ (ಸಂ) -೨, ಸಂಸ್ಕೃತಿ ಕ್ರಾಂತಿಗೆ ಕಹಳೆ ನಾಂದಿ, ಪುಟ ೪೮೧

೧೭. ಅದೇ, (ಇಸ್ಲಾಂ ಸಂಸ್ಕೃತಿ ಕೃತಿಗೆ ಬರೆದ ಮುನ್ನುಡಿ ಪುಟ ೭೭೫). ಈ ಪುಸ್ತಕದ ವಿಶೇಷವೆಂದರೆ ತಮ್ಮ ಗುರುಗಳಾದ ಬಿ.ಎಂ.ಶ್ರೀಕಂಠಯ್ಯನವರು ಅಬ್ಬಾಸ್‌ಷೂಸ್ತ್ರಿಯವರಿಂದ ಬರೆಸಿ, ಅನುವಾದ ಮಾಡಿ, ಶಿಷ್ಯನ ಕಡೆಯಿಂದ ಮುನ್ನುಡಿ ಬರೆಸಿದ್ದಾರೆ. ಈ ಪುಸ್ತಕ ೧೯೪೪ರಲ್ಲಿ ಪ್ರಕಾಶನಗೊಂಡಿದೆ. ಆದರೆ ಆ ವೇಳೆಗಾಗಲೇ ಬಿ.ಎಂ.ಶ್ರೀಯವರು ತೀರಿಕೊಂಡಿದ್ದರು. ಎರಡನೆಯ ಮಹಾಯುದ್ಧ ನಡೆಯುತ್ತಿದ್ದ ಕಾಲಘಟ್ಟದಲ್ಲಿ ಭಾರತದಲ್ಲಿ ಯಾವ ಕೃತಿಗಳೂ ಪ್ರಕಟಗೊಳ್ಳಲಿಲ್ಲ.

೧೮. ಅದೇ, ಪುಟ ೭೬೬-೭೬೭

೧೯. ಅದೇ, ಪುಟ ೭೬೫-೭೬೬

೨೦. ಅದೇ, ಪುಟ ೭೬೯-೭೭೦

೨೧. ಅದೇ, ಪುಟ ೧೪೯

೨೨. ಡಿ.ಆರ್.ನಾಗರಾಜ, ಸಾಹಿತ್ಯ ಕಥನ, ಪುಟ-೨೮೭, ೨೮೮

೨೩. ಅದೇ, ಪುಟ ೨೮೬

೨೪. ಡಾ.ಎಂ.ಚಿದಾನಂದ ಮೂರ್ತಿ, ಕನ್ನಡ ಸಂಸ್ಕೃತಿ: ನಮ್ಮ ಹೆಮ್ಮೆ, ಪುಟ ೨೫

೨೫. ಡಾ.ಎಂ. ಚಿದಾನಂದ ಮೂರ್ತಿ, ಚಿದಾನಂದ ಸಮಗ್ರ ಸಂಪುಟ ೫ ವೀರಶೈವ ಧರ್ಮ, ಭಾರತೀಯ ಸಂಸ್ಕೃತಿ (ಹಿಂದೂ ಲಿಂಗಾಯತ), ಪುಟ ೪೫೮

೨೬. ಡಾ.ಎಂ.ಚಿದಾನಂದಮೂರ್ತಿ (ಚಿದಾನಂದ ಸಮಗ್ರಸಂಪುಟ -೫) ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ, ಪುಟ ೧೭೪, ೧೭೫

೨೭. ಕರ್ನಾಟಕ ವಿಮೋಚನಾ ರಂಗ, ಪ್ರಣಾಳಿಕೆ ಹಾಗೂ ಸಂವಿಧಾನ, ಪುಟ ೬

೨೮. ಅದೇ, ಪುಟ ೬-೭

ಅಧ್ಯಾಯ ೫

## ಕನ್ನಡ ರಾಷ್ಟ್ರೀಯತೆ : ಧರ್ಮ ಕುರಿತ ಚಿಂತನೆ


೫.೧ ಪೀಠಿಕೆ

೫.೨ ಧರ್ಮ ಕುರಿತಂತೆ ಆಲೂರು ವೆಂಕಟರಾಯರ ಚಿಂತನೆಗಳು

೫.೩ ಧರ್ಮ ಕುರಿತಂತೆ ಬಿ.ಎಂ.ಶ್ರೀಯವರ ಚಿಂತನೆಗಳು

೫.೪ ಧರ್ಮ ಕುರಿತಂತೆ ಶಂಬಾ ಜೋಶಿಯವರ ಚಿಂತನೆಗಳು

೫.೫ ಧರ್ಮ ಕುರಿತಂತೆ ಕುವೆಂಪುರವರ ಚಿಂತನೆಗಳು

೫.೬ ಧರ್ಮ ಕುರಿತಂತೆ ಚಿದಾನಂದ ಮೂರ್ತಿಯವರ ಚಿಂತನೆಗಳು

೫.೭ ಧರ್ಮ ಕುರಿತಂತೆ ಕರ್ನಾಟಕ ವಿಮೋಚನಾ ರಂಗದ ನಿಲುವುಗಳು

೫.೮ ಚಿಂತನೆಗಳ ತೌಲನಿಕ ಸಮೀಕ್ಷೆ

## ಅಧ್ಯಾಯ ೫

# ಕನ್ನಡ ರಾಷ್ಟ್ರೀಯತೆ : ಧರ್ಮ ಕುರಿತ ಚಿಂತನೆಗಳು

### ೫.೧ ಪೀಠಿಕೆ

ಧರ್ಮ ಕುರಿತಂತೆ ಜನಸಾಮಾನ್ಯರು ಮತ್ತು ವಿದ್ವಾಂಸರಲ್ಲಿನ ಅಭಿಪ್ರಾಯಗಳು ಮತ್ತು ವ್ಯಾಖ್ಯಾನಗಳು ತೀರಾ ಭಿನ್ನವಾಗಿವೆ ಮತ್ತು ಅತ್ಯಂತ ಸಂಕೀರ್ಣವಾಗಿವೆ. ಜನಸಾಮಾನ್ಯರು ಧರ್ಮವನ್ನು 'ನೈತಿಕ' ವೆಂಬ ಅರ್ಥದಲ್ಲಿ ಗ್ರಹಿಸಿದಂತಿದೆ. ಉದಾಹರಣೆಗೆ 'ಧರ್ಮಕೊಡಿ' ಅಂದರೆ ಭಿಕ್ಷೆಯ ಕುರಿತು ಹೇಳಲಾಗುತ್ತದೆ. ನ್ಯಾಯ ನೀತಿ ಧರ್ಮ ಬೇಡವೇ? ಎನ್ನುವಾಗ ಅನ್ಯಾಯದ ವಿರುದ್ಧವಾಗಿಯೂ, ಕರುಣಾ ಪೂರಿತವಾಗಿಯೂ ಇರಬೇಕೆಂಬುದನ್ನು ಪ್ರತಿಪಾದಿಸುವಂತಿದೆ. 'ರಿಲಿಜಿಯನ್' ಪದಕ್ಕೆ ನಮ್ಮಲ್ಲಿ 'ಧರ್ಮ' ಎಂಬ ಅರ್ಥವಿದ್ದರೂ, ಇಂಗ್ಲಿಷಿನ 'ರಿಲಿಜಿಯನ್' ಮತ್ತು ಭಾರತದ 'ಧರ್ಮ' ಈ ಶಬ್ದಗಳು ಮತ್ತು ಅವುಗಳ ಒಳಲೋಕಗಳ ನಡುವೆ ಅಪಾರ ವ್ಯತ್ಯಾಸಗಳಿವೆ. ಯುರೋಪಿನ 'ರಿಲಿಜಿಯನ್' ಪರಿಕಲ್ಪನೆಯು ದೇವರು, ಧರ್ಮಗುರು, ಸ್ವರ್ಗ-ನರಕ, ಲೌಕಿಕ-ಅಲೌಕಿಕ, ದೇವರ ಸೃಷ್ಟಿ ಮನುಷ್ಯ ಮತ್ತು ಕ್ರಿಶ್ಚಿಯಾನಿಟಿ, ಇವುಗಳ ಸುತ್ತಲೇ ತಳುಕುಹಾಕಿಕೊಂಡಿದೆ. ಇಲ್ಲೆಲ್ಲ ಧರ್ಮವೆಂದರೆ ಸರಳ ರೇಖೆಯ ರೀತಿಯಲ್ಲಿ 'ಏಕ' ರೀತಿಯ ಘಟಕಗಳಾಗಿ ಅರ್ಥೈಸಿಕೊಳ್ಳುವಂತಿದೆ. ಮಧ್ಯಪ್ರಾಚ್ಯದಲ್ಲಿ ಹುಟ್ಟಿ ಅರಬ್ಬಿನ ಕಡೆಗೆ ಬಂದು 'ಇಸ್ಲಾಂ' ಆಗಿ ಯುರೋಪಿಗೆ ಹೋಗಿ ಕ್ರಿಶ್ಚಿಯನ್ ಆದ ಈ ಏಕ ಕೇಂದ್ರೀತ ಘಟಕಗಳ ಪರಿಭಾಷೆಯಲ್ಲಿ ಭಾರತವನ್ನು ಅರ್ಥೈಸಿಕೊಳ್ಳಲು ಸಾಧ್ಯವಿಲ್ಲ.

ಭಾರತದಲ್ಲಿ ಧರ್ಮ ಪದವನ್ನು ಯುರೋಪಿನ ಮತ್ತು ಇಸ್ಲಾಂ ರಾಷ್ಟ್ರಗಳಂತೆ ವಿವರಿಸಲು ಸುಲಭವಲ್ಲ. ಏಕೆಂದರೆ ಭಾರತದಲ್ಲಿ ಧರ್ಮವು ಜಾತಿ ಮೂಲಗಳಿಂದ ನಿರ್ಧರಿಸಲ್ಪಡುವುದರಿಂದ ಅತ್ಯಂತ ಸಂಕೀರ್ಣವಾಗಿದೆ. ಜಾತಿ ಮತ್ತು ಕಸುಬುಗಳು ಅಭಿನ್ನಗೊಂಡ ಬಹುದೇವತಾರಾಧನೆ ಇರುವ, ನೂರಾರು ನಂಬಿಕೆಗಳಿರುವ ಪಥ, ಪಂಥಗಳಿರುವ ದೇಶವಾಗಿದೆ. ಈ ಕಾರಣಕ್ಕೆ ಹಿಂದುತ್ವದ ಆಧಾರದ ಮೇಲೆ ರಾಷ್ಟ್ರಕಟ್ಟಲು ಇನ್ನೂ ಸಾಧ್ಯವಾಗಿಲ್ಲ. ಈ ವೈರುಧ್ಯಗಳನ್ನು ಮರೆಸುವುದಕ್ಕೋಸ್ಕರವಾಗಿಯೇ 'ಹಿಂದು ನಾವೆಲ್ಲ ಒಂದು' ಎಂಬ ರೀತಿಯ ಘೋಷಣಾ ವಾಕ್ಯಗಳನ್ನು ಹುಸಿ ವೇದಿಕೆಯ ಮೇಲೆ ನಿರ್ಮಿಸಲಾಗುತ್ತಿದೆ. ಕುಲೀನ ವರ್ಗಗಳ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಹುಟ್ಟಿಕೊಂಡ ಹಿಂದುತ್ವವಾದಿ ರಾಷ್ಟ್ರಕಲ್ಪನೆ ಪರಂಪರೆಯಿಂದ ತನಗೆ ಬೇಕಾದ್ದನ್ನು ಆರಿಸಿಕೊಂಡು ತನಗೆ ಬೇಕಾದ ಹಾಗೆ ಮಾರ್ಪಡಿಸಿಕೊಳ್ಳುತ್ತಿದೆ.

'ಸ್ವಧರ್ಮೇ ನಿಧನಂ ಶ್ರೇಯಃ ಪರೋಧರ್ಮ ಭಯಾವಹಃ'

(ತನ್ನ ಧರ್ಮದಲ್ಲಿರುವುದೇ ಶ್ರೇಯಸ್ಕರ, ಪರಧರ್ಮಗಳಿಗೆ ಹೋಗುವುದು ಆತಂಕಕಾರಿ) ಎಂಬಂತಹ

ಅಭಿಪ್ರಾಯಗಳನ್ನು ಸೃಷ್ಟಿಸಲಾಗುತ್ತದೆ. ಚರಿತ್ರೆಯಲ್ಲಿ ನಡೆದ ಕೆಲವು ಧಾರ್ಮಿಕ ಸಂಘರ್ಷದ ಘಟನೆಗಳನ್ನು ಭೀಕರವಾಗಿ ಕಲ್ಪಿಸಿಕೊಂಡ ಪರಿಣಾಮವೂ ಇದಿರಿರಬಹುದು.

ಹಾಗಾಗಿ ಭಾರತದಲ್ಲಿ ಕೇವಲ ವರ್ಣಾಶ್ರಮ ಧರ್ಮದ ವ್ಯಾಖ್ಯಾನದ ಆಧಾರದ ಮೇಲೆ ಧರ್ಮವನ್ನು ಭಾರತದಲ್ಲಿ ಅರ್ಥಮಾಡಿಕೊಳ್ಳಲಾಗದು. ದೀಕ್ಷೆ ಮೂಲಕ, ಮತಾಂತರಗಳ ಮೂಲಕ ಹುಟ್ಟಿದ ಧರ್ಮಗಳಿವೆ. ದೇವರಿಲ್ಲದ ಧರ್ಮಗಳಾದ ಬೌದ್ಧ, ಜೈನ ಧರ್ಮಗಳಿವೆ (ಈಗ ಇವೂ ಸಹ ತಮ್ಮ ಮೂಲ ಸ್ವರೂಪ ಕಳೆದುಕೊಂಡು ಪೂಜೆ, ಆಗಮಗಳನ್ನು ಅಳವಡಿಸಿಕೊಂಡಿವೆ. ಬುದ್ಧ, ಮಹಾವೀರರನ್ನೇ ದೇವರ ಸ್ಥಾನಕ್ಕೇರಿಸಲಾಗಿದೆ.) ಸಮ್ಯಕ್ ಧರ್ಮಗಳಾದ ಕ್ರೈಸ್ತ, ಇಸ್ಲಾಂ ಕೂಡಾ ಒಟ್ಟಿಗೆ ಬದುಕುತ್ತಿವೆ. ಹಾಗಾಗಿ ಭಾರತದಲ್ಲಿ ಅನೇಕ ಧರ್ಮಗಳ ಸಹ ಅಸ್ತಿತ್ವದಿಂದಾಗಿ ಪರಸ್ಪರ ಕೊಡು ಕೊಳೆಗಳು ನಡೆದಿವೆ. ಅಪಾರ ಸಂಘರ್ಷಗಳೂ ನಡೆದಿವೆ.

ಚಾರಿತ್ರಿಕವಾಗಿ ನೋಡಿದರೆ 'ಹಿಂದೂ' ಎನ್ನುವುದು ಒಂದು ಧರ್ಮ ಅಲ್ಲ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇಲ್ಲಿ ಜಾತಿ ಮೂಲಕ ನಿರ್ಧರಿತಗೊಂಡ ಧರ್ಮಗಳಿವೆ, ಬುಡಕಟ್ಟು ಧರ್ಮಗಳಿವೆ, ನಂಬಿಕೆಗಳ ಆಧಾರದ ಮೇಲೆ ನಿಂತ ಧರ್ಮಗಳೂ ಇವೆ. ಕೆಳಸ್ತರದ ಜಾತಿಗಳು ಮೇಲು ಸ್ತರದ ಜಾತಿಗಳ ಧರ್ಮವನ್ನು ಅನುಸರಿಸಿರುವಂತಿದೆ ಮತ್ತು ಮತಾಂತರದ ಸಾಧ್ಯತೆಗಳಿದ್ದ ಕಡೆಗೆ ಚಲನಾತ್ಮಕವಾಗಿರುವಂತೆ ಚರಿತ್ರೆಯಿಂದ ಗೋಚರವಾಗುತ್ತದೆ. ೧೨ನೇ ಶತಮಾನದ ಚಲನೆಯನ್ನು ಹೀಗೆ ಅರ್ಥ ಮಾಡಿಕೊಳ್ಳಬೇಕಾಗಿದೆಯೇನೋ?

ಆಧುನಿಕ ಸಂದರ್ಭದಲ್ಲಿ ಸಂತರು, ಹೊಸ ಸಾಂಸ್ಕೃತಿಕ ದೈವಮಾನವರೆಂದು ಭಾವಿಸಿ ಅವರ ಆರಾಧನೆ ನಡೆಯುತ್ತಿದೆ. ಉದಾಹರಣೆಗೆ ಶಿರಡಿ ಸಾಯಿಬಾಬ ಮುಂತಾದವರನ್ನು ಈ ನೆಲೆಯಲ್ಲಿಯೇ ಗ್ರಹಿಸಬೇಕಾದಂತೆ ಕಾಣುತ್ತಿದೆ. ವೈವಿಧ್ಯತೆ, ಬೇಧ ಸ್ವಭಾವ, ತರತಮಗಳು, ಚಲನಶೀಲತೆಗಳು ಭಾರತದ ಧರ್ಮಗಳ ಸ್ವಭಾವಗಳಾಗಿವೆ. ಹಾಗಾಗಿ ಯುರೋಪಿನ ಧರ್ಮಗಳ ಕಣ್ಣಲ್ಲಿ ಭಾರತದ ಧರ್ಮಗಳನ್ನು ವಿವರಿಸಲು ಸಾಧ್ಯವೇ ಇಲ್ಲ. ಜನರ ನಂಬಿಕೆಯ, ಆಚರಣೆಯ ಧರ್ಮಗಳನ್ನು ಯುರೋಪು 'ಪೇಗನ್ ರಿಲಿಜಿಯನ್' ಎಂದು ಹೀಯಾಳಿಸುತ್ತದೆ. ಆದರೆ ಹೀಗೆ ಹೀಯಾಳಿಕೆಗೆ ಒಳಪಡಬಹುದಾದ ಧರ್ಮಗಳೇ ಭಾರತದಲ್ಲಿ ಸಾವಿರಾರಿವೆ. ಆದ್ದರಿಂದಲೇ ಭಾರತದಲ್ಲಿ ಹಿಂದುತ್ವವಾದಿ ರಾಷ್ಟ್ರ ನಿರ್ಮಾಣ ಮಾಡಬೇಕೆಂದು ಹಠತೊಟ್ಟ ಚಿಂತಕರು, ನಾಯಕರು ಯುರೋಪಿನ ಮಾದರಿಯ ಏಕದೇವತಾ ಧರ್ಮಗಳ ಪ್ರತಿಪಾದನೆ ಮಾಡುತ್ತಿರುವಂತಿದೆ. ಒಂದು ಧರ್ಮ, ಒಂದು ಶ್ರದ್ಧಾಕೇಂದ್ರ, ಒಂದೇ ರೀತಿಯ ಆಚರಣೆ, ಒಂದು ಪವಿತ್ರ ಸಂಕೀರ್ಣ ಸೃಷ್ಟಿಸುವುದಕ್ಕೆ ಶತ ಪ್ರಯತ್ನ ಮಾಡುತ್ತಿರುವುದು. ಹಿಂದೂ ಹೆಸರಿನಲ್ಲಿ ಬ್ರಾಹ್ಮಣ, ಶ್ರದ್ಧಾಕೇಂದ್ರದ ಹೆಸರಿನಲ್ಲಿ ಅಯೋಧ್ಯೆ, ದೇವರ ಹೆಸರಿನಲ್ಲಿ ರಾಮ, ಇತ್ಯಾದಿಗಳು. ಆದರೆ ಇದನ್ನು ಒಪ್ಪದ, ಪ್ರಶ್ನಿಸುವ ಅಸಂಖ್ಯಾತ ಪಂಥಗಳಿರುವುದನ್ನು ನೋಡುತ್ತಿದ್ದೇವೆ. ಜನರಲ್ಲಿರುವ ಆರ್ಥಿಕ, ಸಾಮಾಜಿಕ ಬಿಕ್ಕಟ್ಟುಗಳನ್ನು ಹಿಂದುತ್ವವಾದಿ ರಾಷ್ಟ್ರೀಯ ಚಿಂತಕರ ದ್ವೇಷದ ರಾಜಕಾರಣ ಅಥವಾ 'ಹೊರಗಿಟ್ಟು ನೋಡುವ' 'ಇವ ನಮ್ಮವ' ನೆನ್ನದ ನಿಲುವುಗಳಿಗೆ ಭಾರತದ ಬಹುಧರ್ಮೀಯ ಸಮುದಾಯಗಳು ಸೋಲುತ್ತಿರುವಂತೆ ಕಾಣುತ್ತದೆ. ಅತ್ಯಂತ

ಬಹುರೂಪಿಯಾದ ಭಾರತದ ಧರ್ಮಗಳನ್ನು ವಸಾಹತುಶಾಹಿ ಚಿಕ್ಕಟ್ಟಿನಲ್ಲಿ ಹಿಂದೂ ಎಂಬ ಎರಕಕ್ಕೆ ಸುರಿಯಲು ಪ್ರಯತ್ನಿಸಲಾಗಿದೆ. ಧರ್ಮ ಮತ್ತು ಧಾರ್ಮಿಕ ಸಂಕೇತಗಳ ಮೂಲಕ ವಸಾಹತುವಾದದ ವಿರುದ್ಧ ಹೋರಾಟ ಮಾಡಿದ್ದೇ ದೇಶ ವಿಭಜನೆಗೆ ಕಾರಣವಾದಂತೆ ಕಾಣುತ್ತದೆ. ಡಾ.ಎಸ್.ಚಂದ್ರಶೇಖರ್‌ರವರು ಹೇಳುವಂತೆ "ಪೂನಾದಲ್ಲಿ ತಿಲಕರು ಗೋರಕ್ಷಣಾ ಚಳುವಳಿಯನ್ನು ಉದ್ಘಾಟಿಸಿ ಅದು ಹಬ್ಬ ತೊಡಗಿದಾಗ ಮುಸ್ಲಿಮರು ದೂರವಾಗತೊಡಗಿದರು. ಪ್ರವಾದಿಯ "ಜನ್ಮದಿನದಂದೇ" ಗಣಪತಿ ಹಬ್ಬವನ್ನು ಆಚರಿಸಬೇಕೆಂದು ತಿಲಕರು ಉದ್ಘಾಟನೆ ಮಾಡಿದುದಲ್ಲದೆ ದಕ್ಷಿಣ ಭಾರತದ ರಾಷ್ಟ್ರೀಯವಾದಿಗಳು ಹಬ್ಬವನ್ನು ಹೆಚ್ಚು ಬಾಜಾ ಭಜಂತ್ರಿಯಿಂದ ಆಚರಿಸಲು ಮುಂದಾದಾಗ ರಾಷ್ಟ್ರೀಯವಾದಿಗಳ ಉದ್ದೇಶಗಳ ಕುರಿತು ಮುಸ್ಲಿಮರ ಗುಮಾನಿ ದಟ್ಟವಾಗತೊಡಗಿತು. ಈ ಆಕ್ರಮಣಕಾರೀ ಹಿಂದೂ ಪುನರುಜ್ಜೀವನವಾದದ ಅಂಗವಾಗಿ ರಾಷ್ಟ್ರೀಯವಾದೀ ಪತ್ರಿಕೆಗಳು ಮುಸ್ಲಿಮರು, ಕ್ರಿಶ್ಚಿಯನ್ನರು ಹಾಗೂ ಸರ್ಕಾರದ ಮೇಲೆ ಹರಿಹಾಯತೊಡಗಿದವು."[೧]

ಮತ್ತು "೧೮೮೦ರ ದಶಕದಲ್ಲಿ ಮಾತ್ರ ಮುಸ್ಲಿಮ್ ಸಮುದಾಯದ ಒಂದು ಗುಂಪಿನ ಪತ್ರಿಕೆಗಳು ಆಡಳಿತದಲ್ಲಿನ 'ಹಿಂದುಗಳ ಪ್ರಾಬಲ್ಯ'ದ ವಿರುದ್ಧ ಚಳವಳಿ ಪ್ರಾರಂಭಿಸಿದುವು. ಇದರ ಹಿಂದೆ ಸರ್ಕಾರದ ಒಡೆದು ಆಳುವ ನೀತಿ ಕೆಲಸ ಮಾಡಿತ್ತಲ್ಲದೆ, ನಿಧಾನವಾಗಿ ಮೇಲ್ಜಾತಿ ಹಿಂದುಗಳೇ ಹೆಚ್ಚಾಗಿದ್ದ ದೇಶೀಯ ಅಧಿಕಾರಶಾಹಿಯು ಮುಸ್ಲಿಮರ ಪ್ರಗತಿಗಾಗಿ ತಯಾರಿಸುವ ಯೋಜನೆಗಳಿಗೆ ಅಡ್ಡಿಯುಂಟು ಮಾಡುವ ಹುನ್ನಾರ ನಡೆಸಿತ್ತು. ಮುಸ್ಲಿಮರಿಗೆ ಸರ್ಕಾರ ವಿಶೇಷ ರಿಯಾಯ್ತಿ ತೋರಿಸುವುದನ್ನು 'ರಾಷ್ಟ್ರೀಯವಾದಿ' ಹಿಂದುಗಳು ವಿರೋಧಿಸಿದ ಹಿನ್ನೆಲೆಯಲ್ಲಿ ಅವರು ವಿಶೇಷವಾಗಿ ಕಂಗೆಟ್ಟಿದ್ದರು. ಜೊತೆಗೆ ಎಲ್ಲಾ ಕೋಮು ಗಲಭೆಗಳಿಗೆ ಮುಸ್ಲಿಮರೇ ಕಾರಣವೆಂದು 'ರಾಷ್ಟ್ರೀಯವಾದಿ' ಪತ್ರಿಕೆಗಳು ದೂಷಿಸಿದ್ದರಿಂದ ಮುಸ್ಲಿಮರ ಸಹಾನುಭೂತಿಯನ್ನು ಕಳೆದುಕೊಳ್ಳಬೇಕಾಯಿತು. ವಿದ್ಯಾವಂತ ಮುಸ್ಲಿಮರು ಹಿಂದು ಅಧಿಕಾರಿಗಳ ಬಗ್ಗೆ ಕುಪಿತರಾಗಿರಲು ಕಾರಣ ಹಿಂದೂಗಳು ಕಾನೂನು ಜಾರಿಗೊಳಿಸುವ ಸ್ಥಾನದಲ್ಲಿದ್ದುದಲ್ಲದೆ ತಮ್ಮ ಬಗ್ಗೆ ವೈರ ದ್ವೇಷ ಮತ್ತು ಪಕ್ಷಪಾತ ಧೋರಣೆ ಹೊಂದಿರುವರೆಂದು ಭಾವಿಸಿದ್ದು."[೨]

ಮೇಲಿನ ಎರಡೂ ಪ್ರಕರಣಗಳು ಮುಸ್ಲಿಂ ಸಮುದಾಯವೊಂದನ್ನು 'ಹೊರಗಿಡುವ ರಾಜಕಾರಣದ' ಪ್ರಕ್ರಿಯೆಯ ಭಾಗವಾಗಿವೆ. ಆಳುವ ಸರ್ಕಾರವೇ ಸಮುದಾಯಗಳ ನಡುವೆ ಪರಸ್ಪರ ಎತ್ತಿಕಟ್ಟುತ್ತಾ ಸದಾ ಅಪನಂಬಿಕೆಯನ್ನು ಸೃಷ್ಟಿಸುತ್ತಾ ತನ್ನ ಲೂಟಿಯನ್ನು ಸರಾಗವಾಗಿ ನಡೆಸಿಕೊಂಡು ಹೋಗಲು ಯತ್ನಿಸುವುದನ್ನು ಕಾಣುತ್ತೇವೆ. ಆದರೆ ಇದಕ್ಕಿಂತ ಅಪಾಯಕಾರಿಯಾದುದೆಂದರೆ ಸ್ವಾತಂತ್ರ್ಯ ಚಳುವಳಿಯ ನಾಯಕರು ಅನ್ಯ ಸಮುದಾಯಗಳ ಕುರಿತಂತೆ ಧೋರಣೆಗಳು ಕೇವಲ ಜಾತಿ ಮೂಲಗಳ ಹಿತಾಸಕ್ತಿಯೇ? ಅಥವಾ ಸರ್ಕಾರದ ವಿರುದ್ಧ ತನ್ನ ಸಮುದಾಯವನ್ನು ಒಗ್ಗೂಡಿಸಬೇಕೆಂಬ ಪ್ರಯತ್ನದ ಫಲವಾಗಿ, ಸರ್ಕಾರದಿಂದ ದಮನಕ್ಕೊಳಗಾಗಬೇಕಾದ ಭೀತಿಯಿಂದ ತನ್ನೊಳಗೆ ಇರುವ ತನ್ನಂತೆಯೇ ದಮನಕ್ಕೊಳಗಾದ ಸಮುದಾಯವನ್ನು ಅಪಾಯಕಾರಿಯೆಂಬಂತೆ ಬಿಂಬಿಸುತ್ತಾ, ಶತ್ರುವೆಂಬಂತೆ ಕಲ್ಪಿಸುತ್ತಾ ಹುಸಿ ಒಗ್ಗಟ್ಟನ್ನು ಪ್ರದರ್ಶಿಸುವ ಹಂಬಲ ಮಾತ್ರವಿತ್ತೆ? ಆದರೆ ವಸಾಹತುವಾದಿ ಹೋರಾಟದ ಸಂದರ್ಭದಲ್ಲಿ ರೂಪುಗೊಂಡ ಈ 'ಏಕ ಕೇಂದ್ರಿತ' ಧರ್ಮದ ಕಲ್ಪನೆ ಅಖಂಡ ಭಾರತ ಕಲ್ಪನೆಗೂ ಇದು ಹಿಂದೂ ರಾಷ್ಟ್ರವೆಂಬ ನೆಲೆಗಟ್ಟಿನ

ಮೇಲೆ ನಿಲ್ಲಿಸಬೇಕೆಂಬ ಹಂಬಲದಿಂದಲೂ ಹುಟ್ಟಿರುವಂತೆ ಕಾಣುತ್ತದೆ. ಇದೇ ವಾದವೇ ಇಂದಿಗೂ ಮುಂದುವರಿಯುತ್ತಿದೆ. ಹಾಗಾಗಿಯೇ 'ರಾಷ್ಟ್ರಧರ್ಮ', ರಾಷ್ಟ್ರಧರ್ಮಪಾಲನೆ ಎಂಬ ನುಡಿಗಟ್ಟುಗಳು ಚಾಲ್ತಿಯಲ್ಲಿವೆ. ಇಲ್ಲಿ ರಾಷ್ಟ್ರಧರ್ಮವೆಂಬ ಶಬ್ದ ನಿರ್ದಿಷ್ಟವಾದ ಬದ್ಧತೆಯನ್ನು ಮತ್ತು ಕರ್ತವ್ಯಗಳನ್ನು ಕುರಿತು ಒತ್ತಾಯಿಸುತ್ತದೆ ಎಂಬರ್ಥವಿರುವಂತಿದೆ.

ಇಷ್ಟೊಂದು ಸಂಕೀರ್ಣವಾದ, ಶ್ರೇಣೀಕರಣಗಳ ಮೇಲೆ ನಿಂತಿರುವ, ಬಹುರೂಪಿಯಾದ ಜಗತ್ತಿನ ಯಾವ ಕಡೆಯೂ ಕಾಣಸಿಗದ ಧಾರ್ಮಿಕ ಅರ್ಥವೈವಿಧ್ಯಗಳು ಭಾರತದಲ್ಲಿ ಮಾತ್ರ ಕಾಣಸಿಗುತ್ತವೆ.

ಕನ್ನಡ ರಾಷ್ಟ್ರೀಯತೆಯನ್ನು 'ಧರ್ಮ' ಪರಿಕಲ್ಪನೆಯ ಹಿನ್ನೆಲೆಯಲ್ಲಿ ಚರ್ಚಿಸುವಾಗ ಬೇರೆ ರಾಷ್ಟ್ರೀಯತೆಗಳಿಗಿಲ್ಲದ ಅನನ್ಯತೆಯೊಂದು ನೆರವಿಗೆ ಬರುತ್ತದೆ. ಕನ್ನಡ ನೆಲದಲ್ಲಿಯೆ ಹುಟ್ಟಿ ಕನ್ನಡತನದೊಂದಿಗೆ ತಳುಕು ಹಾಕಿಕೊಂಡಿರುವ ಧರ್ಮ, ವೀರಶೈವದರ್ಮ. ಬಹುಪಾಲು ಪ್ರಜಾತಾಂತ್ರಿಕ ಆಶಯಗಳನ್ನು ಒಳಗೊಂಡು ಸ್ವಭಾವದಲ್ಲಿ ಜಾತ್ಯತೀತತೆಯನ್ನು ಆಚರಣೆಗೆ ತಂದ ವಿನೂತನ ಧರ್ಮವಿದು. ಬಹುಪಾಲು ಕಾಯಕ ಜೀವಿಗಳೇ ಕಟ್ಟಿದ ಚಳುವಳಿಯಾದ್ದರಿಂದ ಸಹಜವಾಗಿಯೇ ಜನಮುಖೀ ಆಶಯಗಳನ್ನು ಒಳಗೊಂಡಿದೆ. ಇವತ್ತಿನ ಸಂದರ್ಭದಲ್ಲಿ ಕೂಡ ಹಿಂದುತ್ವದ ಎದುರಿಗೆ ನಿಲ್ಲುವ ಭಾರತದ ಪ್ರಮುಖ ಆಶಯಗಳಲ್ಲಿ ವೀರಶೈವ ಧರ್ಮವೂ ಒಂದು. ಭಾರತದ ಸಂದರ್ಭದಲ್ಲಿ ಮುಕ್ತ ಚಲನೆಗೆ ಅವಕಾಶವಿರುವ ಬೌದ್ಧ ಧರ್ಮದ ನಂತರ ವೀರಶೈವ ಧರ್ಮವೇ ಪ್ರಧಾನವಾದುದೆಂದು ಅನ್ನಿಸುತ್ತದೆ. ಆದರೆ ರಾಷ್ಟ್ರೀಯತೆಯೊಂದರ ಜೊತೆ 'ವೀರಶೈವ' ಮತ್ತು 'ಸಿಖ್' ಧರ್ಮಗಳು ಮಾತ್ರ ನೇರವಾಗಿ ತಳುಕು ಹಾಕಿಕೊಂಡಿವೆ. ಜನರ ಧರ್ಮಗಳಾದ ಈ ಮೂರೂ ಧರ್ಮಗಳು ತಮ್ಮದೇ ಆದ ಭಾಷೆ, ಸಂಸ್ಕೃತಿ, ಕಲೆ, ಸಾಹಿತ್ಯ ಇತ್ಯಾದಿಗಳನ್ನು ನಿರ್ಮಿಸಿವೆ. ತಮಗಿರುವ ಚೌಕಟ್ಟಿನಲ್ಲಿಯೇ ಜನಪರ ಮೌಲ್ಯಗಳನ್ನು ಬಿತ್ತಲು ಪ್ರಯತ್ನಿಸಿವೆ. ಇವು ಹಿಂದೂ ಧರ್ಮದಂತೆ ಮುಚ್ಚಿದ ವ್ಯವಸ್ಥೆಯ ಧರ್ಮಗಳಲ್ಲ. ಮತಾಂತರ ಮುಂತಾದ ಆಯ್ಕೆಯ ವಿಷಯಗಳಿಗೆ ಮುಕ್ತವಾಗಿರುವ ಧರ್ಮಗಳೆಂದು ಭಾವಿಸಬಹುದು. ಆಧುನಿಕ ಸಂದರ್ಭದಲ್ಲಿ ಧರ್ಮವೊಂದು ಹೇಗಿರಬೇಕು ಎನ್ನುವುದಕ್ಕೆ ಮಾದರಿಯಾದಂತೆ ಈ ಮೂರೂ ಧರ್ಮಗಳಿವೆ. ಅದರಲ್ಲೂ ಮುಖ್ಯವಾಗಿ ವೀರಶೈವ ಧರ್ಮ ಅಥವಾ ಚಳವಳಿಯ ಆಶಯಗಳು ಕನ್ನಡ ರಾಷ್ಟ್ರೀಯತೆಗೆ ಅತ್ಯಂತ ಆಪ್ತ ನೆನಪು ಎಂದು ಭಾವಿಸಲಾಗಿದೆ.

ರಾಷ್ಟ್ರಗಳ ನಿರ್ಮಾಣದಲ್ಲಿ ಇಷ್ಟು ದೊಡ್ಡ ಪಾತ್ರ ವಹಿಸುತ್ತಿರುವ ಮತ್ತು ಬದುಕಿನಲ್ಲಿ ನಿರ್ಣಾಯಕವಾಗಿರುವ 'ಧರ್ಮ' ಪರಿಕಲ್ಪನೆಯ ಕುರಿತು ಕನ್ನಡದ ಚಿಂತಕರು ಹೇಗೆ ಪ್ರತಿಕ್ರಿಯಿಸಿದ್ದಾರೆ ಎಂಬುದನ್ನು ಪರಿಶೀಲಿಸಬಹುದು.

### ೫.೨ ಧರ್ಮ ಕುರಿತಂತೆ ಆಲೂರು ವೆಂಕಟರಾಯರ ಚಿಂತನೆಗಳು

ಬಾಲಗಂಗಾಧರನಾಥ ತಿಲಕರಿಂದ ನೇರ ಪ್ರಭಾವಕ್ಕೆ ಒಳಗಾಗಿದ್ದ ಮತ್ತು ಸಾವರ್ಕರರ ಜೊತೆ ನಿರಂತರ ಸಂಪರ್ಕ ಹೊಂದಿದ್ದ, ಕರ್ನಾಟಕ ಏಕೀಕರಣ ಚಳುವಳಿಯನ್ನು ರೂಪಿಸಿ ದಡ ಮುಟ್ಟಿಸಿದ ಕನ್ನಡ ಕುಲ ಪುರೋಹಿತರೆಂದು ಪ್ರಸಿದ್ಧರಾದ ಆಲೂರು ವೆಂಕಟರಾಯರು, ಧರ್ಮ ಪರಿಕಲ್ಪನೆಯ ಕುರಿತಂತೆ ಖಚಿತವಾದ

ನಿಲುವುಗಳನ್ನುಳ್ಳವರಾಗಿದ್ದಾರೆ. ರಾಷ್ಟ್ರವೊಂದರ 'ಕಾರಣ ಶರೀರವು ಧರ್ಮ,' ಧರ್ಮದ ಆಧಾರದ ಮೇಲೆಯೇ ರಾಷ್ಟ್ರವನ್ನು ನಿರ್ಮಿಸಬೇಕು ಎಂಬ ನಿಲುವನ್ನುಳ್ಳವರಾಗಿದ್ದರು. ಅವರು ಕರ್ನಾಟಕವು ಧಾರ್ಮಿಕ ಕ್ಷೇತ್ರದಲ್ಲಿ ಕ್ರಾಂತಿಕಾರಕವಾಗಿದೆ ಎನ್ನುತ್ತಾರೆ.

"ಮಿಕ್ಕೆಲ್ಲ ಕ್ಷೇತ್ರಗಳಿಗಿಂತ ಧಾರ್ಮಿಕ ಕ್ಷೇತ್ರದಲ್ಲಿ ಕರ್ನಾಟಕವು ಮಾಡಿದ ಕ್ರಾಂತಿಯು ಹೆಚ್ಚಿಗೆ ಮಹತ್ವದ್ದಾಗಿ ಹೊಳೆಯಿತು. ಇಡೀ ಭರತ ಖಂಡದಲ್ಲಿಯೇ ಧರ್ಮಕ್ಕಾಗಿ ಕರ್ನಾಟಕವು ಮಾಡಿದ ಸೇವೆಗೆ ಹೆಚ್ಚಿನ ಮಹತ್ವವಿದೆ. ಅದರಷ್ಟು ದೊಡ್ಡ ಕ್ರಾಂತಿಯನ್ನು ಮತ್ತಾವ ಪ್ರಾಂತವೂ ಮಾಡಿಲ್ಲ. ಈಗ ಭರತ ಖಂಡದಲ್ಲಿ ಪ್ರಚಲಿತವಿರುವ ಧರ್ಮ-ಪಂಥಗಳಿಗೆಲ್ಲ ಮೂಲ ಸ್ಥಾನವು ಕರ್ನಾಟಕವೇ ಆಗಿದೆ. ಬೌದ್ಧ ಧರ್ಮವು ಇಲ್ಲಿ ಹಿಂದಕ್ಕೆ ಬೇರೂರಿತ್ತು. ಅದರ ಬೇರುಗಳು, ಮಿಕ್ಕ ಕಡೆಗಳಲ್ಲಿಯಂತೆ ಕರ್ನಾಟಕದಿಂದಲೂ ಕಿತ್ತು ಎಸೆಯಲ್ಪಟ್ಟವು. ಇನ್ನು ಮಿಕ್ಕುಳಿದ ಮುಖ್ಯ ಪಂಥಗಳೆಂದರೆ ಶಂಕರ, ರಾಮಾನುಜ, ಮಧ್ವ, ಮಹಾವೀರ ಮತ್ತು ವೀರಶೈವ ಇವೆಲ್ಲ ಪಂಥಗಳಿಗೆ ಕರ್ನಾಟಕವು ಮುಖ್ಯಭೂಮಿ. ಆದರೆ ಈ ವಿಷಯವು ಕರ್ನಾಟಕ ಗತವೈಭವಕ್ಕೆ ಸಂಬಂಧಿಸಿರುವುದರಿಂದ ಈ ಗ್ರಂಥದಲ್ಲಿ ಹೆಚ್ಚಿಗೆ ಹೇಳುವುದು ಬೇಡ.

ಆದರೆ ಈಗಿನ ಕರ್ನಾಟಕತ್ವವು ಆ ಧರ್ಮಗಳಿಗೆ ಯಾವ ಹೊಸ ಸ್ವರೂಪವನ್ನು ಕೊಡಬಹುದೆಂಬ ಪ್ರಶ್ನೆಯನ್ನು ವಿಚಾರ ಮಾಡುವುದೇ ಧರ್ಮದಲ್ಲಿಯ ಕರ್ನಾಟಕತ್ವ. ಅದನ್ನು ಕರ್ನಾಟಕತ್ವಕ್ಕೆ ಕಾರಣವಾದ ನಾನು ಮಾಡಲೇ ಬೇಕಾಯಿತು; ಮಾಡಿದೆ; ಮಾಡುತ್ತಿರುವೆ.

ಧಾರ್ಮಿಕ ಕ್ಷೇತ್ರದಲ್ಲಿ ನನಗೆ ಹೊಳೆದ ಮೊದಲನೆಯ ಸಂಗತಿಯೆಂದರೆ ಆಚಾರ್ಯರೇ ಮುಂತಾದವರು ತತ್ವಜ್ಞಾನದಲ್ಲಿ ಕ್ರಾಂತಿಗಳನ್ನೇನೊ ಮಾಡಿದರು! ಆದರೆ ಅದನ್ನು ಜನತೆಯಲ್ಲಿ ಪೂರಾ ಬೇರೂರಲಿಕ್ಕೆ ಅವರಿಗೆ ಸಾಧ್ಯವಾಗಲಿಲ್ಲ. ಅದಕ್ಕೆ ಅನೇಕ ಕಾರಣಗಳಿವೆ. ಅವನ್ನೆಲ್ಲ ಇಲ್ಲಿ ಚರ್ಚಿಸುವ ಕಾರಣವಿಲ್ಲ. ಆಗ, ಇಡೀ ಭರತಖಂಡವು ಒಂದೇ ರಾಷ್ಟ್ರವೆಂಬ ರಾಜಕೀಯ ಕಲ್ಪನೆ ಇನ್ನೂ ಪ್ರಯೋಗಾವಸ್ಥೆಯಲ್ಲಿತ್ತು. ಭಿನ್ನ ಭಿನ್ನ ಪ್ರದೇಶಗಳಲ್ಲಿ ಭಿನ್ನ ಭಿನ್ನ ರಾಜ್ಯಗಳಿದ್ದವು. ಅದರ ಮೂಲಕ ಮೇಲ್ಕಾಣಿಸಿದ ಕರ್ನಾಟಕದ ಧರ್ಮ ಪಂಥಗಳಿಗೆಲ್ಲ ಪ್ರಾದೇಶಿಕ ಮಹತ್ವವಷ್ಟೇ ಪ್ರಾಪ್ತವಾಯಿತು ಅನ್ನುವ ಬೇರೆ ಪ್ರದೇಶಗಳಲ್ಲೆಲ್ಲ ಹಬ್ಬಿಸುವುದಕ್ಕೆ ಅವರಿಗೆ ಅವಕಾಶವೇ ದೊರೆಯಲಿಲ್ಲ. ಧರ್ಮಕ್ಕೆ ರಾಜಕೀಯ ಆಶ್ರಯವು ಬೇಕೆಂದು ಹೇಳುವುದರ ಕಾರಣವು ಇದೇ. ರಾಜಕಾರಣದಿಂದ ಧರ್ಮವು ದೂರ ಹೋಗಲಾರದು, ಹೋಗಬಾರದು. ಆದರೆ ಇಲ್ಲಿಯೂ ಒಂದು ಸೂಕ್ಷ್ಮ ಪ್ರಶ್ನೆಯು ಹೊರಡುತ್ತದೆ. ಅದೇನೆಂದರೆ, ರಾಜಕಾರಣವು ಧರ್ಮಕ್ಕೆ ಬಗ್ಗಬೇಕೋ ಧರ್ಮವು ರಾಜಕಾರಣಕ್ಕೆ ಬಗ್ಗಬೇಕೋ ಎಂಬುದು. ಇಲ್ಲಿಯೂ ನಮ್ಮ ಋಷಿಗಳ ಆದೇಶವು ಸ್ಪಷ್ಟವಿದೆ. 'ಬ್ರಹ್ಮ ಹೃದಯಂ ಕ್ಷತ್ರ ಅಂಗಂ ಭಾಗವತ'. ಎಂದರೆ ಧರ್ಮವು ತತ್ವ ತಿಳಿಸಬೇಕು. ಧ್ಯೇಯವನ್ನೂ, ಧೋರಣೆಯನ್ನೂ ನಿಶ್ಚಯಿಸಬೇಕು. ಆ ತತ್ವಗಳಿಗನುಸಾರವಾಗಿ ಅವನ್ನು ಅಮಲಿನಲ್ಲಿ ತರುವುದೊಂದೇ ರಾಜಕಾರಣಿಗಳ ಕೆಲಸ. ಆಚಾರ್ಯರು ಕೇವಲ ತತ್ವಜ್ಞಾನಿಗಳು, ಅಪರೋಕ್ಷ ಜ್ಞಾನಿಗಳು ಆದರೆ ಅವರು ಸ್ಮೃತಿಕಾರರಲ್ಲ. ಅಂತೇ ಇಡೀ ಭಾರತಕ್ಕಾಗಿ ಸ್ಮೃತಿಗಳನ್ನು ರಚಿಸಿ ಹೋಗಲಿಲ್ಲ. ಅಲ್ಲದೆ ಭಿನ್ನ ಭಿನ್ನ ರಾಜ್ಯಗಳು ಇದ್ದುದರಿಂದ ಅವರಿಗೆ ಶಕ್ಯವೂ ಇರಲಿಲ್ಲ. ಏಕೆಂದರೆ, ಅದಕ್ಕೆ ರಾಜಾಶ್ರಯವೇ ಬೇಕು. ಮುಂದೆ, ಹಾಗೆ, ಕರ್ನಾಟಕದ ಚಾಲುಕ್ಯ ವಿಕ್ರಮ

ರಾಜನ ಕಾಲದಲ್ಲಿ ಬಹುಶಃ ಭರತಖಂಡದ ದೊಡ್ಡ ಭಾಗವು ಆತನ ಅಧೀನದಲ್ಲಿ ಬಂದಾಗ, ಕರ್ನಾಟಕಕ್ಕೆ ಆ ತರಹದ ಅವಕಾಶವು ದೊರೆಯಿತು. ಆಗ ಮಿತಾಕ್ಷರ ಎಂಬ ಕಾಯದೆ ಗ್ರಂಥವು ವಿಜ್ಞಾನೇಶ್ವರ ಎಂಬ ಪಂಡಿತರಿಂದ ರಚಿತವಾಯಿತು ಮತ್ತು ಅದೇ ಇಂದಿಗೂ ಇಡೀ ಭಾರತಕ್ಕೇನೇ ಪ್ರಮುಖ ಪ್ರಮಾಣ ಗ್ರಂಥವಾಗಿದೆ. ಇದೇ ಧರ್ಮದಲ್ಲಿ ಕರ್ನಾಟಕವು ಮೂಡಿಸಿದ ಕರ್ನಾಟಕತ್ವ ಆ ನಾಯಕರೆಲ್ಲರೂ ದೈವವಾಣಿಯಾದ ಸಂಸ್ಕೃತ ಪಂಡಿತರಾದ್ದರಿಂದ ಭರತಖಂಡದಲ್ಲೆಲ್ಲ ಸಂಚರಿಸಿ, ವಿದ್ವಜ್ಜನರೊಡನೆ ಸಂಪರ್ಕ ಬೆಳೆಸಿ, ಧರ್ಮ ಪ್ರಚಾರ ಮಾಡಿದರು. ಆದರೆ ಅಲ್ಲಿಯ ಜನತೆಯೊಡನೆ ಸಂಪರ್ಕ ಬೆಳಸಲಿಕ್ಕೆ ಅವರಿಗೆ ಅವಕಾಶ ದೊರೆಯಲಿಲ್ಲ. ಮುಂದೆ ಬಿಜ್ಜಳನ ಕಾಲದಲ್ಲಿ ಮತ್ತೊಮ್ಮೆ ಆ ತರಹದ ಸುಸಂಧಿಯು ದೊರೆಯಿತು. ಬಸವೇಶ್ವರರು ದೊಡ್ಡ ಧಾರ್ಮಿಕ ಕ್ರಾಂತಿಯನ್ನು ಮಾಡಲೆತ್ನಿಸಿದರು. ಕೆಲಮಟ್ಟಿಗೆ ಮಾಡಿಯೂ ಮಾಡಿದರು. ಆದರೆ ಬಹುಶಃ ಅದೂ ಪ್ರಾದೇಶಿಕವಾಗಿಯೇ ಉಳಿಯಬೇಕಾಯಿತು. ದೇಶ ಭಾಷೆಯನ್ನವಲಂಬಿಸಿದ್ದರಿಂದ ಇಲ್ಲಿಯ ಜನತೆಯಲ್ಲಿ ಹೆಚ್ಚಿಗೆ ಹಬ್ಬಿತು. ಮಿಕ್ಕ ಕಡೆಗೆ ಬಹಳ ವಿಸ್ತಾರವಾಗಲಿಲ್ಲ. ಒಂದು ಲಾಭ, ಒಂದು ಲುಕ್ಸಾನ, ಅಲ್ಲದೆ ಬಸವೇಶ್ವರರು ಹೂಡಿದ ಧಾರ್ಮಿಕ ಕ್ರಾಂತಿಯು ರಾಜಕೀಯ ಕ್ರಾಂತಿಗೆ ತುತ್ತಾಯಿತು! ವೈಷ್ಣವ ದಾಸರೂ, ವಚನ ಸಾಹಿತಿಗಳೂ ಬುದ್ಧಿ ಕಲಿತು ರಾಜಕಾರಣದಲ್ಲಿ ಬೀಳದೆ ಜನತೆಯನ್ನೇ ಮೂಲವಾಗಿಟ್ಟುಕೊಂಡು ಧಾರ್ಮಿಕ ಪ್ರಚಾರ ಮಾಡಿದರು. ಅದರಿಂದ ಕನ್ನಡ ಜನತೆಯಲ್ಲಿ ಧಾರ್ಮಿಕ ಜಾಗೃತಿ ತಕ್ಕ ಮಟ್ಟಿಗೆ ಆಯಿತು.

ಭರತ ಖಂಡದಲ್ಲಿ ಮತ್ತೊಮ್ಮೆ ಧಾರ್ಮಿಕ ಕ್ರಾಂತಿಯಾಗಬೇಕಾಗಿದೆ. ಆದರೆ ಆ ಧರ್ಮಸ್ಥಾಪನೆಗೆ ಸಾಕ್ಷಾತ್ ಪರಮಾತ್ಮನೇ ಅವತಾರ ತಾಳಿ ಬರಬೇಕಲ್ಲದೆ ಮಾನವನ ತುತ್ತಲ್ಲ. ಧಾರ್ಮಿಕ ಪುನರ್ಘಟನೆಯು ರಾಜ್ಯಗಳ ಪುನರ್ಘಟನೆಗಳಿಗಿಂತ ನೂರು ಪಟ್ಟು ಕಠಿಣವಾದುದು. ಅದಕ್ಕೆ ಅಂತಃ ಪ್ರಕಾಶವುಳ್ಳ ಮತ್ತು ಪೂರ್ಣ ದೃಷ್ಟಿಯುಳ್ಳ ಋಷಿಗಳೇ ಬೇಕು. ಅಲ್ಲಿಯವರೆಗೆ ಅನೇಕರು ಚಿಕ್ಕ ಪುಟ್ಟ ದೇವತೆಗಳು ಹುಟ್ಟಿ ತಮ್ಮ ಮಟ್ಟಿಗೆ ಧರ್ಮದಲ್ಲಿ ಕಲಕು ಮಲಕು ಮಾತ್ರ ಮಾಡಬಹುದು. ಅಂತಹ ಕ್ರಾಂತಿಕಾರರಲ್ಲಿ ಮಹಾತ್ಮಗಾಂಧಿಯವರೊಬ್ಬರು. ಅವರು ಬುದ್ಧ-ಬಸವೇಶ್ವರರಂತೆ ಸಾಮಾನ್ಯ ಜನತೆಯಲ್ಲಿ ಜಾಗೃತಿಯುಂಟು ಮಾಡಲು ಯತ್ನಿಸಿದರು. ಯತ್ನಿಸಿದರು ಎಂಬುದಕ್ಕೆ ಕಾರಣವೇನೆಂದರೆ, ಮಹಾತ್ಮರ ಧಾರ್ಮಿಕ ವಿಚಾರಗಳು ಪೂರ್ಣ ಪರಿಪಕ್ವವಾದ ವಿಚಾರಗಳೆಂದು ನನಗೆ ತೋರಲಿಲ್ಲ."[೩]

ಆಲೂರರು 'ಕರ್ನಾಟಕತ್ವದ ವಿಕಾಸ' ಕೃತಿಯನ್ನು ರಚಿಸಿದ ಸಂದರ್ಭ ಗಮನಿಸಿದರೆ, ಇಷ್ಟು ದೊಡ್ಡ ಭಾಗವನ್ನು ಇಲ್ಲಿ ಉಲ್ಲೇಖಿಸಬೇಕಾದ ಅಗತ್ಯ ಕಂಡು ಬರುತ್ತದೆ. ೧೯೧೨ರಲ್ಲಿ ಈ ಕೃತಿ ರಚನೆಯಾಯಿತು. ಆತ್ಮ ಚರಿತ್ರೆಯ ಸ್ವಭಾವವುಳ್ಳ ಈ ಪುಸ್ತಕದಲ್ಲಿ ಧರ್ಮದ ಕುರಿತು ಆಲೂರರ ಮಾತುಗಳು ಮೇಲುಸ್ತರಕ್ಕೆ ಸೇರಿದ ಜಾತಿಗಳು ಹೊಸ ರಾಜಕಾರಣದಿಂದ ಏನನ್ನು ಬಯಸುತ್ತಿವೆ ಎಂಬುದು ಇನ್ನಷ್ಟು ಸ್ಪಷ್ಟವಾಗುತ್ತದೆ. ಮೇಲೆ ದಾಖಲಿಸಲಾದ ದೀರ್ಘ ಬರಹದಲ್ಲಿ ಉದ್ದಕ್ಕೂ ಧರ್ಮ ಮತ್ತು ರಾಜಕಾರಣಗಳು ಒಟ್ಟಿಗೆ ಕೆಲಸ ಮಾಡಬೇಕೆಂದು ಕರೆಕೊಡುತ್ತಾರೆ. ಈ ಸಂದರ್ಭದಲ್ಲಿ ಶೂದ್ರರೊಬ್ಬರು ಮುಖ್ಯಮಂತ್ರಿಯಾಗಿದ್ದರು. ಪ್ರಜಾಪ್ರಭುತ್ವ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಿತ್ತು. ರಾಜ್ಯ ಏಕೀಕರಣಗೊಂಡಿತ್ತು. ಮಧ್ವ ಸಿದ್ಧಾಂತವನ್ನು

ಅನುಸರಿಸುತ್ತಿದ್ದ ಗೀತೆಯಿಂದ ಪ್ರೇರಣೆ ಪಡೆದಿದ್ದ ಆಲೂರರು 'ಬ್ರಹ್ಮ ಹೃದಯಂ ಕ್ಷತ್ರ ಅಂಗಂ' ಎಂದು ಪ್ರತಿಪಾದಿಸುತ್ತಿದ್ದಾರೆ. ಸಹಜವಾಗಿಯೆ ಪ್ರಭುತ್ವವನ್ನೇ ಅವಲಂಬಿಸಿಕೊಂಡು ತಮ್ಮ ವೃತ್ತಿಯನ್ನು ರೂಢಿಸಿಕೊಂಡಿದ್ದ ಅಲ್ಪಸಂಖ್ಯಾತ ಬ್ರಾಹ್ಮಣ ಸಮುದಾಯಕ್ಕೆ ಅಸ್ತಿತ್ವದ ಪ್ರಶ್ನೆ ಕಾಡಿರಬೇಕು. ಆಧುನಿಕ ರಾಷ್ಟ್ರ ಸಿದ್ಧಾಂತದಲ್ಲಿ ಧರ್ಮದ ನೆಲೆ ಏನು ಎಂಬ ಪ್ರಶ್ನೆಯನ್ನು ಮುಂದಿಟ್ಟುಕೊಂಡು ಕಟ್ಟುತ್ತಿರುವ ತತ್ತ್ವ ಬ್ರಾಹ್ಮಣರು ಮತ್ತು ಆಳುವವರು ಬೇರೆಯಾಗಬಾರದು ಎಂಬುದಾಗಿದೆ.

ಈ ಭಾಗದಲ್ಲಿ ಮತ್ತೊಂದು ಮುಖ್ಯ ಅಂಶ ಅಡಗಿದೆ. ಧರ್ಮದ ವಿಚಾರದಲ್ಲಿ ಕರ್ನಾಟಕವು ದೇಶಕ್ಕೆ ಮಾದರಿಯಾಗಿದೆ. ಆಚಾರ್ಯರುಗಳು ಕರ್ನಾಟಕದ ನೆಲೆಯಿಂದ ಭಾರತಕ್ಕೆ ಕೊಡುಗೆ ಕೊಟ್ಟಿದ್ದಾರೆ. ಈ ವಿಚಾರದಲ್ಲಿ ಕರ್ನಾಟಕದ ಅಸ್ತಿತ್ವವು ಭಾರತ ರಾಷ್ಟ್ರೀಯತೆಗಿಂತ ಪ್ರಧಾನವಾದುದು ಎನ್ನುವುದಾಗಿದೆ. ವಿಚಾರ ಯಾವುದಾದರೂ ಕರ್ನಾಟಕದ ಮೂಲಕ ಭಾರತವನ್ನು ನೋಡುವ ಯಜಮಾನನ ಎದುರು ತನ್ನ ಗತ ಚಹರೆಗಳನ್ನು ಒಡ್ಡಿ ತನ್ನ ಅಸ್ತಿತ್ವವನ್ನು ನೆಡುವ ಕೆಲಸ ಮಾಡುತ್ತಿದ್ದಾರೆ. ಆದರೆ ಆಲೂರರ ಧರ್ಮ ರಾಜಕಾರಣದ ಸಿದ್ಧಾಂತದಲ್ಲಿ ದುಡಿಯುವ ಜಾತಿ ಜನಾಂಗ ವರ್ಗಗಳ ಅಸ್ತಿತ್ವದ ಬಗ್ಗೆ ಏನು ಹೇಳುತ್ತಾರೆ? ಎಂದು ಹುಡುಕ ಹೊರಟರೆ ಉತ್ತರ ಶೂನ್ಯವೇ. ಬಹಳ ಎಚ್ಚರದಿಂದ ಗಮನಿಸಿದರೆ ಅವರು ಬುದ್ಧ, ಬಸವೇಶ್ವರ ಮತ್ತು ಗಾಂಧಿಯನ್ನು ಒಂದು ಕಡೆಗೆ ನಿಲ್ಲಿಸಿ ತಮ್ಮ ಸಿದ್ಧಾಂತ ಮಂಡಿಸುತ್ತಾರೆ. ಬೌದ್ಧ ಧರ್ಮವನ್ನು ಕುರಿತು ಅವರ ಹೇಳಿಕೆಯನ್ನೆ ನೋಡುವುದಾದರೆ, 'ಅದರ ಬೇರುಗಳು, ಮಿಕ್ಕ ಕಡೆಗಳಲ್ಲಿಯಂತೆ ಕರ್ನಾಟಕದಿಂದಲೂ ಕಿತ್ತು ಎಸೆಯಲ್ಪಟ್ಟವು! ಎಂದು ಹೇಳುವ ಧಾಟಿಯ ಹಿಂದೆ ಇರುವ ಅಸಹನೆ ಯಾವ ಥರದ್ದು ಎಂಬುದು ತಟ್ಟನೆ ಗಮನಕ್ಕೆ ಬರುತ್ತದೆ. ಆದರೆ ತಾವು ಬರೆಯುತ್ತಿರುವ ಸಂದರ್ಭದಲ್ಲಿ ತನ್ನ ಸಿಟ್ಟನ್ನು ನೇರವಾಗಿ ಕಾರಿಕೊಳ್ಳಲಾಗದ ಅಸಹಾಯಕ ಸ್ಥಿತಿ ನಿರ್ಮಾಣಗೊಂಡಿದೆ. ಅದು ಆಧುನಿಕ ರಾಷ್ಟ್ರಪ್ರಭುತ್ವವನ್ನು ಒಪ್ಪಿಕೊಳ್ಳಬೇಕಾದ ಅನಿವಾರ್ಯತೆಯಿಂದ ಬಂದದ್ದೆನ್ನಿಸುತ್ತದೆ. 'ಕರ್ನಾಟಕದ ಗತವೈಭವ' ಕೃತಿಯಲ್ಲಿ ಕೆಲಸ ಮಾಡಿರುವ 'ಹೊರಗಿಟ್ಟು ನೋಡುವ' ರಾಜಕಾರಣಕ್ಕಿಂತ ಆಲೂರರು 'ಕರ್ನಾಟಕತ್ವದ ವಿಕಾಸ'ದ ಹೊತ್ತಿಗೆ ಮಾಗಿದಂತೆ ಕಂಡು ಬರುತ್ತಾರೆ. ನಂತರದ ಘಟ್ಟದಲ್ಲಿ ರಾಷ್ಟ್ರಕಟ್ಟುವ ಕಾರ್ಯದಲ್ಲಿ ನೇರವಾಗಿ ತೊಡಗಿಕೊಂಡಿದ್ದರಿಂದ ಸಂಕುಚಿತ ದೃಷ್ಟಿಯೊದಗದೆ ಇರಲು ಕಾರಣವಾಗಿರಬಹುದು. ಬಹುಶಃ ಅದರ ಕಾರಣಕ್ಕಾಗಿಯೇ ಬಸವೇಶ್ವರ ಉತ್ಸವ, ನಿಜಗುಣ ಶಿವಯೋಗಿಗಳ ಉತ್ಸವಗಳನ್ನು ನಡೆಸಬೇಕಾದ ಅನಿವಾರ್ಯತೆ ಅವರಿಗೆ ಒದಗುತ್ತದೆ. ಬಹು ಸಂಖ್ಯಾತ ಲಿಂಗಾಯತ ಸಮಾಜವನ್ನು ಎದುರು ಹಾಕಿಕೊಂಡು ಉತ್ತರ ಕರ್ನಾಟಕದಲ್ಲಿ ಯಾವ ಚಳುವಳಿಯನ್ನು ನಡೆಸಲು ಸಾಧ್ಯವಿಲ್ಲದ ಸ್ಥಿತಿಯೊಂದು ನಿರ್ಮಾಣವಾಗಿರಬಹುದು. ಲಿಂಗಾಯತ ಧರ್ಮದ ಪ್ರಭಾವದಿಂದಾಗಿ ತಾವು ಬದುಕಿದ್ದ ಭಾಗಗಳಲ್ಲಿ ಕುಡಿತದಂತಹ ಸಮಸ್ಯೆಗಳು ತೀರಾ ಕಡಿಮೆ ಎಂದು ಸಾವರಕರರಿಗೆ ಪತ್ರ ಬರೆಯುವ ಆಲೂರರು ಲಿಂಗಾಯತದ ನೈತಿಕ ಮೌಲ್ಯಗಳನ್ನು ಮೆಚ್ಚುತ್ತಾರೆ. ಅಷ್ಟರ ಮಟ್ಟಿಗೆ ಅವರು ಸಂಕುಚಿತರಲ್ಲ. ಆದರೆ ಪಕ್ಕದಲ್ಲೇ ಇದ್ದ ಬುಂಜಪ್ಪ, ಮೈಲಾರ, ಸವದತ್ತಿ ಎಲ್ಲಮ್ಮ ಮುಂತಾದ ಜನರ ದೈವಗಳನ್ನು ಕುರಿತು ಯಾಕೆ ಮೌನವಾಗುತ್ತಾರೆ.

ಆಲೂರರ ಕೃತಿಯನ್ನು ಅಭ್ಯಸಿಸುವಾಗ ಬ್ರಾಹ್ಮಣ ಶ್ರೇಷ್ಠತೆಯ ಪರವಾದ ಭಾವನೆಗಳಿದ್ದರೂ ಇಸ್ಲಾಂ ಮತ್ತು ಕ್ರಿಶ್ಚಿಯಾನಿಟಿ ಕುರಿತಂತೆ ವ್ಯಗ್ರಗೊಳ್ಳುವುದಿಲ್ಲ. ಬಹುಶಃ ಅದಕ್ಕೆ ಉತ್ತರ ಕರ್ನಾಟಕದ ಜನಸಮುದಾಯಗಳ ಸಹನಶೀಲ ಬದುಕಿನ ಪ್ರೇರಣೆಯೊದಗಿರಬಹುದೆನ್ನಿಸುತ್ತದೆ. ನೆಹರೂರವರು ಮಂಡಿಸುತ್ತಿದ್ದ ಜಾತ್ಯತೀತವಾದ ಆಲೂರರಲ್ಲಿ 'ಸ್ಟ್ರಾಟಜಿಕ್' ಆಗಿ ವ್ಯಕ್ತಗೊಳ್ಳುತ್ತಿದೆಯೆಂದು ಮೇಲಿನ ವಿವರಗಳಿಂದ ಅರ್ಥೈಸಿಕೊಳ್ಳಬಹುದಾಗಿದೆ. 'ಹಿಂದುತ್ವ' ಮತ್ತು 'ಕರ್ನಾಟಕತ್ವ' ಎರಡನ್ನೂ ಭೌಗೋಳಿಕ ಪರಿಭಾಷೆಗಳಲ್ಲಿ ಮಂಡಿಸುತ್ತಿದ್ದರೂ ಧರ್ಮವೇ ಸರ್ವವ್ಯಾಪಿ ಎಂಬಂತಹ ಆತ್ಯಂತಿಕ ನಿಲುವಿಗೇನೂ ತಲುಪುವುದಿಲ್ಲ. ಅವರು 'ಕಾರಣ ಶರೀರ' ಎನ್ನುತ್ತಾರಾದರೂ ಉಳಿದ ವಾಙ್ಮಯಗಳಂತೆ ಧರ್ಮದ ಪಾತ್ರವನ್ನು ನಿರ್ಣಯಿಸಲು ಪ್ರಯತ್ನಿಸಿದ್ದಾರೆನ್ನಿಸುತ್ತದೆ.

### ೫.೩ ಧರ್ಮ ಕುರಿತಂತೆ ಬಿ.ಎಂ.ಶ್ರೀಯವರ ಚಿಂತನೆಗಳು

ಒಂದೇ ಕಾಲಘಟ್ಟದಲ್ಲಿ ಬದುಕಿದ್ದರೂ ಆಲೂರರಿಗಿಂತ ಬಹಳ ಭಿನ್ನವಾದ ಮತ್ತು ಅತ್ಯಂತ ಉದಾತ್ತವಾದ ಚಿಂತನೆಯನ್ನು ಬಿ.ಎಂ.ಶ್ರೀಯವರು ಮಾಡಿದ್ದಾರೆ. ಕನ್ನಡ ರಾಷ್ಟ್ರೀಯತೆ ಸಮೃದ್ಧವೂ ಸಂಕೀರ್ಣವೂ ಬಹುಮುಖಿಯೂ ಆದ ಆಯಾಮವನ್ನೂ ಪಡೆದುಕೊಂಡಿರುವುದು ಈ ಕಾರಣಕ್ಕಾಗಿಯೇ ಇರಬಹುದು. ಆಲೂರರಂತೆಯೇ ಬಿ.ಎಂ.ಶ್ರೀಯವರೂ ಸಹ ನಾಡನ್ನು ಕಟ್ಟುವ ಕೆಲಸದಲ್ಲಿ ತೊಡಗಿದ್ದರು. ಅವರು ಹುಟ್ಟಿನಿಂದ ಬ್ರಾಹ್ಮಣರೂ ಆಗಿದ್ದರು. ಮೈಸೂರಿನ ಶೂದ್ರರಾದ, ಶೂದ್ರಪರ ನಿಲುವುಗಳುಳ್ಳ ರಾಜರನ್ನು ಭಕ್ತಿಭಾವಗಳಿಂದ ಗೌರವಿಸುತ್ತಿದ್ದರು. ಮೈಸೂರಿನ ಮೇಲ್ಜಾತಿಗಳಲ್ಲಿ ಇಸ್ಲಾಂನ ಕುರಿತು ಅಸಹನೆ ವ್ಯಕ್ತಗೊಳ್ಳುತ್ತಿದ್ದಾಗಲೂ ಮತ್ತು ಸಂಸ್ಕೃತಿ ಸಂಕರಗೊಳ್ಳುತ್ತಿದೆಯೆಂದು ಬೊಬ್ಬೆ ಹಾಕುತ್ತಿದ್ದಾಗಲೂ, ಬಿ.ಎಂ.ಶ್ರೀಯವರು ಡಿ.ವಿ.ಜಿ. ಮಾಸ್ತಿ ಮುಂತಾದ ಓರಗೆಯ ಚಿಂತಕರಿಗಿಂತ ಭಿನ್ನವಾಗಿ ಕಾಣಿಸಿಕೊಳ್ಳುತ್ತಾರೆ. ತಾವು ಪ್ರತಿಪಾದಿಸುತ್ತಿರುವ ರಾಷ್ಟ್ರ ಚಿಂತನೆಯಲ್ಲಿ ಧರ್ಮದ ಪಾತ್ರ ಯಾವ ಸ್ವರೂಪದ್ದಾಗಿರಬೇಕೆಂದು ನಿರ್ಣಯಿಸಲು ಪ್ರಯತ್ನಿಸುತ್ತಾರೆ. ಸಂಪ್ರದಾಯವಾದಿ ಮತ್ತು ಸಂಕುಚಿತವಾದಿಯಲ್ಲದ ಬಿ.ಎಂ.ಶ್ರೀ ಉದಾರವಾದಿಯಂತೆ, ಸಾಮರಸ್ಯವಾದಿಯಂತೆ ಕಾಣಿಸುತ್ತಾರೆ.

ಆಧುನಿಕ ರಾಷ್ಟ್ರದಲ್ಲಿ ಧರ್ಮಕ್ಕಿಂತ ತಲೆ ಕೆಡಿಸಿಕೊಳ್ಳಬೇಕಾದ ಸಂಗತಿಗಳು ಬೇಕಾದಷ್ಟಿವೆ ಎಂಬ ತಿಳುವಳಿಕೆಯಿಂದ ಅವರು ಹೊರಡುತ್ತಾರೆ. ಆದರೆ ಧರ್ಮದ ವಿಚಾರಗಳನ್ನು ನಿರ್ಲಕ್ಷಿಸುವುದೇನೂ ಇಲ್ಲ. ಧರ್ಮಗಳ ಕುರಿತಾದ ಅವರ ನಿಲುವುಗಳನ್ನು ಈ ಪದ್ಯದ ಮೂಲಕ ವಿಶ್ಲೇಷಿಸಬಹುದು. ಒಂದು. ೧೯೧೪ರಲ್ಲಿ ಬರೆದ 'ಭರತ ಮಾತೆಯ ನುಡಿ' ಪದ್ಯ.

> ''ಭರತಮಾತೆಯೆ, ಭರತ ಮಾತೆಯೆ ಎಂದು ನೀ ತಲೆ ಎತ್ತುವೆ?
> ಎಂದು ಲೋಕದ ಜನರ ಹೃದಯದಿ ನಿನ್ನ ಮಹಿಮೆಯ ಬಿತ್ತುವೆ
> ಎಂದು ಮಲಿನತೆ ನೀಗುವೆ ಮಗು
> ಳೆಂದು ನಗುಮುಖವಾಗುವೆ?
> ಯಾರು ಮುಸುಕಿದ ಕಣ್ಣು `ಮಂಜನು ತೆಗೆದು ಬೆಳಕನು ಬಿಟ್ಟರೋ

ಯಾರು ಜಾಡ್ಯವ ಹರಿಸಿ ನಮ್ಮಲಿ ಹೊಸದು ಜೀವವನಿಟ್ಟರೋ
ಅವರೆ ಕಣ್ಣನು ಹಿರಿವರೇ -ಕುದಿ
ದವರೆ ಕೊರಳನು ಮುರಿವರೆ!
ಎಲ್ಲಿ ಧರ್ಮವ ಕಂಡು ಸಾರಿದ ನಿನ್ನ ಪೂರ್ವದ ಋಷಿಗಳು?
ಎಲ್ಲಿ ಘನತೆಯ ಬದುಕ ಹಾಡಿದ ನಿನ್ನ ಸತ್ಯದ ಕವಿಗಳು?
ಎಲ್ಲಿ ಧರ್ಮದ ದಣಿಗಳು-ಅವ
ರೆಲ್ಲಿ ಜ್ಞಾನದ ಕಣಿಗಳು
ಎಲ್ಲಿ ಕಲೆಗಳ ಬೆಳಸಿ ಲಕ್ಷ್ಮಿಯನೊಲಿಸಿ ನಿಲಿಸಿದ ಧೀರರು?
ಎಲ್ಲಿ ರಾಜ್ಯವ ಕಟ್ಟಿ, ಶಾಂತಿಯ ಪ್ರಜ್ಞೆಗೆ ಬೀರಿದ ವೀರರು?
ಎಲ್ಲಿ ಆರ್ಯರ ರಾಜರು -ಈ
ಗೆಲ್ಲಿ ಸಾಹಸ ತೇಜರು?
ಭರತ ಮಾತೆಯೆ, ಭರತ ಮಾತೆಯೆ, ನಮ್ಮ ಹಂಬಲು ಕೇಳದೆ?
ದೇವಿ, ಮೌನವಿದೇನು, ಭಕ್ತರು ನಮಗೆ ನೀತಿಯ ಹೇಳದೆ?
ಎಂದು ಮಕ್ಕಳಿಗೊಲಿಯುವೆ ನುಡಿ,
ಎಂದು ನಮ್ಮಲಿ ನಲಿಯುವೆ?
ನಿನ್ನ ಧರ್ಮದ ದಿವ್ಯಪಥದಲಿ ಬದುಕ ತಿದ್ದದೆ ಹೋದೆವು;
ನಿನ್ನ ಸೇವೆಯ ಮರೆತು ನಮ್ಮಲೆ ಹೋರಿ ಸೋತವರಾದೆವು;
ನಿನ್ನ ಹೆರರಿಗೆ ಕೊಟ್ಟೆವು -ನೀ
ನಿನ್ನು ಸಾಕದೆ ಕೆಟ್ಟೆವು.
ನಿನ್ನು ಸಾಕದೆ ಕೆಟ್ಟೆವು.
ನಮ್ಮ ಮನೆಯಲಿ ನಾವು ಹೆರರಿಗೆ ದುಡಿವ ತೊತ್ತುಗಳಾದೆವು;
ನಮ್ಮ ಹಿರಿಯರ ಪುಣ್ಯ ಕೀರ್ತಿಯನುಳಿಸಿಕೊಳ್ಳದೆ ಹೋದೆವು;
ನಮ್ಮ ಬಾಳಿಸು, ಕೂಡಿಸು -ಸಲ
ಹಮ್ಮ, ಸದ್ಗತಿ ನೋಡಿಸು.
-ಮಕ್ಕಳಿರ, ಅಕ್ಕರೆಯ ಮಕ್ಕಳ, ಹೆತ್ತ ಕರುಳನು ಮರೆವೆನೆ?
ಸೊಕ್ಕಿ ಸೆಡೆದವರೀಗ ತಿಳಿದಿರಿ, ಇನ್ನು ನಿಮ್ಮನು ತೊರೆವೆನೆ?
ಕೇಳಿ, ಎದೆಯಲಿ ಹದಿಯಿರಿ -ಹೊಸ
ಆಳ ಬಾಳಲಿ ಹುದಿಯಿರಿ

ದೇವ ಸನ್ನಿಧಿಯಿಂದ, ಮಕ್ಕಳ, ಮೊದಲು ಧರ್ಮವ ತಂದೆನು;
ಜೀವ ಕಲೆಗಳ ಕಲಿಸಿ ಸುಖದಲಿ ಸೊಬಗ ಬೆಳಸುತಬಂದೆನು;
ಹಿಮದ ಗಿರಿಯಲಿ ಸುಳಿದೆನು -ಕುಡಿ
ನಿಮಿರಿ ತೆರೆಗಳ ತುಳಿದೆನು
ಹೊಳೆದ ಸತ್ಯವ ಹಿಡಿದು ಮುಂದಕೆ ನೂಕಲಮ್ಮದೆ ಸೆಡೆದಿರಿ!
ಹಳದ ನೆಮ್ಮುತ ಜಾತಿ ಮತಗಳ ಮರದ ಗುಹೆಯಲಿ ಕೆಡೆದಿರಿ!
ಬಯಲ ಬೆಳಕಿಗೆ ಮಳಿದಿರಿ -ಸಮ
ದಯದ ನಡತೆಯ ಹಳಿದಿರಿ
ಮತ್ತೆ ಮತ್ತೊಡ ಹುಟ್ಟಿನೊಲುಮೆಯ ನೊರೆವ ಗುರುಗಳನಿಳುಹಿದೆ;
ಒತ್ತಿ ಗಡಿಗಳ ಹಲವು ನಾಡನು ಬೆಸೆವ ರಾಜರ ಕಳುಹಿದೆ;
ಮರುಗಿ ಅಗೆಚ್ಚತ್ತಿರಿ ಮ
ತ್ತೊರಗಿ ಮುಸಕನು ಹೊತ್ತಿರಿ
ಕಾವಲೊಡೆದೆನು, ಪಡುವ ಕಣಿವೆಯ ತೆರೆದು ಸುರಿದೆನು ದಳವನು;
ದೈವ ಭಕ್ತಿಯ, ಭ್ರಾತೃಧರ್ಮದ, ಧೀರ ಮುಸ್ಲಮಕುಳವನು
ಸಿಮ್ಮಿ, ಕೆರಳಿಸಿ, ಕಲೆತರು -ಅಹ
ನಿಮ್ಮ ಸಮಕೇ ಮರೆತರು
ಕಡೆಗೆ ನೆನೆದೆನು ನನ್ನ ಮನೆತನ ನೇರವಾಗುವ ತೆರವನು,
ಕಡಲ ರಾಣಿ ಬ್ರಿಟಾನಿಯಳ, ನನ್ನಿನಿಯ ತಂಗಿಯ ನೆರವನು;
ಗೆಲಿದು ನಾಡನು ಬೆಸೆದಳು -ನೆಲ
ದೊಲುಮೆ ಕಟ್ಟನು ಹೊಸೆದಳು
ಸಕಲ ಧರ್ಮದ ತಿರುಳ ಹೊರೆದಳು, ಸಕಲ ಜ್ಞಾನವ ತೆರೆದಳು,
ಸಕಲ ಸೀಮೆಯ ಬಳಕೆಗಳೆದಳು, ಸಕಲ ಕುಶಲವ ನೊರೆದಳು;
ಅವಳ ಗುಣವನು ಮೆರೆಯಿರಿ ಕಳೆದವಳ
ಕೊರತೆಯ ಮರೆಯಿರಿ
ಮುರಿಯಲಾಕೆಯ ವ್ರತವನಸುರ ಮಕ್ಕಳುರಿದುರಿ ದೆದ್ದರು;
ಹರಡಿ ನೆಲಸಿದ ಮಗಳ್ಬಿರಣುಗರು ತಾಯ ಕಾಯುತ ಬಿದ್ದರು;
ಅವರು ಮಡಿದೆಡೆ ಮಡಿಯಿರಿ -ಬಿಡ
ದವರು ಹಿಡಿದುದ ಹಿಡಿಯಿರಿ

ಹಿರಿಯ ಸಿರಿಯೊಕ್ಕಲಲಿ ಹೆಕ್ಕಿರಿ, ನಂಟನಳಿಯದೆ ಒಲಿಯಿರಿ;
ಅರುಹಿ, ನಯದಲಿ ಹೋರಿ, ಸಂಬಿಸಿ, ಮನೆಯನಾಳಲು ಕಲಿಯಿರಿ;
ಶಿಷ್ಟ ಮಾರ್ಗದಿ ನಡೆಯಿರಿ -ನಿ
ಮ್ಮಿಷ್ಟ ಸಿದ್ಧಿಯ ಪಡೆಯಿರಿ
ಮರಳಿ ಸುಗುಣರ ಕಾರ್ಯದಕ್ಷರ ಹೆತ್ತು ಕೊರಗನು ತಳ್ಳುವೆ;
ಮರಳಿ ಮಹಿಮೆಯ ತೋರಿ ಲೋಕದ ಜನರ ಪೂಜೆಯ ಕೊಳ್ಳುವೆ;
ಮಕ್ಕಳಿರ, ನಿಮಗೊಲಿಯುವೆ -ನಿ
ಮ್ಮಕ್ಕರೆಗೆ ಮಿಗೆ ನಲಿಯುವೆ
ಧರ್ಮಶಾಂತಿ ಸ್ವತಂತ್ರವಲ್ಲವೆ ನಮ್ಮ ಹಿರಿಯರ ನುಡಿಗಳು?
ಧರ್ಮ ಶಾಂತಿ ಸ್ವತಂತ್ರವೇ ನನ್ನಿನಿಯ ತಂಗಿಯ ನುಡಿಗಳು;
ಕೂಡ ಲೋಕವ ಕಾಯುವ -ಯಶ
ಗೂಡಿ ಮುಕ್ತಿಗೆ ಹಾಯುವ!
ಭರತ ಮಾತೆಯೆ, ಭರತ ಮಾತೆಯೆ, ನಿನ್ನ ಮಾತನು ಮರೆಯೆವು;
ಹಿರಿಯ ಬಳಗದ ಕಾರ್ಯ ಚತುರೆಯು ಸಾಕುತಾಯಿಯ ತೊರೆಯೆವು;
ಒಂದೆ ಜನವಾಗಿರುವೆವು·-ಒಲಿ
ದೊಂದೆ ಭಾರವ ಹೊರುವೆವು
ನಿನ್ನ ಹಿಂದಿನ ಭಾಗ್ಯವೆಲ್ಲವ ಮರಳಿ ಸಾಧಿಸಿ ಮೆರೆವೆವು;
ನಿನ್ನ ಧರ್ಮಾಮೃತವ ಶೋಧಿಸಿ ಬರಡು ಲೋಕಕ್ಕೆರೆವೆವು;
ದೈವ ಚಿತ್ತದಿ ನಿಲುವೆವು -ಸ
ತ್ಸೇವೆ ಗೆಯ್ಯುತ ಸಲುವೆವು"[೪]

ಧಾರ್ಮಿಕ ಮತ್ತು ಸಾಂಸ್ಕೃತಿಕ ಅಸಹನೆಗಳು ಇಡೀ ದೇಶವನ್ನು ಸಮಸ್ಯಾತ್ಮಕಗೊಳಿಸಿರುವ ಸಂದರ್ಭದಲ್ಲಿ ಬಿ.ಎಂ.ಶ್ರೀಯವರ ಆರಂಭ ಕಾಲದ ಸ್ವತಂತ್ರ ಕವಿತೆಗಳಲ್ಲಿ ಒಂದಾದ 'ಭರತ ಮಾತೆಯ ನುಡಿ' ತನ್ನ ಉದಾತ್ತ ನಿಲುವಿಗಾಗಿ ಗಮನ ಸೆಳೆಯುತ್ತಿದೆ. ಹಸಿವು, ಅಸಮಾನತೆಗಳಿಗಿಂತ ಧರ್ಮಕ್ಕಾಗಿ ಕೊಲ್ಲುವ, ಅತ್ಯಾಚಾರ ನಡೆಸುವ, ಕೊಲೆಗಡುಕವಾಗಿರುವ ಸನ್ನಿವೇಶದಲ್ಲಿ ಬಿ.ಎಂ.ಶ್ರೀಯವರ ಪ್ರಸ್ತುತತೆ ಹೆಚ್ಚುತ್ತಿದೆ. ಅನುವಾದಕರು ಎಂಬ ಹಣೆಪಟ್ಟಿ ಅಂಟಿಸಿ, ಮೈಸೂರು ಅರಸರ ಜೊತೆಯಿದ್ದರು ಮತ್ತು ಸ್ವಾತಂತ್ರ್ಯ ಹೋರಾಟದಲ್ಲಿ ನೇರವಾಗಿ ಪಾಲ್ಗೊಳ್ಳಲಿಲ್ಲವೆಂದು ಹಳಿದು ದ್ವಂದ್ವ ಗುಲಾಮರೆಂದೂ, ರಾಜಸೇವಾಸಕ್ತರೆಂದೂ ಹೀಯಾಳಿಸಿ ಕನ್ನಡ ವಿದ್ವತ್ ಲೋಕ ಅವರ ಮಹತ್ವವನ್ನು ಮರೆಮಾಚಲೆತ್ನಿಸಿದೆ. ಬಂಗಾಳಿ, ಮರಾಠಿ ಸಾಹಿತ್ಯ ಮತ್ತು ಆ ಭಾಷೆಗಳಲ್ಲಿ ನಡೆದ ರಾಷ್ಟ್ರೀಯ ಚಿಂತನೆಗಳನ್ನೇ ಮಾದರಿಯನ್ನಾಗಿಟ್ಟುಕೊಂಡು ಇಂದಿಗೂ ಸಹ

ಅದೇ ಪರಿಭಾಷೆಯಲ್ಲಿ ಧರ್ಮ ಮತ್ತು ಸಂಸ್ಕೃತಿಯನ್ನು ರಾಷ್ಟ್ರೀಯತೆಯ ಬೆಳಕಿನಲ್ಲಿ ಅರ್ಥೈಸುತ್ತಿರುವುದರ ಆಳದಲ್ಲಿಯೇ ಇವತ್ತಿನ ಸಮಸ್ಯಾತ್ಮಕ ಬೀಜಗಳು ಹುದುಗಿವೆ ಎನ್ನಿಸುತ್ತದೆ.

ಆದರೆ ಬಿ.ಎಂ.ಶ್ರೀಯವರು ಮಾತ್ರ ಆಧುನಿಕ ರಾಷ್ಟ್ರ ನಿರ್ಮಾಣಕ್ಕೆ ಅಗತ್ಯವಾದ ಜಾತ್ಯತೀತ ಮತ್ತು ಸಮರಸದ ಬುನಾದಿಯೊಂದನ್ನು ಎಲ್ಲ ಟೀಕೆಗಳ ಮಧ್ಯೆಯೇ ಕಡೇ ಪಕ್ಷ ಧಾರ್ಮಿಕ ವಿಚಾರದಲ್ಲಿ ಮಾಡಿದ್ದಾರೆ. ಅವರ "ಭರತ ಮಾತೆಯನುಡಿ" ಎಂಬ ಈ ಪದ್ಯವನ್ನು ಏಕ ಘಟಕವೆಂದು ಪರಿಭಾವಿಸಿದರೆ, ಅವರ ಸಾಂಸ್ಕೃತಿಕ, ಧಾರ್ಮಿಕ, ಭಾಷಿಕ, ರಾಜಕೀಯ, ಪುರಾಣ ಎಲ್ಲವನ್ನು ಅಲ್ಲಿ ಅರ್ಥೈಸಿಕೊಳ್ಳಲು ಸಾಧ್ಯವಿದೆ. ಧರ್ಮ, ಸಂಸ್ಕೃತಿ ಇತ್ಯಾದಿ ದೃಷ್ಟಿಗಳಲ್ಲಿ ಸಂಪ್ರದಾಯವಾದಿಗಳಾಗಿದ್ದ ಡಿ.ವಿ.ಜಿ ಮತ್ತು ಮಾಸ್ತಿಯವರಿಗಿಂತ ಇವುಗಳನ್ನು ಸಂಕರ ಶೀಲವೆಂದು ನಂಬುತ್ತಿದ್ದ ಮತ್ತು ಅದರ ಮೂಲಕವೇ ಆಧುನಿಕ ರಾಷ್ಟ್ರ ನಿರ್ಮಾಣವಾಗಬೇಕೆಂದು ಪ್ರತಿಪಾದಿಸಿದ ಬಿ.ಎಂ.ಶ್ರೀ ಎಲ್ಲ ಕೊರತೆಗಳನ್ನು ಮೀರಿ ಎತ್ತರದಲ್ಲಿ ನಿಲ್ಲುತ್ತಾರೆ.

ಈ ಕವಿತೆ 'ಸಂವಾದ' ನಡೆಸುವ ಮಾದರಿಯಲ್ಲಿದೆ. ದೇಶಕ್ಕೆ 'ತಾಯಿ' ಸ್ಥಾನವನ್ನು ನೀಡಲಾಗಿದೆ ಮೊದಲ ಆರು ಚರಣಗಳು ಸದ್ಯದ ದಿಕ್ಕೆಟ್ಟ ರಾಜಕೀಯ, ಸಾಂಸ್ಕೃತಿಕ ಸ್ಥಿತಿಯನ್ನು ವಿವರಿಸುತ್ತವೆ. ಅಸಹಾಯಕತೆ, ಭೂತದ ಕುರಿತು ಹಳಹಳಿಕೆ, ಕೀಳರಿಮೆಗಳಿಂದ ಅವಳ ಮಕ್ಕಳು ನರಳುತ್ತಿದ್ದಾರೆ. ಈವತ್ತಿನ ಹಿಂದುತ್ವವನ್ನು ಪ್ರತಿಪಾದಿಸುವ ನಾಯಕರ ಹಳಹಳಿಕೆಯಂತೆ ಅವರ ಮಾತುಗಳು ಇವೆ. 'ಧರ್ಮದ ಧಣಿಗಳು,' 'ಜ್ಞಾನದ ಕಣಿಗಳು,' 'ಸತ್ಯದ ಕವಿಗಳು,' 'ಧರ್ಮ ಸಾರಿದ ಋಷಿಗಳು' ಎಲ್ಲಿ ಎಂದು ಅಂಗಲಾಚುತ್ತಿರುವ ದೃಶ್ಯದ ಜೊತೆಯಲ್ಲಿಯೇ ಒಂದು ಕಾಲದ ಭಾರತ ಅತ್ಯಂತ ರಮ್ಯವಾಗಿತ್ತು ಎಂದು ಹೇಳುತ್ತಿರುವಂತಿದೆ. ಆಗ ಧುತ್ತೆಂದು ಅವತರಿಸುವ ಭರತ ಮಾತೆಯ ನುಡಿಮಾತ್ರ ಕುತೂಹಲಕರವಾಗಿದೆ. ಇಂದಿನ ದುರ್ಗತಿಗೆ ನೀವೆ ಕಾರಣ ಎಂದು, ದಾರಿತಪ್ಪಿದ ಮಗು ಕಂಗಾಲಾದಾಗ ದಾರಿತಪ್ಪಿದ್ದು ಎಲ್ಲಿ ಅದರ ಪರಿಣಾಮವೇನಾಗಿದೆ, ಇತ್ಯಾದಿಯಾಗಿ ಮಮತೆ ಸುರಿಸುತ್ತಾ ತಾಯಿ ಹೇಳುತ್ತಾಳೆ. ಧರ್ಮ, ಸಂಸ್ಕೃತಿಗಳನ್ನು ದೇವಸನ್ನಿಧಿಯಿಂದ ತಂದೆ ಎಂದು ಆರಂಭಿಸಿ 'ಜಾತಿಮತಗಳ ಮದದ ಗುಹೆಯಲಿ ಕೆಡೆದಿರಿ; ಬಯಲ ಬೆಳಕಿಗೆ ಮುಳಿದಿರಿ ಸಮನ್ವಯದ ನಡತೆಯ ಹಳಿದಿರಿ ; ಅತ್ಯಂತ ಕ್ರಾಂತಿಕಾರಕವೆನ್ನಿಸಬಹುದಾದ ಮಾತುಗಳಿವು. ದೇಶವು ಅಧಃ ಪತನ ಆರಂಭಗೊಂಡಿದ್ದು ಸಮಾನತೆಯ ಆಶಯ ಬಿಟ್ಟುಕೊಟ್ಟದ್ದರಿಂದ, ಸಮುದಾಯ ಕಲ್ಪನೆ ತ್ಯಜಿಸಿದ್ದರಿಂದ, ಜಾತಿ-ಮತಗಳ ತಾರತಮ್ಯಗಳ ಅಹಂಕಾರ ಸೃಷ್ಟಿಸಿಕೊಂಡಿದ್ದರಿಂದ ಎಂಬ ಕನ್ನಡದ ಚಿಂತಕನೊಬ್ಬನ ಈ ಮಾತುಗಳು ಬಹಳ ಮುಖ್ಯವಾಗಿವೆ.

ನಂತರದ ಚರಣಗಳಲ್ಲಿ ಭಾರತದ ಮೇಲೆ ಗ್ರೀಕರ ಮತ್ತು ಮುಸ್ಲಿಂ ಪ್ರಭುತ್ವಗಳ ದಾಳಿಗಳನ್ನು ಕುರಿತು ಇಡೀ ದೇಶದ ಬಹುಪಾಲು ಚರಿತ್ರಕಾರರು ಹತಾಶೆಯಿಂದ, ಕ್ರೋಧ ತುಂಬಿದ ಶೈಲಿಯಲ್ಲಿ ಬರೆಯುತ್ತಿರುವಾಗ ಬಿ.ಎಂ.ಶ್ರೀ 'ಒಡಹುಟ್ಟಿನೊಲುಮೆಯ ನೊರೆವ ಗುರುಗಳ ನಿಳುಹಿದೆ: ಒತ್ತಿ ಗಡಿಗಳ ಹಲವು ನಾಡನು ಬೆಸೆವ ರಾಜರ ಕಳುಹಿದೆ; ಕಾವಲೊಡೆದೆನು, ಪಡುವ ಕಣಿವೆಯ ತೆರೆದು ಸುರಿದೆನು ದಳವನು: ದೈವ ಭಕ್ತಿಯ, ಭ್ರಾತೃಧರ್ಮದ, ಧೀರ ಮುಸ್ಲಿಮಕುಳವನು' ಎನ್ನುತ್ತಾರೆ.

ಅನ್ಯಸಮುದಾಯಗಳನ್ನು ಶತ್ರುಗಳೆಂದು ಭಾವಿಸದೆ, ಸೋದರತ್ವವನ್ನು ಲೇಪಿಸಿ ಸ್ವೀಕರಿಸುವುದು ಆ ಕಾಲದ ಬಹುಪಾಲು ಚಿಂತಕರಿಗೆ ಸಾಧ್ಯವಿರಲಿಲ್ಲ. `ಎಲ್ಲ ಸಂಸ್ಕೃತಿಗಳ ದೇಶಗಳ ಗಾಳಿ ನನ್ನ ಮನೆಯ ಸುತ್ತ ಬೀಸಲಿ` ಎನ್ನುತ್ತಿದ್ದ ರವೀಂದ್ರನಾಥ ಟಾಗೂರರಂತೆಯೇ ಬಿ.ಎಂ.ಶ್ರೀ ಕೂಡ ಅತಿ ಉದಾತ್ತರು. ಇಸ್ಲಾಂನಲ್ಲಿನ ಉದಾತ್ತ ತತ್ವಗಳ ಕುರಿತು ಪ್ರೀತಿಯಿದ್ದ ಬಿ.ಎಂ.ಶ್ರೀ ಅಬ್ಬಾಸ್ ಷೂಸ್ತ್ರೀಯವರಿಂದ 'ಇಸ್ಲಾಂ ಸಂಸ್ಕೃತಿ` ಪುಸ್ತಕವನ್ನು ಬರೆಸಿ ತಾವೇ ಅನುವಾದ ಮಾಡುತ್ತಾರೆ. ಆಧುನಿಕ ಕನ್ನಡದ ಆದಿಮ ಚಿಂತಕನ, ಮಾನವೀಯ ನೆಲೆಗಟ್ಟಿನ ಮೇಲೆ, ಕರುಣೆಯ ಆಧಾರದ ಮೇಲೆ ರಾಷ್ಟ್ರಕಟ್ಟಬೇಕೆಂಬ ಚಿಂತನೆಯನ್ನು ಯಾವ ರೀತಿಯಿಂದಲೂ ಪಕ್ಕಕ್ಕೆ ಸರಿಸಲು ಸಾಧ್ಯವಿಲ್ಲ.

ಕವಿತೆ ಎಷ್ಟರ ಮಟ್ಟಿಗೆ ಆಂತರ್ಯದಲ್ಲಿ ಕ್ರಿಯಾಶೀಲವಾಗಿದೆಯೆಂದರೆ ಇಲ್ಲಿ ಬಂದ ಇಸ್ಲಾಂ ಪ್ರಭುತ್ವಗಳು ಇಲ್ಲೇ ನೆಲೆಯೂರಿ ಅವರೂ ತರತಮ ಭಾವನೆಗಳಿಗೆ ಸಿಕ್ಕಿ ನಿಮ್ಮಂತೇ ಆಗಿಬಿಟ್ಟರು ಎಂದು ತಕ್ಷಣ, 'ಸಕಲ ಧರ್ಮ ತಿರುಳ ಹೊರೆದ, ಸಕಲ ಜ್ಞಾನವ ತೆರೆದ ಸಕಲ ಸೀಮೆಯ ಬಳಕೆಗೆಳೆದ, ಸಕಲ ಕುಶಲವನೊರೆದ` ಇನಿಯ ತಂಗಿ ಬ್ರಿಟಾನಿಯಾಳ ನೆರವು ಪಡೆಯಬೇಕಾಯಿತು ಎಂದು ತಾಯಿ 'ನಂಟನಳಿಯದೆ ಬಲಿಯಿರಿ' ಎಂದು ಬಂಧುತ್ವವನ್ನು ಆರೋಪಿಸಿ ಕರೆಕೊಡುತ್ತಾಳೆ. ವಸಾಹತುಶಾಹಿಯ ಕ್ರೌರ್ಯದ ಮುಖವನ್ನು ಮರೆತು ಕಟ್ಟಿದ ಈ ಕವಿತೆ ಮೈಸೂರು ಸಂಸ್ಥಾನದಲ್ಲಿದ್ದರಿಂದ ಹುಟ್ಟಿರಬಹುದು. ಕವಿತೆಯ ಆಳದಲ್ಲಿ ಶೂದ್ರ ಪರವಾದ, ದಮನಿತರ ಪರವಾದ ಧ್ವನಿಯೊಂದು ಕ್ರಿಯಾಶೀಲವಾಗಿದೆ.

ಬಿ.ಎಂ.ಶ್ರೀಯವರ ಈ ನಿಲುವಿನಿಂದಾಗಿಯೇ ಅವರನ್ನು ಕನ್ನಡ ವಿಮರ್ಶಕರು ಇನ್ನಿಲ್ಲದಷ್ಟು ಹೀಯಾಳಿಸಿ ಬರೆದಿದ್ದಾರೆ. ಆದರೆ ೧೯ನೇ ಶತಮಾನದ ಕೊನೆಯಲ್ಲಿ ಬರೆದ ಬಂಕಿಮಚಂದ್ರರ 'ಆನಂದಮಠ' ಕಾದಂಬರಿಯಲ್ಲಿ ಮುಸ್ಲಿಮರ ಹುಟ್ಟಡಗಿಸಲು ದೇವರೇ ಬ್ರಿಟಿಷರನ್ನು ಕಳಿಸಿದ್ದಾರೆ ಎಂಬರ್ಥ ಬರುವ ಮಾತುಗಳಿವೆ. ಕಾಲದ ತಲ್ಲಣಗಳ ನಡುವೆ ಹುಟ್ಟುವ ಈ ಕೃತಿಗಳನ್ನು ಅರ್ಥ ಮಾಡಿಕೊಳ್ಳುವ ವಿಧಾನ ಬದಲಾಗದಿದ್ದರೆ 'ಭರತ ಮಾತೆಯ ನುಡಿ'ಯಂಥ' ಕವಿತೆಗಳು ಧೂಳಿಡಿದು ಮೂಲೆಯಲ್ಲಿ ಮಲಗಬೇಕಾಗುತ್ತವೆ. ಪ್ರಶ್ನೋತ್ತರ ಮಾದರಿಯಲ್ಲಿ ರಚಿತಗೊಂಡ ಅದ್ಭುತ ಕಾವ್ಯವೇನೂ ಅಲ್ಲದ ಆದರೆ ಚಿಂತನ ಪ್ರಧಾನ ಪ್ರಧಾನವಾದ ಈ ಪದ್ಯ ಆ ನಂತರ ಕುವೆಂಪುರವರ ರಚನೆಗಳ ಮೇಲೆ ಪ್ರಭಾವ ಬೀರಿರುವ ಸಾಧ್ಯತೆ ಇದೆ.

ಆದರೆ ಶ್ರೀಯವರು ವಸಾಹತು ಶಕ್ತಿಗಳನ್ನು ನೋಡಿದ ದೃಷ್ಟಿಯಲ್ಲಿ ಸಮಸ್ಯೆಗಳೇ ಇಲ್ಲವೇ ಅಥವಾ ಬ್ರಿಟಿಷರು ಸಂಸ್ಕೃತಿಗಳನ್ನು ಬೆಸೆಯುವ ಉದಾತ್ತ ಧ್ಯೇಯಗಳನ್ನಷ್ಟೇ ಹೊತ್ತು ಭಾರತಕ್ಕೆ ಬಂದರೆ ಇಂಗ್ಲಿಷಿನ ಸಾಹಿತ್ಯ ಶಕ್ತಿಗೆ ಮೆಚ್ಚಿ ಅದರ ರಾಜಕೀಯ, ಆರ್ಥಿಕ ಕ್ರೌರ್ಯವನ್ನು ಮರೆಮಾಡಿಬಿಡುವುದೆ ಹೇಗೆ? ಬ್ರಿಟಿಷರು ತಮ್ಮ ಲೂಟಿಯನ್ನು ಸರಾಗ ಮಾಡಲು ಧರ್ಮಗಳ ವಿಷಯದಲ್ಲಿ, ಜಾತಿಗಳ, ಸಮುದಾಯಗಳ ನಡುವೆ ಕಿಚ್ಚು ಹಚ್ಚಿದರಲ್ಲವೆ? ಜನ ಸಮುದಾಯಗಳ ಭಾವನೆ ಬಿ.ಎಂ.ಶ್ರೀ ನಿಲುವಿಗಿಂತ ವಿರುದ್ಧ ದಿಕ್ಕಿನಲ್ಲಿರಲು ಸಾಧ್ಯವಲ್ಲವೆ? ಈ ಪ್ರಶ್ನೆಗಳಿಗೆ ಬಿ.ಎಂ.ಶ್ರೀ ಧರ್ಮ ಮತ್ತು ರಾಷ್ಟ್ರೀಯತಾ ಸಿದ್ಧಾಂತ ಮೌನವಾಗುವುದು, ಅಷ್ಟರ ಮಟ್ಟಿಗೆ ಕೊರತೆಯಂತೆ ಕಾಣುತ್ತದೆ.

ಅವರ; ಕನ್ನಡ ತಾಯ ನೋಟ' ಪದ್ಯದಲ್ಲಿಯೂ (೧೯೩೬ ರಲ್ಲಿ ಬರೆದದ್ದು) ಯಾರ ಮೇಲೂ ದ್ವೇಷವಿಲ್ಲದ ತನ್ನ ಸ್ಥಿತಿಗೆ ತಾನೇ ಕಾರಣವೆಂದು ಮರುಗುವ ಆತ್ಮವಿಮರ್ಶಾ ಧಾಟಿಯೊಂದು ಕ್ರಿಯಾಶೀಲವಾಗಿದೆ. ಇಲ್ಲಿನ ಭುವನೇಶ್ವರಿ ಪ್ರತಿಮೆ ಭಾಷಿಕವಾದದ್ದೇ ಹೊರತು, ಧಾರ್ಮಿಕವಾದದ್ದಲ್ಲ. ಅವರ ಧಾರ್ಮಿಕ ನಿಲುವುಗಳು ಸಹ 'ಒಳಗುಮಾಡಿ' ಕೊಳ್ಳುವ ರಾಜಕೀಯ ಸಿದ್ಧಾಂತದ ಭಾಗವೆನ್ನಿಸುತ್ತದೆ.

**೫.೪ ಧರ್ಮ ಕುರಿತಂತೆ ಶಂಬಾ ಜೋಶಿಯವರ ಚಿಂತನೆ**

ಮಹಾರಾಷ್ಟ್ರದ ಚಿತ್ಪಾವನ ಬ್ರಾಹ್ಮಣ ಸಮುದಾಯಕ್ಕೆ ಸೇರಿದ, ಕನ್ನಡದ ಧೀಮಂತ ಸಂಶೋಧಕ ಮತ್ತು ವಿದ್ವಾಂಸ ಶಂಬಾ ಜೋಶಿಯವರು. ತಿಲಕರಿಂದ ನೇರ ಪ್ರಭಾವಕ್ಕೆ ಒಳಗಾದ ಕನ್ನಡದ ಚಿಂತಕರಲ್ಲಿ ಶಂಬಾ ಜೋಶಿಯವರೂ ಒಬ್ಬರು. ಮರಾಠಿಯ ಆಕ್ರಮಣಕಾರಿ ಧೋರಣೆಗೆ ಪ್ರತಿಕ್ರಿಯಿಸುತ್ತಲೇ ಕನ್ನಡ ರಾಷ್ಟ್ರೀಯತೆಗೆ ಪೂರಕವಾದ ಚಿಂತನೆಗಳನ್ನು ರೂಪಿಸಿದ್ದಾರೆ. ಜನರ ನಂಬಿಕೆಗಳು, ಆಚರಣೆಗಳು, ದೈವಗಳ ಮೂಲಕವೇ ಸಂಸ್ಕೃತಿ, ಭಾಷೆ, ಚರಿತ್ರೆಗಳನ್ನು ಕುರಿತಾದ ವ್ಯಾಖ್ಯಾನಗಳನ್ನು ರೂಪಿಸಿದ್ದಾರೆ. ಈ ವಿಭಾಗಗಳ ಕಡೆಯಿಂದ ಶಂಬಾರನ್ನು ನೋಡುವಾಗ, ಎಷ್ಟೊಂದು ಜನಪರ ಕಾಳಜಿಗಳುಳ್ಳ ವಿದ್ವಾಂಸ ಎನ್ನಿಸದೇ ಇರದು. ಸ್ಥಳನಾಮಗಳು, ಸಂಕೇತಗಳು ಮತ್ತು ಪ್ರತಿಮಾ ಶಾಸ್ತ್ರದ ಮೂಲಕ ವಾಸ್ತವದಲ್ಲಿ ತುಳಿತಕ್ಕೊಳಗಾದ ಸಮುದಾಯಗಳು ಒಂದು ಕಾಲದಲ್ಲಿ ಕನ್ನಡ ಸಂಸ್ಕೃತಿಯನ್ನು ನಿರ್ಮಿಸಿದುವು ಎಂದು ವಿಶ್ಲೇಷಿಸುವಾಗ ತನ್ನ ಸಮಕಾಲೀನ ಕನ್ನಡ ಚಿಂತಕರಿಗಿಂತ ಶಂಬಾ ಜೋಶಿಯವರನ್ನು ವಿಶೇಷ ದೃಷ್ಟಿಕೋನದಿಂದ ಅಧ್ಯಯನಕ್ಕೆ ತೊಡಗಿಸಿಕೊಳ್ಳಬೇಕೆಂದು ಅನಿಸುತ್ತದೆ.

ಆದರೆ ಧರ್ಮ ಮುಂತಾದ ರಾಷ್ಟ್ರದ ವರ್ತಮಾನದ ಸಂಗತಿಗಳನ್ನು ವಿವರಿಸುವಾಗ ಅವರ ಅಭಿಪ್ರಾಯಗಳಲ್ಲಿ ಬೇರೆಲ್ಲ ಚಿಂತಕರಿಗಿಂತ ದೊಡ್ಡ ಮಟ್ಟದಲ್ಲಿ ಏರಿಳಿತಗಳು ಕಂಡು ಬರುತ್ತವೆ. ಶಂಬಾ ಜೋಶಿಯವರ ಬೇರೆಲ್ಲ ಹುಡುಕಾಟಗಳು, ವಿಶ್ಲೇಷಣೆಗಳು ವರ್ತಮಾನದ ಗಾಯಗಳಿಗೆ ಉತ್ತರವಾಗುವವೆ? ಎಂಬ ಪ್ರಶ್ನೆಯನ್ನು ಸೃಷ್ಟಿಸಿದರೆ, ಧಾರ್ಮಿಕ ವಿಷಯದಲ್ಲಿ ಮಾತ್ರ ಶಂಬಾ ಜೋಶಿಯವರನ್ನು ಹೀಗೇಕೆ? ಎಂಬ ಬೆರಗಿನಲ್ಲಿ ನಿಲ್ಲುವಂತೆ ಮಾಡುತ್ತದೆ

ರಾಷ್ಟ್ರೀಯತೆ ಮತ್ತು ರಾಷ್ಟ್ರಧರ್ಮ ಕುರಿತು ಚಿಂತಿಸುವಾಗ ಶಂಬಾರವರು ಎರಡು ಮುಖ್ಯ ಘಟ್ಟಗಳಲ್ಲಿ ವ್ಯವಹರಿಸುತ್ತಾರೆ.

೧. ಕನ್ನಡದ ಅಸ್ಮಿತೆಯನ್ನು ಹುಡುಕುವ ಕೆಲಸ.

೨. ಧರ್ಮವು ರಾಷ್ಟ್ರ ನಿರ್ಮಾಣದಲ್ಲಿ ಪ್ರಧಾನ ಪಾತ್ರವಹಿಸುವ ಅಂಶ.

ಅನೇಕ ಸಾರಿ ಶಂಬಾ ಇವೆರಡನ್ನೂ ಬೆರೆಸುತ್ತಾರೆ. ಅಂದರೆ ಧರ್ಮ ಮತ್ತು ಭಾಷಿಕ ಚಲನೆಗಳು ಭಿನ್ನವಲ್ಲ ಎಂಬ ನೆಲೆಗೆ ತಲುಪುತ್ತಾರೆ. "೧೦-೧೨ ನೆಯ ಶತಮಾನದ ಸುಮಾರಿಗೆ ಆರ್ಯೀಕರಣದ ಮೊದಲಿನ ಧಾರ್ಮಿಕ ಒಮ್ಮೆಲೆ ಬದಲಾಯಿತು. ಭಾಷೆಯು, ರಾಜಕೀಯ ಹಾಗೂ ಆರ್ಥಿಕ ಸ್ಪರ್ಧೆಯ ಕ್ಷೇತ್ರವಾಗತೊಡಗಿದ ಹಾಗೆ ಕಂನುಡಿಯವರಲ್ಲಿ ಪ್ರಾದೇಶಿಕ ಅಸ್ಮಿತಾಭಾವದ ಅವಶ್ಯಕತೆ ಎನಿಸತೊಡಗಿತು. ಧರ್ಮ ಮತ್ತು ಭಾಷೆ ಇವನ್ನು ಬೇರೆ ಬೇರೆಯಾಗಿ ಗ್ರಹಿಸಲು ಮನಸ್ಸಿಲ್ಲದ ಸಂಪ್ರದಾಯವಾದಿಗಳು ಮಹಾರಾಷ್ಟ್ರಕ್ಕಿಂತ ಕರ್ನಾಟಕದಲ್ಲಿ ಹೆಚ್ಚು

ಪ್ರಭಾವಶಾಲಿಗಳಾಗಿದ್ದರು. ವಿಠ್ಠಲ ದತ್ತ ಭಕ್ತರಿಗೆ ಮರಾಠಿ ಶ್ರೀ ವೈಷ್ಣವರಲ್ಲಿ ತೆಲುಗು ತಮಿಳುಗಳ ಬಗೆಗೆ ಪ್ರೀತಿ ಹೆಚ್ಚು. ದಾಸ ಸಾಹಿತ್ಯವು ಕಂನುಡಿಯಲ್ಲಿ ಇರುವುದು. ಆದರೂ ಅಂತಃಕರಣದಲ್ಲಿ ಸಂಸ್ಕೃತಕ್ಕೆ ಇರುವ ಗೌರವ ಈ ಭಾಷೆಗೆ ಇಲ್ಲ. ಜೈನರ ತರುವಾಯ ವೀರಶೈವರು ಕಂನುಡಿಯ ಉತ್ತರಾಧಿಕಾರಿಗಳಾದರು. ಈ ಪಂಗಡಗಳಲ್ಲಿ ಪ್ರಾದೇಶಿಕ ಅಭಿಮಾನ ಮತ್ತು ಧಾರ್ಮಿಕ ಅಭಿಮಾನ ಇವುಗಳಲ್ಲಿ ಮೊದಲನೆಯದಕ್ಕಿಂತ ಎರಡನೆಯದಕ್ಕೆ ಹೆಚ್ಚಿನ ಬೆಲೆಯಿದ್ದುದು ಎಲ್ಲರೂ ಬಲ್ಲ ರಹಸ್ಯದ ಮಾತಾಗಿದೆ''[೫]

ಈ ಭಾಗದಲ್ಲಿ ಕನ್ನಡವು ಹಿಂದೆ ಬೀಳಲು ಮುಖ್ಯ ಕಾರಣ ಕನ್ನಡ ಭಕ್ತಿಪಂಥಗಳಿಗಿದ್ದ ವಿಭಿನ್ನ ನಿಷ್ಠೆಯ ಕಾರಣಗಳೆಂದು ಶಂಬಾ ವಿವರಿಸುತ್ತಾರೆ. ದಾಸಸಾಹಿತ್ಯಕ್ಕೆ ಸಂಸ್ಕೃತ ಕುರಿತ ನಿಲುವು ವಚನಕಾರರಿಗೆ ಪ್ರಾದೇಶಿಕ ಅಭಿಮಾನಕ್ಕಿಂತ ಧಾರ್ಮಿಕ ಅಭಿಮಾನ ಮುಖ್ಯ. ಈ ಕಾರಣಕ್ಕಾಗಿಯೇ ಕನ್ನಡ ಭಾಷೆಯ ಬಗ್ಗೆ ಅವರು ವಿವರಿಸುತ್ತಾರೆ. ಈ ವಿವರಣೆಯು ದಾಸಸಾಹಿತ್ಯ ಮತ್ತು ವಚನ ಚಳುವಳಿಯ ಕುರಿತಾದ ಎಲ್ಲ ತಿಳುವಳಿಕೆಗಳಿಗಿಂತ ವಿಭಿನ್ನವಾದುದು. ಒಟ್ಟಾರೆ ಧಾರ್ಮಿಕ ಚಲನೆಗಳು ಭಾಷೆಯನ್ನು ಮತ್ತು ರಾಷ್ಟ್ರೀಯತೆಯನ್ನು ಕ್ರಿಯಾತ್ಮಕವಾಗಿಸುತ್ತವೆ ಎಂಬ ನೆಲೆಯಿಂದ ಶಂಬಾ ಹೊರಡುತ್ತಾರೆ.

ರಾಷ್ಟ್ರೀಯತೆಯ ಕಟ್ಟುವಿಕೆ ಕುರಿತಂತೆ ಆಲೂರು, ಬಿ.ಎಂ.ಶ್ರೀ ಮತ್ತು ಕುವೆಂಪುರಿಗಿದ್ದಂತೆ ರಾಜಕೀಯ ಕ್ರಿಯಾಶೀಲತೆಯ ಇಕ್ಕಟ್ಟುಗಳು ಶಂಬಾ ಜೋಶಿಯವರಿಗೆ ಒಳಗಿದ್ದಂತೆ ಕಾಣುವುದಿಲ್ಲ. ಆದರೆ ಈ ಎಲ್ಲ ಚಲನೆಗಳನ್ನು ವೈಚಾರಿಕ ವಿದ್ವತ್ತಿನ ಭಾಗವಾಗಿ ನೋಡಲು ಅವರು ಪ್ರಯತ್ನಿಸುತ್ತಾರೆನ್ನಿಸುತ್ತದೆ. ಧರ್ಮದ ಕುರಿತಾದ ಅವರ ವಿವರಣೆಗಳು ಕೂಡ ಇದೇ ನೆಲೆಯಿಂದ ಹೊರಡುತ್ತವೆ. ಈ ದೃಷ್ಟಿಕೋನದ ದೊಡ್ಡ ಸಮಸ್ಯೆ ಎಂದರೆ ಪ್ರಸ್ತುತ ಆಗುಹೋಗುಗಳ ಕುರಿತು ಸೈದ್ಧಾಂತಿಕ ಖಚಿತತೆ ಕಳೆದುಕೊಳ್ಳುವುದಾಗಿರುತ್ತದೆ. ಇಂತಹ ಸಂದರ್ಭಗಳಲ್ಲಿ ತೀವ್ರಗತಿಯಲ್ಲಿ ನಿರಂತರ ಬದಲಾಗುತ್ತಿರುವ ರಾಜಕೀಯ ಸಾಮಾಜಿಕ ವಿದ್ಯಮಾನಗಳು ಕೇವಲ 'ಪ್ರತಿಕ್ರಿಯಾತ್ಮಕ' ಮಾದರಿಯ ಮಟ್ಟಕ್ಕೆ ನಿಂತು ಬಿಡುತ್ತವೆ. ಅವು ಸುಸಂಬದ್ಧ ಸಿದ್ಧಾಂತದ ಮಟ್ಟಕ್ಕೆ ಏರುವುದೇ ಇಲ್ಲ. ಈ ವ್ಯಾಖ್ಯಾನವನ್ನು ಶಂಬಾ ಜೋಶಿಯವರ ಚಿಂತನೆಗಳ ಎದುರಿಗೆ ನಿಂತು ಹೇಳುವಾಗ ಅಧೀರತೆ ಕಾಡಿದರೂ, ಶಂಬಾರ ಚಿಂತನೆಗಳಲ್ಲಿ ಇದು ದೊಡ್ಡ ಮಟ್ಟದ 'ಊನ'ವಾಗಿದೆ ಅನ್ನಿಸುತ್ತದೆ.

ಶಂಬಾ ಜೋಶಿಯವರು ಮಹಾರಾಷ್ಟ್ರದ 'ಕ್ಷಾತ್ರ ಕೇಂದ್ರಿತ' ರಾಷ್ಟ್ರ ಚಿಂತನೆಯಿಂದ ಪ್ರಭಾವಿತರಾದ ಕಾರಣಕ್ಕೋ ಅಥವಾ ತಮ್ಮ ಮೇಲುಸ್ತರದ, ಸಾಂಪ್ರದಾಯಿಕ ಹಿನ್ನೆಲೆಯೋ ಅಥವಾ ೧೯೪೭ರ ದೇಶವಿಭಜನೆಯ ಸಂದರ್ಭದಲ್ಲಿ ಕಂಡ ಕ್ರೌರ್ಯದ ಆತ್ಮಕತೆಯಿಂದಲೋ ಏನೋ ಇಸ್ಲಾಮಿನ ವಿರುದ್ಧ ತೀವ್ರ ಅಸಹನೆಯನ್ನು ವ್ಯಕ್ತಪಡಿಸುತ್ತಾರೆ :

"ಪ್ರತ್ಯಕ್ಷದಲ್ಲಿ (ಜಾತಿ, ಧರ್ಮ, ಭಾಷೆ, ಪ್ರಾಂತಗಳ ಜಗಳದಲ್ಲಿ) ಹಿಂದೂ ಸಂಖ್ಯೆ ಕ್ಷೀಣಿಸುತ್ತ ಹೊರಟಿದ್ದು ಕಾಣುತ್ತದೆ. ಜಾತಿಯು ತಂದೆಯಿಂದಲೋ? ಅಥವಾ ತಾಯಿಂದಲೋ? ಏನೊಂದು ನಿಶ್ಚಿತವಿಲ್ಲದ್ದರಿಂದ ಈ ಎರಡೂ ದಿಕ್ಕಿನಿಂದಲೂ, 'ಹಿಂದೂ' ಎಂಬ ಸಮಾಜದ ಸಂಖ್ಯೆಯು ಮುಸಲ್ಮಾನ ಶರೀರ ಸಂಬಂಧದಲ್ಲಿ ದಿನದಿನಕ್ಕೂ ಕಡಿಮೆಯಾಗುತ್ತ ಹೋಗುವುದು ನಿಶ್ಚಿತತೆ ಇದೆ! ಇದರ ಬಗೆಗೆ ಸಂದೇಹಕ್ಕೆ ಅವಕಾಶವಿಲ್ಲ!

ಜನಮೊಡನೆಯ ಜಾತಿ ಧರ್ಮದ ಕಟ್ಟನ್ನು ಸಡಿಲಿಸಿ, ನೂತನ ಸಮಯ ನಿರ್ಮಿಸುವ ದೂರದರ್ಶಿ ಸಮರ್ಥ ನೇತಾರರ ಅಭಾವದಿಂದಾಗಿ 'ಹಿಂದೂ' ಎಂಬ ಸಮಾಜದ ಭವಿಷ್ಯವು ತೀರ ಸಂದಿಗ್ಧಕ್ಕೆ ಬಂದಿದೆ! 'ಸನಾತನತ್ವ'ವು ಬೇಕೋ? ರಾಷ್ಟ್ರವು ಬೇಕೋ? ಎಂಬ ಕಟ್ಟುನಿಟ್ಟಿನ ಪ್ರಶ್ನೆಯುಂಟಾದಾಗ ನೂರಕ್ಕೆ ತೊಂಬತ್ತರಷ್ಟು ಜೀವಗಳು ತೊದಲುವುವು; ಭಾರತೀಯ ಜಾತಿಗಳ ಗುರುವರ್ಗದ ಇತಿಹಾಸದಲ್ಲಿ 'ಸನಾತನತ್ವ'ದ ಮುಂದೆ ರಾಷ್ಟ್ರಕ್ಕೆ ಮೊದಲನೆಯ ಸ್ಥಾನ ದೊರೆತ ಪ್ರಸಂಗಗಳೇ ವಿರಳ. 'ಹಿಂದೂ' ಎಂಬ ಸಮಾಜವು ಅಂತರಂಗದಲ್ಲಿ ತಾನೇ 'ಸನಾತನಿ' ಜಾತೀಯವಾದಿಯಾಗ ಬಯಸುತ್ತಿರುವಾಗ ಈ ಜನ ಮುಸಲ್ಮಾನೀ ಕೇವಲ ('ಪಾಕ' ರೆ) ಸನಾತನತ್ವವನ್ನು ಅಲ್ಲಗಳೆಯಲು, ಹೇಗೆ ಸಮರ್ಥರಾದಾರು! ಪಾಕಿಸ್ಥಾನದ ನಿರ್ಮಿತಿಯ ತರುವಾಯದಲ್ಲಿ ಸಹ, ಭಾರತದ ಪ್ರತಿಪ್ರಾಂತದಲ್ಲಿ ಊರೂರಿಗೂ 'ಪಾಕ'-ದ್ವೀಪಗಳು, ಹವಳದ ನಡುಗಡ್ಡೆಗಳಂತೆ ಹುಟ್ಟಿಕೊಳ್ಳುತ್ತಲೇ ಇವೆ. ಇವು ಗೇಣಗಲಿನಿಂದ ಪ್ರಾರಂಭವಾಗಿ ಹೆಚ್ಚು ಹೆಚ್ಚು ಸುಸಂಘಟಿತವಾಗುತ್ತವೆ. ಒಂದಕ್ಕೊಂದು ಸಂಲಗ್ನವಾಗಿ ಪ್ರಾದೇಶಿಕ ವಿಭಾಗಗಳಾಗಿ, ಪ್ರಭಾವ ಬೀರ ತೊಡಗಿದ್ದು ಕಾಣುತ್ತದೆ. ರಾಜಕೀಯ ಮಹತ್ವಾಕಾಂಕ್ಷೀ ಸ್ವಾರ್ಥಿಗಳಾದ 'ಹಿಂದೂ ಎಂಬವರೊಳಗಿನಿಂದಲೇ ಚುನಾವಣೆಗಳ ಕಾಲದಲ್ಲಿ ಆ ಕಾರಣಕ್ಕಾಗಿ ಈ 'ಪಾಕ'ರ ಸಂಘ ಸಂಸ್ಥೆಗಳಿಗೆ ಪೋಷಣೆ ದೊರೆಯುತ್ತಿದೆ. ಹೀಗೆ ಈ 'ಹಿಂದೂ' ಎಂಬ ಸಮಾಜದ ತಮ್ಮ ವೈಯಕ್ತಿಕ ಅಭಿವೃದ್ಧಿಯ ಭ್ರಾಮಕ ಸ್ವಾರ್ಥದಲ್ಲಿ, ತಮ್ಮ ಇಡೀ ಸಮಾಜದ ಶಕ್ತಿಯನ್ನು ಕ್ಷೀಣಿಸಿಕೊಳ್ಳುತ್ತಿದ್ದಾರೆ. ಸುದೈವದಿಂದ ಮುಸಲ್ಮಾನರೊಳಗೆ, ರಾಷ್ಟ್ರೀಯ ವಿವೇಕವು ಜಾಗೃತವಾದ ವಿಚಾರವಂತರು, ತಮ್ಮೊಳಗಿನ ಈ 'ಪಾಕ' ಸಂಘಟನೆಯ ಪ್ರವೃತ್ತಿಯನ್ನು ತಿರಸ್ಕರಿಸುತ್ತಿದ್ದಾರೆ. ಜಾತ್ಯತೀತ ರಾಷ್ಟ್ರೀಯ ಸಮಾಜದ ನಿರ್ಮಾಣದ ಅವಶ್ಯಕತೆಯನ್ನು ಒಪ್ಪುತ್ತಿದ್ದಾರೆ. ಆದರೆ, ಒಟ್ಟಿನಲ್ಲಿ ನಮ್ಮ ಉಭಯ ಸಮಾಜದೊಳಗಿನ ಬಹುಸಂಖ್ಯೆ ನೇತಾರರ ಜಾತ್ಯಾತೀತ ರಾಷ್ಟ್ರೀಯ ಭಾವನೆಯು ಇನ್ನೂ ದುರ್ಬಲವಿರುವುದರಿಂದ, ಹಿಂದೂ ಮುಸಲ್ಮಾನ ಎಂಬ ಭೇದದ ಪಾತಳಿಯ ಮೇಲಿನ ಜೀವನ ರೀತಿಗೆ ಪೋಷಿಸುವ ನೂತನ ಸಾಂಸ್ಕೃತಿಕ 'ಸಮಯ' ಆಚರಣೆಯಲ್ಲಿ ಬರುವುದು ಅವಶ್ಯವಾಗಿದೆ. ಇದು ಪ್ರತಿಯೊಬ್ಬರ ಅನುಭವದ ಮಾತಾಗಿದೆ. ಈ ಕಟು ವಸ್ತುಸ್ಥಿತಿಯನ್ನು ನೆನಪಿಗೆ ತಂದುಕೊಳ್ಳುವ ಕಾರಣವೆಂದರೆ, ಭಾರತೀಯ ರಕ್ತದಲ್ಲಿ ಬೆರೆತಿರುವ ಸನಾತನ ದೃಷ್ಟಿಗೆ, ತನ್ನ ವಿಶಿಷ್ಟ ಮತೀಯ ಪರಂಪರಾಗತ ಜಾತಿ ಸಂಪ್ರದಾಯಗಳನ್ನು ಉಳಿಸಿಕೊಳ್ಳಲು, ಸಾಮಾಜಿಕ ಹಾಗೂ ರಾಷ್ಟ್ರೀಯ ಹಿತದ ಭಾವನೆ ವಿಚಾರಗಳನ್ನು ದುರ್ಲಕ್ಷಿಸಲು ಹತ್ತಿಕ್ಕುವ ವಿಸೂ ಸಂಕೋಚವೆನಿಸುವುದಾಗಿ ಕಂಡು ಬರುತ್ತಿದೆ! ಮತ ಪಂಥಗಳೇ ರಾಷ್ಟ್ರಕ್ಕಿಂತ ಹೆಚ್ಚಿನ ಬೆಲೆಯುಳ್ಳವು ಎಂಬ ಆತ್ಯಂತಿಕ ಶ್ರದ್ಧೆ."[೬]

ಮೇಲಿನ ವಿವರಣೆಯಲ್ಲಿ ಭಾರತದ ರಾಜಕಾರಣಿಗಳ 'ಮತಬ್ಯಾಂಕ್' ರಾಜಕಾರಣವನ್ನು ಮತ್ತು ಕೆಲವು ಮುಸಲ್ಮಾನರ ಪಾಕಿಸ್ತಾನ ನಿಷ್ಠೆಯನ್ನು ಕುರಿತು ಸಿಟ್ಟನ್ನು ಶಂಬಾ ವ್ಯಕ್ತಪಡಿಸುತ್ತಾರೆ. ದೇಶವಿಭಜನೆಯ ರಕ್ತಪಾತದ ನಂತರ ೧೯೬೭ರ ಸಂದರ್ಭದಲ್ಲಿ ಅವರು ರಚಿಸಿದ 'ಸಂಸ್ಕೃತಿಯ ಪೂರ್ವ ಪೀಠಿಕೆ ಭಾಗ-೨' ಈ ಕೃತಿಯಲ್ಲಿ ಭಾರತ ಪಾಕಿಸ್ತಾನ ಯುದ್ಧಗಳ ಸಂದರ್ಭವೂ ಮನಸ್ಸಿನಲ್ಲಿದ್ದಂತೆ ಕಾಣುತ್ತದೆ. ಆದರೆ ಶಂಬಾ

ಉಳಿದ ಮತೀಯವಾದಿಗಳಂತೆ ಅಲ್ಲವೆಂಬುದು ಈ ಸಂದರ್ಭಗಳಲ್ಲಿ ಕಂಡುಬರುತ್ತದೆ. 'ಸವಕಾಲಿ ಹತ್ಯಾಕಾಂಡ'ದ ಸಂದರ್ಭದಲ್ಲಿ ಗಾಂಧೀಜಿಯವರ ಕಾರ್ಯಗಳನ್ನು ಶ್ಲಾಘಿಸುತ್ತಾ ಸಾವರಕರ್ ಮುಂತಾದ ಹಿಂದೂ ಮಹಾ ಸಭಾದ ನಾಯಕರನ್ನು ಅವರು ತರಾಟೆಗೆ ತೆಗೆದುಕೊಳ್ಳುತ್ತಾರೆ.

ಆದರೆ ವಿಭಿನ್ನ ಚಾರಿತ್ರಿಕ ಪರಿಸ್ಥಿತಿಗನುಗುಣವಾಗಿ ಅವರ ಚಿಂತನೆಗಳೂ ಬದಲಾಗುತ್ತಿದ್ದವು : ಉದಾಹರಣೆಗೆ "ನನ್ನ ತಿಳುವಳಿಕೆಯಂತೆ ಭಾರತವು ತನ್ನ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಬೇಕಾದರೆ ಒಂದೇ ದಾರಿ ಹಿಂದೂ ದೇಶದಲ್ಲಿ ಒಂದು ಮುಸಲ್ಮಾನ ಪಿಳ್ಳೆ ಉಳಿಯದಂತೆ ಮಾಡದೆ ಭಾರತಕ್ಕೆ ಬೇರೆ ಗತಿಯಿಲ್ಲ. ಆದರೆ ಎಲ್ಲ ಮುಸಲ್ಮಾನರನ್ನೂ ಹಿಂದೂ ದೇಶದಿಂದ ತಳ್ಳಿ ಬಿಡುವುದು ಸಾಧ್ಯವೇ? ಪರಶುರಾಮನು ೨೧ ಬಾರಿ ಕ್ಷತ್ರಿಯ ಪೃಥ್ವಿ ಮಾಡಿದನಂತೆ! ಆದರೆ, ಮತ್ತೆ ಕ್ಷತ್ರಿಯರು ಉಳಿಯದೆ ಹೋಗಲಿಲ್ಲ."[೭]

ತಳ್ಳಿ ಬಿಡಲಾಗುವುದಿಲ್ಲವೆಂದರೆ ಮಾಡುವುದೇನು? ಎಂಬ ಪ್ರಶ್ನೆಗೆ "ಹಿಂದೂ ಸಮಾಜದೊಳಗಿನ ಬ್ರಾಹ್ಮಣಾದಿ ಜಾತಿಗಳ ಇಂದಿನ ಮಡಿವಂತಿಗೆಯ ಕಲ್ಪನೆಗಳಲ್ಲಿ ಬದಲಾವಣೆಯು ಅಗತ್ಯವಾಗಿದೆ. ಮುಸಲ್ಮಾನರಿಗೆ ಸಂಸ್ಕಾರ ಕೊಟ್ಟು ಹಿಂದುಗಳೆಂದು ಅವರನ್ನು ಒಳಗೆ ತಕ್ಕೊಳ್ಳುವ ಉಪಾಯವು ಅನೇಕ ಹಿಂದೂ ಜನರಿಗೆ ಮೇಲ್ನೋಟಕ್ಕೆ ಹಿಗ್ಗಿನದೆನಿಸುವಂತಿದೆ. ಆದರೆ, ಸಂಸ್ಕಾರ ಹೊಂದಿ ಹಿಂದೂವಾದ ಮುಸಲ್ಮಾನನನ್ನು ಸುಶಿಕ್ಷಿತನು, ಸುಸಂಸ್ಕೃತನು ಇದ್ದರು ಬ್ರಾಹ್ಮಣಾದಿಗಳು ಆತನೊಡನೆ ಅನ್ನ ಕನ್ಯಾ ವ್ಯವಹಾರಕ್ಕೆ ಸಿದ್ಧರಾಗದೆ ಇದ್ದರೆ ಆತನಾಗಲಿ, ಬೇರೆ ಮುಸಲ್ಮಾನರಾಗಲಿ ಹಿಂದುಗಳಾಗಲು ಏಕೆ ಸಿದ್ಧರಾದಾರು? ....... ಹಿಂದೂಗಳ ವರ್ಣಾಶ್ರಮದ ಹೆಮ್ಮೆಯ ತಿರಸ್ಕಾರದ ನಡೆವಳಿಯ ಮೂಲಕವಾಗಿಯೇ ಮುಸಲ್ಮಾನರು, ಕ್ರಿಸ್ತಿಗಳು ಆದ ಜನರಿಲ್ಲವೆ? ಈಗ ಮತ್ತೆ ವರ್ಣಾಶ್ರಮಿಗಳು ತಮ್ಮ ನಡತೆ ಬದಲಿಸದೆ ಹೋದರೆ ಹಿಂದೂ ಧರ್ಮದಲ್ಲಿ ಬರಲು ಯಾರು ತಾನೆ ಸಿದ್ಧರಾದಾರು?"[೮]

ಇದಕ್ಕೆ ಶಂಬಾ ತೋರಿಸುವ ಉಪಾಯ ಹೀಗಿದೆ. "ಮುಸಲ್ಮಾನ ಓಣಿಗಳು ಬೇರೆ, ಮುಸಲ್ಮಾನರ ಗುಡಿಗಳು ಬೇರೆ, ಮುಸಲ್ಮಾನರ ಶಾಲೆಗಳು ಬೇರೆ, ಅವರಲ್ಲಿ ಬೇರೆ ಯಾರೂ ಬೆರೆಯುವಂತಿಲ್ಲವೆಂಬ ಇಂದು ತೆರನಾದ ನಡವಳಿಯನ್ನೇ ಮುಂದೆಯೂ ಇಟ್ಟುಕೊಂಡರೆ ಅಥವಾ ಉಳಿಯಗೊಟ್ಟರೆ ಅದು ಹಿಂದೂ ಸಮಾಜಕ್ಕೂ, ಹಿಂದೂ ಸ್ವಾತಂತ್ರ್ಯಕ್ಕೂ ಗಂಡಾಂತರವನ್ನು ತರದೆ ಇರಲಾರದು. ಆದಕಾರಣ ನಾಳಿನ ನಮ್ಮ ಸ್ವಾತಂತ್ರ್ಯ ಸ್ಥಿರತೆಗಾಗಿ, ಇಲ್ಲಿ ತಾವು ಭಾರತದ ರಾಷ್ಟ್ರೀಯ ನಾಗರಿಕರಾಗಿ ಬಾಳಲು ಸಿದ್ಧರಿದ್ದೇವೆಂಬ ಮುಸಲ್ಮಾನರನ್ನು ಒಂದು ಗುಂಪಾಗಿ ಒಂದೆಡೆಗೇ ಮನೆ ಕಟ್ಟಿಕೊಂಡು ಇರುವಂತೆ ಮಾಡಲಾಗದು. ಇನ್ನು ಮುಂದಿನ ನಮ್ಮ ನಗರಗಳ ರಚನೆಯೂ ಬದಲಾಗಬೇಕಿದೆ. ಒಂದೊಂದು ಜಾತಿಯವರ ಒಂದೊಂದು ಓಣಿಯಿರುವದು. ಇನ್ನು ಮುಂದಿನ ನಮ್ಮ ಸ್ವತಂತ್ರ ಭಾರತದಲ್ಲಿ ಅಭಿವೃದ್ಧಿಯ ದೃಷ್ಟಿಯಿಂದ ತೀರಾ ಹಾನಿಗೆ ಕಾರಣವಾಗುವುದಿದೆ. ಮುಸಲ್ಮಾನರನ್ನು ಹಿಂದೂ ವಸತಿಯ ಓಣಿಓಣಿಗಳಲ್ಲಿ ಹಂಚಿ ಒಡೆದ್ದಿನಂತೆ ನೆಲಸಲು ಹಚ್ಚಬೇಕು.

ಧಾರ್ಮಿಕ ಸ್ವಾತಂತ್ರ್ಯ ಎಲ್ಲರಿಗೂ ಅವಶ್ಯ. ಹರಿಜನರಿಗೆ ಅಷ್ಟೇ ಗುಡಿಯ ಪ್ರವೇಶದ ಚಳವಳಿಯು ಇನ್ನು ಸಾಕು. ಭಾರತದಲ್ಲಿ ಯಾವುದೇ ಧರ್ಮದ ದೇವಾಲಯಗಳು ಇರಲಿ. ಅಲ್ಲಿಗೆ ಭಕ್ತಿ ಭಾವದಿಂದ ಬರಲು ಬಯಸುವ ಮಾನವರು ಯಾರೇ ಆಗಲಿ ಪ್ರವೇಶವು ಇರುವದು ಅತ್ಯವಶ್ಯವಾಗಿದೆ. ಮುಸಲ್ಮಾನರು ಹಿಂದೂ ದೇವಾಲಯಗಳಿಗೆ

ಹೋಗಲಿ, ಹಿಂದುಗಳು ಪ್ರಾರ್ಥನೆಗಾಗಿ ಮಸೀದಿಗಳಿಗೆ ಹೋಗಲಿ, ಇದರಿಂದ ಧರ್ಮಾಂಧತೆಯಲ್ಲಿ ತಮ್ಮವರಿಗೆ ಮಾಡುವ ಹೀನಮಾರ್ಗದ ಉಪದೇಶ ದೊಂಬಿ ಏಳುವುದಕ್ಕೆ ಕೊಡುವ ಉತ್ತೇಜಕ ಭಾಷಣಗಳಿಗೆ ತಡೆಯಾಗುವುದು"[೯]

ಇಷ್ಟು ದೀರ್ಘ ಭಾಗಗಳನ್ನು ಇಲ್ಲಿ ದಾಖಲಿಸುವುದಕ್ಕೆ ಕಾರಣ, ನಮ್ಮ ಪೂರ್ವಿಕರು ರಾಷ್ಟ್ರ ಮತ್ತು ರಾಷ್ಟ್ರಧರ್ಮಗಳ ಕುರಿತು ಹೇಗೆಲ್ಲ ಚಿಂತನೆ ನಡೆಸಿದ್ದಾರೆ ಎನ್ನುವುದನ್ನು ಅರ್ಥೈಸಿಕೊಳ್ಳುವುದಾಗಿದೆ. 'ಹಿಂದೂ -ಮುಸಲ್ಮಾನವೆಂಬ ತೊಡಕು' ಎಂಬ ತಲೆಬರಹದಲ್ಲಿ ದೇಶ ವಿಭಜನೆಯ ಸಂದರ್ಭದಲ್ಲಿ ಶಂಬಾ ಬರೆದ ಈ ಬರೆಹ ಅನೇಕ ಅಂಶಗಳನ್ನು ಪ್ರತಿಪಾದಿಸುತ್ತಿದೆ.

೧. ಹಿಂದೂ ಸಮಾಜದಲ್ಲಿನ ಅಸಮಾನತೆಯಿಂದಾಗಿ ಮತಾಂತರಗಳು ನಡೆದಿವೆ.

೨. ಪ್ರತ್ಯೇಕ ಶಿಕ್ಷಣ ಮತ್ತು ಪ್ರತ್ಯೇಕ ನೆಲೆ ಇವುಗಳು ಸಮುದಾಯಗಳನ್ನು ಒಡೆಯುತ್ತವೆ -(ಹಾಗಾಗಿ ಮುಸಲ್ಮಾನರನ್ನು ಒಂದೊಂದು ಕೇರಿಗಳಿಗೆ ಒಬ್ಬೊಬ್ಬರನ್ನು ಹಂಚಬೇಕೆಂಬುದು ಕ್ರೌರ್ಯದ ಪರಮಾವಧಿ ಎನ್ನಿಸುವುದಿಲ್ಲವೇ?)

೩. ಆಳುವ ವರ್ಗಗಳ ಹಿತಾಸಕ್ತಿಗಳಿಂದ ಸಮುದಾಯಗಳ ನಡುವೆ ಘರ್ಷಣೆಗಳು ನಡೆಯುತ್ತವೆ.

೪. ಸಹಪಂಕ್ತಿ ಭೋಜನ, ಸಹವಿವಾಹ, ಬೇರೆ ಪ್ರಾರ್ಥನಾ ಕೇಂದ್ರಗಳಿಗೆ ಎಲ್ಲರೂ ಹೋಗಬೇಕಾದ ಅನಿವಾರ್ಯತೆ ಇತ್ಯಾದಿ ಉದಾರವಾದ ಸಲಹೆಗಳನ್ನು ಶಂಬಾ ನೀಡುತ್ತಾರೆ. ಹಿಂದೂ ಎಂಬುದು ಧರ್ಮಕ್ಕಿಂತ 'ಭೌಗೋಳಿಕ ವಾಸಿಯಾದ' ಅರ್ಥಹೊಂದಿದೆ ಎಂದು ಆರಂಭಿಸುವ ಶಂಬಾರವರು ಮಾಗುತ್ತಾ ಹೋದಂತೆಲ್ಲ ತಮ್ಮ ಅಭಿಪ್ರಾಯಗಳನ್ನು ನಿರಂತರ ಪರೀಕ್ಷಿಸಿಕೊಳ್ಳುತ್ತಾ, ಪರಿಶೀಲಿಸುತ್ತಾ ಹೋಗುತ್ತಾರೆ. 'ಋಗ್ವೇದ ಸಾರ' 'ನಾಗಪ್ರತಿಮಾ ವಿಚಾರ' (೧೯೭೨) ಬರೆಯುವ ಹೊತ್ತಿಗೆ ಎಲ್ಲ ಧರ್ಮಗಳ ಹಿಂದಿನ ಮೂಲಸ್ಫೂರ್ತಿ ಒಂದೇ ಎನ್ನುವ ಅತ್ಯಂತ ಉದಾರವಾದ 'ವಿಶ್ವಾತ್ಮಕದರ್ಶನ'ವನ್ನು ಪರಿಚಯಿಸಲು ಪ್ರಯತ್ನಿಸುತ್ತಾರೆ.

### ೫.೫ ಧರ್ಮ ಕುರಿತಂತೆ ಕುವೆಂಪುರವರ ಚಿಂತನೆಗಳು

೨೦ನೇ ಶತಮಾನದ ಕನ್ನಡ ಮನಸ್ಸಿನ ಸಾಕ್ಷಿ ಪ್ರಜ್ಞೆಯಂತಿದ್ದ ಕುವೆಂಪು ಆಧುನಿಕ ರಾಷ್ಟ್ರ ನಿರ್ಮಾಣದಲ್ಲಿ ತೀವ್ರವಾಗಿ ತೊಡಗಿಕೊಂಡವರು. ಕನ್ನಡದ ದೊಡ್ಡ ಲೇಖಕರಂತೆ ಕನ್ನಡಭಾರತ ರಾಷ್ಟ್ರಗಳನ್ನು ಎದುರಾ ಬದುರು ಕಲ್ಪಿಸಿಕೊಳ್ಳದೆ ಕರ್ನಾಟಕಾಂತರ್ಗತ ಭಾರತದ ಕಲ್ಪನೆಗೆ ಹೊಸ ಆಯಾಮವನ್ನು ಕೊಡಲೆತ್ನಿಸಿದವರು. ಹಾಗಾಗಿಯೇ ದಮನಿತರ ಆಶಯಗಳಿಗೆ ಸಾಂಸ್ಕೃತಿಕ, ರಾಜಕೀಯ ನಾಯಕರಾಗಿ ಕುವೆಂಪುರನ್ನು ಕಲ್ಪಿಸಿಕೊಳ್ಳಲಾಗುತ್ತದೆ. ಭಾರತದಲ್ಲಿ ಎಲ್ಲ ಶೋಷಣೆಗಳ ಆರಂಭಬಿಂದು 'ವೈದಿಕ ಕೇಂದ್ರಿತ' ಧರ್ಮವಾದ್ದರಿಂದ, ಅದನ್ನು ನಿರಚನೆಗೊಳಿಸದೆ ಅಥವಾ ಅನ್ಯಗುಣವಾಗಿ ರೂಪಿಸದೆ ಯಾವ ಹೊಸರೀತಿಯ ಜಾಗೃತಿಗಳು ಹುಟ್ಟಲಾರವೆಂಬ ಅರಿವಿನ ಮಹಾಕಿಡಿ ಕುವೆಂಪುರವರ ಎಲ್ಲ ಬರಹಗಳ ಹಿಂದೆ ಕೆಲಸಮಾಡಿರುವ ತತ್ವವಾಗಿದೆ. ಡಿ.ಆರ್.ನಾಗರಾಜರವರು ಕುವೆಂಪುರವರ ಯಾವ ಕೃತಿಗಳಲ್ಲಿ ಹಿಂದೂ ವಿರೋಧಿ ಆಶಯಗಳಿವೆಯೆಂದು ನಂಬಲಾಗಿದೆಯೋ ಅವುಗಳಲ್ಲೇ ಆಳವಾದ ಹಿಂದೂ ಮನಸ್ಸನ್ನು ಕಾಣಬಹುದು

ಎಂಬ ಅರ್ಥ ಬರುವ ಮಾತುಗಳನ್ನಾಡಿದ್ದಾರೆ. ಇದು ನಿಜವೂ ಹೌದು. ಕುವೆಂಪು ಪರಂಪರೆಯನ್ನು (ದುಡಿವ ವರ್ಗ ಆಚರಣಾ ಲೋಕ ಅಥವಾ ಪರಂಪರೆಯನ್ನು ತಿರಸ್ಕರಿಸಿದ್ದರಿಂದ ಕುವೆಂಪುರಿಗೆ ಆ ಅರ್ಥದಲ್ಲಿ ಪರಂಪರೆ ಇಲ್ಲವೆನ್ನಿಸುತ್ತದೆ.) ಮುಖ್ಯವಾಗಿ ಮೇಲ್ಜಾತಿಗಳು ರೂಪಿಸಿದ ಪರಂಪರೆಯನ್ನು ಖಡಾಖಂಡಿತವಾಗಿ ನಿರಾಕರಿಸದೆ ಅದನ್ನು ಇಂದಿನ ಅಗತ್ಯಗಳಿಗೆ ದುಡಿಸಿಕೊಳ್ಳುವುದು ಹೇಗೆ ಎಂಬ ಅರಿವಿನಿಂದ ಹೊರಡುತ್ತಾರೆ. ಈ ಹಿನ್ನೆಲೆಯಲ್ಲಿಯೇ ದಮನಿತರಲ್ಲಿ ಸ್ವಾಭಿಮಾನ ತುಂಬುವ ಆಳುವವರನ್ನು ಮಾನವೀಯಗೊಳಿಸುವ ಪ್ರಯತ್ನಗಳನ್ನು ತಮ್ಮ ಕಥೆ, ಕಾದಂಬರಿ, ಕಾವ್ಯ ಭಾಷಣ ಬರೆಹಗಳಲ್ಲಿ ಅವರು ಮಂಡಿಸುತ್ತಾರೆ. ಬಹುಶಃ ಮೇಲಿನ ಈ ಎಲ್ಲ ಕಾರಣಗಳಿಂದಲೇ ಇಡೀ ಶತಮಾನದ ಮುಕ್ಕಾಲು ಭಾಗ ವಿವಿಧ ಚಳವಳಿಗಳು ಕುವೆಂಪು ವಿಚಾರಗಳ ಜೊತೆ ನಿರಂತರ ಮುಖಾಮುಖಿ ನಡೆಸಿವೆ.

'ಧೀ' ಪ್ರಧಾನವಾದ ಉಪನಿಷತ್ ಪರಂಪರೆ ಕುವೆಂಪುರಿಗೆ ತೀರಾ ಹತ್ತಿರವೆನ್ನಿಸುತ್ತದೆ. ವೈಚಾರಿಕತೆ, ಪ್ರಶ್ನೆಮಾಡುವ ಧೀಮಂತಿಕೆಯನ್ನು ಪ್ರತಿಪಾದಿಸುವಿಕೆಯನ್ನು ಅವರ ಒಟ್ಟು ನಿಲುವುಗಳಲ್ಲಿ ಕಾಣಬಹುದು.

ಆಧುನಿಕ ರಾಷ್ಟ್ರ ನಿರ್ಮಾಣದ ಸಂದರ್ಭದಲ್ಲಿ ಕುವೆಂಪುರವರು ಪ್ರತಿಪಾದಿಸುವ ದೇವರು ಮತ್ತು ಧರ್ಮದ ಕಲ್ಪನೆ ಪ್ರಜಾಪ್ರಭುತ್ವದ ಬುನಾದಿಯ ಮೇಲೆ ನಿಲ್ಲಿಸುವಂತಹದು; ಸ್ವಭಾವದಲ್ಲಿ 'ಸೆಕ್ಯುಲರ್' ಆದ ಹೊಸ ರಾಷ್ಟ್ರದ ಅಗತ್ಯಕ್ಕೆ ಪೂರಕವಾದದ್ದನ್ನು ಕುವೆಂಪು ಪ್ರತಿಪಾದಿಸುತ್ತಿದ್ದಾರೆನ್ನಿಸುತ್ತದೆ. ಅವರ ಮುಖ್ಯ ಕವಿತೆಗಳಿರುವುದು ಮತ್ತು ಅವುಗಳು ಇಂದಿಗೂ ಚೈತನ್ಯಪೂರ್ವಕವಾಗಿರುವುದು, ಆ ರೀತಿಯ ಕವಿತೆ ಸಮಾಜದ ಅಗತ್ಯಕ್ಕೆ ಸ್ಪಂದಿಸಿದ ರೀತಿ ಹೀಗಿರಬಹುದು.

ಅವರ ಅನೇಕ ಕವಿತೆಗಳಲ್ಲಿ ಹೊಸದೇವರ ಕಲ್ಪನೆಗಳನ್ನು ಮಂಡಿಸಲಾಗಿದೆ. ದೇವರು, ಇಂದಿನ ದೇವರು, ಮುಂತಾದವು ಆ ಪಟ್ಟಿಗೆ ಸೇರುತ್ತವೆ. ಇಂದಿನ ದೇವರು ಪದ್ಯದಲ್ಲಿ

"ನೂರು ದೇವರನೆಲ್ಲ ನೂಕಾಚೆದೂರ
ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ!
ಶತಮಾನಗಳು ಬರಿಯ ಜಡ ಶಿಲೆಯ ಪೂಜಿಸಾಯ್ತು !
ಪಾಲ್ಗಳಿಗೆ ಪಾಲೆರೆದು ಪೋಷಿಸಾಯ್ತು!
ಬಿಸಿಲು ಮಳೆ ಗಾಳಿ ಬೆಂಕಿಯನೆಲ್ಲ ಬೇಡಿಯಾಯ್ತು!
ದಾಸರನು ಪೂಜಿಸಿಯೆ ದಾಸ್ಯವಾಯ್ತು!
ಗುಡಿಯೊಳಗೆ ಕಣ್ ಮುಚ್ಚಿ ಬೆಚ್ಚಗಿರುವವರನೆಲ್ಲ,
ಭಕ್ತ ರಕ್ತವ ಹೀರಿ ಕೊಬ್ಬಿಹರನೆಲ್ಲ,
ಗಂಟೆ ಜಾಗಟೆಗಳಿಂ ಬಡಿದು, ಕುತ್ತಿಗೆ ಹಿಡಿದು
ಕಡಲಡಿಗೆ ತಳ್ಳಿರೈ ಶಂಖದಿಂ ನುಡಿದು!
ನಿದ್ದೆ ಮಾಡುತ್ತಿಹರು ಹಲವು ದೇವತೆಗಳೆಲ್ಲ
ಬಿದ್ದವರು ಕಲ್ಲಾಗಿ ಕೆಲವರಿಹರು

ಕ್ಲೀಬತನದಲಿ ಮರೆತು ತಮ್ಮ ಪೌರುಷವನೆಲ್ಲ
ಸತ್ತೆ ಹೋದಂತಿಹರು ಮತ್ತುಳಿದಮರರು
ಅವರ ಗುಡಿ ಹಾಳಾಯ್ತು ಅವರ ನುಡಿ ಮಡಿದು ಹೋಯ್ತು
ಅವರ ನೆಮ್ಮಿದ ನಮಗೆ ಬೀಳುಗತಿಯಾಯ್ತು!
ಮುಂದಿವಳ ಸಾರಾಧಿಸುವ ಶಕ್ತಿಯಾಗಿ ಬೆಳಸುವ
ಒಂದು ಶತಮಾನವನು ಒಂದೆ ದಿನ ಜೈಸುವ
ಸತ್ತ ಕಲ್ಗಳ ಮುಂದೆ ಅತ್ತು ಕರೆದುದು ಸಾಕು,
ಜೀವದಾತೆಯ ನಿಂದು ಕೂಗಬೇಕು!
ಶಿಲೆಯ ಮೂರ್ತಿಗೆ ನೆಯ್ದ ಕಲೆಯ ಹೊದಿಕೆಯನೊಯ್ದು
ಚಳಿಯು ಮಳೆಯಲಿ ನವೆವ ತಾಯ್ಗೆ ಹಾಕು!
ಭಾರತಿಯೆ ನಮಗಿಂದು ಜೀವನದ ದೇವತೆಯು,
ವಿಶ್ವ ರೂಪಿಣಿಯವಳು, ವಿಶ್ವಮುಖಿಯೈ!
ನಮ್ಮೆಲ್ಲರಂಗಗಳೆ ನಮ್ಮಂಬೆಯಂಗವೈ
ನಮ್ಮ ಸ್ವಾತಂತ್ರ್ಯದೊಳೆ ನಮ್ಮಮ್ಮ ಸುಖಿಯೈ!
ಇಂದೊ ನಾಳೆಯೊ ದಾಸನೀಳಸಾಗಲೇ ಬೇಕು,
ಏಂದಿಂದೆ ಎದ್ದೇಳಿ ನಾಳೆಯೆನೆ ಹೋಕು!
ನಾವೆ ದೇವತೆಗಳೈ ಭಾರತವೇ ಸ್ವರ್ಗವೈ!
ಭಾರತಾಂಬೆಯೆ ನಮಗೆ ದೇವಿಯೈ ಜನನಿ!" [೧೦]

ವೈದಿಕ ಪ್ರತಿಮೆಗಳನ್ನು ತೀವ್ರವಾಗಿ ನಿರಾಕರಿಸುವ ಕವಿತೆಗಳಲ್ಲಿ ಇದೂ ಒಂದು ಎಲ್ಲ ದೇವರುಗಳನ್ನು ನೂಕಿ ಅಗತ್ಯವಿರುವ ಒಂದೇ 'ಸೆಕ್ಯುಲರ್' ದೇವತೆಯನ್ನು ರಾಷ್ಟ್ರದ ಮುಂದೆ ಮಂಡಿಸುತ್ತಿದ್ದಾರೆ.ಇದೇ ರೀತಿಯ ಪ್ರಯತ್ನವನ್ನು ಬಿ.ಎಂ.ಶ್ರೀಯವರು 'ಭರತಮಾತೆಯ ನುಡಿ' ಮತ್ತು 'ಕನ್ನಡ ತಾಯ ನೋಟ' ಪದ್ಯಗಳಲ್ಲಿ ಮಾಡಿದ್ದಾರೆ. ಆದರೆ ಅಲ್ಲೆಲ್ಲ ಸಿಟ್ಟಿಗಿಂತ ವಿಷಾದದ ಧ್ವನಿ ಸಂವಾದದ ಧ್ವನಿಯಿದೆ. ಸಂವಾದ ಸಾಧ್ಯವಿರುವ ಪ್ರಜಾಪ್ರಭುತ್ವೀಯ ತತ್ವದಲ್ಲೇ ಆದರೂ, ಕುವೆಂಪು ಅವರು ನಿರಾಕರಿಸುವ ಅಥವಾ ಜನವಿರೋಧಿಯಾದದ್ದನ್ನು ನಿರಚನೆಗೊಳಿಸಿ ಜನರ ವರ್ತಮಾನದ ಅಗತ್ಯಗಳಿಗೆ ದೇವರು ಮತ್ತು ಧರ್ಮವನ್ನು ಹದವಮಾಡುವ ಕೆಲಸ ಮಾಡುತ್ತಿದ್ದಾರೆ. ಪದ್ಯದಲ್ಲಿ ವೈದಿಕ ಅಥವಾ ಬ್ರಾಹ್ಮಣ ಶಾಹಿಯನ್ನು ಶ್ರಮವಿರೋಧಿಯೆಂದು ಮೂದಲಿಸುವುದಲ್ಲದೆ 'ಪಾಪ್ಗಳೆಂದು', 'ಭಕ್ತರಕ್ತವ ಹೀರುವವರೆಂದು' ಕರೆಯುವುದಲ್ಲದೆ ಅಲ್ಲಿರುವ ದೇವತೆಗಳಾದರೂ ಜಡಕಲ್ಲಾಗಿ ಬಿದ್ದವರು, ಹೇಡಿತನದಲ್ಲಿ ಮೈಮರೆತವರು ಇದರಿಂದ ಯಾವ ಪ್ರಯೋಜನವೂ ಇಂದಿಗೆ ಒದಗಲಾರದು: ಆದ್ದರಿಂದ ಇವರನ್ನೆಲ್ಲ ನೂಕಿ ಹೊಸ ದೇವತೆಯನ್ನು ಕಲ್ಪಿಸಬೇಕಾಗಿದೆ ಎನ್ನುತ್ತಾರೆ. ಆಕೆ ಭಾರತಾಂಬೆಯೂ ಕನ್ನಡಾಂಬೆಯೂ ಆಗುತ್ತಾಳೆ.

ಆಲೂರರು 'ಕರ್ನಾಟಕವೆಂಬ ಕಿರಣ ಕೇಂದ್ರದ ಕಾಜಿನ ಮೂಲಕ ಇಡೀ ವಿಶ್ವವೇ ಕಾಣುತ್ತದೆ ಎನ್ನುತ್ತಾರೆ'. ಅದೇ ರೀತಿಯಲ್ಲಿ ಕುವೆಂಪು ಭಾರತಾಂಬೆಯನ್ನು ವಿಶ್ವರೂಪಿಣಿಯಾಗಿ ಮತ್ತು ವಿಶ್ವಮುಖಿಯಾಗಿ ಕಲ್ಪಿಸುತ್ತಿದ್ದಾರೆ.

ಕುವೆಂಪು ೧೯೩೧ರಲ್ಲಿ ರಚಿಸಿದ ಈ ಕವಿತೆ 'ಇಂದೋ ನಾಳೆಯೋ ದಾಸನೀಶನಾಗಲೇ ಬೇಕು'. ಪ್ರಜೆಯೇ ಪ್ರಭುವಾಗಬೇಕು ಎಂಬ ಅತ್ಯಂತ ರೋಮಾಂಚಕ ಸತ್ಯವನ್ನು ಅಲ್ಲವರು ಪ್ರತಿಪಾದಿಸುತ್ತಾರೆ. 'ನಾವೇ ದೇವತೆಗಳು, 'ಭಾರತವೇ ಸ್ವರ್ಗ', ನಮ್ಮ ಸ್ವಾತಂತ್ರ್ಯದೊಳೆ ನಮ್ಮಮ್ಮ ಸುಖಿ' ಎಂದು ಹೇಳುತ್ತಾರೆ.

ಕುವೆಂಪುರವರ ಕವಿತೆಗಳು ಮತ್ತು ಭಾಷಣಗಳು ಒಂದಕ್ಕೊಂದು ಪೂರಕ ತಂತುವಿನಲ್ಲಿಯೇ ಚಲಿಸುತ್ತಿರುತ್ತವೆ. ಅವರ ಅನೇಕ ಕವಿತೆಗಳಲ್ಲಿಯಂತೆ ಇಲ್ಲಿಯೂ ಕರೆಕೊಡುವ ಧಾಟಿಯೇ ಪ್ರಧಾನವಾದುದು. ಶೂದ್ರರಾಗಿದ್ದು ಅಂತಾರಾಷ್ಟ್ರೀಯ ಮಟ್ಟದಲ್ಲಿ ಖ್ಯಾತ ಸಂತರಾದ, ಪುರೋಹಿತಶಾಹಿ ವಿರುದ್ಧ ಹರಿಹಾಯ್ದು, ಪರಂಪರೆಯಲ್ಲಿನ ಉತ್ತಮವಾದದ್ದನ್ನು ಜಗತ್ತಿಗೆ ಪರಿಚಯಿಸಬೇಕೆಂದು ಪ್ರಯತ್ನಿಸಿದ ವಿವೇಕಾನಂದರ ಪ್ರಭಾವವೋ, ಇಲ್ಲಿ ಉಪನಿಷತ್ತುಗಳ ಆತ್ಮವಿಮೋಚನೆ ಕುರಿತು ಮಾತನಾಡುವ 'ಧೀ' ಕಲ್ಪನೆಯೋ ಅಥವಾ ರಾಷ್ಟ್ರೀಯ ಹೋರಾಟಕ್ಕೆ ಜನಸಾಮಾನ್ಯವನ್ನು ಸಿದ್ಧಗೊಳಿಸುವಾಗಿನ ಉತ್ಸಾಹವೋ, ಒಟ್ಟಾರೆ ಕರೆಕೊಡುವ ಧಾಟಿ ಅವರ ಕೃತಿಗಳಲ್ಲಿ ನೇರವಾಗಿ ಕೆಲಸ ಮಾಡುತ್ತವೆ. ಈ ರೀತಿಯ ಪದ್ಯಗಳು ಸುಬ್ರಹ್ಮಣ್ಯ ಭಾರತೀ ಮತ್ತು ರವೀಂದ್ರನಾಥ ಠಾಗೂರರಲ್ಲಿಯೂ ಕಾಣಿಸುತ್ತವೆ.

ಕಟ್ಟುವ ಹಂಬಲ, ಹೊಣೆಗಾರಿಕೆಯನ್ನು ಆರೋಪಿಸಿಕೊಳ್ಳುವುದು, ಸ್ವಯಂನಾಯಕತ್ವವನ್ನು ಆರೋಪಿಸಿಕೊಳ್ಳುವುದು, ಪರಂಪರೆಯ ದೋಷಗಳನ್ನು ತಿದ್ದುವ ಟೀಕಿಸುವ ವಿಧಿ ನಿಷೇಧಗಳ ಕಲ್ಪನೆಯನ್ನು ಮಂಡಿಸುವುದು ಮುಂತಾದವು ಈ ಅರ್ಥದಲ್ಲಿ ಕುವೆಂಪುರಿಗೆ ರಾಷ್ಟ್ರಕವಿಯೆಂಬ ಬಿರುದೂ ಸಹ ಸಾಂಕೇತಿಕವೆಂದು ತೋರುತ್ತದೆ. ಕವಿಯಾಗಿದ್ದುಕೊಂಡು ರಾಷ್ಟ್ರೀಯ ಹೋರಾಟಕ್ಕೆ ಸ್ಪಂದಿಸಿದ ರೀತಿ ಇದು.

ಆದರೆ ಹೀಗೆ ಒಡೆದು ಹಾಕುವ ಭರದಲ್ಲಿ ಅವರು ದಮನಿತ ಸಮುದಾಯಗಳ ಆಚರಣಾ ಲೋಕವನ್ನು ತಿರಸ್ಕರಿಸುತ್ತಿದ್ದಾರಲ್ಲವೇ? ಇವು ತಮ್ಮನ್ನು ಸುಧಾರಕರೆಂದು ಭಾವಿಸಿದ್ದರಿಂದ ಬಂದ ಆಧುನಿಕ ಶಿಕ್ಷಣ ಪಡೆದ ಮೊದಲ ತಲೆಮಾರಿನ ತರುಣರ ತಳಮಳಗಳ ಪ್ರತೀಕವೆ? ಆಚರಣೆಗಳ ಹೆಸರಲ್ಲಿ ಒಡೆದು ಹೋಗಿರುವ ಸಮುದಾಯಗಳನ್ನು ಒಕ್ಕಟ್ಟಿಗೆ ತರಬೇಕೆಂಬ ಉತ್ಸಾಹದ, ನಿಲುವೆ? ಕ್ಷಾತ್ರ ಕೇಂದ್ರೀತವಾದ ರಾಷ್ಟ್ರ ಧರ್ಮದ ಪ್ರತಿಪಾದನೆಯ ಫಲವೆ? ಅಂತೂ ಜನರ ದೈವಗಳನ್ನು ಕವಿ ಕಟುವಾಗಿ ತಿರಸ್ಕರಿಸುತ್ತಾರೆ. ಈ ಕಟು ಪ್ರತಿಕ್ರಿಯೆಯ ಭಾಗವೆಂಬಂತೆ 'ಮಾದೇಶ್ವರನ ಬೆಟ್ಟಕಂತೆ' ಕವಿತೆಗಳು ಹುಟ್ಟುತ್ತವೆ. ಮತವನ್ನು ಮೌಢ್ಯತೆಯ ಪ್ರತೀಕವೆಂಬಂತೆಯೂ, 'ಅಫೀಮು' ಎಂಬಂತೆಯೂ ವ್ಯಾಖ್ಯಾನಿಸಿ ಅವರು ಜನಪದ ಆಚರಣೆಗಳನ್ನು ತಿರಸ್ಕರಿಸುತ್ತಾರೆ. ಈ ಮೌಢ್ಯ ಮತ್ತು ಕ್ಷುದ್ರ ದೇವತೆಗಳ ಆರಾಧನೆಯಿಂದಾಗಿಯೇ ಸಮುದಾಯಗಳು ಹಿಂದುಳಿದಿವೆ ಎಂದು ಅವರು ಗಾಢವಾಗಿ ನಂಬಿರುವಂತೆ ಕಾಣುತ್ತದೆ.

'ಇಂದಿನ ದೇವರು' ಕವಿತೆಯನ್ನು ಮತ್ತೂ ಪರಿಶೀಲಿಸುವುದಾದರೆ, ಧರ್ಮದ ಬೆಂಬಲದಿಂದ ರಾಷ್ಟ್ರವನ್ನು ಕಟ್ಟುವುದು ಸಾಧ್ಯವೇ ಇಲ್ಲ ಎಂಬ ಆತ್ಯಂತಿಕ ನಿಲುವು ಒಂದು ಕಡೆಗಿದೆ. ಆದರೆ, ಎಲ್ಲ ಬಹುತ್ವಗಳನ್ನು

ನಿರಾಕರಿಸಿ 'ಏಕತ್ವ'ವನ್ನು ನಿರ್ಮಿಸುವುದು ಅಂದಿನ ರಾಷ್ಟ್ರವಾದದ ತುರ್ತು ಆಗಿದ್ದಿರಬಹುದು ಅಥವಾ ಹೊಸ ಸಮಾಜದ ಅಗತ್ಯಕ್ಕೆ 'ಬೌದ್ಧಧರ್ಮ'ದಂತಹ ಧರ್ಮಗಳನ್ನು ಪರಿಶೀಲಿಸುವ ಯತ್ನವೂ ಇಲ್ಲಿರಬಹುದು. 'ಕಾನೂರು ಹೆಗ್ಗಡಿತಿ'ಯಲ್ಲಿ ಹೂವಯ್ಯನ ಮೂಲಕ ಮತ ಧರ್ಮಗಳನ್ನು ಕುವೆಂಪು ನೋಡಿರುವುದು ಇದೇ ರೀತಿಯದ್ದೆನ್ನಿಸುತ್ತದೆ.

"ಯಾವ ಕಾಲದ ಶಾಸ್ತ್ರ ಏನು ಹೇಳಿದರೇನು?
ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು?
...........................................
ಹಿಂದಿನಾ ಋಷಿಗಳೂ ಮಾನವರೆ ನಮ್ಮಂತೆ,
ಅವರ ಶಾಸ್ತ್ರವು ಅವರ ಕಾಲಕ್ಕೆ ಮಾತ್ರ;
ಕಾಲಕ್ಕೆ ತಕ್ಕಂತೆ, ದೇಶಕ್ಕೆ ತಕ್ಕಂತೆ
ನಮ್ಮ ಹೃದಯವೆ ನಮಗೆ ಶ್ರೀಧರ್ಮಸೂತ್ರ!"[೧೧]

ಇಲ್ಲೆಲ್ಲ ಕವಿ ಮನುಷ್ಯ ಧರ್ಮದ ಕುರಿತು ಮಾತನಾಡುತ್ತಾರೆ. ವ್ಯಕ್ತಿಯು ನಿರಂತರವಾಗಿ ಧರ್ಮದ ಹುಡುಕಾಟದಲ್ಲಿ ತೊಡಗಬೇಕು. ಸ್ಥಗಿತಗೊಳ್ಳದೇ ಚಲನಶೀಲತೆಯನ್ನು ಕಾಪಾಡಿಕೊಳ್ಳಬೇಕೆಂಬ ಉದ್ದೇಶದಿಂದ 'ಅನಿಕೇತನ' (ವಿಶ್ವಮಾನವ ಗೀತೆ) ಕವಿತೆಗಳು ಹುಟ್ಟುತ್ತವೆ. ಚೇತನ ಸ್ವರೂಪಿಯಾದ, ಧೀ ಸ್ವರೂಪಿಯಾದ ಆತ್ಮ ಅಥವಾ ವ್ಯಕ್ತಿತ್ವ 'ನೂರು ಮತದ ಹೊಟ್ಟ ತೂರಿ', 'ಎಲ್ಲ ತತ್ವದೆಲ್ಲೆ ಮೀರಿ' ನಿರ್ದಿಗಂತವಾಗಿ ಏರುವ ಹಂಬಲದ ಮೂಲಕ ಮನುಷ್ಯ ವಿಶ್ವಮಾನವನಾಗಬೇಕೆಂಬ ಅಭೀಪ್ಸೆಯಲ್ಲಿ ಇವು ಮುಗಿಯುತ್ತವೆ. ವಿಶ್ವಧರ್ಮವು ರಾಷ್ಟ್ರಧರ್ಮಕ್ಕಿಂತ ದೊಡ್ಡದು ಅದು ಪ್ರತಿ ವ್ಯಕ್ತಿಯಿಂದ ಸಾಧಿತವಾಗಬೇಕು ಎಂಬುದು ಇಲ್ಲಿನ ಉದ್ದೇಶವಾಗಿರುವಂತಿದೆ.

ಕುತೂಹಲದ ವಿಚಾರವೆಂದರೆ ಬಸವಣ್ಣ ಕೂಡ ಸ್ಥಾವರ ಧರ್ಮದ ವಿರುದ್ಧ ನಿಂತಿದ್ದ, ದೇಹವನ್ನು ದೇವಾಲಯವೆಂದು ಪ್ರತಿಪಾದಿಸಿದ್ದವನು. ಆದರೆ ಕುವೆಂಪು ಉದ್ದಕ್ಕೂ ಕೂಡ ಮತವನ್ನು 'ಪಾಸಿಟಿವ್' ಆಗಿ ನೋಡುವುದಿಲ್ಲ. ಅದೊಂದು 'ಕೇಡಿನ ಮೂಟೆ' ಎಂಬಂತೆ ಗ್ರಹಿಸುತ್ತಾರೆ.

ಈ ರೀತಿಯ ಗ್ರಹಿಕೆಗಳನ್ನು ೨೧ನೇ ಶತಮಾನದ ಆದಿಭಾಗದಲ್ಲಿ ನಿಂತು ನೋಡುವಾಗ ರೋಚಕವಾಗಿ ಕಾಣುತ್ತವೆ. ಆದರೆ ಕುವೆಂಪು ಅವರು ನಾರಾಯಣ ಗುರುವಿನಂತೆ ಅಂಬೇಡ್ಕರರಂತೆ ಅಥವಾ ಬಸವಣ್ಣನಂತೆ ಸಮುದಾಯಗಳ ನಾಯಕರಾಗುವುದಕ್ಕೆ ಸಾಧ್ಯವಾಗಲಿಲ್ಲ. ಆದರೆ ಜನಪದರ ಚಳುವಳಿಗಳಿಗೆ ಸ್ಪೂರ್ತಿಯಾಗಿ ನಿಂತರೆನ್ನಿಸುತ್ತದೆ. ಬಹುಶಃ ಇದಕ್ಕೆ ಕಾರಣ ಸಮುದಾಯಗಳ ಸಂಸ್ಕೃತಿಗಳನ್ನು ಅರ್ಥೈಸಿಕೊಳ್ಳುವಲ್ಲಿ ಆದ ಕೊರತೆಯಿಂದಲೂ ಇರಬಹುದು. ಕೆಳಸ್ತರದ ಸಮುದಾಯಗಳ ಚೈತನ್ಯವನ್ನು ಅರ್ಥಮಾಡಿಕೊಳ್ಳದೇನೆ ನಿರಾಕರಿಸುವಷ್ಟರ ಮಟ್ಟಿಗೆ ಅವರಲ್ಲಿ ಅಪ್ರಜಾಪ್ರಭುತ್ವೀಯತೆ ಕಾಣುತ್ತದೆ.

ಕರ್ನಾಟಕದಲ್ಲಿ ಜೀವಂತವಾಗಿರುವ ಜಾತಿ ವ್ಯವಸ್ಥೆಯನ್ನು ವಿರೋಧಿಸಿದ ಸಂಕರಶೀಲತೆ ಪ್ರಧಾನವಾದ, ಅಧ್ಯಾತ್ಮಿಕವಾದ ಸಂತರು, ಅವಧೂತರು, ಆರೂಢರು, ಸೂಫಿಗಳ ಆರಾಧನೆ ಅವರ ಹೆಸರಿನಲ್ಲಿ ನಡೆಯುತ್ತಿರುವ

ಅನೇಕ ಜಾತ್ರೆಗಳಿವೆ. ಇಲ್ಲೆಲ್ಲ ಹೆಣ್ಣಿಗೆ ಆಧ್ಯಾತ್ಮಿಕ ಹಕ್ಕು ನೀಡುವ, ಅಸಮಾನತೆಯನ್ನು ವಿರೋಧಿಸುವ ಕೆಲಸ ನಡೆಯುತ್ತಿದೆ. ಹೆಚ್ಚು ಸುತ್ತಾಡದ ಜನ ಸಮುದಾಯಗಳೊಂದಿಗೆ ಹೆಚ್ಚು ಬೆರೆಯದ, ವಿದ್ವತ್ ಲೋಕದಲ್ಲಿ, ವೈಚಾರಿಕತೆಯಲ್ಲಿ ಮುಳುಗಿದ ಕುವೆಂಪುರಿಗೆ ಇವು ಮುಖ್ಯವೆಂದು ಅನ್ನಿಸಿದಂತೆ ಕಾಣುತ್ತಿಲ್ಲ.

ಕುವೆಂಪು ವರ್ಣಾಶ್ರಮ ಧರ್ಮವನ್ನು ವಿರೋಧಿಸಿ, ಇದ್ದದ್ದರಲ್ಲಿ ವಿಶಾಲ ನೆಲೆಗಟ್ಟಿನ ಧರ್ಮವಾದ ಬೌದ್ಧಧರ್ಮದ ಪ್ರತಿಪಾದನೆ ಮಾಡುತ್ತಾರೆ. ಜೊತೆಗೆ ಅವರ ಪ್ರತಿಪಾದನೆಯ ರಾಷ್ಟ್ರದಲ್ಲಿ ಆಮಿಷವೊಡ್ಡುವ, ಮತಾಂತರದ ಮೂಲಕ ಅಸ್ತಿತ್ವಗೊಂಡ ಧರ್ಮಗಳಿಗೆ ಅವಕಾಶವಿಲ್ಲ. ಅವುಗಳಲ್ಲಿ ಇಸ್ಲಾಂ, ಕ್ರಿಶ್ಚಿಯನ್ ಧರ್ಮಗಳೂ ಸೇರುತ್ತವೆ. ವರ್ಣಾಶ್ರಮ ವ್ಯವಸ್ಥೆ ಮೇಲೆ ನಿಂತ, ಹಿಂದೂ ಧರ್ಮವೂ ಬೇಡವೆಂದು ಅವರು ನಿರಾಕರಿಸುತ್ತಾರೆ. ಕುವೆಂಪು ಕಾದಂಬರಿಗಳ ನಾಯಕರಾದ ಹೂವಯ್ಯ, ಮುಕುಂದಯ್ಯರ ಪಾತ್ರಗಳೂ ಸಹ ವೆಂಕಪ್ಪಯ್ಯ ಜೋಯಿಸರನ್ನೂ ಕ್ರೈಸ್ತಪಾದ್ರಿಗಳನ್ನು, ಜನರ ದೈವಗಳನ್ನು ನಿರಾಕರಿಸುತ್ತವೆ. ಆದರೆ ಸುಧಾರಣೆ ಕಡೆಗೆ ಮುಖಮಾಡುತ್ತವೆ.

ಒಟ್ಟಾರೆ ಕುವೆಂಪುರವರು ಅಸ್ತಿತ್ವದಲ್ಲಿರುವ ಧರ್ಮಗಳಿಗಿಂತ ಭಿನ್ನವಾದ ಧರ್ಮವನ್ನು ಪ್ರತಿಪಾದಿಸುತ್ತಾರೆ. ಪುರೋಹಿತರಿಲ್ಲದ ವಿವಾಹ ಪದ್ಧತಿಯನ್ನು ಪ್ರತಿಪಾದಿಸುತ್ತಾರೆ. ಅಂತರ್ಯದಲ್ಲಿ ಅವರು ವಸಾಹತುಶಾಹಿ ವಿರೋಧಿ ಆಗಿರಲಿಲ್ಲ. ಗಾಂಧಿ ಚಳುವಳಿ ಮತ್ತು ಕಾಂಗ್ರೆಸ್ ಚಳುವಳಿಯನ್ನೂ ಸೇರಲಿಲ್ಲ. ಕುವೆಂಪುರಿಗೂ ಗಾಂಧೀಜಿಯವರಂತೆ, ದೇಶವನ್ನು ರಾಜಕೀಯ ದಾಸ್ಯದಿಂದ ಬಿಡುಗಡೆ ಮಾಡುವುದು ಒಂದು 'ಇಶ್ಯೂ' ಇದ್ದಂತೆ ಕಾಣುವುದಿಲ್ಲ. ಇಡೀ ದೇಶವೇ ಅಸಮಾನತೆಯಿಂದ ಬಸವಳಿದು ಹೋಗಿರುವಾಗ ಸಮಾನತೆ ನೆಲೆಯಲ್ಲಿ ಕಟ್ಟುವುದು ಮುಖ್ಯವಾಗುತ್ತದೆ. ಈ ದೃಷ್ಟಿಯಿಂದ ಅಂಬೇಡ್ಕರ್‌ರಿಗೆ ಹತ್ತಿರವಾಗುತ್ತಾರೆ. ಕುವೆಂಪುರಿಗೆ ಸರ್ವಸಮಾನತೆಯನ್ನು ಸಮಾನ ದುಡಿಮೆ ಮತ್ತು ಪ್ರತಿಫಲಗಳನ್ನು ಕುರಿತು ಮಾತನಾಡುವ ಹೊಸ ಬಾಳಿನ ಗೀತೆ ಮುಖ್ಯವಾಗುತ್ತದೆ. ಇದೂ ಕೂಡ ರಾಷ್ಟ್ರೀಯವಾದವೇ. ಇಲ್ಲಿ ಕರ್ನಾಟಕದ ನಿರ್ಮಾಣ ಮತ್ತು ಭಾರತದ ನಿರ್ಮಾಣ ಬೇರೆ ಬೇರೆ ಅಲ್ಲ.

**೫.೬ ಧರ್ಮ ಕುರಿತಂತೆ ಚಿದಾನಂದ ಮೂರ್ತಿಯವರ ಚಿಂತನೆಗಳು**

ಕನ್ನಡದ ಹೆಸರಾಂತ ಸಂಶೋಧಕರೂ ಮತ್ತು ಹೋರಾಟಗಾರರೂ ಆದ ಚಿದಾನಂದ ಮೂರ್ತಿಯವರನ್ನು 'ರಾಷ್ಟ್ರೀಯತೆ'ಯ ನೆಲೆಗಟ್ಟಿನ ಮೇಲೆ ಇಟ್ಟು ಪರಿಶೀಲಿಸಬೇಕಾದ ಆವಶ್ಯಕತೆ ಇದೆ. ಪತ್ರಿಕೆ ಹಾಗೂ ಧರಣಿ, ಪ್ರತಿಭಟನೆಗಳ ಮೂಲಕ ಅವರು ವ್ಯಕ್ತಪಡಿಸುತ್ತಿರುವ ಅಭಿಪ್ರಾಯಗಳನ್ನು ವಿಶ್ಲೇಷಿಸುವುದು ಅಗತ್ಯವಾದರೂ ಅಧ್ಯಯನದಲ್ಲಿ ಎಲ್ಲವನ್ನೂ ಒಳಗೊಳ್ಳಲು ಅಸಾಧ್ಯವಾದ ಕಾರಣಕ್ಕೆ ಅವರ ಎರಡು ಕೃತಿಗಳನ್ನು ಇಟ್ಟುಕೊಂಡು ಚರ್ಚಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಆ ಕೃತಿಗಳೆಂದರೆ -

೧. ೧೯೮೭ರಲ್ಲಿ ಅನೇಕ ಮುದ್ರಣಗಳನ್ನು ಕಂಡು ಅಸಂಖ್ಯಾತ ಪ್ರತಿಗಳ ಮಾರಾಟವಾಗಿರುವ ಚಿಕ್ಕ ಪುಸ್ತಕ 'ಕನ್ನಡ ಸಂಸ್ಕೃತಿ ನಮ್ಮ ಹೆಮ್ಮೆ'.

೨. 'ವೀರಶೈವ ಧರ್ಮ, ಭಾರತೀಯ ಸಂಸ್ಕೃತಿ (ಹಿಂದೂ-ಲಿಂಗಾಯತ)' ಸಮಗ್ರ ಸಂಪುಟ ರೂಪದಲ್ಲಿ ೨೦೦೪ರಲ್ಲಿ ಮುದ್ರಣಗೊಂಡ ಕೃತಿ.

ಚಿದಾನಂದ ಮೂರ್ತಿಯವರು ಲಿಂಗಾಯತ ಸಮುದಾಯದಲ್ಲಿ 'ಪೌರೋಹಿತ್ಯ' ಕೆಲಸಗಳನ್ನು ಮಾಡುತ್ತಿದ್ದ ಅಲ್ಪಸಂಖ್ಯಾತ ಪಂಗಡಕ್ಕೆ ಸೇರಿದವರು. ಕನ್ನಡದ ಹಿರಿಯ ಚಿಂತಕರಲ್ಲಿ ಒಬ್ಬರಾದ ಚಿದಾನಂದ ಮೂರ್ತಿಯವರ ವಿಚಾರಗಳನ್ನು ವಿಶೇಷ ಎಚ್ಚರದಿಂದ ಗಮನಿಸಬೇಕಾಗಿದೆ. ಚಿದಾನಂದ ಮೂರ್ತಿಯವರ ೮೦ರ ದಶಕದ ನಂತರದ ನಿಲುವುಗಳನ್ನು ಇಲ್ಲಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಇಲ್ಲಿಯೂ ಎರಡು ಘಟ್ಟಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲಘಟ್ಟವನ್ನು ೯೦ರ ಮೊದಲಿನದು ಮತ್ತು ೯೦ರ ನಂತರದ್ದನ್ನು ಎರಡನೆಯ ಘಟ್ಟವೆಂದು ವಿಭಾಗಿಸಿಕೊಳ್ಳಲಾಗಿದೆ.

೮೦ರ ದಶಕದ ಕರ್ನಾಟಕದ ಅದರಲ್ಲೂ ವಿಶೇಷವಾಗಿ ಬೆಂಗಳೂರಿನಲ್ಲಿ ನಡೆದ ಬದಲಾವಣೆಗಳು ಚಿದಾನಂದಮೂರ್ತಿಯವರನ್ನು ಆಳವಾಗಿ ಪ್ರಭಾವಿಸಿರುವಂತಿದೆ. ವಲಸೆ ಸಮಸ್ಯೆ, ನಿರುದ್ಯೋಗ, ಜಾಗತೀಕರಣದ ಪೂರ್ವ ತಯಾರಿಯ ಫಲವಾಗಿ ಹರಿದು ಬಂದ ಬಂಡವಾಳ, ಕೇಂದ್ರದಲ್ಲಿ ಬಲಪಂಥೀಯ ಪಕ್ಷವು ಅಧಿಕಾರಕ್ಕೆ ಏರಲು ಪಡುತ್ತಿದ್ದ ಸಾಹಸ, ಇತ್ಯಾದಿಗಳೆಲ್ಲವೂ ಅವರ ಈ ಘಟ್ಟದ ಚಿಂತನೆಗಳ ಮೇಲೆ ಪ್ರಭಾವಿಸಿರುವಂತಿದೆ. ಇದರ ಫಲವಾಗಿಯೇ 'ಮಿಲಿಟೆಂಟ್' ಸ್ವರೂಪದ 'ಹಿಂದುತ್ವ' ರಾಷ್ಟ್ರ ಮಾದರಿಯನ್ನು ಮುಂದಿಡಲು ಪ್ರಾರಂಭಿಸುತ್ತಾರೆ. ಈ ಹಂತದಲ್ಲಿ ಇಸ್ಲಾಂ, ಕ್ರೈಸ್ತ, ಬೌದ್ಧ ಧರ್ಮಗಳ ಕುರಿತು ನಿರಾಕರಣೆಯ ಭಾವನೆಗಳನ್ನು ವ್ಯಕ್ತಪಡಿಸುತ್ತಾರೆ. ಭಾರತದ ಎಲ್ಲ ಕೇಡುಗಳಿಗೆ ಈ 'ಅನ್ಯಧರ್ಮ' 'ಅನ್ಯವಿಚಾರಗಳು' ಕಾರಣ ಎಂದು ಬಲವಾಗಿ ಪ್ರತಿಪಾದಿಸುತ್ತಿದ್ದಾರೆ.

೧. ''ಸಿವೆಲನು ವಿಜಯನಗರ ಕಾಲದ ಹಲವು ಮುಸ್ಲಿಮ್ ದಾಖಲುದಾರರನ್ನು ಉಲ್ಲೇಖಿಸಿದ್ದಾನೆ. ಮುಸ್ಲಿಮ್ ದೊರೆಗಳು ಸಾವಿರ, ಹತ್ತು ಸಾವಿರ, ಲಕ್ಷ ಹಿಂದೂಗಳನ್ನು ಯುದ್ಧ ರಂಗದಲ್ಲಿ, ಯುದ್ಧದ ಬಳಿಕ ಹಳ್ಳಿಗಳಲ್ಲಿ ನುಗ್ಗಿ ಕಗ್ಗೊಲೆ ಮಾಡಿದುದನ್ನು ಅತ್ಯುತ್ಸಾಹದಿಂದ ಆ ದಾಖಲುದಾರರು ಬಣ್ಣಿಸುತ್ತಾರೆ. ಅದರಲ್ಲಿ ಸ್ವಲ್ಪ ಉತ್ಪ್ರೇಕ್ಷೆಯಿರಬಹುದಾದರೂ ಆ ಉತ್ಸಾಹದ ಹಿಂದೆ ಇರುವ ಮನೋಧರ್ಮ ಸ್ಪಷ್ಟ ಇಸ್ಲಾಂ ಪ್ರಚಾರಕ್ಕಾಗಿ 'ಕಾಫಿರ'ರನ್ನು, ಅವರು ಎಷ್ಟೇ ನಿಸ್ಸಹಾಯಕರಿರಲಿ, ಹೆಂಗಸರು ಗರ್ಭಿಣಿಯರು ಮಕ್ಕಳು ವೃದ್ಧರು ರೋಗಿಗಳು ಎನ್ನದೆ ಕೊಲ್ಲುವುದು, ಅವರ ಆಸ್ತಿ ಲೂಟಿ ಮಾಡುವುದು ಒಂದು ಪವಿತ್ರ ಕರ್ತವ್ಯವೆಂಬ ಮನೋಭಾವ ಅಲ್ಲಿದೆ.''[೧೨]

೨. ಹಿಂದೂ ದೇವಾಲಯಗಳ ನಾಶವು ಮುಸ್ಲಿಮರಿಗೆ ಒಂದು 'ಪವಿತ್ರ ಕರ್ತವ್ಯ'ವಾಗಿತ್ತು. ಇದು ಆ ಧರ್ಮದ ಪವಿತ್ರ ಗ್ರಂಥದಲ್ಲೇ ಉಕ್ತವಾಗಿದೆ. ''ಲಾ ಇಲಾಹ ಇಲ್ಲಲ್ಲಾಹ ಮಹಮ್ಮದೂನ್ ರಸೂಲ್ ಇಲ್ಲ'' (ಅಲ್ಲಾ ಅಲ್ಲದೆ ಬೇರೊಂದು ದೈವ ಇಲ್ಲ ಮಹಮ್ಮದ್‌ನೇ ಪ್ರವಾದಿ) ''ಕಲಿಮ''ವನ್ನು ಪಠಿಸುವವರು ''ಮುಮಿನ''ರು (ನಂಬುವವರು), ಉಳಿದವರು ''ಕಾಫಿರ''ರು (ನಂಬದವರು) ''ಮುಮಿನ''ರು ಇರುವ ನಾಡೇ ದಾರ್ ಅಲ್ ಸಲಾಮ್ (ಶಾಂತಿಧಾಮ), ಕಾಫಿರರು ಇರುವ ನಾಡು ದಾರ್ ಅಲ್ ಹಬ್ (ಯುದ್ಧಧಾಮ) ಈ ನಾಡಿನಲ್ಲಿ ಮುಸ್ಲಿಮರು ಖಡ್ಗಧಾರಿಗಳಾಗಬೇಕು. ''ಜಿಹಾದ್'' ಎಂಬುದು ಧರ್ಮಯುದ್ಧ; ಅದರಲ್ಲಿ ಧರ್ಮ ರಕ್ಷಣೆಗಾಗಿ ಮತ್ತು ಇಸ್ಲಾಂ ಮತಾಂತರಕ್ಕಾಗಿ ಯುದ್ಧ, ಕಗ್ಗೊಲೆ, ಸಾಮೂಹಿಕ ಮತಾಂತರ, ಸೋತವರನ್ನು ದಾಸರನ್ನಾಗಿ ಮಾಡುವುದು. ಅವರ ಮತ್ತು ಸತ್ತವರ ಹೆಂಗಸರು ಮಕ್ಕಳು ಸೇರಿ ಅವರ ಎಲ್ಲ

ಆಸ್ತಿ ವಶಪಡಿಸಿಕೊಳ್ಳುವುದು ಸೇರುತ್ತದೆ. ''ಜಿಹಾದ್''ನಲ್ಲಿ ಮಡಿದ ಮುಸ್ಲಿಮನು ಧರ್ಮಕ್ಕಾಗಿ ಪ್ರಾಣತ್ಯಾಗ ಮಾಡಿದ ಹುತಾತ್ಮನೆಂದು ಪರಿಗಣಿತನಾಗುತ್ತಾನೆ.''[೧೩]

೩. ''ಭಾರತದ ಸ್ಥಳೀಯರಲ್ಲಿ ಮತಾಂತರಗಳು, ದೇವಾಲಯ ಧ್ವಂಸಗಳು ನಡೆದರೂ ಆ ಕಾರ್ಯಗಳು ಧರ್ಮದ ಬೋಧನೆಯ ಭಾಗವಾಗಿರಲಿಲ್ಲ. ವೀರಶೈವದಲ್ಲೇ ಹಿಂದೆ ಮತಾಂತರಗಳು ನಡೆದರೂ ಎಲ್ಲೂ ಖಡ್ಗದ ಬಳಕೆಯಾಗಲಿಲ್ಲ. ಧರ್ಮದ ಹೆಸರಲ್ಲಿ ರಾಜರಿಗೆ ಯುದ್ಧಗಳು ನಡೆದಿರುವುದಂತೂ ಇಲ್ಲವೇ ಇಲ್ಲ. ಶೈವರಿಗೆ ಜೈನರಿಗೆ ವೈಷ್ಣವರಿಗೆ ಭಿನ್ನಾಭಿಪ್ರಾಯಗಳು ಬಂದು ಕೆಲವು ಕೊಲೆಗಳಾಗಿರಬಹುದು; ದೇವಾಲಯ ಧ್ವಂಸ ಮಾಡಿರಬಹುದು; ಪ್ರಮಾಣದಲ್ಲಿ ಅಂಥವು ಕಡಿಮೆ; ಆಗಲೇ ಹೇಳಿದಂತೆ ಅಂತಹ ಧ್ವಂಸ ಕಾರ್ಯವು ಧರ್ಮದ ತತ್ವವಾಗಿರಲಿಲ್ಲ.''[೧೪]

ಮೇಲಿನ ಮೂರೂ ಉಧೃತ ಭಾಗಗಳು ಚಿಮೂ ಅವರು ಬೇರೆ ಬೇರೆ ಧರ್ಮಗಳನ್ನು ಹೇಗೆ ಗ್ರಹಿಸುತ್ತಿದ್ದಾರೆಂಬುದರ ಕೆಲವು ಉದಾಹರಣೆಗಳು. ಡಿ.ಆರ್.ನಾಗರಾಜ ಅವರು ಚಿದಾನಂದ ಮೂರ್ತಿಯವರ ರಾಷ್ಟ್ರ ಕಲ್ಪನೆಯನ್ನು ''ಆತಂಕ ಕೇಂದ್ರಿತ ''ವೆಂದಿರುವುದು ಈ ಕಾರಣಕ್ಕೇನೆ. ಅನ್ಯದ ಕುರಿತು ಸದಾ ಆತಂಕಿತ, ವ್ಯಗ್ರಗೊಂಡ ಸ್ಥಿತಿಯಲ್ಲಿಯೇ ತನ್ನ ರಾಷ್ಟ್ರೀಯತೆಯ ಜನಮಾನಸವನ್ನು ತನಗೆ ಬೇಕಾದ ಹಾಗೆ ಹದಗೊಳಿಸಲು ಚಿಮೂ ಪ್ರಯತ್ನಿಸುತ್ತಾರೆ. ಅವರು ಪೂರ್ವಾಗ್ರಹದ ಮೂಲಕ ಹುಡುಕಾಟಕ್ಕೆ ಹೊರಡುವುದರಿಂದ ತನಗೆ ಬೇಕಾದ ಘಟನೆಗಳನ್ನು ಮತ್ತು ಬರಹಗಾರರನ್ನು ಮಾತ್ರ ಆರಿಸಿ ತಾನು ಆಶಿಸುತ್ತಿರುವ ರಾಷ್ಟ್ರದಲ್ಲಿ ಅವಕ್ಕೊಂದು ಸ್ಥಾನ ನಿರ್ಣಯ ಮಾಡುತ್ತಾರೆ. 'ಹಿಂದುತ್ವ' ರಾಷ್ಟ್ರದ ಪ್ರಬಲ ಪ್ರತಿಪಾದಕರಾದ ಸಾವರ್‌ಕರ ಮತ್ತು ಗೋಲ್ವಾಲ್ಕರರ ಪ್ರಭಾವ ಕುವೆಂಪುರ ಶಿಷ್ಯ ಮತ್ತು ಕನ್ನಡ ಸಾಹಿತ್ಯದ ವಿದ್ಯಾರ್ಥಿಗಳ ಮೇಲೆ ಒದಗುತ್ತಿರುವುದಕ್ಕೆ ಕಾರಣಗಳೇನು? ತೊಂಭತ್ತರ ದಶಕದಲ್ಲಿ ದೇಶದಲ್ಲಿ ಬದಲಾವಣೆಗಳು ಚಿದಾನಂದ ಮೂರ್ತಿಯವರಲ್ಲಿದ್ದ 'ಹೊರಗಿಡುವ' ತತ್ವಕ್ಕೆ ಬುನಾದಿಯನ್ನೂ ಮತ್ತು ಅವಕಾಶವಾದಿತನವನ್ನೂ ಒದಗಿಸಿದವೆ? ವೀರಶೈವರಲ್ಲಿ ಜಂಗಮ ಉಪ ಜಾತಿಗೆ ಸೇರಿದ ಚಿದಾನಂದ ಮೂರ್ತಿಯವರು ತಮ್ಮ ಮೂಲ ಪುರೋಹಿತಶಾಹಿ ಗುಣದಿಂದ ಬ್ರಾಹ್ಮಣವಾದಿ 'ಹಿಂದುತ್ವ' ಪರಿಕಲ್ಪನೆಗೆ ಹತ್ತಿರಾದರೆ? ವೀರಶೈವ ಪಂಗಡಗಳು ತಾವೇ ಮಠಗಳನ್ನು ನಿರ್ಮಿಸಿ ಜಂಗಮರ ಆಧಿಪತ್ಯವನ್ನು ಕಡೆಗಣಿಸಿದ್ದರಿಂದ ಉಂಟಾದ ಅಭದ್ರತೆಯ ಮತ್ತು ಬದುಕಿನ ಕುರಿತಾದ ಅವರ ಆತಂಕದ ಕಾರಣದಿಂದ ಹಿಂದುತ್ವಕ್ಕೆ ಹತ್ತಿರಾದರೆ? ಎಂಬ ಪ್ರಶ್ನೆ ಸುಳಿಯುತ್ತದೆ. ಈ ಆತಂಕಗಳನ್ನು ಒಂದು ಕಡೆ ಅವರೇ ದಾಖಲಿಸಿದ್ದಾರೆ. ಅವರ ಇಷ್ಟದ ಕ್ಷೇತ್ರವಾದ ಶಾಸನಗಳ ಅಧ್ಯಯನವೂ ಅವರ ಚಿಂತನೆಗಳನ್ನು ರೂಪಿಸಿದೆ. ಶಾಸನಗಳಲ್ಲಿ ಮುಖ್ಯವಾಗಿ ರಾಜರ ಯಶೋಗಾಥೆಗಳು, ಸೈನಿಕರಿಗೆ, ಪಂಡಿತರಿಗೆ, ಕವಿಗಳಿಗೆ, ಬ್ರಾಹ್ಮಣರಿಗೆ, ವೇಶ್ಯೆಯರಿಗೆ, ಸತಿಹೋದವರಿಗೆ ಬಿಟ್ಟುಕೊಟ್ಟ ಉಂಬಳಿಗಳು, ದಾನ ದತ್ತಿಗಳು, ಇತ್ಯಾದಿಗಳಿರುತ್ತವೆ. ಇಲ್ಲಿ ಕೂಡ ಸಹಜವಾಗಿಯೇ ಜನತೆ ತಟಸ್ಥವಾಗಿ ಅಥವಾ ಅದರ ಪಾತ್ರವೇ ಇಲ್ಲದಾಗಿ ಪ್ರಭುತ್ವದ ದಾನ-ಧರ್ಮಗಳು, ಶೌರ್ಯ-ಸಾಹಸಗಳು ಮುಂದಾಗಿ, ಜನರ ಕಷ್ಟ ಸುಖಗಳು, ಅವರ ಸಾಮರಸ್ಯದ, ಸಹನೆಯ, ಸಂಕರಶೀಲ ಬದುಕು ಎಲ್ಲೂ ದಾಖಲಾಗುವುದೇ ಇಲ್ಲ.

ಚಿದಾನಂದ ಮೂರ್ತಿಯವರು ಪ್ರಭುತ್ವದ ಕುರಿತಾಗಿ ಯಾಕೆ ಮೃದು ಧೋರಣೆ ತಳೆಯುತ್ತಾರೆ ಮತ್ತು ಹಿಂದುತ್ವದ ಕುರಿತಾಗಿ ರೋಮಾಂಚಿತವಾಗುತ್ತಾರೆ ಅಥವಾ ಆತಂಕಿತರಾಗುತ್ತಾರೆ ಎಂಬುದರ ಬೀಜಗಳು ಇಲ್ಲೇ ಹುದುಗಿವೆ ಎನ್ನಿಸುತ್ತದೆ.

ಮೇಲಿನ ಉಧೃತ ಭಾಗಗಳಲ್ಲಿ ಸಹ ವಸಾಹತುವಾದಿ ಚಿಂತಕನ ದಾಖಲೆಗಳನ್ನು ನಿಜವೆಂದು ಭಾವಿಸಿ ಮಂಡಿಸುತ್ತಾರೆ. ಪ್ರಭುತ್ವಕ್ಕೆ ಜನತೆಗೂ ವ್ಯತ್ಯಾಸವಿಲ್ಲದಂತೆ ಧರ್ಮಗಳನ್ನು ಗ್ರಹಿಸುತ್ತಾರೆ. ಧರ್ಮ ಮತ್ತು ಚರಿತ್ರೆ ಇತ್ಯಾದಿಗಳನ್ನೂ ಸಾಂಸ್ಕೃತಿಕವಾಗಿ ಗ್ರಹಿಸಿ ಸಮಾಜದಲ್ಲಿನ ವರ್ಗ ಸ್ವಭಾವವನ್ನು ಮರೆಮಾಚಿಸಲು ಪ್ರಯತ್ನ ಪಟ್ಟಾಗ ಹುಟ್ಟುವ ಎಲ್ಲ ಕೊರತೆಗಳು ಈ ಸಿದ್ಧಾಂತದಲ್ಲಿ ಕಾಣಿಸಿಕೊಳ್ಳುತ್ತವೆ. ತನ್ನ ಧರ್ಮ ಮಹಾ ಉದಾರಿಯೆಂತಲೂ ಅನ್ಯವಾದ್ದೆಲ್ಲ ಆಕ್ರಮಣಕಾರಿ ಮತ್ತು ಕೊಲೆಗಡುಕ ಸ್ವಭಾವದ್ದೆಂದು ಯಾವ ಸಂಕೋಚವೂ ಇಲ್ಲದೆ ಮಂಡಿಸುತ್ತಾರಲ್ಲಾ, ಬಹುಶಃ ಈ ಕಾರಣಕ್ಕೆ ಇರಬಹುದು ಗುಜರಾತಿನ ಗೋಧ್ರಾ ದುರಂತಗಳನ್ನು ಚಿದಾನಂದಮೂರ್ತಿ ಸಮರ್ಥಿಸುತ್ತಾರೆ. ಅಮಾಯಕ ತಮಿಳರನ್ನು ಕೊಂದರೆ ಅದು ನ್ಯಾಯೋಚಿತವಾದ ಕೊಲೆ ಎಂದು ತೀರ್ಪು ನೀಡುತ್ತಾರೆ.

ಎಲ್ಲಾ ಸಾಮ್ರಾಜ್ಯಗಳ ವಿಸ್ತಾರತೆಯ ಹಿಂದಿನ ಉದ್ದೇಶ ಆರ್ಥಿಕ ಮತ್ತು ರಾಜಕೀಯ ಮಹತ್ವಾಕಾಂಕ್ಷೆಗಳಿಂದ ನಡೆಯುತ್ತವೆ ಎಂಬ ಪುರಾವೆಗಳಿದ್ದಾಗಲೂ ಚಿದಾನಂದ ಮೂರ್ತಿಯವರು ಮಾತ್ರ ಮುಸ್ಲಿಮ್ ಪ್ರಭುತ್ವ ಧಾರ್ಮಿಕ ಮಹತ್ವಾಕಾಂಕ್ಷೆ ಮುಂದಿರಿಸಿಕೊಂಡು ದಿಗ್ವಿಜಯಕ್ಕೆ ಹೊರಟಿತೆಂದು ಹೇಳುವ ಮೂಲಕ ಅದನ್ನು ಉಳಿದವುಗಿಂತ ಹೇಗೆ ಭಿನ್ನ ಎಂದು ವ್ಯಾಖ್ಯಾನಿಸಲು ಪ್ರಯತ್ನಿಸುತ್ತಾರೆ. ಅಲ್ಲದೆ ಆಳುವವರ ಧರ್ಮವೇ 'ರಾಷ್ಟ್ರಧರ್ಮ' ಎಂಬ ತಿಳಿವಳಿಕೆಯಿಂದ ಹೊರಡುತ್ತಾರೆ. ಮತ್ತು ಅದನ್ನು ಸಮರ್ಥಿಸುವ ಉದ್ವೇಗದಲ್ಲಿ ಆ ಧರ್ಮದಲ್ಲಿನ ಜನವಿರೋಧಿ ಸ್ವಭಾವಗಳನ್ನು ಸಹ ಸಮರ್ಥಿಸಿಕೊಳ್ಳಲು ಮುಂದಾಗುತ್ತಾರೆ. ಇಲ್ಲಿ ಅವರದೇ ಮಾತುಗಳನ್ನು ಉಲ್ಲೇಖಿಸಬಹುದು :

"ಒಂದು ಮತಧರ್ಮ (ಅದನ್ನು Religion ಎಂದು ಕರೆಯಿರಿ, Faith ಎಂದು ಕರೆಯಿರಿ) ಉಳಿಯಬೇಕಾದರೆ ಅದಕ್ಕೆ ಪುರೋಹಿತವರ್ಗದ ಜನರು ಬೇಕೇ ಬೇಕು. ಮತಧರ್ಮವೇ ಬೇಡ, ಮಾನವರೆಲ್ಲ ಒಂದು ಧರ್ಮದವರು ಎಂಬ ಕಾಲ ಬಂದಾಗ ಆಗ ಪುರೋಹಿತರ ಅಗತ್ಯವಿರುವುದಿಲ್ಲ. ಕ್ರಿಶ್ಚಿಯನ್, ಇಸ್ಲಾಂ, ಬೌದ್ಧ, ಜೈನ, ಯಹೂದಿ, ಸಿಖ್ ಈ ಮತಧರ್ಮಗಳಿಗೆ ಪ್ರಾರ್ಥನಾ ಮಂದಿರಗಳು, ಮಠಗಳು, ಪುರೋಹಿತರು ಇದ್ದಾರೆ. ಅವುಗಳ ಅಸ್ತಿತ್ವಕ್ಕೆ ಆ ಎಲ್ಲ ವ್ಯವಸ್ಥೆಗಳು ಅಗತ್ಯ. ಅಂತೆಯೇ ವೀರಶೈವ ಧರ್ಮಕ್ಕೆ ಮಠಗಳು ಮತ್ತು ಪುರೋಹಿತರು ಜನನ -ಸಾವು ಆದಾಗ, ಮದುವೆ ಸಮಯದಲ್ಲಿ, ವಿಶೇಷ ಪೂಜಾ ದಿನಗಳಲ್ಲಿ ಹಬ್ಬಗಳಲ್ಲಿ ಅಂತಹ ಜನ ಬೇಕು. ಈಗ ಇರುವಂತೆ ಜಂಗಮರು ಕೇವಲ ಹುಟ್ಟಿನಿಂದ ಸಿದ್ಧವಾಗುತ್ತಿರುವರೇ ಹೊರತು ಅರ್ಹತೆ ಅಥವಾ ಶಿಕ್ಷಣದಿಂದ ಅಲ್ಲ ಎಂಬುದನ್ನು ಕುರಿತು ನಾವು ಯೋಚಿಸಬೇಕು. ಒಬ್ಬ ಬಡಗಿಯ ಮಗ ಯಾಂತ್ರಿಕವಾಗಿ ಬಡಗಿ ಆಗುತ್ತಾನೆ. ಬಡಗಿತನ, ಪೌರೋಹಿತ್ಯ ಎರಡೂ ಕಾಯಕಗಳೇ, ಎರಡೂ ಸಮಾನ ಗೌರವಕ್ಕೆ ಅರ್ಹ. ಆದರೆ ಪೌರೋಹಿತ್ಯದ ಕೆಲಸ ಮಾಡುವವನು ವಿದ್ಯಾವಂತನೂ, ಶುದ್ಧ ಜೀವಿಯೂ ಅಂತರ್ದೃಷ್ಟಿಯುಳ್ಳವನೂ ಪರಂಪರೆಯ ಅರಿವುಳ್ಳವನು ಆಗಿದ್ದು,

ಅವನು ಮನೆ ಮನೆಗಳಿಗೆ ದೈವೀಕರುಣೆಯನ್ನು ಆಹ್ವಾನಿಸುವವನೂ ಆಗಿರುವುದರಿಂದ ಉತ್ತಮ ಜೀವಿಯೂ ಆಗಿರಬೇಕು. ಅವನ ಪ್ರವೃತ್ತಿಗೂ ವೃತ್ತಿಗೂ ಸಾಮರಸ್ಯವಿರುವುದು ಅಗತ್ಯ. ಅವನು ಮನುಷ್ಯ ಮತ್ತು ದೈವಗಳ ಮಧ್ಯದ ಸೇತುವೆ ಆಗಿರುವುದರಿಂದ ಜನ ಅವನಿಗೆ ನಮಸ್ಕರಿಸುತ್ತಾರೆ."[೧೫]

ಈ ಭಾಗದಲ್ಲಿ ನೇರವಾಗಿ ಚಿದಾನಂದಮೂರ್ತಿಯವರು ವರ್ಣಾಶ್ರಮ ಧರ್ಮವನ್ನು ಪ್ರತಿಪಾದಿಸುತ್ತಾರೆ. ಬದಲಾದ ಕಾಲಘಟ್ಟದಲ್ಲಿ ಶಿಕ್ಷಣ ಇತ್ಯಾದಿ ಕುರಿತು ಮಾತನಾಡುತ್ತಾರೆಯೇ ಹೊರತು 'ಬಡಗಿಯಮಗ ಯಾಂತ್ರಿಕವಾಗಿ ಬಡಗಿ ಆದಂತೆ' ಎಂದು ಪೌರೋಹಿತ್ಯವನ್ನು ಸಮರ್ಥಿಸಿಕೊಳ್ಳುವಾಗ ಮೊದಲೇ ಹೇಳಿದ ಹಾಗೆ ತನ್ನ ವೈಯಕ್ತಿಕ ಸ್ವಾರ್ಥವೂ ತನ್ನ ಸಿದ್ಧಾಂತಗಳಲ್ಲಿ ಕೆಲಸ ಮಾಡುತ್ತಿರುವುದನ್ನು ಕಾಣಬಹುದು. ಯಾವ ಧರ್ಮಗಳನ್ನು ತನ್ನ ಎದುರಾಳಿ ಕಲ್ಪನೆಯಲ್ಲಿ ನೋಡುತ್ತಿರುವರೊ ಆ ಎಲ್ಲ ಧರ್ಮಗಳಲ್ಲಿ ಪುರೋಹಿತರು ಇರುವುದರಿಂದ ತನಗೂ ಇರಬೇಕೆಂದು ಪ್ರತಿಪಾದಿಸುತ್ತಾರೆ. ಅಥವಾ ಯಾರನ್ನೂ ವಿರೋಧಿಸುತ್ತಿದ್ದಾರೋ ಅವರ ಧಾರೆಗಳಲ್ಲೇ ತನ್ನನ್ನು ಕಟ್ಟಿಕೊಳ್ಳಲೆತ್ನಿಸುವುದು ಮತ್ತು ಯೂರೋಪು ಮತ್ತು ಮಧ್ಯಪ್ರಾಚ್ಯ ರಾಷ್ಟ್ರಗಳ 'ಏಕ ರೂಪಿ ಆಗ್ರಹ'ವನ್ನು ತನ್ನೊಳಗೆ ಸಹ ರೂಪಿಸಿಕೊಳ್ಳಲೆತ್ನಿಸುವುದು ನಡೆಯುತ್ತಿದೆ. ಕನ್ನಡ ಸಂಶೋಧಕರಾದ ಚಿದಾನಂದಮೂರ್ತಿಯವರು ಹಿಂದುತ್ವ ಪ್ರತಿಪಾದಿಸುವ ಸಂಘಟನೆಗಳ ನಾಯಕರಂತೆಯೇ ಮಾತನಾಡುತ್ತಿರುವುದು ಅವರ ಉದಾಹರಣೆಗಳಿಂದ ಗೋಚರವಾಗುತ್ತದೆ.

ಹಿಂದೂ ಧರ್ಮದಲ್ಲಿರುವ ಜಾತಿ ವ್ಯವಸ್ಥೆ, ಪುರೋಹಿತ ಶಾಹಿ ವರ್ಣಾಶ್ರಮ ವ್ಯವಸ್ಥೆ ಇತ್ಯಾದಿಗಳನ್ನು ಪ್ರಗತಿಪರರು ಜೀವ ವಿರೋಧಿಯೆಂದು ಟೀಕಿಸುತ್ತಾರೆ. ಆದರೆ ಚಿದಾನಂದಮೂರ್ತಿಯವರು ಇವುಗಳನ್ನು ಸಮರ್ಥಿಸುತ್ತಾರೆ. ಅವರು ಪಶ್ಚಿಮದ ಏಕದೈವ ಕೇಂದ್ರಿತ ಧರ್ಮಗಳಲ್ಲಿಯೂ ಮೇಲಿನ ವ್ಯವಸ್ಥೆಗಳಿವೆಯೆಂದು ವಾದಿಸುತ್ತಾರೆ. ಆದರೆ ದೊಡ್ಡ ಸಂಶೋಧಕರಾದ ಚಿದಾನಂದಮೂರ್ತಿಯವರಿಗೆ, ಪಶ್ಚಿಮದ ಧರ್ಮಗಳು ಮುಕ್ತವ್ಯವಸ್ಥೆಗಳಿಂದ ಕೂಡಿದವು ಎಂಬ ಅಂಶವು ಮರೆತು ಹೋಗುವುದು ಆಶ್ಚರ್ಯ. ತಮ್ಮಲ್ಲಿರುವ ಈ ಅಂಶಗಳು ಪ್ರಗತಿಪರರು ಹೇಳುವಂತೆ ಅವು ಕೆಡುಕುಗಳಲ್ಲ. ಅವು ಜಾಗತಿಕವಾದವು ಮತ್ತು ಸಾರ್ವಕಾಲಿಕವಾದವು ಎಂಬುದಾಗಿ ಪ್ರತಿಪಾದಿಸಲು ಅವರು ತೊಡಗುವಂತೆ ಕಾಣುತ್ತಾರೆ. ವಿಪರ್ಯಾಸವೆಂದರೆ ಹಿಂದೂಧರ್ಮ ಮತ್ತು ಪಶ್ಚಿಮದ ಧರ್ಮಗಳಿಗಿರುವ ಅತ್ಯಂತ ಮೂಲಭೂತವಾದ ಅಂಶವೊಂದನ್ನು ಅವರು ಮರೆಮಾಚುವುದು. ಅದೆಂದರೆ ಹಿಂದೂಧರ್ಮದ ಈ ಎಲ್ಲ ವ್ಯವಸ್ಥೆಗಳು ಹುಟ್ಟಿನಿಂದಲೇ ನಿರ್ಧರಿತವಾದಂತವು. ಇಲ್ಲಿನ ಸಮಾಜ ಎಲ್ಲ ಮುಕ್ತ ಚಲನೆಗಳನ್ನು ನಿರ್ಬಂಧಿಸಿ ಬಿಟ್ಟಿದೆ. ಆದರೆ ಪಶ್ಚಿಮದ ಧರ್ಮಗಳಲ್ಲಿ ವ್ಯಕ್ತಿಯ ಆಯ್ಕೆಗೆ ಅವಕಾಶ ಕಲ್ಪಿಸಿವೆ. ಅವು ಅಷ್ಟರ ಮಟ್ಟಿಗೆ ಪ್ರಜಾಪ್ರಭುತ್ವೀಯ. ಈ ಏಕಪಕ್ಷೀಯವಾದವು ಚಿದಾನಂದಮೂರ್ತಿಯವರ ಚಿಂತನೆಗಳ ಸ್ವರೂಪವನ್ನು ಸೂಚಿಸುತ್ತದೆ.

೯೦ರ ದಶಕದ ನಂತರ ಚಿದಾನಂದಮೂರ್ತಿಯವರಲ್ಲಿ ಅಖಂಡ ಭಾರತ ಏಕಧರ್ಮ, ಏಕ ಸಂಸ್ಕೃತಿ ಪ್ರತಿಪಾದನೆ ಕಾಣಿಸಿಕೊಳ್ಳತೊಡಗಿವೆ. 'ಹಿಂದುತ್ವ'ವೆಂಬ ಏಕಕಟ್ಟಿಗೆ ಬೆಸೆಯಬೇಕೆಂಬ ಉದ್ದೇಶದಿಂದ ಹಠತೊಟ್ಟ ಹಾಗೆ ಅವರು ವೀರಶೈವದಲ್ಲೂ ಬ್ರಾಹ್ಮಣ್ಯಪರ ಅನೇಕ ಅಂಶಗಳಿದ್ದವು ಎಂದು ಪ್ರತಿಪಾದಿಸುತ್ತಾರೆ.

"ವೀರಶೈವವು ಒಂದು ಮತವಾಗಿ (Religion) ಶೈವ ಧರ್ಮದ ರಕ್ಷಣೆ ಸೇರುತ್ತದೆ; ಒಂದು ದರ್ಶನವಾಗಿ ಅದು ದ್ವೈತ-ಅದ್ವೈತಗಳ ರಕ್ಷಣೆಗೆ ಸೇರುತ್ತದೆ ಎಂದರೆ ಅವರ ಅಸ್ತಿತ್ವ ಹಿಂದೂ ಧರ್ಮದ ಒಳಗೇ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಧರ್ಮಾದರ್ಶಗಳ ದೃಷ್ಟಿಯಿಂದ ಅದು ಹಿಂದೂ ಕಕ್ಷೆಯೊಳಗೆ ತನ್ನದೇ ವೈಶಿಷ್ಟ್ಯವನ್ನು ಹೊಂದಿದೆ."[೧೬]

ವೀರಶೈವ, ಲಿಂಗಾಯತ ಚಳುವಳಿಯ ಚಿಂತನೆಗಳನ್ನು ಕರ್ನಾಟಕದ ದಲಿತರು, ರೈತರು, ಮಹಿಳೆಯರು, ದಮನಿತರು, ಪ್ರಗತಿಪರರು ತಮ್ಮ ಆಪ್ತ ನೆನಪುಗಳೆಂಬಂತೆ, ತಮ್ಮವೇ ಪಠ್ಯಗಳೆಂಬಂತೆ ಬಳಸುತ್ತಿದ್ದಾರೆ. ಬಸವಣ್ಣ ದಲಿತ ಸಮುದಾಯಕ್ಕೆ ಸೇರಿದವನು ಎಂದು ವಿಶ್ಲೇಷಿಸುವ ಕೆಲಸ ನಡೆಯುತ್ತಿರುವಾಗ ಮೇಲ್ವರ್ಗದ, 'ಹಿಂದುತ್ವ' ಸಿದ್ಧಾಂತದ ಜೊತೆ ಗುರುತಿಸಿಕೊಂಡಿರುವ ಚಿದಾನಂದ ಮೂರ್ತಿ ಹಿಂದುತ್ವದ ಜೊತೆ ಜೋಡಿಸಲು ಪ್ರಯತ್ನಿಸುತ್ತಿರುವುದು ಸ್ಪಷ್ಟವಾಗುತ್ತಿದೆ. ವಚನಗಳಲ್ಲಿ ಕೆಲವನ್ನು ಆರಿಸಿ ಇದೇ ವಚನ ಚಳುವಳಿಯೇ 'ಹಿಂದುತ್ವ' ಪರವೆಂದು ವ್ಯಾಖ್ಯಾನಿಸುವ ಪ್ರಯತ್ನವನ್ನು ಅವರು ಮಾಡುತ್ತಾರೆ.

ಆದರೆ ಕನ್ನಡ ಧರ್ಮ, ಸಂಸ್ಕೃತಿಗಳ ಕುರಿತು ಮಾತನಾಡುವಾಗ, ಅಸ್ಪೃಶ್ಯತೆ ಕುರಿತು ಮಾತನಾಡುವಾಗ ಹಿಂದುತ್ವವಾದಿಗಳು ಚಿದಾನಂದ ಮೂರ್ತಿಯವರನ್ನು ಜೀರ್ಣಿಸಿಕೊಳ್ಳುವುದು ಕಷ್ಟ. ಇಷ್ಟರ ಮಟ್ಟಿಗೆ ಚಿದಾನಂದಮೂರ್ತಿಯವರು ಕನ್ನಡ ರಾಷ್ಟ್ರೀಯತಾ ಚಿಂತನೆಗೆ ಹತ್ತಿರವಾಗುತ್ತಾರೆ.

### ೫.೭ ಧರ್ಮ ಕುರಿತಂತೆ ಕ.ವಿ.ರಂ. ನಿಲುವುಗಳು

೮೦ರ ದಶಕದ ಅಂತ್ಯ ಭಾಗದಲ್ಲಿ ರೂಪುಪಡೆದ ಈ ಸಂಘಟನೆ ಕರ್ನಾಟಕದ ವಿವಿಧ ಪರಿಕಲ್ಪನೆಗಳಿಗೆ ಹೊಸದೊಂದು ವ್ಯಾಖ್ಯಾನವನ್ನು ನೀಡಲು ಪ್ರಯತ್ನಿಸಿದೆ. ಎಡಪಂಥೀಯ ವಿಚಾರಧಾರೆಯ ನೆಲೆಗಟ್ಟಿನ ಮೇಲೆ ವಿದ್ಯಮಾನಗಳನ್ನು ಪರಿಶೀಲಿಸಿ ಪ್ರತಿಕ್ರಿಯಿಸಿರುವುದು ಇದರ ಮುಖ್ಯ ಆಯಾಮ. ಕನ್ನಡಕ್ಕೆ ರಾಷ್ಟ್ರೀಯತೆಯ ಎಲ್ಲ ಅರ್ಹತೆಗಳಿದ್ದರೂ ಕೇಂದ್ರದ ಸಾಮ್ರಾಜ್ಯಶಾಹಿ ಧೋರಣೆಯಿಂದಾಗಿ ತೀರಾ ದಮನಕ್ಕೆ ಒಳಗಾಗಿದೆ ಎಂದು ವಿವರಿಸಿದೆ. ಆರಂಭ ಕಾಲಕ್ಕೆ ಕರ್ನಾಟಕದ ಅನೇಕ ಬುದ್ಧಿಜೀವಿ ಚಿಂತಕರನ್ನು, ಮುಂತಾದವರನ್ನು ವಿದ್ಯಾರ್ಥಿಗಳನ್ನು ಆಕರ್ಷಿಸಿದ ಈ ಸಂಘಟನೆ ನಂತರದ ವಿವಾದಾತ್ಮಕ ಚಲನೆಯಿಂದಾಗಿ ಸದ್ಯದಲ್ಲಿ ಕರ್ನಾಟಕದಲ್ಲಿ ಕ್ರಿಯಾಶೀಲವಾಗಿರುವಂತೆ ಕಾಣುತ್ತಿಲ್ಲ. ತನ್ನದು ಒಂದು ರಾಜಕೀಯ ಸಂಘಟನೆಯೆಂದು ಹೇಳಿಕೊಂಡು ಅದು ಪ್ರಣಾಳಿಕೆಯೊಂದನ್ನು ರೂಪಿಸಿದೆ. ಎಲ್ಲ ರಾಜಕೀಯ ಚಿಂತನೆಗಳಂತೆ ತನಗೆ ಬೇಕಾದುದನ್ನು ತನಗೆ ಬೇಕಾದ ಹಾಗೆ ಆಯ್ದು ಪೋಣಿಸಿ ವ್ಯಾಖ್ಯಾನಿಸಿರುವ ಈ ಪ್ರಣಾಳಿಕಾ ರೂಪದ ಪುಸ್ತಕ ವಿವರಗಳಲ್ಲಿ ಸರಳೀಕೃತವಾಗಿದ್ದರೂ ಚಿಂತನೆಗಳಲ್ಲಿ ದಟ್ಟವಾಗಿದೆ, ಸಂಕೀರ್ಣವಾಗಿದೆ. ಕ.ವಿ.ರಂ. ಸಾಂಪ್ರದಾಯಿಕ ಭಾರತದ ಮಾರ್ಕ್ಸ್‌ವಾದವಾದಂತೆ ಧರ್ಮವನ್ನು 'ಅಫೀಮು' ಎಂದು ಜಡವಾಗಿ ಗ್ರಹಿಸದೆ ಧರ್ಮವು ಬದುಕಿನ ಸಮುದಾಯಗಳ, ರಾಷ್ಟ್ರದ ಅತ್ಯಂತ ಚಲನಶೀಲ ಪರಿಕಲ್ಪನೆ ಎಂದು ಭಾವಿಸಿರುವುದು ಆಶ್ಚರ್ಯ ಹುಟ್ಟಿಸುತ್ತದೆ.

"ಧಾರ್ಮಿಕ ನಂಬುಗೆಯೆಂಬುದು ಒಂದು ಪ್ರಾಚೀನವಾದ ಅಭ್ಯಾಸ. ಆ ದಿನಗಳಲ್ಲಿ ಧರ್ಮವೇ ಜೀವನ

ದೃಷ್ಟಿಯನ್ನು ನಿರ್ದೇಶಿಸುವ ಸಾಮಾಜಿಕ ಸಂಹಿತೆಯಾಗಿತ್ತು. ಇಂದು ಅದರ ಆ ಬಗೆಯ ಪಾತ್ರ ಹೆಚ್ಚು ಕಮ್ಮಿ ನಿರ್ನಾಮವಾಗುತ್ತಾ ಬಂದಿದ್ದರೂ, ಜನರಲ್ಲಿರುವ ಧಾರ್ಮಿಕ ವಿಶ್ವಾಸಗಳು ಆಚರಣೆಗಳ ಮಟ್ಟದಲ್ಲಿ ಪ್ರಬಲವಾಗಿಯೇ ಉಳಿದಿವೆ. ಪ್ರತಿ ವ್ಯಕ್ತಿಯೂ ತನಗೆ ಸರಿಕಂಡ ಧರ್ಮವನ್ನು ನಂಬಲು, ಅನುಸರಿಸಿ ಅಥವಾ ನಂಬದಿರಲು, ಅನುಸರಿಸದೆ ಇರಲು ಸ್ವಾತಂತ್ರ್ಯ ಹೊಂದಿರಬೇಕು. ಯಾವುದೇ ಒಂದು ಧರ್ಮವನ್ನು ಅಧಿಕೃತ ರಾಷ್ಟ್ರಧರ್ಮ ಎಂದು ಪರಿಗಣಿಸಲು ಸಾಧ್ಯವಿಲ್ಲ. ಧರ್ಮವನ್ನು ಪ್ರಭುತ್ವಾಡಳಿತಕ್ಕೆ ಜೋಡಿಸಬಾರದು. ಯಾವ ಧರ್ಮದಲ್ಲಿ ವಿಶ್ವಾಸದವರಾದರೂ ಅವರು ಆ ಧರ್ಮಕ್ಕೆ ಸೇರಿದವರೆಂಬ ಕಾರಣಕ್ಕೆ ಒಳ್ಳೆಯವರೂ ಅಲ್ಲ ಕೆಟ್ಟವರೂ ಅಲ್ಲ. ಯಾವ ಧರ್ಮಶ್ರೇಷ್ಠ ಯಾವ ಧರ್ಮ ಕನಿಷ್ಠ ಎಂದು ತೀರ್ಪನ್ನೀಯಲು ಯಾವುದೇ ಸಂಸ್ಥೆಗೆ ಅಧಿಕಾರವಿಲ್ಲ.

ಇಂದು ಆಳುವ ವರ್ಗಗಳು ದುರಾಲೋಚನೆಯಿಂದ ಧಾರ್ಮಿಕ ವಿಶ್ವಾಸವನ್ನು ಕೋಮುವಾದವಾಗಿ ಬೆಳೆಸುತ್ತಿವೆ. ಹಿಂದೂ ಕೋಮುವಾದ, ಇಸ್ಲಾಂ, ಸಿಖ್ ಮೂಲಭೂತವಾದ ಮುಂತಾದವರನ್ನು ಬೆಳೆಸುತ್ತಿವೆ. ಹಿಂದೂ ಫ್ಯಾಸಿಸ್ಟ್ ಪರಿವಾರದ ಆರ್.ಎಸ್.ಎಸ್. ವಿಶ್ವ ಹಿಂದೂಪರಿಷತ್, ಬಜರಂಗದಳ ಮುಂತಾದವುಗಳಿಗೆ ಬೆಂಬಲ ನೀಡಿ ಸರ್ಕಾರಗಳು ಸಲಹುತ್ತಿವೆ. ಅದೇ ಸಮಯದಲ್ಲಿ ಒಡೆದು ಆಳುವುದಕ್ಕಾಗಿ ಇಸ್ಲಾಂ ಸಂಘಟನೆಗಳನ್ನು ಮತ್ತು ಅಲ್ಪಸಂಖ್ಯಾತ ಮೂಲಭೂತವಾದಿ ಸಂಸ್ಥೆಗಳನ್ನು ಬೆಂಬಲಿಸುತ್ತಿದೆ.

ಹಿಂದೂ ಕೋಮುವಾದವೆನ್ನುವುದು ಮುಸ್ಲಿಂ, ಸಿಖ್ ಮುಂತಾದ ಸಮುದಾಯಗಳಿಗೆ ಮಾತ್ರ ಅಪಾಯಕಾರಿಯಲ್ಲ. ಬದಲಾಗಿ ಕಂದಾಚಾರ ಹಾಗೂ ಬ್ರಾಹ್ಮಣವಾದಿ ಮೌಲ್ಯಗಳನ್ನು ಪ್ರತಿಪಾದಿಸುವ ಮೂಲಕ ದಲಿತರಿಗೆ ಹಿಂದುಳಿದವರಿಗೆ, ಸ್ತ್ರೀಯರಿಗೆ ಅದು ಅಪಾಯಕಾರಿ, ದಮನಕಾರಿ ಏಕ ಪ್ರಭುತ್ವವನ್ನು ಏಕರಾಷ್ಟ್ರ ಸಿದ್ಧಾಂತವನ್ನು ಪ್ರತಿಪಾದಿಸುತ್ತಿರುವುದರಿಂದ ... ಬೇರೆ ಬೇರೆ ರಾಷ್ಟ್ರೀಯತೆಗಳ ಆಶೋತ್ತರಗಳಿಗೆ ಅದು ಅಪಾಯಕಾರಿ. ಕೋಮುವಾದವನ್ನು ಪ್ರಚಲಿತಗೊಳಿಸುತ್ತಿರುವ ಆಳುವ ವರ್ಗಗಳ ಉದ್ದೇಶ ಜನತೆಯ ಗಮನವನ್ನು ಅವರ ನಿತ್ಯ ಸಮಸ್ಯೆಯಿಂದ ಬೇರೆಡೆಗೆ ತಿರುಗಿಸುವುದಾಗಿದೆ. ಹೊತ್ತುವ ಆರ್ಥಿಕ ಲೂಟಿಯ ವಿರುದ್ಧವಾಗಿ ದನಿಯೆತ್ತುವ ಜನತೆಯನ್ನು ದಮನಿಸಲು ಇಂದು ಫ್ಯಾಸಿಸ್ಟ್ ಸ್ವರೂಪದ ಆಡಳಿತವನ್ನು ಜಾರಿಗೊಳಿಸುವ ಸಿದ್ಧತೆಯಲ್ಲಿದ್ದಾರೆ. ಹಿಂದೂ ವಾದದ ಮೂಲಕ ದಲ್ಲಾಳಿ ವರ್ಗಗಳು ಬೇರೆ ಬೇರೆ ಸಮುದಾಯ, ರಾಷ್ಟ್ರೀಯತೆಗಳ ಮೇಲೆ ಸಾಂಸ್ಕೃತಿಕ ವಿಸ್ತರಣಾವಾದವನ್ನು ಹೇಳುವುದಕ್ಕೆ ಬಯಸುತ್ತಿವೆ. ಈ ದುರಾಕ್ರಮಣವಾದವು ರಾಷ್ಟ್ರ ನಿರ್ಮಾಣದ ಹೆಸರಲ್ಲಿ ಅದು ಎಲ್ಲರ ಹಕ್ಕುಗಳನ್ನು ದಮನಿಸಿ ಅಲ್ಪಸಂಖ್ಯಾತರ ಮೇಲೆ ದಾಳಿ ಸಂಘಟಿಸುವುದರಿಂದ ನಾಗರಿಕ ಹಕ್ಕುಗಳಿಗೆ ಅಪಾಯಕಾರಿ. ಹೀಗೆ ಒಟ್ಟಾರೆ ಪ್ರಜಾತಾಂತ್ರಿಕ ಆಶಯಗಳನ್ನು ನಾಶಗೊಳಿಸಿ ಜನತೆಯನ್ನು ಕಂದಾಚಾರದ ಕೂಪಕ್ಕೆ ತಳ್ಳುವ ಕೋಮುವಾದವನ್ನು ಪೂರ್ಣವಾಗಿ ನಾಶಮಾಡುವುದು ಹಾಗೂ ಎಲ್ಲರ ಧಾರ್ಮಿಕ ಸ್ವಾತಂತ್ರವನ್ನು ಹಾಗೂ ಸಮಾನತೆಯನ್ನು ರಕ್ಷಿಸುವುದು ನಮ್ಮೆಲ್ಲರ ಕರ್ತವ್ಯವಾಗಿದೆ.”[೧೭]

ಮೇಲೆ ದಾಖಲಿಸಿದ ವಿವರಗಳನ್ನು ವಿಶ್ಲೇಷಿಸುವುದಾದರೆ, ಚಿದಾನಂದಮೂರ್ತಿಯಂಥವರ ಬಲಪಂಥೀಯ ಸಿದ್ಧಾಂತಕ್ಕೆ ಸಂಪೂರ್ಣ ವಿರುದ್ಧವಾದ ನಿಲುವು ಇಲ್ಲಿ ವ್ಯಕ್ತವಾಗುತ್ತಿದೆ. ಕನ್ನಡದ ಬಹುಪಾಲು ಚಿಂತಕರು

ಮರೆತು ಅಥವಾ ಕಡೆಗಣಿಸಿ ನಡೆಯುವ ಸಮುದಾಯಗಳ ಆಚರಣೆಗಳನ್ನು ಪ್ರೀತಿಯಿಂದ ನೋಡಬೇಕು ಎಂಬ ಪ್ರತಿಪಾದನೆ ಇಲ್ಲಿ ಇದ್ದಂತಿದೆ. ಇದು ಬಲಪಂಥೀಯರನ್ನು ಮಣಿಸಲು ಬಳಸುತ್ತಿರುವ ತಂತ್ರವೆಂಬಂತೆಯೂ ಭಾಸವಾಗುತ್ತದೆ.

ಭಾರತದಲ್ಲಿ ಕೋಮುವಾದವು ಉಲ್ಬಣಗೊಂಡು ಹಿಂದುತ್ವದ ಮೂಸೆಯಲ್ಲಿ ಜನರ ನಡುವೆ ವಿತರಣೆಯಾಗುತ್ತಿರುವಾಗ ಪ್ರಗತಿಪರ ಚಿಂತನೆಗಳು ಧರ್ಮಗಳಲ್ಲಿರುವ ಜನಪರವಾದ ಮತ್ತು ಮೂಲಭೂತವಾದಿಯಲ್ಲದ ಆಶಯಗಳನ್ನು ಆರಿಸಿ ಪರಂಪರೆಯಲ್ಲಿನ, ಇತ್ಯಾತ್ಮಕ ಅಂಶಗಳನ್ನು ಪ್ರತಿಪಾದಿಸಬೇಕೆಂದು ಕ.ವಿ.ರಂ. ಹೇಳುತ್ತಿದೆ. ಮತ್ತು ಕೋಮುವಾದದ ಉಲ್ಬಣಾವಸ್ಥೆಯು, ಭಾರತದಲ್ಲಿ ಜಾಗತೀಕರಣವೆಂಬ ನವವಸಾಹತುವಾದಕ್ಕೆ ಮುಕ್ತವಾಗುತ್ತಿರುವ ತೊಂಬತ್ತರ ದಶಕದಲ್ಲಿ ಆಳುವವರ್ಗಗಳು ಆರ್ಥಿಕ ಹಿತಾಸಕ್ತಿಯನ್ನು ಗುಪ್ತವಾಗಿಟ್ಟು ಧರ್ಮಗಳ ನಡುವೆ ಸಂಘರ್ಷವನ್ನು ಹುಟ್ಟಿಸಲು ಯತ್ನಿಸುತ್ತಿದ್ದಾರೆ. ವಾಸ್ತವದಲ್ಲಿ ಅದು ಸತ್ಯವಲ್ಲ ಎಂಬ ವ್ಯಾಖ್ಯಾನವನ್ನು ಅದು ಮಾಡುತ್ತಿದೆ.

ಕಾರ್ಲ್‌ಮಾರ್ಕ್ಸ್ ಬದುಕಿದ್ದ ಪರಿಸರದಲ್ಲಿನ ಧಾರ್ಮಿಕ ವ್ಯಾಖ್ಯಾನವು, ಅದು ಊಳಿಗಮಾನ್ಯತೆಯ ವಿರುದ್ಧ ನಿಲ್ಲದೆ ಅಂತಿಮವಾಗಿ ಊಳಿಗಮಾನ್ಯತೆಯನ್ನು ಪೋಷಿಸುವ ಸಾಧನವಾಗಿಯೂ ಬಳಕೆಯಾಗಿದೆ. ಆದರೆ ಭಾರತದಲ್ಲಿ ಅನೇಕ ಧಾರ್ಮಿಕ ಚಳುವಳಿಗಳು ಅಧಿಕಾರಸ್ಥ ಧರ್ಮದ, ಯಜಮಾನಿಕೆಯ ಧರ್ಮದ ವಿರುದ್ಧ ಆರಂಭಗೊಂಡಿವೆ ಎಂಬುದನ್ನು ಸಾಂಪ್ರದಾಯಿಕ ಮಾರ್ಕ್ಸ್‌ವಾದ ಗುರುತಿಸಿದಂತೆ ಕಾಣುವುದಿಲ್ಲ. ಆದರೆ ಕ.ವಿ.ರಂ ನ ಮೇಲಿನ ಹೇಳಿಕೆಯಲ್ಲಿ ಈ ಅಂಶ ಮುಖ್ಯವಾಗಿ ಧ್ವನಿಸುತ್ತಿದೆ. ಜೊತೆಗೆ ಬಲಪಂಥೀಯರು ಪ್ರತಿಪಾದಿಸುತ್ತಿರುವ 'ಏಕ' ಮಾದರಿಯ ಧಾರ್ಮಿಕ ಕಲ್ಪನೆಯು 'ಫ್ಯಾಸಿಸ್ಟ್' ಎಂದೂ ಬಹುತ್ವವುಳ್ಳ ಸಾಮುದಾಯಿಕ ನಂಬಿಕೆಗಳ ಮೇಲೆ ದಮನಕಾರಿ ನಿಲುವು ಎಂದೂ ಅದು ಪ್ರತಿಪಾದನೆ ಮಾಡುತ್ತಿದೆ.

ಧಾರ್ಮಿಕ ಚಳುವಳಿಗಳು ಆಧ್ಯಾತ್ಮಿಕ, ಅನುಭಾವಿಕ ಚಳುವಳಿಗಳು ಚರಿತ್ರೆಯ ಬೇರೆ ಬೇರೆ ಕಾಲಘಟ್ಟಗಳಲ್ಲಿ ದುಡಿವ ವರ್ಗಗಳ ಹಿತಾಸಕ್ತಿಗಳನ್ನು ಪೊರೆದಿವೆ ಎಂಬ ಚರಿತ್ರೆಯ ದೊಡ್ಡ ಅರಿವು ಇರುವಂತೆ ಕಾಣುತ್ತದೆ. ಈ ಕಾರಣಕ್ಕಾಗಿ ಕರ್ನಾಟಕ ವಿಮೋಚನಾ ರಂಗವು ವಚನ ಚಳುವಳಿಯನ್ನು ತನ್ನ 'ಆಪ್ತ' ನೆನಪು ಎಂಬಂತೆ ಗೌರವಿಸುತ್ತದೆ ಮತ್ತು ಕರ್ನಾಟಕದಲ್ಲಿನ ಧಾರ್ಮಿಕವೆಂದು ಕರೆಯಬಹುದಾದ ಧಾರೆಗಳ ಒಳಗೇ ಇರುವ ಸೂಫಿಗಳು, ಆರೂಢರು, ಅವಧೂತರು, ನಾಥರು, ಸಿದ್ಧರು ಮುಂತಾದವುಗಳನ್ನು ಗೌರವದಿಂದ ಕಾಣುತ್ತದೆ.

ತಾನು ಪ್ರತಿಪಾದಿಸುವ ರಾಷ್ಟ್ರದಲ್ಲಿ ಧಾರ್ಮಿಕ ತರತಮ ಭಾವನೆಗಳಿಗೆ ಅವಕಾಶ ಕೊಡುವುದಿಲ್ಲವೆಂದು ಪ್ರತಿಪಾದಿಸುತ್ತದೆ ಮತ್ತು ಮೂಲಭೂತವಾದವನ್ನು ಆಳುವ ಸಮುದಾಯಗಳು ತಮ್ಮ ಆರ್ಥಿಕ ಲೂಟಿಯನ್ನು ಮುಂದುವರಿಸಲು ಮತ್ತು ತಮ್ಮ ಸ್ಥಾಪಿತ ಹಿತಾಸಕ್ತಿಗಳಿಗೆ ಅಪಾಯ ಬಾರದಿರಲೆಂದು, ಸಮುದಾಯ ಧಾರ್ಮಿಕವೂ ಒಳಗೊಂಡಂತೆ ಸದಾ ಬಿಕ್ಕಟ್ಟಿನಲ್ಲಿರುವಂತೆ ನೋಡಿಕೊಳ್ಳಬೇಕೆಂಬ ಒತ್ತಾಸೆಯ ಫಲವಾಗಿ ರೂಪುಗೊಂಡಿವೆ ಎಂದು ಪ್ರತಿಪಾದಿಸುತ್ತದೆ.

೫.೮ ಚಿಂತನೆಗಳ ತೌಲನಿಕ ಸಮೀಕ್ಷೆ

ಕನ್ನಡ ಚಿಂತಕರು, ತಾವು ಕಟ್ಟಬಯಸುತ್ತಿರುವ ಅಥವಾ ಆಶಿಸುತ್ತಿರುವ ರಾಷ್ಟ್ರದಲ್ಲಿ ಧರ್ಮದ ಪಾತ್ರ ನಿರ್ಣಯ ಮಾಡುವಾಗ ಎಷ್ಟೆಲ್ಲ ವೈವಿಧ್ಯಗಳು ಕಂಡುಬರುತ್ತವೆ. ಅತ್ಯಂತ ಸಂಕೀರ್ಣ ಸ್ವರೂಪಿಯಾದ ಆದರೆ ಬಿಡಲಿಕ್ಕಾಗದ ಧರ್ಮವನ್ನು ಕುರಿತು ಒಬ್ಬೊಬ್ಬರೂ ಒಂದು ದಿಕ್ಕಿನತ್ತ ಮುಖಮಾಡಿ ನಿಂತು ಮಾತನಾಡುತ್ತಾರೆ, ಆ ಮೂಲಕ ಕನ್ನಡ ರಾಷ್ಟ್ರೀಯತೆಯ ಧಾರ್ಮಿಕ ಚಿಂತನೆಯ ಬಹುತ್ವವನ್ನು ಮನಗಾಣಿಸುತ್ತಾರೆ. ಇಡೀ ಶತಮಾನ ಪೂರ್ತಿ ನಡೆದ ಚಿಂತನೆಗಳು, ಆರು ಚಿಂತನೆಗಳಷ್ಟೇ ಅಲ್ಲವಾದರೂ ಪ್ರಾತಿನಿಧಿಕವೆಂದು ಮೊದಲೇ ಹೇಳಲಾಗಿದೆ. ಈ ಚಿಂತನೆಗಳೆಲ್ಲವನ್ನೂ ಪರಿಶೀಲಿಸಿದಾಗ ಆಯಾ ಚಿಂತನೆಗಳು ರೂಪುಗೊಳ್ಳುತ್ತಿರುವ ಪರಿಸರ, ಹಿನ್ನೆಲೆ, ಚಾರಿತ್ರಿಕ ಒತ್ತಡಗಳು ಇತ್ಯಾದಿಗಳಿಗೆ ಪ್ರತಿಕ್ರಿಯಿಸಿದ ರೀತಿಯಿದೆಂದು ಅರ್ಥವಾಗುತ್ತದೆ. ಹುಟ್ಟಿನಿಂದ ಮಾಧ್ವ ಬ್ರಾಹ್ಮಣರಾದ ಆಲೂರು ವೆಂಕಟರಾಯರು, ತಮ್ಮ ಆಶಯದ ರಾಷ್ಟ್ರದಲ್ಲಿ, ಬ್ರಾಹ್ಮಣ-ಕ್ಷತ್ರಿಯ ಹೊಂದಾಣಿಕೆಯಿಂದ ಹೊಸ ರಾಷ್ಟ್ರ ನಿರ್ಮಾಣವಾಗಬೇಕೆಂದು ಪ್ರತಿಪಾದಿಸುತ್ತಾರೆ. ಏಕೀಕರಣ ಚಳುವಳಿಗೆ ನಾಯಕತ್ವ ಕೊಟ್ಟ ಇವರು, ಆಧುನಿಕ ಪ್ರಭುತ್ವ ಬ್ರಾಹ್ಮಣ ಸಮುದಾಯದ ಪರವಾಗಿರಲಿ ಎಂದೂ ಹಾಗಾದರೆ ಮಾತ್ರ ರಾಷ್ಟ್ರದ ಅಭ್ಯುದಯ ಸಾಧ್ಯವೆಂದು ಹೇಳುತ್ತಿದ್ದಾರೆನ್ನಿಸುತ್ತದೆ. ಆದರೆ ಹುಟ್ಟಿನಿಂದ ದುಡಿಯುವ ಸಮುದಾಯಕ್ಕೆ ಸೇರಿದ ಕುವೆಂಪು, ಪ್ರಭುತ್ವಗಳು ಮಾನವೀಯವಾಗಲಿ ಅವು ಶಂಬೂಕನ ಪರವಾಗಿರಲಿ ಮತ್ತು ಸಾಮಾಜಿಕ ನ್ಯಾಯದ ಮೇಲೆ ಸಮಾನತಾ ತತ್ವದ ಮೇಲೆ, ಮನುಷ್ಯ ಧರ್ಮದ ಆಹಾರದ ಮೇಲೆ ಆಧುನಿಕ ರಾಷ್ಟ್ರ ನಿಲ್ಲಲಿ ಎನ್ನುತ್ತಾರೆ. ಆದರೆ ಆಲೂರು ಹಾಗೂ ಕುವೆಂಪು ಇಬ್ಬರೂ ಜನರ ಆಚರಣಾ ಲೋಕಗಳತ್ತ ಬೆನ್ನುತಿರುಗಿಸಿ ನಿಲ್ಲುತ್ತಾರೆ.

ಆದರೆ ಶಂಬಾ ಜೋಶಿಯವರು ಸಮುದಾಯಗಳ ನಂಬಿಕೆ, ಆಚರಣೆಗಳನ್ನಿಟ್ಟುಕೊಂಡು ಧರ್ಮದ ವಿಶ್ಲೇಷಣೆ ಮಾಡುತ್ತಾರೆ. ಅವೈದಿಕ ದರ್ಶನಗಳ ಮಹತ್ವ ಪ್ರತಿಪಾದಿಸುತ್ತಾರೆ. ಆದರೆ ಬ್ರಾಹ್ಮಣ ಮೂಲದ ಇವರು ಇಸ್ಲಾಂ ಒಳಗೊಂಡು ಇತರೆ ಧರ್ಮಗಳನ್ನು ಟೀಕಿಸುತ್ತಾರೆ. ಇಸ್ಲಾಂ ಧರ್ಮವನ್ನಂತೂ ರಾಷ್ಟ್ರಕ್ಕೆ ತೊಡಕು ಎಂದು ವಿವರಿಸುತ್ತಾರೆ. ಆದರೆ ಕೊನೆಯ ಹೊತ್ತಿಗೆ ವಿಶ್ವಧರ್ಮಗಳ ಮೂಲ ಸ್ಫೂರ್ತಿ ಒಂದೇ ಅನ್ನುವ ಹಂತಕ್ಕೆ ತಲುಪಿ ಬಿಡುತ್ತಾರೆ. ವೀರಶೈವ ಸಮುದಾಯದ ಪುರೋಹಿತ ವರ್ಗಕ್ಕೆ ಸೇರಿದ ಚಿದಾನಂದಮೂರ್ತಿಯವರು ಆಧುನಿಕ ರಾಷ್ಟ್ರ 'ಏಕರೂಪಿಯದಾಗಿರಬೇಕು' ಅಲ್ಲಿ ಹಿಂದು ಬಿಟ್ಟು ಉಳಿದೆಲ್ಲವನ್ನೂ ನಾಶಮಾಡಬೇಕು ಅಥವಾ ತನ್ನ ದಾಸ್ಯಕ್ಕೆ ಒಳಗು ಮಾಡಿಕೊಳ್ಳಬೇಕು ಎನ್ನುವುದಲ್ಲದೆ ವೈದಿಕ ಧರ್ಮ ಪರಮ ಪವಿತ್ರವೆಂದು ಪ್ರತಿಪಾದನೆಗೆ ನಿಲ್ಲುತ್ತಾರೆ.

ಆದರೆ 'ಜ್ಞಾನ'ಪರವಾಗಿದ್ದ, ಹುಟ್ಟಿನಿಂದ ಬ್ರಾಹ್ಮಣರಾಗಿದ್ದ ಬಿ.ಎಂ.ಶ್ರೀಯವರು ತಮ್ಮ ಅಪಾರ ತಿರುಗಾಟಗಳಿಂದ ಜನಸಮುದಾಯಗಳನ್ನು ಹತ್ತಿರದಿಂದ ಬಲ್ಲವರಾಗಿದ್ದರು. ಅನ್ಯಧರ್ಮಗಳನ್ನು ಅನ್ಯ ವಿಚಾರಗಳನ್ನು ಸೋದರ ಭಾವನೆಯಿಂದ ನೋಡುತ್ತಿದ್ದರು. 'ಕಲಾಕೇಂದ್ರಿತ'ವೂ, ಸಂಕರಶೀಲವೂ, ಒಳಗೊಳ್ಳುವ ಪ್ರಜ್ಞೆಯ ಭಾಗವೂ ಆಗಿ ಅವರ ಚಿಂತನೆಗಳು ಉಳಿದೆಲ್ಲರಿಗಿಂತ ಭಿನ್ನನೆಲೆಯಲ್ಲಿ ನಿಲ್ಲುತ್ತವೆ. ಧರ್ಮವನ್ನು ನಗಣ್ಯವೆಂದು ಭಾವಿಸಿ ರಾಷ್ಟ್ರ ರಚನೆಗೆ ತೊಡಗುವ ಉದಾತ್ತ ಆಶಯಗಳುಳ್ಳ ಕುವೆಂಪು

ಮತ್ತು ಬಿ.ಎಂ.ಶ್ರೀ ಮೈಸೂರು ಸಂಸ್ಥಾನದಲ್ಲಿದ್ದವರು ; ಪಶ್ಚಿಮದ ಜ್ಞಾನಲೋಕಗಳನ್ನು ಬೆರಗಿನಿಂದ ನೋಡಿ ಅಪ್ಪಿಕೊಂಡವರು ; ರಾಜಕೀಯ ಸ್ವಾತಂತ್ರ್ಯಕ್ಕಿಂತ ಸಮುದಾಯಗಳ ಏಳಿಗೆ ದೊಡ್ಡದೆಂದು ಭಾವಿಸಿದವರು: ಉಪನಿಷತ್ ಲೋಕಗಳನ್ನು ಒಪ್ಪಿಕೊಂಡವರು. ಹಾಗೆ ನೋಡಿದರೆ ಕುವೆಂಪು ಕ್ಷಾತ್ರ ಕೇಂದ್ರಿತ ಸಮಾನತಾ ಆಶಯದ ರಾಷ್ಟ್ರ ಪ್ರತಿಪಾದಕರು.

ಶತಮಾನದ ಕೊನೆಯಲ್ಲಿ ಹುಟ್ಟಿದ 'ಕರ್ನಾಟಕ ವಿಮೋಚನಾರಂಗ' ಧಾರ್ಮಿಕ ಸಂಘರ್ಷವನ್ನು ಆಳುವ ವರ್ಗಗಳ ಆರ್ಥಿಕ ಲೂಟಿಯ ಫಲವೆಂದೂ ತಾನು ಪ್ರತಿಪಾದಿಸುವ ಕನ್ನಡ ರಾಷ್ಟ್ರದಲ್ಲಿ ಯಾವ ಧರ್ಮವೂ ಮೇಲುಕೀಳಲ್ಲದಂತೆ ಇರಬೇಕು ಎನ್ನುವ ಮತ್ತು ಸಮುದಾಯದ ಆಚರಣೆಗಳನ್ನು ಗೌರವಿಸುವ ಅನ್ಯಧರ್ಮಗಳನ್ನು ಅದರಲ್ಲಿನ ದುಡಿವ ಸಮುದಾಯಗಳನ್ನು ಸೋದರ ಭಾವದಿಂದ ನೋಡಬೇಕು ಎನ್ನುವ ನಿಲುವೇ ಆರೋಗ್ಯಕರವಾದುದೆಂದು ಕಾಣಿಸುತ್ತದೆ.

### ಕೊನೆ ಟಿಪ್ಪಣಿಗಳು

೧. ಡಾ.ಎಸ್.ಚಂದ್ರಶೇಖರ (ಅನು: ಸಿ.ನಾಗಣ್ಣ) ದಕ್ಷಿಣ ಭಾರತ: ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ

೨. ಅದೇ ಪುಟ, ೬೭-೬೮ (ಈ ಪುಸ್ತಕದ ವಿಶೇಷ ನೂರು-ನೂರಿಪ್ಪತ್ತು ವರ್ಷಗಳ ಪತ್ರಿಕೆ ಮತ್ತಿತರ ಅಜ್ಞಾತ ದಾಖಲೆಗಳ ಮೂಲಕ ದಕ್ಷಿಣ ಭಾರತದ ರಾಷ್ಟ್ರೀಯತೆಗಳ ಬೆಳವಣಿಗೆಗಳನ್ನು ವಸಾಹತುಶಾಹಿ ಸಂದರ್ಭದಲ್ಲಿಟ್ಟು ಚರ್ಚಿಸಲಾಗಿದೆ.)

೩. ಆಲೂರು ವೆಂಕಟರಾವ್, ಕರ್ನಾಟಕತ್ವದ ವಿಕಾಸ, ಪುಟ, ೧೮೧, ೧೮೨, ೧೮೩, ೧೮೪

೪. ಬಿ.ಎಂ.ಶ್ರೀಕಂಠಯ್ಯ, ಶ್ರೀ ಸಾಹಿತ್ಯ ಪುಟ, ೧೨೫, ೧೨೬ ಮತ್ತು ೧೨೭

೫. ಶಂಬಾ ಜೋಶಿ, ಹಾಲುಮತದರ್ಶನ (ಶಂಬಾ ಕೃತಿಸಂಪುಟ ೩ ಕರ್ನಾಟ ಸಂಸ್ಕೃತಿ, ಪುಟ, ೪೫೨

೬. ಅದೇ ಪುಟ, ೪೨೫

೭. ಮಲ್ಲೇಪುರಂ.ಜಿ.ವೆಂಕಟೇಶ ಸಂ.ಶಂಬಾ ಜೋಶಿಯವರ ಆಯ್ದ ಲೇಖನಗಳು ಪು. ೨೮ (ಹಿಂದೂ -ಮುಸಲ್ಮಾನ ತೊಡಕು ಎಂಬ ಶೀರ್ಷಿಕೆಯಡಿ ಜಯ ಕರ್ನಾಟಕ ಪತ್ರಿಕೆಗೆ ಬರೆದ ಬರೆಹ)

೮. ಅದೇ ಪುಟ, ೨೯

೯. ಅದೇ ಪುಟ, ೨೯-೩೦

೧೦. ಕುವೆಂಪು, ಪಾಂಚಜನ್ಯ, ಸಮಗ್ರಕಾವ್ಯ ಭಾಗ-೧ ಪುಟ ೧೪೫-೧೪೬ ಕ್ರಿಯಾಪದಗಳೇ ತುಂಬಿರುವ ಈ ರೀತಿಯ ಕವಿತೆಗಳನ್ನು ನವ್ಯ ವಿಮರ್ಶಕರು ಕವಿತೆಗಳೇ ಅಲ್ಲವೆಂದರು, ಅಥವಾ ಕೆಟ್ಟಕವಿತೆಗಳ ಪಟ್ಟ ಕಟ್ಟಿದರು. ಕವಿತೆಯನ್ನು ಶುದ್ಧತೆಯ ದೃಷ್ಟಿಯಿಂದ ನೋಡಿದ್ದಾರೆಯೇ ಹೊರತು ಅವುಗಳ ಸಮಾಜಮುಖಿ ಗುಣ ಅವರಿಗೆ ಅರ್ಥವಾದಂತೆ ಕಾಣಲಿಲ್ಲ. ಅಥವಾ ಸಾಂಸ್ಕೃತಿಕ ರಾಜಕಾರಣದ ಪ್ರತಿಕ್ರಿಯೆ ಇರಬಹುದು.

೧೧. ಕುವೆಂಪು ಸಮಗ್ರಕಾವ್ಯ ಭಾಗ-೧, ಕೋಗಿಲೆ ಮತ್ತು ಸೋವಿಯೆಟ್ ರಷ್ಯಾ, ಪುಟ, ೩೬೮-೩೬೯

೧೨. ಚಿದಾನಂದ ಮೂರ್ತಿ, 'ವಿಜಯನಗರ ಸಾಮ್ರಾಜ್ಯ ಮತ್ತು ಹಿಂದೂ ಧರ್ಮ', ವೀರಶೈವಧರ್ಮ, ಭಾರತೀಯ ಸಂಸ್ಕೃತಿ (ಹಿಂದೂ ಲಿಂಗಾಯತ, ಚಿದಾನಂದ ಸಮಗ್ರ ಸಂಪುಟ -೫) , ಪುಟ, ೬೫೨

೧೩. ಅದೇ ಪುಟ, ೬೫೩-೬೫೪

೧೪. ಅದೇ ಪುಟ, ೬೫೪

೧೫. ಅದೇ ಪುಟ, ೫೭೪ ಕೃತಿಯಲ್ಲಿ ಒಂದು ಕಡೆ ಕಾಲೇಜಿನ ದಿನಗಳಲ್ಲಿ ಹಳ್ಳಿಗೆ ಹೋದಾಗ ಎದುರು ಬಂದ ಹಳ್ಳಿಯ ಜನ ಕೈಮುಗಿದು ಮಾತನಾಡಿಸಿ 'ತೆಗೀರಿ ಸ್ವಾಮಿ ಚಪ್ಪಲಿ' ಎಂದು ಹೇಳಿ ಕಾಲಿಗೆ ಬೀಳಲು ಬರುತ್ತಿದ್ದರು ಮುಜುಗರವಾಗಿ ಬೇಡವೆಂದರೂ ಕೇಳದೆ ಒತ್ತಾಯಿಸುತ್ತಿದ್ದರು. ನಾನು ನಗುತ್ತಲೇ ಕಾಲಿಗೆ ಬೀಳಿಸಿಕೊಳ್ಳುತ್ತಿದ್ದೆ ಎಂದು ಸ್ಮರಿಸಿಕೊಳ್ಳುತ್ತಾರೆ.

೧೬. ಅದೇ ಪುಟ, ೨೮೫ ವೀರಶೈವ ಧರ್ಮ ಹಿಂದೂಧರ್ಮದ ಅಂಗ ಎಂದು ಸಮರ್ಥಿಸುವ ಅತ್ಯುತ್ಸಾಹದಲ್ಲಿ ಚಿದಾನಂದ ಮೂರ್ತಿಯವರು ಈ ಕೃತಿಯನ್ನು ರಚಿಸಿದ್ದಾರೆ.

೧೭. ಕರ್ನಾಟಕ ವಿಮೋಚನಾರಂಗ, ಪ್ರಣಾಳಿಕೆ ಹಾಗೂ ಸಂವಿಧಾನ. ಪುಟ, ೫೮-೫೯

ಅಧ್ಯಾಯ ೬

## ಕನ್ನಡ ರಾಷ್ಟ್ರೀಯತೆ : ಸಂಸ್ಕೃತಿ ಚಿಂತನೆ

೬.೧ ಪೀಠಿಕೆ

೬.೨ ಆಲೂರು ವೆಂಕಟರಾಯರ ಚಿಂತನೆಗಳು

೬.೩ ಬಿ.ಎಂ.ಶ್ರೀಯವರ ಚಿಂತನೆಗಳು

೬.೪ ಶಂಬಾ ಜೋಶಿಯವರ ಚಿಂತನೆಗಳು

೬.೫ ಕುವೆಂಪುರವರ ಚಿಂತನೆಗಳು

೬.೬ ಚಿದಾನಂದ ಮೂರ್ತಿಯವರ ಚಿಂತನೆಗಳು

೬.೭ ಕರ್ನಾಟಕ ವಿಮೋಚನಾ ರಂಗದ ನಿಲುವುಗಳು

೬.೮ ಚಿಂತನೆಗಳ ತೌಲನಿಕ ಸಮೀಕ್ಷೆ

## ಅಧ್ಯಾಯ ೬

# ಕನ್ನಡ ರಾಷ್ಟ್ರೀಯತೆ ಸಂಸ್ಕೃತಿ ಕುರಿತ ಚಿಂತನೆಗಳು

### ೬.೧ ಪೀಠಿಕೆ

'ಸಂಸ್ಕೃತಿ' ಎಂಬ ಪರಿಕಲ್ಪನೆ ಹತ್ತೊಂಬತ್ತನೇ ಶತಮಾನದ ಕೊನೆ ಮತ್ತು ಇಪ್ಪತ್ತನೇ ಶತಮಾನದ ಆರಂಭದ ದಶಕಗಳಲ್ಲಿ ರೂಪುಗೊಂಡಿರುವಂತೆ ಕಾಣುತ್ತದೆ. ಮಾನವಶಾಸ್ತ್ರದ ಅಧ್ಯಯನದಲ್ಲಿ ತೊಡಗಿದ್ದ ಪಶ್ಚಿಮದ ವಿದ್ವಾಂಸರು ರೂಪಿಸಿದ ಪರಿಕಲ್ಪನೆ ಎನ್ನಿಸುತ್ತದೆ. ಪ್ರಕೃತಿಯ ಜೊತೆಗಿನ ನಂಟನ್ನು ತನ್ನ ನೂತನ ಆವಿಷ್ಕಾರಗಳಿಂದಾಗಿ ಕಡಿಮೆ ಮಾಡಿಕೊಳ್ಳುವುದಕ್ಕೆ ಅಥವಾ 'ಪ್ರಕೃತಿಯನ್ನು ಜಯಿಸುತ್ತೇನೆ ಎಂಬ ಮಹತ್ವಾಕಾಂಕ್ಷೆಯ ಹೊತ್ತಿನಲ್ಲಿ ಈ ಪರಿಕಲ್ಪನೆ ಬಳಕೆಯಾಗಲಾರಂಭಿಸಿರಬಹುದು. ಅಂದರೆ 'ಪ್ರಕೃತಿ'ಯಲ್ಲದ್ದು 'ಸಂಸ್ಕೃತಿ' ಎಂಬಂತೆ. ಏನೇ ಆದರೂ 'ಸಂಸ್ಕೃತಿ' ಎಂಬುದರ ಪದರಚನೆಯಲ್ಲಿರುವ ವಾಚ್ಯಾರ್ಥಕ್ಕೂ, ಅದು ಈಗ ಬಳಕೆಯಾಗುತ್ತಿರುವ ಅರ್ಥಕ್ಕೂ ಸಂಬಂಧವಿದ್ದಂತೆ ತೋರುವುದಿಲ್ಲ. ಸಂಸ್ಕೃತಿ ಎಂಬ ಪರಿಕಲ್ಪನೆ ಈಗ ಸಂಸ್ಕಾರ ಮಾಡಿದ್ದು, ಪರಿಶೋಧಿತವಾದ ಕಚ್ಚಾವಸ್ತುವಿನಿಂದ ನಯಗೊಳಿಸಿದ್ದು ಎಂಬರ್ಥದಲ್ಲಿ ಬಳಕೆಯಾಗುತ್ತಿರುವಂತಿದೆ. ಆದರೆ ಮೊದಲು ಈ ಪದ ಆರಂಭಗೊಂಡಾಗ ಪೋಷಿಸು, ಬೆಳೆ ಎಂಬರ್ಥವಿರುವಂತೆ ಕಾಣುತ್ತದೆ. ಉದಾಹರಣೆಗೆ 'ಅಗ್ರಿಕಲ್ಚರ್' ಸೆರಿಕಲ್ಚರ್, ಹಾರ್ಟಿಕಲ್ಚರ್, ಇತ್ಯಾದಿ ಶಬ್ದಗಳು. ಇಂಗ್ಲಿಷ್‌ನಲ್ಲೂ ಸಹ ಮೂಲಪದಕ್ಕೂ, ಈಗ ಬಳಕೆಯಾಗುತ್ತಿರುವ ಸ್ವರೂಪಕ್ಕೂ ಸಂಬಂಧವಿಲ್ಲ.

ಭಿನ್ನ ಭಿನ್ನ ಅರ್ಥಗಳಲ್ಲಿ ಸಮಾಜದ ಎಲ್ಲ ಕ್ಷೇತ್ರಗಳಲ್ಲಿ ವ್ಯಾಪಕವಾಗಿ ಬಳಕೆಯಾಗುತ್ತಿರುವ ಈ ಪರಿಕಲ್ಪನೆ,

೧. ಆಧುನಿಕೋತ್ತರ ಸಂದರ್ಭದಲ್ಲಿ, ಆಯ್ದ ನೈತಿಕ ಜೀವನ ಮೌಲ್ಯಗಳನ್ನು 'ಸಂಸ್ಕೃತಿ' ಎಂದು ಕರೆಯಲಾರಂಭಿಸಿದಂತೆ ಕಾಣುತ್ತದೆ. ಸತ್ಯ, ಅಹಿಂಸೆ, ಪ್ರಾಮಾಣಿಕತೆ, ಮೋಸಮಾಡದಿರುವಿಕೆ ಪರಂಪರೆಯಿಂದ ಬಂದ ಶ್ರೇಷ್ಠವೆಂದು ಭಾವಿಸಲಾದ ಮೌಲ್ಯಗಳನ್ನು ಪ್ರತಿಪಾದಿಸುವಿಕೆಯ ಕುರಿತಂತೆ ವಿವರಿಸಲು ಈ ಪರಿಕಲ್ಪನೆ ಬಳಕೆಯಾಗುತ್ತಿರುವಂತೆ ಕಾಣುತ್ತದೆ. ಕನ್ನಡದ ವಿದ್ವಾಂಸರಾದ ಡಿ.ವಿ.ಗುಂಡಪ್ಪನವರು ಮತ್ತು ಕಥೆಗಾರರಾದ ಮಾಸ್ತಿವೆಂಕಟೇಶ ಅಯ್ಯಂಗಾರರು ಈ ಅರ್ಥದಲ್ಲಿಯೇ ಗ್ರಹಿಸಿದಂತೆ ಕಾಣುತ್ತದೆ.

೨. ಲಲಿತ ಕಲೆ ಕೇಂದ್ರಿತ ಅರ್ಥ. ಸಾಹಿತ್ಯ, ಸಂಗೀತ, ಚಿತ್ರಕಲೆ, ವಾಸ್ತುಶಿಲ್ಪ ಇವುಗಳನ್ನು ವಿವರಿಸಲು ಬಳಕೆಯಾದ ವ್ಯಾಖ್ಯಾನ. ಸರ್ಕಾರದ ಅಂಗವಾದ 'ಸಂಸ್ಕೃತಿ ಇಲಾಖೆ' ಎಂಬುದು ಈ ಅರ್ಥವನ್ನೇ ಧ್ವನಿಸುತ್ತದೆ.

೩. ಮಾನವಶಾಸ್ತ್ರದ ಅಧ್ಯಯನಗಳ ಹಿನ್ನೆಲೆಯಲ್ಲಿ ರೂಪುಗೊಂಡ ವ್ಯಾಖ್ಯಾನ; ಇನ್ನೂ ನಾಗರಿಕತೆಗೆ ಬಾರದ ಜನಸಮುದಾಯಗಳ ಸಮಗ್ರ ಜೀವನ ವಿಧಾನಗಳು. ಆ ಸಮುದಾಯಗಳಲ್ಲಿ ಹುಟ್ಟಿನಿಂದ ಸಾಯುವವರೆಗೆ

ನಡೆಯುವ ಮಾನವಶಾಸ್ತ್ರೀಯ, ಸಮಾಜಶಾಸ್ತ್ರೀಯ ಅಧ್ಯಯನಕ್ಕೆ ಬಳಸಲಾಗುತ್ತಿದೆ. ಕನ್ನಡದ 'ಬಂಡಾಯ' ಸಾಹಿತ್ಯ ಚಿಂತಕರಾದ ಬರಗೂರು ರಾಮಚಂದ್ರಪ್ಪನವರು ರೂಪಿಸಿದ 'ಉಪಸಂಸ್ಕೃತಿ' ಕಲ್ಪನೆ ಈ ಬಗೆಯದು.

೪. ಪ್ರಸ್ತುತದಲ್ಲಿ ಪ್ರಚಲಿತವಿರುವ ನಿರ್ದಿಷ್ಟ ಆಲೋಚನಾ ಕ್ರಮ ಮತ್ತು ಕ್ರಿಯಾ ವಿಧಾನವನ್ನು ಸಂಸ್ಕೃತಿ ಎಂದು ಕರೆಯುತ್ತಿರುವಂತೆ ಕಾಣುತ್ತದೆ. ಉದಾಹರಣೆಗೆ ದಕ್ಷಿಣ ಕನ್ನಡ ಸಂಸ್ಕೃತಿ, ಗ್ರಾಮೀಣ ಸಂಸ್ಕೃತಿ, ಯುದ್ಧ ಸಂಸ್ಕೃತಿ, ಅಮೇರಿಕನ್ ಸಂಸ್ಕೃತಿ, ಭೋಗಸಂಸ್ಕೃತಿ ಮುಂತಾದವುಗಳ ಜೊತೆಗೆ ಪ್ರವಾಸಿ, ಬಂಡವಾಳ, ಇಸ್ಲಾಮಿಕ್, ಕ್ರೈಸ್ತ, ಕಾಂಗ್ರೆಸ್, ಸಿನಿಮಾ ಮುಂತಾದವುಗಳ ಜೊತೆಗೆ ಸಂಸ್ಕೃತಿ ಪದವನ್ನು ಸೇರಿಸಿ ವ್ಯಾಖ್ಯಾನ ಮಾಡಲಾಗುತ್ತಿದೆ. ಇಲ್ಲೆಲ್ಲ ವಿಶಿಷ್ಟವಾದ, ಅನನ್ಯವಾದ ಆಲೋಚನಾ ವಿಧಾನವಿರುವಂತೆ ಕಾಣುತ್ತದೆ.

ಹಾಗಾದರೆ ನಮ್ಮ ರಾಷ್ಟ್ರೀಯತಾ ಚಿಂತನೆಗಳಲ್ಲಿ ಮಂಡಿತವಾಗುತ್ತಿರುವ ಸಂಸ್ಕೃತಿ ವ್ಯಾಖ್ಯಾನ ಯಾವುದು ಮತ್ತು ಹೇಗೆ ಮಂಡನೆಯಾಗುತ್ತಿದೆ. ಆ ನಿಶ್ಚಿತ ನಿಲುವುಗಳ ಹಿಂದಿರುವ ವೈಯಕ್ತಿಕ ಹಾಗೂ ಚಾರಿತ್ರಿಕ ಸಂಗತಿಗಳಾವುವು ಎಂಬುದನ್ನು ಪರಿಶೀಲಿಸಬಹುದು. ಅದಕ್ಕೂ ಮೊದಲು ಕನ್ನಡ ರಾಷ್ಟ್ರೀಯತೆಯ ಸಂದರ್ಭದಲ್ಲಿರುವ ರಾಜಕೀಯಧಾರೆಗಳನ್ನು ಅನುಕೂಲಕ್ಕೋಸ್ಕರ

೧. ಜನಪ್ರಿಯ ಅಥವಾ ಉದಾರವಾದಿ ಸಂಸ್ಕೃತಿ ಚಿಂತನೆ

೨. ಬಲಪಂಥೀಯ ರಾಜಕಾರಣದ ಸಂಸ್ಕೃತಿ ಚಿಂತನೆ

೩. ಎಡಪಂಥೀಯರು ಮಂಡಿಸುವ ಸಂಸ್ಕೃತಿ ಚಿಂತನೆ

ಎಂದು ವಿಭಾಗಿಸಿಕೊಳ್ಳಬಹುದು. ಈ ಮೂರೂ ಧಾರೆಗಳ ಪರಿಕಲ್ಪನೆಗಳನ್ನು ಸ್ಥೂಲವಾಗಿ ಪರಿಶೀಲಿಸಿದರೆ,

೧. ಬಲಪಂಥೀಯ ಚಿಂತನೆಗಳಲ್ಲಿ, ಮುಖ್ಯವಾಗಿ ಆಯ್ದ ಜೀವನ ಮೌಲ್ಯಗಳು ಎಂಬ ಅರ್ಥದಲ್ಲಿ ಸಂಸ್ಕೃತಿ ಶಬ್ದವನ್ನು ಹೆಚ್ಚು ಬಳಸಿದಂತೆ ಕಾಣುತ್ತದೆ.

೨. ಜನಪ್ರಿಯ ಅಥವಾ ಉದಾರವಾದಿ ಚಿಂತನೆಗಳಲ್ಲಿ ಲಲಿತಕಲಾ ಕೇಂದ್ರಿತವಾದ ಮತ್ತು ಮಾನವಶಾಸ್ತ್ರೀಯ ಸಂಸ್ಕೃತಿ ವ್ಯಾಖ್ಯಾನಗಳುಳ್ಳ ಅರ್ಥಗಳು ಪ್ರಧಾನವಾಗಿ ಪ್ರವಹಿಸುತ್ತಿರುವಂತೆ ಕಂಡರೂ, ಈ ಚಿಂತನೆಗಳಲ್ಲಿ ಮೇಲಿನ ನಾಲ್ಕು ರೀತಿಯ ಅರ್ಥಗಳೂ ಸಮ್ಮಿಳಿತಗೊಂಡಿರಬಹುದು.

೨. ಎಡಪಂಥೀಯ ಚಿಂತನೆಗಳಲ್ಲಿ ಸಂಸ್ಕೃತಿ ಎಂಬುದು 'ನಿರ್ದಿಷ್ಟ ಆಲೋಚನಾ ಕ್ರಮ' ವೆಂಬಂತೆಯೂ ಮತ್ತು 'ಜೀವನ ವಿಧಾನ' ಎಂಬ ಮಾನವಶಾಸ್ತ್ರೀಯ ಅರ್ಥ ವ್ಯಾಖ್ಯಾನಗಳು ಸೇರಿ ಕ್ರಿಯಾಶೀಲ ವಾಗಿರುವಂತೆಯೂ ಕಾಣುತ್ತವೆ.

ಈ ವಿಭಜನೆ ಸ್ಥೂಲವಾದುದಷ್ಟೇ ಆಗಿದೆ.

ಮೇಲಿನ ಮೂರು ವಿಚಾರಧಾರೆಗಳಲ್ಲಿನ ಆಯ್ಕೆ ಯಾಕೆ ನಡೆಯುತ್ತದೆ? ಅವುಗಳ ಹಿಂದೆ ಕ್ರಿಯಾಶೀಲವಾಗಿರುವ ವರ್ಗ ಹಿನ್ನೆಲೆಯೇನು? ಅದರ ರಾಜಕಾರಣವೇನು? ಎಂಬುದನ್ನು ಪರಿಶೀಲಿಸಬಹುದು. ಮೊದಲಿನ ಎರಡು ವ್ಯಾಖ್ಯಾನಗಳು ಆಳದಲ್ಲಿ, ಕೆಲವು ಜನರ ಆಲೋಚನಾ ವಿಧಾನಗಳನ್ನು ಮಾತ್ರ ಆರಿಸಿಕೊಂಡು ಉಳಿದವನ್ನು ಹೊರಗಿಡುತ್ತವೆ. ಇದನ್ನು 'ಹೊರಗಿಡುವಿಕೆ' ಅಥವಾ 'ಪಾಲಿಟಿಕ್ಸ್ ಆಫ್ ಎಕ್ಸ್‌ಕ್ಲೂಷನ್' ಎಂದು ಮತ್ತು ಕೊನೆಯ ಎರಡು ವ್ಯಾಖ್ಯಾನಗಳಲ್ಲಿ ಒಳಗೊಳ್ಳುವ ಚಿಂತನೆಗಳಿರುವುದರಿಂದ

(ಪಾಲಿಟಿಕ್ಸ್ ಆಫ್ ಇನ್‌ಕ್ಲೂಷನ್) ಎಂದು ಗುರುತಿಸಿ ಅಧ್ಯಯನ ಮಾಡಬಹುದು. ಪ್ರಸ್ತುತ ಅಧ್ಯಯನದಲ್ಲಿ ಈ ವಿಭಜನೆಯ ಕ್ರಮ ತಾತ್ಕಾಲಿಕವಾದುದು ಎಂಬ ಅರಿವಿನಿಂದಲೇ ತೊಡಗಿಕೊಳ್ಳಲಾಗಿದೆ.

ಅಲ್ಲದೆ ೨೦ನೇ ಶತಮಾನದ ಕಡೆಯಲ್ಲಿ ಮೊದಲ ಎರಡು ವ್ಯಾಖ್ಯಾನಗಳು ಹಿಂದಕ್ಕೆ ಸರಿದು ಕಡೆಯ ಎರಡು ವ್ಯಾಖ್ಯಾನಗಳು ಮಂಡನೆಯಾಗುತ್ತಿವೆ. ಬದಲಾದ ಜಾಗತಿಕ ಸನ್ನಿವೇಶಗಳಿಂದಾಗಿ ಮೊದಲನೆಯ ವ್ಯಾಖ್ಯಾನವು ಈಗಲೂ ಮಂಡನೆಯಾಗುತ್ತಿದ್ದರೆ ಅದು ಕ್ರಿಯೆಗೆ ಪ್ರತಿಕ್ರಿಯೆ ಎಂಬ ಮಟ್ಟದಲ್ಲಿದೆ ಎಂದು ಗ್ರಹಿಸಿಕೊಳ್ಳಬಹುದೆನ್ನಿಸುತ್ತದೆ.

'ಸಂಸ್ಕೃತಿ' ಎನ್ನುವುದು ರಾಜಕೀಯ ವ್ಯಾಖ್ಯಾನ. 'ರಾಷ್ಟ್ರೀಯತೆ' ಎಂಬ ಶುದ್ಧ ರಾಜಕೀಯ ವಿದ್ಯಮಾನ ಕುರಿತು 'ಸಂಸ್ಕೃತಿ' ಎಂಬ ಗ್ರಹಿಕೆಯನ್ನು ವಿಶ್ಲೇಷಿಸಿದರೆ, ಅದು ನಿಸ್ಸಂದೇಹವಾಗಿ ರಾಜಕೀಯ ಗ್ರಹಿಕೆ ಎಂಬುದು ಅರ್ಥವಾಗುತ್ತದೆ. ವರ್ತಮಾನದ ಅಗತ್ಯಗಳಿಗೆ ಗತವನ್ನು ಪುನಾರಚಿಸಿಕೊಳ್ಳುವ, ಹಾಗೆ ರಚಿಸಿಕೊಳ್ಳುವಾಗ ತನಗೆ ಬೇಕಾದ ನೆನಪುಗಳನ್ನು ಮಾತ್ರ ಆರಿಸಿ ತನಗೆ ಬೇಕಾದ ಹಾಗೆ ವ್ಯಾಖ್ಯಾನ ಮಾಡುವ ಕೆಲಸ ಇಲ್ಲಿ ನಡೆಯುತ್ತದೆ. ಆ ಮೂಲಕ ವರ್ತಮಾನದಲ್ಲಿ ಅದು ಕ್ರಿಯಾಶೀಲವಾಗುತ್ತದೆ. ಅದರ ಜೊತೆಯಲ್ಲಿ ರಾಷ್ಟ್ರ ಕಟ್ಟುವ ಕೆಲಸದಲ್ಲಿ, ಎದುರಾಳಿಗಳನ್ನು ಕಲ್ಪಿಸಿಕೊಳ್ಳುವ, ಸಂಗಾತಿಗಳನ್ನು ಗುರುತಿಸುವ ಮೂಲಕ ವರ್ತಮಾನದ ಅಗತ್ಯಗಳಿಗೆ ಪ್ರತಿಕ್ರಿಯೆ ನೀಡುವಲ್ಲಿ ತೊಡಗಿರುತ್ತದೆ.

ಹಾಗಾಗಿ 'ಸಂಸ್ಕೃತಿ' ಎಂಬ ಗ್ರಹಿಕೆ ಬರೀ 'ಭಾವನಾತ್ಮಕ' ವಿಚಾರ ಎಂಬುದು ಸುಳ್ಳು ಎನ್ನಿಸುತ್ತದೆ. 'ರಾಜಕೀಯ ಹಿತಾಸಕ್ತಿ'ಯ ಭಾಗವಾಗಿಯೇ ಕ್ರಿಯಾಶೀಲವಾಗುವ ಧಾರೆಗಳ ಹಿಂದೆ ಮೊದಲೇ ಹೇಳಿದ ಹಾಗೆ 'ವರ್ಗ ಸ್ವಭಾವವೂ' ಕೆಲಸ ಮಾಡುತ್ತಿರುತ್ತದೆ. ಉದಾಹರಣೆಗೆ ಹಿಂದುತ್ವ ಪ್ರತಿಪಾದನೆ ಮಾಡುವ ಬಲಪಂಥೀಯ ಚಿಂತನ ಧಾರೆಯಲ್ಲಿ ಅಪಾರ ವೈರುಧ್ಯಗಳಿರುವ ಸಮುದಾಯಗಳಿವೆ. ಕಾರ್ಮಿಕರು, ಮಹಿಳೆಯರು, ಆದಿವಾಸಿಗಳು, ಅಲ್ಪಸಂಖ್ಯಾತರು, ವಿದ್ಯಾರ್ಥಿಗಳು, ದಲಿತರು ಇತ್ಯಾದಿ ಹೆಸರುಗಳಲ್ಲಿ ಘಟಕಗಳಿವೆ. ಈ ಸಿದ್ಧಾಂತವು ಈ ಎಲ್ಲ ಸಮುದಾಯಗಳಲ್ಲಿರುವ ವರ್ತಮಾನದ ತಲ್ಲಣಗಳನ್ನು ಬಗೆಹರಿಸಲಾಗದು. ಆದರೆ ಈಗಾಗಲೇ ಸೌಲಭ್ಯಗಳನ್ನು ಪಡೆದ ವರ್ಗಗಳು ತಮ್ಮ ಸೌಲಭ್ಯಗಳನ್ನು ವಿಸ್ತರಿಸಿಕೊಳ್ಳುವುದಕ್ಕೆ ಅಥವಾ ಈಗಾಗಲೇ ಸ್ಥಾಪಿತಗೊಂಡಿರುವ ಹಿತಾಸಕ್ತಿಗಳನ್ನು ಉಳಿಸಿಕೊಳ್ಳುವುದಕ್ಕೆ ನಿರ್ಮಿಸಿಕೊಂಡಿರುವ ಸಿದ್ಧಾಂತವಿದು ಎಂಬಂತೆ ತೋರುತ್ತದೆ. ಆದರೆ 'ಹುಸಿ ಶತ್ರುವನ್ನು' ಕಲ್ಪಿಸಿ ಈ ಎಲ್ಲ ಜನ ಸಮುದಾಯಗಳನ್ನು ಹಿಡಿದಿರಿಸಿಕೊಳ್ಳಲು ಪ್ರಯತ್ನಿಸಲಾಗುತ್ತಿರುತ್ತದೆ. ಚರಿತ್ರೆಯತ್ತ ನೋಡಿದರೆ 'ನಾಝಿ' ಸಿದ್ಧಾಂತದ ಹೆಸರಲ್ಲಿ 'ಹಿಟ್ಲರ'ನು ಜರ್ಮನಿಯ ವಿವಿಧ ವರ್ಗಗಳನ್ನು ಯಹೂದಿಗಳ ವಿರುದ್ಧ ಎತ್ತಿಕಟ್ಟಿ ನಿರ್ಮಿಸಿದ ಶತ್ರುತ್ವದಂತೆಯೇ ಭಾರತದಲ್ಲಿ ಹಿಂದುತ್ವವಾದಿಗಳು ಮುಸ್ಲಿಮರ, ಕ್ರಿಶ್ಚಿಯನ್ನರ ಮತ್ತು ಕಮ್ಯುನಿಸ್ಟರ ವಿರುದ್ಧ ಸಮುದಾಯಗಳನ್ನು ಬಳಸಲಾಗುತ್ತಿದೆ. ಶತ್ರುಗಳು ಭಯೋತ್ಪಾದಕರೆಂದೂ, ಕ್ರೂರಿಗಳೆಂದೂ, ದೇಶದ್ರೋಹಿಗಳೆಂದೂ ನಿರ್ದಿಷ್ಟ ಸಮುದಾಯವನ್ನು ರಾಕ್ಷಸೀಕರಿಸಿ ಏಕಾಂಗಿಯಾಗಿಸಿ ಉಳಿದ ಜನಸಮುದಾಯಗಳ ನಡುವೆ ಅಪನಂಬಿಕೆಯನ್ನು ಹುಟ್ಟಿಸಿ ಭೀಕರ ಹಿಂಸೆ ಸೃಷ್ಟಿಸಿರುವುದು ಅದರ ಉದ್ದೇಶವಾಗಿದೆ. ಈ ಸಿದ್ಧಾಂತವನ್ನು ಅದರ ದ್ವೇಷದ ಕಾರಣಕ್ಕಾಗಿ, ಸಮುದಾಯಗಳನ್ನು ಒಡೆಯುವ

ಕಾರಣಕ್ಕಾಗಿ ವಿರೋಧಿಸುವ ಜನರನ್ನು ದೇಶದ್ರೋಹಿಗಳ ಪಟ್ಟಿಗೆ ಸೇರಿಸುವ ಕೆಲಸವೂ ನಡೆಯುತ್ತಿದೆ. ಹಾಗಾಗಿ ಭಾರತದಲ್ಲಿ ಧಾರ್ಮಿಕ ಅಲ್ಪಸಂಖ್ಯಾತರನ್ನು ರಾಕ್ಷಸೀಕರಿಸುವುದರ ಜತೆಗೆ ಪ್ರಗತಿಪರರನ್ನೂ ನಿರಂತರ ತೇಜೋವಧೆ ಮಾಡುವ ಕೆಲಸ ನಡೆಯುತ್ತಿದೆ.

ಇಲ್ಲೆಲ್ಲ ಬಳಕೆಯಾಗುವ ಪರಂಪರೆ ಮತ್ತು ಸಂಸ್ಕೃತಿ ರಕ್ಷಣೆಯ ವಿಚಾರಗಳನ್ನು ಕನ್ನಡ ಸಂದರ್ಭದಲ್ಲಿ ತಮಿಳರ ವಿರುದ್ಧ ಕದಂಬರು ಮತ್ತು ಚಾಲುಕ್ಯರನ್ನೂ, ಮುಸ್ಲಿಮರ ವಿರುದ್ಧ ಹೊಯ್ಸಳರು ಮತ್ತು ವಿಜಯನಗರದ ಪ್ರಭುತ್ವಗಳನ್ನು ಶತ್ರುಗಳೆಂದು ನಿಲ್ಲಿಸಿ, ಅಲ್ಲಿನ ರೋಚಕ ಸಂಗತಿಗಳನ್ನು ಮಾತ್ರ ಆರಿಸಿ ಪೋಣಿಸಿ ವಿದ್ವೇಷದ ಸಿದ್ಧಾಂತ ಕಟ್ಟಲಾಗುತ್ತದೆ. ಈ ಸಿದ್ಧಾಂತದ ಮುಖ್ಯ ಲಕ್ಷಣವೆಂದರೆ ಪ್ರಭುತ್ವಕ್ಕೂ, ಜನತೆಗೂ ವ್ಯತ್ಯಾಸವೇ ಇಲ್ಲವೆಂಬಂತೆ ಬಿಂಬಿಸುತ್ತಾ ಹೋಗುವುದಾಗಿರುತ್ತದೆ.

ಈ ಸಿದ್ಧಾಂತದ ಜೊತೆಯಲ್ಲಿ ಅಂತರಾಷ್ಟ್ರೀಯ ಆರ್ಥಿಕ ಹಿತಾಸಕ್ತಿಗಳೂ ಸೇರುತ್ತವೆ. ಅದಕ್ಕೆ ಸಮುದಾಯಗಳ ನಡುವಿನ ಅಪನಂಬಿಕೆಗಳು, ಬಿಕ್ಕಟ್ಟುಗಳು ಹೆಚ್ಚಿದಷ್ಟು ಸಂಪತ್ತಿನ ಲೂಟಿ ಸರಳವಾಗಿಬಿಡುತ್ತದೆ. ಹಾಗಾಗಿಯೇ ಜಾಗತೀಕರಣದ ಪ್ರಕ್ರಿಯೆಯೂ ಭಾರತದಲ್ಲಿ ತಾರಕಕ್ಕೇರಿದ ಮತೀಯ ಸಂಘರ್ಷಗಳು, ಕೇಂದ್ರದಲ್ಲಿ ಹಿಂದುತ್ವವಾದಿಗಳ ಅಧಿಕಾರ ಗ್ರಹಣವಾದ ಪ್ರಕ್ರಿಯೆಗಳನ್ನು ಬೇರೆ ಬೇರೆ ಎಂದು ಗ್ರಹಿಸಲಾಗದ ಸಂಕೀರ್ಣ ವಾಸ್ತವದಲ್ಲಿ ಹೆಣೆದುಕೊಂಡಿವೆ.

ಎಡಪಂಥೀಯ ಚಿಂತನೆಗಳಲ್ಲೂ ಸಹ ಸಮುದಾಯಗಳನ್ನು ಒಟ್ಟುಗೂಡಿಸುವ ಕೆಲಸ ನಡೆಯುತ್ತಿರುತ್ತದೆ. ಅಲ್ಲಿ ಕುಲೀನ ಹಿತಾಸಕ್ತಿಗಳ ವಿರುದ್ಧ ಸಮುದಾಯಗಳನ್ನು ಸಂಘಟಿಸಿ ಸಂಘರ್ಷಕ್ಕೆ ನಿಲ್ಲುವ ಆಸಕ್ತಿ ಆ ಸಿದ್ಧಾಂತದಲ್ಲಿ ಇದೆ. ಜೊತೆಗೆ ಸಮಸಮಾಜದ ನಿರ್ಮಾಣದ ಆಶಯಕ್ಕಾಗಿ ದಮನಿತ ಸಮುದಾಯಗಳನ್ನು ಒಟ್ಟುಗೂಡಿಸಲೆತ್ನಿಸುತ್ತದೆ. ಇಲ್ಲಿ ಧರ್ಮಕ್ಕಿಂತ 'ವರ್ಗ' ಆಧಾರಿತ ಚಿಂತನೆ ಕ್ರಿಯಾಶೀಲವಾಗಿರುತ್ತದೆ.

ಕನ್ನಡ ಸಂದರ್ಭದಲ್ಲಿ (ವಿಸ್ತರಿಸಿದರೆ ಭಾರತದಲ್ಲಿ) ಜನಪ್ರಿಯ ಗ್ರಹಿಕೆ ಹೇಗೆ ಆರಂಭವಾಯಿತು ಎಂಬುದನ್ನು ಕುರಿತು ಕನ್ನಡದ ಸಮುದಾಯಪರ ಚಿಂತಕರಾದ ಜಿ.ರಾಜಶೇಖರ್‌ರವರು ಹೀಗೆ ಹೇಳುತ್ತಾರೆ :

"ಬ್ರಿಟಿಷ್ ಆಡಳಿತದಿಂದಾಗಿ, ನಮ್ಮ ಸಂಸ್ಕೃತಿ, ನಮಗೆ ಆತ್ಮರಕ್ಷಣೆಯ ಒಂದು ಸಾಧನವಾಯಿತು. ಅದುವರೆಗೆ ಸಂಸ್ಕೃತಿ ನಮ್ಮ ನಾಳಗಳಲ್ಲಿ ನಮಗೆ ಗೊತ್ತೇ ಆಗದ ಹಾಗೆ ಹರಿಯುವ ರಕ್ತದಂತೆ, ನಾವು ಯೋಚಿಸದೆ ಮಾಡುವ ಉಸಿರಾಟದಂತೆ, ಸಹಜ ಜೀವಂತಿಕೆಯಾಗಿದ್ದಿತು. ವಸಾಹತುಶಾಹಿಯಿಂದಾಗಿ, ನಾವು ನಮ್ಮ ಸಂಸ್ಕೃತಿಯ ಬಗ್ಗೆ ಆತ್ಮ ಪ್ರತ್ಯಯದಲ್ಲಿ ಯೋಚಿಸತೊಡಗಿದೆವು. ಸಂಸ್ಕೃತಿ, ನಮ್ಮನ್ನು ನಾವೇ ನೋಡಿಕೊಳ್ಳುವ ಕನ್ನಡಿ ಆಯಿತು. ವಸಾಹತುಶಾಹಿ ನಮ್ಮ ಚರಿತ್ರೆಯನ್ನು ಪುನರ್ ಸೃಷ್ಟಿಸಿಕೊಳ್ಳಲೂ ನಮ್ಮನ್ನು ಒತ್ತಾಯಿಸಿತು. ವಸಾಹತುಶಾಹಿಯ ಅವಮಾನವನ್ನು ಮೀರಲು, ಗತಕಾಲದ ಒಂದು ಸುವರ್ಣ ಯುಗವನ್ನು ಕಲ್ಪಿಸಿಕೊಳ್ಳುವ ಅಗತ್ಯ ತಲೆದೋರಿತು. ನಮ್ಮ ಚರಿತ್ರೆ ಮಾತ್ರವಲ್ಲ ಪುರಾಣಗಳನ್ನೂ ನಾವು ಹೀಗೆ ಪುನರ್ ಸೃಷ್ಟಿಸಿಕೊಳ್ಳಬೇಕಾಯಿತು."[೧]

ಜಿ.ರಾಜಶೇಖರ್ ಅವರ ಈ ಚಿಂತನೆಯನ್ನು ಅನೇಕ ಕೋನಗಳಿಂದ ಪರಿಶೀಲಿಸಬಹುದು.

೧. ಪರಂಪರೆಯನ್ನು ಪುನಾರಚಿಸುವಾಗ ಬಳಕೆಗೊಂಡ ಸಂಕೇತಗಳು ಏಮ್ಮುಖಿಯಾಗಿದ್ದವು.

೨. ಹಾಗೆ ಬಳಕೆಗೊಂಡ ಸಂಕೇತಗಳು ಅಥವಾ ಪ್ರತಿಮೆಗಳು, ರೂಪಿಸಿದವರ ಚಿಂತನೆಗಳಿಗನುಗುಣವಾಗಿ ಸ್ವಭಾವದಲ್ಲಿ ಉದಾರವಾದಿಯೊ ಇಲ್ಲ ಮತೀಯವಾದಿಯೊ ಆದುವು.

೩. ಅದೇ ಪ್ರತಿಮೆಗಳನ್ನು ವರ್ತಮಾನದ ಅಗತ್ಯಗಳಿಗೆ ಅನುಗುಣವಾಗಿ ಮುರಿದು ಕಟ್ಟಲಾಯಿತು.

೪. ಈ ಪ್ರತಿಮೆ, ಸಂಕೇತಗಳನ್ನೇ ನಿರಾಕರಿಸಲಾಯಿತು.

ಮೇಲಿನ ಅಂಶಗಳನ್ನು ಭಾರತದ ವಿಶಾಲಭಿತ್ತಿಗೆ ಅನ್ವಯಿಸಿ ನೋಡಲು ಸಾಧ್ಯ, ಕರ್ನಾಟಕತ್ವದ ಹಿನ್ನೆಲೆಗೂ ಅನ್ವಯಿಸಲು ಸಾಧ್ಯ.

೧. ವಸಾಹತುಶಾಹಿ ವಿರುದ್ಧ ಕ್ರಿಯಾಶೀಲವಾಗಿದ್ದ ಬ್ರಾಹ್ಮಣ ಅಥವಾ ಕುಲೀನ ವರ್ಗಗಳ ನಾಯಕತ್ವ ಪ್ರಧಾನಪಾತ್ರವಹಿಸಿತು. ಇಲ್ಲಿ 'ರಾಷ್ಟ್ರ'ವಾಗಿ ಕಲ್ಪಿಸಿಕೊಂಡು ನಡೆಸಿದ ಚಿಂತನೆ ಮತ್ತು ಹೋರಾಟಗಳಲ್ಲಿ ಬಳಕೆಗೊಂಡ ಸಂಕೇತಗಳು ಗೋವು, ಗಣೇಶ, ಶಿವಾಜಿ, ರಾಮ, ದುರ್ಗಿ, ಭಾರತಮಾತೆ, ಭುವನೇಶ್ವರಿ ಇವುಗಳು ಅನ್ಯಸಮುದಾಯಗಳ ಪ್ರತಿಮೆಗಳಾಗಲು ಸಾಧ್ಯವಾಗಲಿಲ್ಲ. ಬ್ರಾಹ್ಮಣಕೇಂದ್ರಿತ ಅಥವಾ ಹಿಂದೂ ಎಂದು ಕರೆಯಲಾಗುವ ಸಮುದಾಯಗಳಿಗೆ ಸೇರಿದ್ದ ಸಂಕೇತಗಳಾಗಿದ್ದವು. ಇವುಗಳನ್ನು 'ಸೆಕ್ಯುಲರ್' ಆಗಿ ಕಲ್ಪಿಸಲು ಸಾಧ್ಯವಾಗಲಿಲ್ಲ. ಹಾಗಾಗಿ ಇದು ಒಮ್ಮುಖಿಯಾದವು.

೨. ಆದರೆ ತಿಲಕರ ಪ್ರಯೋಗಗಳು ಮತೀಯವಾದಕ್ಕೆ ಪುಷ್ಟಿಕೊಡತೊಡಗಿದರೆ, ಗಾಂಧಿಯವರ 'ರಾಮ'ನ ಕಲ್ಪನೆ ಉದಾತ್ತವಾದುದಾಗಿತ್ತು. ಅದೊಂದು 'ಆದರ್ಶಸ್ಥಿತಿ'ಯ ಊಹನೆಯಾಗಿತ್ತು. ಆ ಮೂಲಕ ಕಲ್ಪಿಸಿಕೊಂಡ ಆದರ್ಶ ಸಮಾಜದ ಕನಸೂ ಆಗಿತ್ತು. ಇಲ್ಲೆಲ್ಲ ಪುರಾಣ ಪ್ರತಿಮೆಗಳ ಸಹಾಯದೊಂದಿಗೆ ವರ್ತಮಾನವನ್ನು ಪುನಾರಚಿಸುವ ಪ್ರಯತ್ನ ನಡೆಯುತ್ತಿತ್ತು. ಗಾಂಧಿಯವರ ಆಚರಣೆಗಳಲ್ಲಿ ಭಿನ್ನತೆಗಳಿರಲಿಲ್ಲ. ಅದು ಹೊರಗಿಟ್ಟು ನೋಡುವ ರಾಜಕಾರಣವಾಗಿರಲಿಲ್ಲ. ಈ ಕಾರಣಕ್ಕಾಗಿ ಮುಸ್ಲಿಮ್ ಸಮಾಜದ ಉದಾರ ವಾದಿಗಳು ಸ್ವಲ್ಪಕಾಲ ಗಾಂಧಿಯವರೊಂದಿಗೆ ಬಂದರು. ಆದರೆ ಗಾಂಧೀಜಿಯವರು ಭಾರತಕ್ಕೆ ಬರುವ ಮೊದಲೇ ತಿಲಕರ ಈ ಪುರಾಣ ಮತ್ತು ಚರಿತ್ರೆಗಳ ಸಾಂಸ್ಕೃತಿಕ ಪ್ರತಿಮೆಗಳ ಪ್ರಯೋಗ ನಡೆದಿತ್ತು. ಅಷ್ಟೊತ್ತಿಗಾಗಲೇ ಹಿಂದೂ ಮುಸ್ಲಿಂ ಎಂಬ ಸಮುದಾಯಗಳ ನಡುವೆ ಗೋಡೆಗಳನ್ನು ವ್ಯವಸ್ಥಿತವಾಗಿ ಕಟ್ಟಲಾಗಿತ್ತು. ಗಾಂಧಿಯವರು ಬಿರುಕುಗಳನ್ನು ಮುಚ್ಚಲು, ಗೋಡೆ ಒಡೆದು ಹೃದಯಸಂವಾದಕ್ಕೆ ಎಡೆಮಾಡಿಕೊಡಲು ಸೀಮಿತ ಅವಕಾಶವನ್ನು ಬಳಸಿದ ಹಾಗೆ ಕಾಣುತ್ತದೆ. ಆದರೆ ಎರಡೂ ಕಡೆಯ ಆರ್ಥಿಕ -ಜಮೀನುದಾರಿ ಹಿತಾಸಕ್ತಿಗಳು ಈ ಪ್ರಯತ್ನಗಳಿಗೆ ಅವಕಾಶಕೊಟ್ಟಂತೆ ಕಾಣುವುದಿಲ್ಲ.

೩. ಮುಖ್ಯವಾಗಿ ಕನ್ನಡ ಸಾಹಿತ್ಯದಲ್ಲಿ ಈ ಕೆಲಸ ಕುವೆಂಪು ಮುಂತಾದವರಿಂದ ನಡೆದಿದೆ. ಅವರು ಎಲ್ಲ ವೈದಿಕ ಸಂಕೇತಗಳನ್ನು, ಪ್ರತಿಮೆಗಳನ್ನು ಕೆಳಮುಖವಾಗಿ ಚಲಿಸುವಂತೆ ಮಾಡಿದರು. ಐತ-ಪೀಂಚಲುವಿನಂಥ ಸಾಮಾನ್ಯ ಪಾತ್ರಗಳನ್ನು ಶಿವ ಶಿವಾಣಿಯರಾಗಿ ಕಲ್ಪಿಸಿಕೊಟ್ಟರು. ಶಂಬೂಕ, ಏಕಲವ್ಯರ ಮೂಲಕ ದಮನಿತರ ಹಕ್ಕು ಪ್ರತಿಪಾದನೆ ಮಾಡಿದರು. ರಾಮನನ್ನು ಮಾನವೀಯ ನೆಲೆಗಟ್ಟಿನ ಮೇಲೆ, ಆಧುನಿಕ ರಾಮನಾಗಿ ರೂಪಿಸಲು ಪ್ರಯತ್ನಿಸಿದರು. ಈ ಹಿನ್ನೆಲೆಯಲ್ಲಿ ಬಿ.ಎಂ.ಶ್ರೀಯವರ ಭುವನೇಶ್ವರಿ ಮತ್ತು ಕುವೆಂಪುರವರ

ಕನ್ನಡ ಜನನಿ ಉಗ್ರಸ್ವರೂಪದ ಹಿಂದೂದೇವತೆಗಳಲ್ಲ, ಅವು 'ಸೆಕ್ಯುಲರ್' ಆದ ಭಾಷಿಕ ಪ್ರತಿಮೆಗಳಂತೆ ಕಾಣುತ್ತವೆ.

೪. ಭಗತ್‌ಸಿಂಗ್ ಮುಂತಾದ ತೀವ್ರಗಾಮಿಗಳೆಂದು ಕರೆಯಲಾಗುವ ಧಾರೆ ಎಲ್ಲ ವೈದಿಕ ಪ್ರತಿಮೆಗಳನ್ನು ನಿರಾಕರಿಸಿತು 'ಸ್ವಾತಂತ್ರ್ಯ'ವೆಂಬುದನ್ನೆ ಆದರ್ಶ ಕಲ್ಪನೆಯನ್ನಾಗಿ ಮಂಡಿಸಿತು. ಪರಂಪರೆ ಮೂಲಕ 'ದೇವರನ್ನು ಶೋಷಣೆಗಾಗಿ ಸೃಷ್ಟಿಸಿದ್ದು ಎಂದು ಅದನ್ನು ತಿರಸ್ಕರಿಸಿತು. ಕುವೆಂಪುರವರ ಕೆಲವು ಕವಿತೆಗಳಲ್ಲಿ ಈ ಮನೋಭಾವ ಕಾಣಿಸುತ್ತದೆ. ಅವರ 'ಹೂವು ದೇವರು' ಮತ್ತು 'ಇಂದಿನ ದೇವರು' ಆ ಸ್ವಭಾವದ ಕವಿತೆಗಳು.

ಇದಿಷ್ಟೇ ಅಲ್ಲದೆ 'ಉಪನಿಷತ್' ವಿಚಾರದ ಧಾರೆಗೆ ಹತ್ತಿರವಾಗುವ ಕುವೆಂಪುರವರ 'ನಿರಂಕುಶಮತಿತ್ವ ಕವಿ ಇಕ್ಬಾಲರ 'ಖುದಿ' ತತ್ವ ವಿವೇಕಾನಂದರ 'ಧೀ' ಕಲ್ಪನೆ ಇವೆಲ್ಲವೂ ಅಥವಾ ಇನ್ನೂ ಅನೇಕ ಧಾರೆಗಳು ಕ್ರಿಯಾಶೀಲವಾಗಿದ್ದವು. ಹಾಗಾಗಿಯೇ 'ಸಂಸ್ಕೃತಿ' ಅಥವಾ ಪರಂಪರೆ ಎನ್ನುವುದು ಅತ್ಯಂತ ಸಂಕೀರ್ಣ ವಾಸ್ತವಗಳಲ್ಲಿ ರೂಪು ತಳೆಯುವ ರಾಜಕೀಯ ಕಲ್ಪನೆ ಎಂದು ಭಾವಿಸಬಹುದು. ಜಿ.ರಾಜಶೇಖರರ ಮಾತುಗಳು ಇನ್ನೂ ವಿಸ್ತರಿಸಬಹುದಾದ ಅಗಾಧ ಸೂಕ್ಷ್ಮಗಳನ್ನು ಒಳಗೊಂಡಿವೆ.

### ೬.೨ ಸಂಸ್ಕೃತಿ ಕುರಿತಂತೆ ಆಲೂರರ ಚಿಂತನೆಗಳು

ಕನ್ನಡ ರಾಷ್ಟ್ರೀಯತೆಗೆ, ಏಕೀಕರಣ ಚಳುವಳಿಯನ್ನು ರೂಪಿಸಿ ದೊಡ್ಡ ಶಕ್ತಿ ತಂದುಕೊಟ್ಟ ಆಲೂರರನ್ನು ಮರೆತು ಸಂಸ್ಕೃತಿ ಚಿಂತನೆ ನಡೆಸಲಾಗದು. ಏಕೆಂದರೆ 'ಹಿಂದುತ್ವ'ದಂತೆಯೇ (ಎದುರಲ್ಲದಿದ್ದರೂ) 'ಕರ್ನಾಟಕತ್ವ' ಎಂದು ವಿವರಿಸಿ ಅದಕ್ಕೆ ಸ್ಪಷ್ಟರೂಪ ಕೊಡಲು ಅವರು ಯತ್ನಿಸಿದರು. ಆಧುನಿಕ ರಾಷ್ಟ್ರವು 'ಧರ್ಮ' ಆಧಾರದ ಮೇಲೆ ನಡೆಯಬೇಕೆಂದು, ಪ್ರಣಾಳಿಕಾರೂಪದ 'ಕರ್ನಾಟಕತ್ವದ ವಿಕಾಸ' ಕೃತಿಯನ್ನು ರಚಿಸಿದರು. ಈ ಪುಸ್ತಕ ರಚಿಸುವುದಕ್ಕೂ ಮೊದಲು 'ಕರ್ಣಾಟಕ ಗತವೈಭವ,' 'ಕರ್ಣಾಟಕದ ವೀರ ರತ್ನಗಳು,' 'ಮಾಧ್ವಸಿದ್ಧಾಂತ ಪ್ರವೇಶಿಕೆ' ಮುಂತಾದ ಕೃತಿಗಳನ್ನು ಅವರು ರಚಿಸಿದರು. ಆ ಎಲ್ಲ ಕೃತಿಗಳಲ್ಲಿ ಮತೀಯವಾದಿಯೊಬ್ಬನ ಚಿಂತನೆಗಳಂತೆ ಕಾಣುವ ಆಲೋಚನೆಗಳಿವೆ. ಆದರೆ 'ಕರ್ನಾಟಕತ್ವದ ವಿಕಾಸ' ಕೃತಿಯಲ್ಲಿ ಆಲೂರರು ಉದಾರವಾದಿಯೊಬ್ಬನ ರೂಪದಲ್ಲಿ ಕಾಣಿಸಿಕೊಳ್ಳುತ್ತಾರೆ.

"ಆಧುನಿಕ ಪಾಶ್ಚಾತ್ಯ ಸಂಸ್ಕೃತಿ ಎಲ್ಲರನ್ನೂ ಗುಲಾಮರನ್ನಾಗಿ ಮಾಡಿದೆ, ಮತ್ತು ಮಾನವತಾವಾದದ ಹೆಸರಿನಲ್ಲಿ ಮಾನವ ಜೀವನದ ವಿನಾಶ ನಡೆಯುತ್ತಿದೆ. ಜಾತಿ, ಧರ್ಮ ಮತ್ತು ಕುಲಧರ್ಮಗಳು ಕುಸಿಯುತ್ತಿದ್ದು, ಅಂತಿಮ ದುರಂತವಾಗಿ ಶುದ್ಧ ಜಾತಿಯ ಸ್ತ್ರೀಯರ ಸಂಕರವು ಆಗಿಬಿಟ್ಟಿತ್ತು. ಇದು ವರ್ಣ ಸಂಕರದಲ್ಲಿ ಮುನ್ನಡೆದು, ಪೃಥ್ವಿಯಲ್ಲಿ ನರಕ ಬರುವುದರ ನಾಂದಿಯಾಗುತ್ತದೆ."[೨]

೧೯೩೧ರಲ್ಲಿ ಪ್ರಕಟಗೊಂಡ ಕೃತಿ, "ಮಾಧ್ವಸಿದ್ಧಾಂತ ಪ್ರವೇಶಿಕೆ"ಯಲ್ಲಿನ ಮಾತುಗಳಿವು. ಇವನ್ನು ಕೆ.ರಾಘವೇಂದ್ರರಾವ್ ರವರು ತಮ್ಮ "ಕರ್ನಾಟಕ ಏಕೀಕರಣದ ನಾಲ್ವರು ಚಿಂತಕರು" ಕೃತಿಯಲ್ಲಿ ದಾಖಲಿಸಿದ್ದಾರೆ. ಕರ್ನಾಟಕ ಏಕೀಕರಣ ಚಳುವಳಿ ಉತ್ತುಂಗಕ್ಕೆ ತಲುಪುತ್ತಿದ್ದ ದಿನಗಳಲ್ಲಿ ಬರೆದ ಈ

ಮಾತುಗಳು ಆಲೂರರನ್ನು ಸಾಂಪ್ರದಾಯಕ ಮತ್ತು ಜನಾಂಗಗಳ ಪಾವಿತ್ರ್ಯದಲ್ಲಿ ನಂಬಿಕೆ ಇಟ್ಟ ಮೂಲಭೂತವಾದಿಯಂತೆ ಚಿತ್ರಿಸಲು ಸಾಧ್ಯ. ಆದರೆ ದೇಶ ವಿಭಜನೆಯ ಸಂದರ್ಭದಲ್ಲಿ ನಡೆದ ಹಿಂಸೆ ಈ 'ಅತಿ?' ನಿಲುವಿಗೂ ತಲುಪಿರಬಹುದು. ಅಥವಾ ಆಲೂರರ ಆಂತರ್ಯದ ಸಿದ್ಧಾಂತವೂ ಇದೇ ಆಗಿರಬಹುದು.

ಆದರೆ ೧೯೫೭ರಲ್ಲಿ ಪ್ರಕಟಗೊಂಡ 'ಕರ್ನಾಟಕತ್ವ ವಿಕಾಸ' ಕೃತಿಯಲ್ಲಿನ ಅವರ ಅಭಿಪ್ರಾಯಗಳು ಈ ರೀತಿ ಇವೆ :

"- ವಿಶ್ವ ಸಂಸ್ಕೃತಿಯೇ ಸನಾತನ ಸಂಸ್ಕೃತಿ, ಅಂದರೆ ನಿತ್ಯ ಸಂಸ್ಕೃತಿ. -ಜಾತಿ, ಮತ, ಪಂಥ, ದೇಶ, ಜನಾಂಗ ಮುಂತಾದ ಯಾವ ವಿಧದ ಭೇದ ಭಾವವು ಇಲ್ಲದೆ ನಮ್ಮ ಭಾರತ ದೇಶವು ಎಲ್ಲರಿಗೂ ಇಂಬುಗೊಟ್ಟಿದ್ದು ಈ ವ್ಯಾಪ್ತರೂಪದ ಚಿನ್ಹೆ.

-ಈ ಸನಾತನ ಧರ್ಮಕ್ಕೆ ಮತಾಂತರ ಕಾರಣವಿಲ್ಲ. ದೇಶಾಂತರವಿಲ್ಲ. ಇದಕ್ಕೆ ಎಲ್ಲರೂ ಸಮಾನ ಅಧಿಕಾರಿಗಳು, ಎಲ್ಲರಿಗೂ ಮುಕ್ತಿದ್ವಾರ, ಇದೇ ಸನಾತನಧರ್ಮದ ವೈಶಿಷ್ಟ್ಯ.

-ಈ ವ್ಯಾಪ್ತ ರೂಪಕ್ಕೆ ವಿರೋಧಿಗಳಿದ್ದವರು ಮಾತ್ರವೇ ನಮ್ಮ ಶತ್ರುಗಳು.

-"ವಿಶಿಷ್ಟ ರೂಪ"ವನ್ನು ಒಪ್ಪದಿದ್ದವರು ಶತ್ರುಗಳಲ್ಲ, ಭಾರತೀಯ ಸಂಸ್ಕೃತಿಯೆಂದರೆ ಸನಾತನ ಸಂಸ್ಕೃತಿ. ಅದಕ್ಕೆ ಹಿಂದುತ್ವವೆನ್ನಬಹುದು. ಇಲ್ಲಿ ಹೆಸರು ಮುಖ್ಯವಲ್ಲ ಅರ್ಥಮುಖ್ಯ"[೩]

ಭಾರತದಲ್ಲಿ ಯಾವುದೇ ರಾಜಕೀಯ ಅಥವಾ ಸಾಮಾಜಿಕ ಕ್ರಾಂತಿಯೂ, ಅದರ ಪೂರ್ವಭಾವಿಯಾಗಿ ಒಂದು ಧಾರ್ಮಿಕ ಕ್ರಾಂತಿಯಲ್ಲದಿದ್ದರೆ ಸಂಭವಿಸಲಾರದೆಂದು ವಾದಿಸುವ ಆಲೂರರು, ರಾಷ್ಟ್ರೀಯತೆಯನ್ನು ಧಾರ್ಮಿಕ ನೆಲೆಗಟ್ಟಿನ ಮೇಲೆ ನಿಲ್ಲಿಸಲು ಪ್ರಯತ್ನಿಸುತ್ತಾರೆ ಎಂದು ಕೆ.ರಾಘವೇಂದ್ರರಾವ್‌ರವರು ಚಿಂತಿಸುತ್ತಾರೆ. ಈ ಅರ್ಥದಲ್ಲಿ ಆಲೂರರು ಪ್ರತಿಪಾದಿಸುವ ರಾಷ್ಟ್ರೀಯತೆಗೆ ಬಳಸುವ ಉದಾಹರಣೆಗಳು 'ಎಕ್ಸ್‌ಕ್ಲೂಸಿವ್' ಆಗಿ ಕಾಣಿಸುತ್ತವೆ. ಎಲ್ಲ ಸಮುದಾಯಗಳ 'ಪಾತ್ರ'ಗಳು ಅವರ ರಂಗದ ಮೇಲೆ ಕಾಣಿಸುವುದಿಲ್ಲ. ಸಾಂಸ್ಕೃತಿಕ ಸಂಕೇತಗಳ ವಿಚಾರಕ್ಕೆ ಬಂದರೆ ವಿದ್ಯಾರಣ್ಯ ಉತ್ಸವ, ನಾಡಹಬ್ಬಗಳ ಜೊತೆಗೆ ನಿಜಗುಣ ಶಿವಯೋಗಿಗಳ ಉತ್ಸವ, ಬಸವೇಶ್ವರರ ಉತ್ಸವ, ಇವುಗಳಿಗೆ ನಿಲ್ಲುತ್ತದೆ. ಅಂದರೆ ತನ್ನ ಸಮುದಾಯದ ಸಂಕೇತಗಳ ಜೊತೆಯಲ್ಲಿ, ತಾನು ಬದುಕುತ್ತಿರುವ ಭಾಗದ ಇನ್ನೊಂದು ಪ್ರತಿಷ್ಠಿತ ಸಮುದಾಯದ ಸಂಕೇತಗಳನ್ನು ಕೂಡ ಅವರು ಬಳಸುತ್ತಾರೆ. ಅವರ 'ನಾಡಹಬ್ಬದ' ಪರಿಕಲ್ಪನೆಯಾದರೂ 'ವಿಜಯನಗರ ಗತ ಸಾಮ್ರಾಜ್ಯ'ದ ನೆನಪುಗಳ ಕುರಿತ ಅವಿಮರ್ಶಾತ್ಮಕ ಅಥವಾ ರೋಮಾಂಚಕ ಕಲ್ಪನೆಯಿಂದ ಕೂಡಿದ ಕೂಸು ಆಗಿತ್ತು. ಲಿಂಗಾಯತ ಸಮುದಾಯಗಳ ಜೊತೆ 'ಸ್ಟ್ರಾಟಜಿಕ್' ಆಗಿ ವರ್ತಿಸುವ ಆಲೂರರ ಒಳಗೊಳ್ಳುವಿಕೆ ಅದರಾಚೆಗೆ ವಿಸ್ತರಿಸಿಕೊಳ್ಳುವುದಿಲ್ಲ. ತನ್ನ ಪಕ್ಕದಲ್ಲೇ ಇರುವ ಜುಂಜಪ್ಪ, ಮಾಯಮ್ಮ, ಎಲ್ಲಮ್ಮ, ಇತ್ಯಾದಿಗಳು ಅವರಿಗೆ ಮುಖ್ಯವೆನ್ನಿಸುವುದೂ ಇಲ್ಲ. ಕುರುಬರು, ಗೊಲ್ಲರು, ಸೂಫಿಗಳು, ಮುಸ್ಲಿಮರು, ದಲಿತರು, ನಾಯಕರು ಇವರ ಪಾಲ್ಗೊಳ್ಳುವಿಕೆಯ ಕುರಿತು ಅವರಲ್ಲಿ ದೊಡ್ಡ ಮೌನ ಮಾತ್ರ ಇದೆ. ಹಾಗಾಗಿ ಕುಲೀನ ವರ್ಗಗಳ ಆಯ್ದ ವಿವರಗಳನ್ನು ಮಾತ್ರ ಮಂಡಿಸುವ ಆಲೂರರ ರಾಷ್ಟ್ರೀಯತೆಗೆ ಸಹಜವಾಗಿಯೇ ಅನೇಕ ಕೊರತೆಗಳಿವೆ. ಈ ಕೊರತೆಗಳನ್ನು ಬಹುಶಃ ಅವರು ತಮ್ಮ ಧಾರ್ಮಿಕ ರಾಜಕಾರಣದಲ್ಲಿ ತುಂಬಿಕೊಳ್ಳಲು

ಯತ್ನಿಸುತ್ತಾರೆ. 'ಭಾಷೆ' ತನ್ನ ಸ್ವಭಾವದಲ್ಲಿ 'ಸೆಕ್ಯುಲರ್' ಆಗಲು ವಿಸ್ತರಿಸಿಕೊಳ್ಳಲು ಆಧುನಿಕ ಸಂದರ್ಭ ಒತ್ತಾಯಿಸುವುದರ ಫಲವಾಗಿ ಅಲ್ಲಿ ಕನ್ನಡ ಭಾಷಿಕ ಸಮುದಾಯವಾಗಿ ಕಲ್ಪಿಸಿಕೊಳ್ಳಲು ಸುಲಭ. ಆದರೆ ಈ ಭಾಷಿಕ ಸಮುದಾಯದ ಯಜಮಾನಿಕೆ ಮಾತ್ರ ಉತ್ತರ ಕರ್ನಾಟಕದ ಪ್ರತಿಷ್ಠಿತ ಎರಡು ಜಾತಿ ಸಮುದಾಯಗಳದ್ದು. ಬಹುಶಃ ಈ ಕಾರಣಗಳಿಗಾಗಿಯೇ ಮೈಸೂರು ಮತ್ತು ಉತ್ತರ ಕರ್ನಾಟಕದ ಜೊತೆ ಏಕೀಕರಣದ ವಿಚಾರದಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಿರಬಹುದು ಎಂದು ಊಹಿಸಲು ಸಾಧ್ಯವಿದೆ.

ಮೇಲೆ ಮಂಡಿಸಿದ ಅವರ 'ಹಿಂದುತ್ವ,' ಅಥವಾ 'ಹಿಂದಿತ್ವ' ಕಲ್ಪನೆ ಕೂಡ ಸಾಂಸ್ಕೃತಿಕವಾದದ್ದು. ಅದಕ್ಕೆ ಪರ್ಯಾಯವಾಗಿ ಪ್ರತಿಪಾದಿಸುತ್ತಿರುವ ಕರ್ನಾಟಕತ್ವದ ಕುರಿತು ಆಲೂರರು ಹೇಳುವುದು ಹೀಗೆ :

"ಸಾಂಸ್ಕೃತಿಕ ರಾಷ್ಟ್ರೀಯತ್ವ ಅಂದರೇನೆ ಕರ್ನಾಟಕ ರಾಷ್ಟ್ರೀಯತ್ವ. ಇದರಲ್ಲಿ, ೧. ವಾಙ್ಮಯ ೨. ಇತಿಹಾಸ ೩. ಅಖಿಲ ಕರ್ನಾಟಕ ವಿಶ್ವವಿದ್ಯಾಲಯ ೪. ಅಖಂಡ ಕರ್ನಾಟಕಕ್ಕಾಗಿ ಮಿಕ್ಕ ಸಾಂಸ್ಕೃತಿಕ ಚಟುವಟಿಕೆಗಳು ಮತ್ತು ಇತರ ಚಟುವಟಿಕೆಗಳು."[೪]

ಆದರೆ ಅಸಂಖ್ಯಾತವಾಗಿರುವ ಸಮಸ್ತ ಸಮುದಾಯಗಳ ಆಲೋಚನಾಕ್ರಮ, ಜೀವನ ವಿಧಾನಗಳು ಅವರ ಚಿಂತನೆಗಳಲ್ಲಿ ಕಾಣಿಸಿಕೊಳ್ಳುವುದಿಲ್ಲ. ಕಡೆಯಪಕ್ಷ ಜೈನರ, ಮಹಿಳೆಯರ ಪ್ರಸ್ತಾಪವೂ ಕಾಣುವುದಿಲ್ಲ. ಊಹಿಸಿ ನೋಡಿದರೆ ಆಲೂರರು ಉಳಿದ ಸಮುದಾಯಗಳ ಜೊತೆ ವಾಗ್ವಾದಗಳಿಲ್ಲದೆ ಮುಖಾಮುಖಿ ಇಲ್ಲದೆ ರೂಪಿಸುತ್ತಿದ್ದ ಚಿಂತನೆಗಳಾದ್ದರಿಂದ ಮತ್ತು ಏಕಾಂಗಿ ನಿಲುವುಗಳಾದ್ದರಿಂದ ಅಷ್ಟೊಂದು ಪ್ರಜಾತಾಂತ್ರಿಕವಾಗಿ ಕಾಣುವುದಿಲ್ಲ. ದ್ವಂದ್ವ ನಿಲುವುಗಳಲ್ಲೇ ಉದಾರವಾದಿಯಾಗಬಯಸುವ ಅವರ ಚಿಂತನೆಗಳು ವಾಸ್ತವವನ್ನು ಬದಲಾಯಿಸಬೇಕಾದ ಉಮೇದಿಗಿಂತ ಬದಲಾದ ವಾಸ್ತವವನ್ನು ನೋಡಿ ಮಾಡಿಕೊಂಡ ಬದಲಾವಣೆಗಳಂತೆ ಅವು ತೋರುತ್ತವೆ. ಈ ಸಂದೇಹಕ್ಕೆ ಕಾರಣವೂ ಇಲ್ಲದಿಲ್ಲ. ೧೯೫೧ರಲ್ಲಿ ಪ್ರಕಟಗೊಂಡ ಮಧ್ವರ ಕುರಿತಾದ ಪ್ರಕಟಣೆಯಲ್ಲಿ ಆಲೂರರ ಜೊತೆ ಸಂವಾದವೂ ಸಾಧ್ಯವಿಲ್ಲ ಎಂಬಷ್ಟರ ಮಟ್ಟಿಗೆ ಬ್ರಾಹ್ಮಣ್ಯದ ನಿಲುವುಗಳನ್ನು ಪ್ರತಿಪಾದಿಸುವವರು, ೧೯೫೭ರಲ್ಲಿ ಪ್ರಕಟಿಸಿದ ಪುಸ್ತಕದಲ್ಲಿ ಎಲ್ಲ ಧರ್ಮಗಳನ್ನು ಗೌರವಿಸಿ ಕಟ್ಟುವ 'ಜಾತ್ಯತೀತತೆ' ಕುರಿತು ಆಸಕ್ತಿ ತೋರುತ್ತಾರೆ. ಪರಿಸ್ಥಿತಿ ಬದಲಾಗಿದೆ. ದೇಶಕ್ಕೆ ಸಂವಿಧಾನ ಬಂದಿದೆ, ಗಣರಾಜ್ಯವೆಂದು ಘೋಷಿಸಲಾಗಿದೆ. 'ಸೆಕ್ಯುಲರ್'ವಾದವನ್ನೂ ಬಲವಾಗಿ ಪ್ರತಿಪಾದಿಸುತ್ತಿದ್ದ ನೆಹರೂ ಮುಂತಾದವರು ದೇಶದ ನಾಯಕ ಸ್ಥಾನದಲ್ಲಿದ್ದಾರೆ. ತಾನು ಬದುಕುತ್ತಿರುವ ಪರಿಸರದಲ್ಲಿ ಶೂದ್ರ ಸಮುದಾಯಕ್ಕೆ ಸೇರಿದವರೊಬ್ಬರು ಮುಖ್ಯಮಂತ್ರಿಗಳಾಗಿದ್ದಾರೆ. ಈ ಎಲ್ಲ ವಿರಾಟ್ ಸ್ವರೂಪದ ಚಾರಿತ್ರಿಕ ಸಂಗತಿಗಳು ಅವರ ತಿಳುವಳಿಕೆಯನ್ನು ಪ್ರಶ್ನಿಸಿಕೊಳ್ಳುವಂತೆ ಮಾಡಿರಬಹುದು ಎಂದು ಊಹಿಸಲು ಸಾಧ್ಯವಿದೆ. ಅಲ್ಲದೆ ಅವರ ನಿಲುವುಗಳನ್ನು ಇನ್ನಷ್ಟು ಪರಿಶೀಲಿಸಬಹುದು :

"ಕರ್ನಾಟಕ ಸಂಸ್ಕೃತಿಯೆಂಬುದು, ಬೇರೆ ಸಂಸ್ಕೃತಿಯೇ ಇಲ್ಲ ಇಡೀ ಭಾರತಕ್ಕೆಲ್ಲ ಒಂದೇ ಸಂಸ್ಕೃತಿ ಅದೆ. ಅದೆಂದರೆ ಆಧ್ಯಾತ್ಮಿಕ ಸಂಸ್ಕೃತಿ ಎಂದು ಹಲವರ ಕಲ್ಪನೆ. ಅದು ಅಷ್ಟು ಸರಿಯಲ್ಲ! ಏಕೆಂದರೆ ಭಾರತೀಯ ಸಂಸ್ಕೃತಿ ಎಂಬುದು ಇಡೀ ಭರತಖಂಡಕ್ಕೇನೆ ಒಂದೇ ಇರುತ್ತದೆಂಬುದನ್ನು ನಾನೂ ಒಪ್ಪುತ್ತೇನೆ. ಆದರೆ ಆ ಸಂಸ್ಕೃತಿಗೆ ಕರ್ನಾಟಕವು ತನ್ನ ವಿಶಿಷ್ಟ ಸ್ವರೂಪವನ್ನು ಕೊಡುತ್ತದೆಂಬುದನ್ನೂ ಯಾರೂ ಮರೆಯ

ಕೂಡದು. ಉದಾ. ಗಾಯನ ಕಲೆಯನ್ನು ತೆಗೆದುಕೊಳ್ಳಿರಿ. ಕರ್ನಾಟಕ ಸಂಗೀತ ಎಂಬುದೊಂದು ಭಾರತೀದೇವಿಗೆ ಕರ್ನಾಟಕವು ತೊಡಿಸಿದ ಆಭರಣವಲ್ಲವೇ? ಹಾಗೆಯೇ ಧರ್ಮವನ್ನು ತೆಗೆದುಕೊಳ್ಳಿರಿ, ಕರ್ನಾಟಕ ತ್ರಿಮತಸ್ಥರು ಮತ್ತು ಲಿಂಗಾಯತ ಹಾಗೂ ಜೈನ ಮತದ ಅನೇಕ ಧಾರ್ಮಿಕ ಪುರುಷರು ಸನಾತನ ಧರ್ಮಕ್ಕೆ ಕಾಣಿಕೆಯಾಗಿ ಹೊಸ ಉಡುಪುಗಳನ್ನು ಕೊಟ್ಟಿಲ್ಲವೆ? ಸಾರಾಂಶ, ಕರ್ನಾಟಕ ಸಂಸ್ಕೃತಿಯೆಂಬುದು ಭಾರತ ಸಂಸ್ಕೃತಿಯನ್ನು ಒಳಗೊಂಡುದಲ್ಲದೆ ಅದನ್ನು ತನ್ನ ವಿಶಿಷ್ಟ ಸಂಸ್ಕೃತಿಯಿಂದ ಪುಷ್ಟಿಗೊಳಿಸಿತು.''[೫]

ಇಲ್ಲಿ ಆಲೂರರು 'ಭಾರತೀಯ ಸಂಸ್ಕೃತಿ' 'ಒಂದೇ ಸಂಸ್ಕೃತಿ' ಎಂಬುದನ್ನು ನಿರಾಕರಿಸುತ್ತಿಲ್ಲ. ಆದರೆ ಹಾಗಂತ 'ಕರ್ನಾಟಕ ಸಂಸ್ಕೃತಿ'ಯ 'ಅಸ್ತಿತ್ವ' ನಿರಾಕರಿಸಲೂ ಒಪ್ಪುತ್ತಿಲ್ಲ. ತನ್ನ ಯಜಮಾನನಾಗಬಯಸಿರುವ ಸಂಸ್ಕೃತಿಗೆ, ತನ್ನ ಸಂಸ್ಕೃತಿ ಮಹತ್ವದ ಕಾಣಿಕೆ ಕೊಟ್ಟಿದೆ ಎನ್ನುವುದನ್ನು ಪ್ರತಿಪಾದಿಸುತ್ತಾರೆ. ಇಲ್ಲಿ ಸಂಸ್ಕೃತಿ ಎಂದರೆ 'ಸಂಗೀತ' ಮತ್ತು 'ಧರ್ಮ' ಎಂಬಲ್ಲಿಗೆ ಬಂದು ಯೋಚಿಸುತ್ತಾರೆ. ಇಲ್ಲಿ ಕೂಡಾ ಆಲೂರರು ತ್ರಿಮತಸ್ಥರು, ಜೈನರು, ಲಿಂಗಾಯತದವರೆಗೆ ಮಾತ್ರ 'ಇನ್‌ಕ್ಲೂಸಿವ್', ಅದರಾಚೆಗೆ ವಿಸ್ತರಿಸಲಾಗದು ಅವರಿಂದ. ಆದರೂ ಭಾರತೀಯ ಸಂಸ್ಕೃತಿಗೆ ಕರ್ನಾಟಕ ಸಂಸ್ಕೃತಿ ದೊಡ್ಡ ಕೊಡುಗೆಯನ್ನೇ ಕೊಟ್ಟಿದೆ ಎನ್ನುವಷ್ಟರ ಮಟ್ಟಿಗೆ ಅವರು 'ಕನ್ನಡತ್ವ'ವನ್ನು ಪ್ರತಿಪಾದಿಸುತ್ತಾರೆ.

ಮೇಲಿನ ಈ ಎಲ್ಲ ವಿವರಗಳನ್ನು ಪರಿಶೀಲಿಸಿದಾಗ ಡಿ.ಆರ್.ನಾಗರಾಜರ ಅಲ್ಪಸಂಖ್ಯಾತರ 'ತುಷ್ಟಿಪುಷ್ಟಿ' ಕುರಿತು, ಕನ್ನಡ ರಾಷ್ಟ್ರೀಯತೆ ಸ್ವರೂಪ, ಚಿಂತನೆಯಲ್ಲಿ ವಿವರಿಸಿರುವ ವ್ಯಾಖ್ಯಾನವನ್ನು ಸಂದೇಹಿಸಬೇಕಾಗುತ್ತದೆ. ಏಕೆಂದರೆ ಬಹುಸಂಖ್ಯಾತ ಶೂದ್ರ ಸಮುದಾಯಗಳ ಕೈಯಲ್ಲಿ ಆಧುನಿಕ ರಾಷ್ಟ್ರವು ನಿಲ್ಲುತ್ತದೆಂಬುದನ್ನು ಕಳೆದ ಎರಡು ಚುನಾವಣೆಗಳು ಅವರಿಗೆ ಮನದಟ್ಟು ಮಾಡಿಸಿರುತ್ತವೆ. ಹಾಗಾಗಿ ಅಲ್ಪಸಂಖ್ಯಾತರೆಂದರೆ ಇವತ್ತು 'ಹಿಂದುತ್ವ'ದ ಎದುರು ನಾವು ಗ್ರಹಿಸುತ್ತಿರುವ ಅಲ್ಪಸಂಖ್ಯಾತವಾಗಿರಲಿಕ್ಕೆ, ಅಲ್ಪಸಂಖ್ಯಾತರು ತ್ರಿಮತಸ್ಥರು ಎಂದು ಹೇಳಲಾಗುವ ಸಮುದಾಯವೇ ಆಗಿರಬಹುದೇ ಎಂಬ ಸಂದೇಹ ಹುಟ್ಟುತ್ತದೆ. ಹೆಚ್ಚೆಂದರೆ ಅವರು ಭಾಷಿಕ ಅಲ್ಪಸಂಖ್ಯಾತರನ್ನು ಕುರಿತು ಹೇಳುತ್ತಿರಬಹುದು. ಏಕೆಂದರೆ ಅವರ ರಾಷ್ಟ್ರಪರಿಕಲ್ಪನೆಯಲ್ಲಿ 'ಬ್ರಾಹ್ಮಣ' ಮತ್ತು 'ಕ್ಷತ್ರಿ'ಯರ ಹೊಂದಾಣಿಕೆ ಮಾತ್ರ ಮುಖ್ಯವಾಗುತ್ತದೆ. ಅದರಾಚೆಗೆ ಏನು? ಎಂಬ ಪ್ರಶ್ನೆಗಳಿಗೆ ಆಲೂರರ ಸಂಸ್ಕೃತಿ ಚಿಂತನೆಯಲ್ಲಿ ಉತ್ತರಗಳು ಬಹುದುರ್ಬಲ.

### ೬..೩ 'ಸಂಸ್ಕೃತಿ' ಕುರಿತಂತೆ ಬಿ.ಎಂ.ಶ್ರೀಯವರ ಚಿಂತನೆಗಳು

'ಕರ್ನಾಟಕದ ಏಕೀಕರಣ' ಅಗತ್ಯ ಎಂದು ಪ್ರತಿಪಾದಿಸಿದ ಮೈಸೂರು ಕರ್ನಾಟಕದ ಕೆಲವೇ ವ್ಯಕ್ತಿಗಳಲ್ಲಿ ಬಿ.ಎಂ.ಶ್ರೀ ಕೂಡ ಒಬ್ಬರು. ಅದಕ್ಕಾಗಿ ಆಲೂರರಂತೆ ಚಳವಳಿಯೊಂದನ್ನು ಕಟ್ಟಿ ನಾಯಕತ್ವ ವಹಿಸಲಿಲ್ಲ. ಆದರೆ ಹೋರಾಟಕ್ಕೆ ನಿರಂತರ ಬೆಂಬಲ ಸೂಚಿಸುತ್ತಾ ಬಂದರು. ಸ್ವಭಾವದಲ್ಲಿ 'ಉದಾರವಾದಿ' ನಿಲುವುಗಳನ್ನು ಹೊಂದಿದ್ದ ಬಿ.ಎಂ. ಶ್ರೀಯವರು ಸಂಸ್ಕೃತಿ ಕುರಿತಂತೆ ಆಯ್ಕೆ ರಾಜಕಾರಣ ಮಾಡುವುದಿಲ್ಲ. ಅವರ ಸಂಸ್ಕೃತಿ ಚಿಂತನೆ ಹೆಚ್ಚು ಮುಕ್ತವಾಗಲು ಬಯಸುತ್ತದೆ. ಸಾಹಿತ್ಯದ ಆಕೃತಿಗಳ ಮೂಲಕ ಧರ್ಮ, ರಾಜಕೀಯ, ವಿಜ್ಞಾನ, ತಂತ್ರಜ್ಞಾನಗಳನ್ನು ಅರಿಯಲು ಪ್ರಯತ್ನಿಸಿದಂತೆ ಕಾಣುತ್ತದೆ. 'ಸಂಸ್ಕೃತಿ' ಎಂಬ ವ್ಯಾಖ್ಯೆ

ಸ್ಪಷ್ಟಗೊಳ್ಳದಿದ್ದ ಕಾಲದಲ್ಲಿ ಬರೆಯಲು ಬಿ.ಎಂ.ಶ್ರೀಯವರು ಆರಂಭಿಸಿದರು. 'ಇಸ್ಲಾಂ ಸಂಸ್ಕೃತಿ' ಎಂಬ ಅವರ ಅನುವಾದದ ಕೃತಿಯಲ್ಲಿಯೇ, 'ಧರ್ಮ'ವನ್ನು ಸಂಸ್ಕೃತಿ ಎಂದು ಭಾವಿಸಿದಂತೆ ಕಾಣುತ್ತದೆ. ಹಾಗಾಗಿ ಭಾಷೆ, ಧರ್ಮ, ಸಾಹಿತ್ಯದ ಮೇಲೆಯೇ ಸಂಸ್ಕೃತಿ ಚಿಂತನೆಯನ್ನು ಬಿ.ಎಂ.ಶ್ರೀ ರೂಪಿಸಿದಂತೆ ಕಾಣುತ್ತದೆ. 'ರಾಜಕೀಯ ನನ್ನ ಕ್ಷೇತ್ರವಲ್ಲ' ಎಂಬ ಧೋರಣೆ ಬಿ.ಎಂ.ಶ್ರೀಗಿರುವಂತೆ ಕಂಡರೂ ಬದಲಾದ ಇವತ್ತಿನ ಪರಿಸ್ಥಿತಿಯಲ್ಲಿ, ಅವರ ಕ್ರಿಯೆಗಳೆಲ್ಲವೂ ರಾಜಕೀಯ ಕ್ರಿಯೆಗಳಾಗಿ ಕಾಣುತ್ತವೆ. 'ಸಂಕುಚಿತ'ವಲ್ಲದ ಅವರ ಚಿಂತನೆಗಳ ಸ್ವರೂಪವೇ ದೇಶ, ಜನಾಂಗ, ಭಾಷೆ, ಕಾಲ, ಧರ್ಮ ಇತ್ಯಾದಿಗಳನ್ನು ಹೊರಗಿಟ್ಟು ನೋಡದೆ ಎಲ್ಲೆಲ್ಲಿ ಉದಾತ್ತ ಅಂಶಗಳಿವೆಯೋ ಅವನ್ನೆಲ್ಲ ಸ್ವೀಕರಿಸಿ ರಾಷ್ಟ್ರೀಯವೆನ್ನಬಹುದಾದ ರೀತಿಯದು. ಹಾಗಾಗಿ ಆಳುವವರ ಸಂಸ್ಕೃತಿಯಿಂದ ತನಗೆ ಬೇಕಾದ್ದನ್ನು ಆರಿಸಿಕೊಳ್ಳುವುದಕ್ಕೆ ಅವರಿಗೆ ಯಾವ ಮುಲಾಜುಗಳೂ ಅಡ್ಡ ಬರಲಿಲ್ಲ. ಆಳುವವರನ್ನು ಕುರಿತಂತೆ ಅವರಿಗೆ ಅಸಹನೆಯೇ ಇರಲಿಲ್ಲವೆಂದು, ಬಹುಪಾಲು ಬ್ರಾಹ್ಮಣ ಸಮುದಾಯದವರನ್ನು ಒಳಗೊಂಡ ವಿದ್ವಾಂಸರು ಟೀಕಿಸುತ್ತಾರೆ. ಆದರೆ ಡಿ.ವಿ.ಜಿ ಮುಂತಾದವರು ತೀರಾ ಅಸಹನೆಯಿಂದ ನೋಡುತ್ತಿದ್ದ 'ಇಸ್ಲಾಂ'ನ್ನು, ಬಿ.ಎಂ.ಶ್ರೀಯವರು 'ಭ್ರಾತೃಧರ್ಮ' ಎಂದು ಚಿತ್ರಿಸಿ ಮೈಸೂರಿನ ವಿದ್ವತ್ ವಲಯವನ್ನು ಕಂಗೆಡಿಸಿ ಬಿಡುತ್ತಾರೆ. ಬಿ.ಎಂ.ಶ್ರೀಯವರ ಕಾಲದಲ್ಲಿ ಮೈಸೂರಿನ ಸಾಂಪ್ರದಾಯಿಕತೆಯಲ್ಲಿ ನಂಬಿಕೆಯಿಟ್ಟು ಬರೆಯುತ್ತಿದ್ದ ಸಾಹಿತಿ ಚಿಂತಕರಲ್ಲಿ ಕಾಣುವ ನಿಲುವು ಪಾಶ್ಚಿಮಾತ್ಯರಿಂದ ನಾವು ಕಲಿಯುವುದೇನೂ ಇಲ್ಲ ಎಂಬಂತೆಯೇ ಆರಂಭವಾಗುತ್ತದೆ. ಮಾಸ್ತಿಯವರ 'ಮಸುಮತ್ತಿ', 'ಸೋರಲಿಪ್ರಸಂಗ' ಒಳಗೊಂಡಂತೆ ಅನೇಕ ಕತೆಗಳಲ್ಲಿ ಈ ಧಾಟಿ ಕಾಣಿಸುತ್ತದೆ. ಇಂಥ ಕಡೆಯಲ್ಲೆಲ್ಲ ಬ್ರಿಟಿಷ್ ಪ್ರಭುತ್ವದಲ್ಲಿ ಅಧಿಕಾರಿಯಾಗಿದ್ದ ಮಾಸ್ತಿಯವರು ರಾಜಕೀಯ ನಿಲುವುಗಳನ್ನು ವಿರೋಧಿಸದಿದ್ದರೂ 'ಜೀವನ ವಿಧಾನ' ಕುರಿತು ಪಶ್ಚಿಮ ನಮಗೆ ಕಲಿಸುವುದೇನೂ ಇಲ್ಲ ಎಂಬಂತೆ ಭಾವಿಸುತ್ತಾರೆ. ಇದು ಪರಂಪರೆಯನ್ನು ವಿರೋಧಗಳಿಲ್ಲದೆ ಒಪ್ಪಿಕೊಂಡ ನಿಲುವು. ಆ ಮೂಲಕ ಪರಂಪರೆಯ ಎಲ್ಲ ತಾರತಮ್ಯಗಳನ್ನು ತಾರತಮ್ಯಗಳೆಂದು ಭಾವಿಸದೆ ಜೀವನವಿಧಾನ, ಜೀವನ ಪ್ರೀತಿ ಎಂಬಂತೆ ಗ್ರಹಿಸಲಾಗುತ್ತದೆ. ಆದರೆ ಬಿ.ಎಂ.ಶ್ರೀ 'ಜಾತಿ, ಮತಗಳ ಮದದ ಗುಹೆಯಲಿ ಕೆಡೆಯದಿರಿ' ಆ ಕಾರಣಕ್ಕೆ ಭಾರತ ಪತನಗೊಂಡಿತು ಎಂದು 'ಭರತಮಾತೆ'ಯಿಂದ ಹೇಳಿಸುತ್ತಾರೆ.

"ಇವಳ ಸೊಬಗನವಳು ತೊಟ್ಟು,
ನೋಡ ಬಯಸಿದೆ;
ಅವಳ ತೊಡಿಗೆ ಇವಳಿಗಿಟ್ಟು
ಹಾಡಬಯಸಿದೆ"[೬]

ಸಂಸ್ಕೃತಿಗಳ ಶ್ರೇಷ್ಠತೆ ಕುರಿತಾದ ಯಾವ ವ್ಯಸನವೂ ಇಲ್ಲದ ಮಾನಸಿಕ ಸ್ಥಿತಿಯಲ್ಲಿ ಕಟ್ಟಬಹುದಾದ ಕವಿತೆಯ ಸಾಲುಗಳಿವು; 'ಕನ್ನಡ' ಮತ್ತು 'ಇಂಗ್ಲಿಷ್'ಗಳನ್ನು ಭಾಷಿಕವಾಗಿ ಸಾಂಸ್ಕೃತಿಕವಾಗಿ ಐಕ್ಯತೆಗಿರುವರೆಂದು ಕಲ್ಪಿಸಿಕೊಳ್ಳುವುದೇ ವಸಾಹತುಶಾಹಿ ಆಡಳಿತದ ಸಂದರ್ಭದಲ್ಲಿ ದೇಶದ್ರೋಹವಂತೆ

ಕಾಣಬಹುದು. ರಾಜಕೀಯವಾಗಿ ನೋಡಿದರೆ ಅದು ನಿಜವೂ ಹೌದು. ಆದರೆ ಬಿ.ಎಂ.ಶ್ರೀ ಅವರಿಗೆ ಈ ಎಲ್ಲ 'ಪಾವಿತ್ರ್ಯ'ದ ಸಂಗತಿಗಳಿಗಿಂತ 'ಕನ್ನಡ ಕಟ್ಟು'ವುದು ಬೇಕಾಗಿದೆ. ಅದಕ್ಕಾಗಿ ಉತ್ತಮ ಸಾಧ್ಯತೆಗಳೆಲ್ಲಿವೆ ಎಂದು ಹುಡುಕಿ ತರಲು ಪ್ರಯತ್ನಿಸುತ್ತಾರೆ. ಸಾರಾಂಶದಲ್ಲಿ ವಸಾಹತುಶಾಹಿ ತತ್ವವಾದ, ಆಳುತ್ತಿರುವ ಅಧೀನ ದೇಶಗಳ 'ಹೊರೆ'ಯ ಸಿದ್ಧಾಂತದ ಬಗ್ಗೆ ಶ್ರೀಯವರಿಗೆ ಮೌನಸಮ್ಮತಿ ಇರುವಂತೆ ಕಾಣುತ್ತದೆ. ಆದರೆ ಕೀನ್ಯಾದ ಸಾಮ್ರಾಜ್ಯಶಾಹಿ ಚಿಂತಕ ಗೂಗಿವಾ ಥಿಯಾಂಗೋ ಮಂಡಿಸುವ, ತಮ್ಮ ಅಧೀನದಲ್ಲಿ ಜನರ ಚೈತನ್ಯ ನಾಶಗೊಳಿಸಲು ಸಾಮ್ರಾಜ್ಯಶಾಹಿಯು ತನ್ನ ಭಾಷೆ ಮತ್ತು ಸಾಂಸ್ಕೃತಿಕ ಆಯಾಮಗಳ ಮೂಲಕ ಮಣಿಸಲು ಯತ್ನಿಸುತ್ತದೆ ಎಂದು ಹೇಳುತ್ತಾ, ಸಾಮ್ರಾಜ್ಯಶಾಹಿಯು ದೊಡ್ಡ ಆಯುಧವನ್ನು ಪ್ರಯೋಗಿಸುತ್ತದೆ. 'ಆ ಆಯುಧವೆಂದರೆ ಸಾಂಸ್ಕೃತಿಕ ಬಾಂಬು. ಈ ಸಾಂಸ್ಕೃತಿಕ ಬಾಂಬಿನ ಗುರಿ ಜನರ ಆತ್ಮವಿಶ್ವಾಸವನ್ನು ಅಲುಗಿಸುವುದು. ಜನ ತಮ್ಮ ಹೆಸರುಗಳಲ್ಲಿ, ಭಾಷೆಗಳಲ್ಲಿ, ಪರಿಸರದಲ್ಲಿ, ಪರಂಪರೆಯಲ್ಲಿ, ಸಾಮರಸ್ಯದಲ್ಲಿ, ಸಾಮರ್ಥ್ಯಗಳಲ್ಲಿ ಅಂತಿಮವಾಗಿ ತಮ್ಮ ತಮ್ಮ ತನಗಳಲ್ಲಿ ಇಟ್ಟಿರುವ ಸ್ವಾಭಿಮಾನವನ್ನು ನಾಶಮಾಡುವುದು. ಈ ಆತ್ಮವಿಶ್ವಾಸ ನಾಶವು ಜನಕ್ಕೆ ತಮ್ಮ ಗತವನ್ನು 'ಕೆಲಸಕ್ಕೆ ಬಾರದ ಬಂಜರುಭೂಮಿ' ಎಂದು ನಂಬುವಂತೆ ಮಾಡುತ್ತದೆ. ಆ ಬಂಜರು ಭೂಮಿಯಿಂದ ತಮ್ಮನ್ನು ದೂರವಿರಿಸಿಕೊಳ್ಳುವಂತೆ ಹಾಗೂ ತಮ್ಮದಲ್ಲದ ಮತ್ತೊಂದನ್ನು ಅಪ್ಪಿಕೊಳ್ಳುವಂತೆ ಮಾಡುತ್ತದೆ."[೭]

ಬಿ.ಎಂ.ಶ್ರೀ. ಮತ್ತು ಗೂಗಿ ಬರೆಯುತ್ತಿರುವ ಕಾಲಘಟ್ಟಗಳು ಬೇರೆ ಬೇರೆ ಆದರೂ ವಸಾಹತು ಶಾಹಿಯು ತನ್ನ ನೇರ ಆಡಳಿತದಲ್ಲಿ ಅಧೀನರಾಷ್ಟ್ರಗಳ ಅಜ್ಞಾನಕ್ಕೆ ಬೆಳಕಾಗಬಲ್ಲೆ ಎಂಬ ಅಹಂಕಾರದ ಜೊತೆಗೆ ಸಾಂಸ್ಕೃತಿಕವಾಗಿ ಕಲಿಸುವ ಗುರುವಿನ ಧೋರಣೆಯನ್ನು ವ್ಯಕ್ತಪಡಿಸುತ್ತಿತ್ತು. (ಅದರ ಆರ್ಥಿಕ, ರಾಜಕೀಯ ವಿನಾಶಕಾರಿ ಪ್ರವೃತ್ತಿಯನ್ನು ಬಿಟ್ಟು ನೋಡುವುದಾದರೆ). ಆದರೆ ದೂರದಿಂದ ಆಳುವುದು ಹೇಗೆ ಅಥವಾ ದೋಚುವುದು ಹೇಗೆ ಎಂಬುದನ್ನು ಕರಗತ ಮಾಡಿಕೊಂಡಿರುವ ನವವಸಾಹತುಶಾಹಿಯು ತಾನು ಮಾರುಕಟ್ಟೆ ಮಾಡುತ್ತಿರುವ ದೇಶಗಳಿಗೆ, ಸಿನಿಮಾಗಳ ಮೂಲಕ, ಉಡುಗೆತೊಡುಗೆ ಮೂಲಕ, ಭಾಷೆ ಮೂಲಕ ಟಿ.ವಿ., ಇಂಟರ್‌ನೆಟ್‌ಗಳ ಮೂಲಕ 'ಪ್ರತಿಷ್ಠಿತ'ದ ಭ್ರಮೆ ಹುಟ್ಟಿಸುವ ಮೂಲಕ, ಸಂಸ್ಕೃತಿಯನ್ನೂ ಮಾರಾಟಮಾಡುತ್ತದೆ ಎಂಬುದು ಬಹುಪಾಲು ಆಧುನಿಕೋತ್ತರವಾದಿ ಚಿಂತಕರ ಅಭಿಮತ. ಗೂಗಿ ಈ ಬಿಕ್ಕಟ್ಟುಗಳನ್ನು ಗ್ರಹಿಸಿರುವ ರೀತಿ ತೊಂಬತ್ತನೇ ದಶಕದ ಜಾಗತಿಕ ಬದಲಾವಣೆಗಳಿಂದ ಸಂಭವಿಸಿದ್ದು. (ಡಿ.ಆರ್.ನಾಗರಾಜ ಅವರ ಥಾಯ್ಲೆಂಡ್ ಪ್ರವಾಸದ ಲೇಖನ ಒಳಗೊಂಡು ಅನೇಕ ಬರಹಗಳಲ್ಲಿ ಇದೇ ಧಾಟಿಯಿದೆ)

ಆದರೆ ಬಿ.ಎಂ.ಶ್ರೀ ತನ್ನನ್ನು ಆಳುತ್ತಿರುವ ಯಜಮಾನನಲ್ಲಿಯೂ ಇರಬಹುದಾದ ಒಳ್ಳೆಯ ಗುಣಗಳನ್ನು ಆಯ್ದು ತನ್ನ ಚರಿತ್ರೆ ಕಟ್ಟಿಕೊಳ್ಳುತ್ತೇನೆ ಎಂಬ ನಿಲುವು ಮೊದಲೇ ಹೇಳಿದ ಹಾಗೆ, ತನ್ನದೆಲ್ಲವೂ ಪವಿತ್ರವಾದದ್ದು, ಅನ್ಯರದ್ದು ಅಸ್ಪೃಶ್ಯ ಎಂಬ ಗ್ರಹಿಕೆಗಿಂತ ಭಿನ್ನವಾದ ಸಂಕರಶೀಲತೆಯಲ್ಲಿ ವಿಶ್ವಾಸವಿಟ್ಟಂತಹುದು. ಕೋಮುವಾದ ಸೃಷ್ಟಿಸುತ್ತಿರುವ ತಲ್ಲಣಗಳ ಸಂದರ್ಭದಲ್ಲಿ ಬಿ.ಎಂ.ಶ್ರೀಯವರ 'ಸಾಮರಸ್ಯ' ಮತ್ತು 'ಸಂಕರ'ಗಳ ನಿಲುವು ಮಹತ್ವದಾಗಿವೆ ಎನ್ನಿಸುತ್ತದೆ.

ಹಾಗಾಗಿಯೇ ಬಿ.ಎಂ.ಶ್ರೀ ತನ್ನ ಸುತ್ತಲಿನ ವಿಭಿನ್ನ ವಲಯಗಳಲ್ಲಿ ಇದ್ದ ಮುಸ್ಲಿಂ ವಿರೋಧಿ ಭಾವನೆಗಳನ್ನು ಹೊರಗಿಟ್ಟು ಪರ್ಶಿಯನ್ ವಿದ್ವಾಂಸ ಅಬ್ಬಾಸ್ ಷೂಸ್ತ್ರಿಯವರಿಂದ 'ಇಸ್ಲಾಂ ಸಂಸ್ಕೃತಿ' ಪುಸ್ತಕ ಬರೆಸುತ್ತಾರೆ ಮತ್ತು ಸ್ವತಃ ಅದನ್ನು ಅನುವಾದ ಮಾಡುತ್ತಾರೆ. ಆ ದೃಷ್ಟಿಯಿಂದ ಬಿ.ಎಂ.ಶ್ರೀ. ನಿಲುವು 'ಒಳಗೊಳ್ಳುವ' ರಾಜಕಾರಣದ ಭಾಗವಾಗಿ ಕಾಣುತ್ತದೆ. ಅಲ್ಲದೆ ಸಾಹಿತ್ಯದ ಮುಖ್ಯ ಧ್ವನಿ ಮರುಕ ಕುರಿತದ್ದು ಅಥವಾ 'ಶೋಕ'ರಸವೆಂದು ಭಾರತೀಯ ಕಾವ್ಯಮೀಮಾಂಸೆ ಕರೆದದ್ದು. ಅದಕ್ಕಾಗಿ ಕನ್ನಡದಲ್ಲಿ ಪಂಪರನ್ನರಂತಹ ಜೈನಕವಿಗಳು ಸೃಷ್ಟಿಸಿದ್ದ, ಗೆದ್ದವರಿಗಿಂತ ಸೋತವರ ಮರುಕವನ್ನು ವ್ಯಾಖ್ಯಾನಿಸುವ ಕೆಲಸವನ್ನು ಬಿ.ಎಂ.ಶ್ರೀಯವರು ತಮ್ಮ ಕೆಲವು ಅನುವಾದ, ಕವನ ಮತ್ತು ನಾಟಕಗಳಲ್ಲಿ ಮಾಡುತ್ತಾರೆ. ಮುಖ್ಯ ಅವರ 'ಅಶ್ವತ್ಥಾಮನ್' ನಾಟಕದಲ್ಲಿ ಬ್ರಾಹ್ಮಣ ಯುವಕನಾದ, ದ್ರೋಣಾಚಾರ್ಯರ ಮಗ ಅಶ್ವತ್ಥಾಮನನ್ನು (ಗ್ರೀಕ್ ನಾಟಕಕಾರ ಪಾಫೋಕ್ಲಿಸ್‌ನ) 'ಏಜಾಕ್ಸ್'ಗೆ ಜೊತೆ ಇಟ್ಟು ಪಾತ್ರ ಕಲ್ಪಿಸಿ ಬರೆಯುತ್ತಾರೆ. ಅಶ್ವತ್ಥಾಮನಿಗೆ ಸಾವಿಲ್ಲವೆಂದು ಕೇಳುವ ಭಾರತೀಯ ಸಾಂಪ್ರದಾಯಿಕ ಮನಸ್ಸಿಗೆ ವಿರುದ್ಧವಾಗಿ 'ಆತ್ಮಹತ್ಯೆ' ಮಾಡಿಕೊಳ್ಳುವಂತೆ ಮಾಡಿಬಿಡುತ್ತಾರೆ. ಅಶ್ವತ್ಥಾಮನಿಗೆ ಕನ್ನಡದ ಜೊತೆ ನಂಟು ನಿರ್ಮಿಸಿ, ಬೇಡರ ಹುಡುಗ ಏಕಲವ್ಯನ ಜೊತೆಯಲ್ಲಿ ಲೀಲಾಜಾಲವಾಗಿ ಬೆರೆಸುವಂತೆ ಮಾಡುತ್ತಾರೆ. ಶೂದ್ರ-ಬ್ರಾಹ್ಮಣ ಸಾಮರಸ್ಯವನ್ನು ಪ್ರತಿಪಾದಿಸುತ್ತಾರೆ. 'ಪಾರಸಿಕರು' ನಾಟಕದಲ್ಲಿ ಕೂಡ ಪರ್ಶಿಯನ್ ದುರಂತ ಕಥನವನ್ನು ಮಂಡಿಸುತ್ತಾರೆ.

ಬಿ.ಎಂ.ಶ್ರೀಯವರ 'ದುರಂತ'ದ ಪರಿಕಲ್ಪನೆ ಕೂಡ ಕನ್ನಡದಲ್ಲಿ ಹೆಚ್ಚು ಚರ್ಚಿತವಾದಂತೆ ಕಾಣುತ್ತಿಲ್ಲ. ಪಶ್ಚಿಮದ ಕುರುಡು ಅನುಕರಣೆಯಿಂದ ಹುಟ್ಟಿದ ಕೂಸುಗಳು ಎಂದು ಕನ್ನಡದ ವಿದ್ವತ್ ಪರಂಪರೆ ತಿಳಿದಂತಿದೆ. ಆದರೆ ಈ ಪರಿಕಲ್ಪನೆ ಬಿ.ಎಂ.ಶ್ರೀಯವರ ರಾಜಕೀಯ ಪ್ರಜ್ಞೆಯ ಭಾಗ ಎಂದು ಭಾವಿಸಲು ಹೊರಟರೆ ಬೇರೆಯದೇ ಅರ್ಥ ಹೊಮ್ಮತೊಡಗುತ್ತದೆ. 'ಭಾರತೀಯ ಕಾವ್ಯಮೀಮಾಂಸೆ'ಯಲ್ಲಿ, ರಂಗಮಂಟಪದ ಮೇಲೆ ಸಾವು, ರಕ್ತಪಾತ, ಆತ್ಮಹತ್ಯೆಗಳಂಥ ದುರಂತ ಅಂತ್ಯದ ಕಥೆಗಳನ್ನು ತರಬಾರದು, ಅದು ಮಂಗಳಕರವಲ್ಲ ಎಂದು ಭಾವಿಸುತ್ತದೆ. ಬಿ.ಎಂ.ಶ್ರೀಯವರ 'ದುರಂತ' ಕುರಿತ ನಿಲುವು ಭಾರತದ ಸನಾತನ ಪ್ರಜ್ಞೆಯನ್ನು, ಸಂಸ್ಕೃತಿ ಕುರಿತಾದ ತಿಳಿವಳಿಕೆಯನ್ನು ಪ್ರಶ್ನಿಸುತ್ತಿರುವಂತಿದೆ. ವರ್ತಮಾನದ ಬದುಕಿನಲ್ಲಿ ತೀವ್ರ ದುಃಖ ದುಮ್ಮಾನಗಳು ತುಂಬಿರುವಾಗ ಅದನ್ನು ಮರೆಮಾಡಿ, ಮಂಗಳಕರವಾದುದಷ್ಟನ್ನೇ ಹೇಳುತ್ತೇನೆ ಮತ್ತು ಬರೆಯುತ್ತೇನೆ ಎಂಬುದು ಪ್ರಭುತ್ವ ಮತ್ತು ಕವಿಗಳ (ನಾಟಕಕಾರರನ್ನು ಹೇಗೆ ಕರೆಯಲಾಗುತ್ತಿತ್ತು, ಕಾವ್ಯದ ಭಾಗವೆಂದು) ನಡುವಿನ ಆಸ್ಥಾನ ಮೈತ್ರಿಯ ಫಲವೆ? ಕರ್ನಾಟಕದುದ್ದಕ್ಕೂ ರೈತರ ಸಾವುಗಳು ಸಂಭವಿಸುತ್ತಿದ್ದರೂ 'ನಗೆಹಬ್ಬ'ಗಳಲ್ಲಿ ಮುಳುಗಿರುವ ಕ್ರೌರ್ಯದಂತೆಯೇ 'ದುರಂತ'ವನ್ನು ನಿರಾಕರಿಸುವಲ್ಲಿಯೂ ಅಡಗಿರುವಂತೆ ಕಾಣುತ್ತದೆ. ಹಾಗಾಗಿಯೇ ಬಿ.ಎಂ.ಶ್ರೀಯವರ ಈ ಪ್ರಯತ್ನಗಳು ಭಾರತದ ಈ ಶಿಷ್ಟ ಪ್ರಜ್ಞೆಗೆ ಹಾಕಿದ ಸವಾಲಿನಂತೆ ತೋರುತ್ತದೆ.

ಅಲ್ಲದೆ ಸಂಸ್ಕೃತ ಭೂಯಿಷ್ಟ ಕನ್ನಡವನ್ನು ನಿರಾಕರಿಸುವಾಗ 'ಸಂಸ್ಕೃತದ ಸೀಗೆ ಮೆಳೆಗೆ ಸಿಕ್ಕಿ ನರಳಿದ ಕನ್ನಡ' ಎಂಬ ರೂಪಕವೇ ಸಂಪ್ರದಾಯದಲ್ಲಿ ನಂಬಿಕೆ ಇಟ್ಟವರನ್ನು ಕಲಕು ಮಲಕು ಮಾಡುವಂತಿದೆ. ಈ

ಸಂದರ್ಭದಲ್ಲಿ ಜನಪದ ಸಾಹಿತ್ಯ ಕುರಿತ ಅವರ ನಿಲುವುಗಳನ್ನು ಪರಿಶೀಲನೆ ಮಾಡಬಹುದು. ಧಾರವಾಡದ ಹಲಸಂಗಿ ಗೆಳೆಯರು ಸಿದ್ಧಪಡಿಸಿದ್ದ 'ಗರತಿಯ ಹಾಡು' ಜನಪದ ಕವಿತೆಗಳ ಸಂಗ್ರಹಕ್ಕೆ ಬರೆದ ಮುನ್ನುಡಿಯಲ್ಲಿ ಮಧುರ ಕವಿಯ ಜನಪದ ಕುರಿತ ನಿಲುವನ್ನು ಬಿ.ಎಂ.ಶ್ರೀ. ಟೀಕಿಸುತ್ತಾರೆ. ಮಧುರ ಕವಿ ತನ್ನದೊಂದು ಪದ್ಯದಲ್ಲಿ, 'ನನ್ನ ಕಾವ್ಯ ಪಂಡಿತರು, ವಿದ್ವಜ್ಜನರೂ ಕೇಳತಕ್ಕಂಥಹದು, ಹಾದಿ ಬೀದಿಯಲ್ಲಿ ಸಿಕ್ಕ ಸಿಕ್ಕವರೆಲ್ಲ ಕೇಳುವುದಕ್ಕೆ ಗೊರವರ ಡುಂಡುಚಿಯಲ್ಲ ಬೀದಿಯ ಬೀರನ ಕತೆಯಲ್ಲ' ಎಂದು ಜನಪದವನ್ನು ತಿರಸ್ಕರಿಸಿರುವ ಈ ಮಾತುಗಳನ್ನು ಕುರಿತು ಬಿ.ಎಂ.ಶ್ರೀಯವರು ಜನಪದರ ಜೀವನಕ್ರಮದಿಂದ ಉದಿಸಿದ ಈ ಹಾಡುಗಳೇ ಶಿಷ್ಟವೆಂದು ಕರೆಯಬಹುದಾದ ಕಾವ್ಯಕ್ಕೆ ತಾಯಿ ಎಂದು ಬರೆಯುತ್ತಾರೆ :

``ಶಾಸ್ತ್ರ ಬಲದಿಂದಲೂ, ಸಂಸ್ಕೃತ ಪ್ರತಿಭೆಯಿಂದಲೂ ರಚಿತವಾದ ಪ್ರೌಢಸಾಹಿತ್ಯವೇ ಸಾಹಿತ್ಯವೆಂದೂ, ಹಳ್ಳಿಗಳಲ್ಲಿಯೂ, ಮನೆಗಳಲ್ಲಿಯೂ, ಜನ ಸಾಮಾನ್ಯರು ಹಾಡಿಕೊಳ್ಳುವ ಹಾಡುಗಳು ಸಾಹಿತ್ಯವಲ್ಲವೆಂದೂ ಇಂತಹ (ಮಧುರಕವಿ) ಪಂಡಿತರ ಭಾವನೆ. ಈ ಅಭಿಪ್ರಾಯದ ಪ್ರಕಾರ ಆದಿಯಲ್ಲಿ ದೇವತಾಪ್ರೇರಣೆಯಿಂದ ಹುಟ್ಟಿದುದೇ ಕವಿತಾವಾಣಿ, ಅದು ಋಷಿಗಳಲ್ಲಿಯೂ ಮಹಾಕವಿಗಳಲ್ಲಿಯೂ ಕಾಣುವುದು. ಆ ಬಳಿಕ ಸರಸ್ವತಿ ಪ್ರಸಾದವಿಲ್ಲದ ಬರಿಯ ದುರಾಶೆಯ ದುಷ್ಕವಿಗಳಲ್ಲಿ ತಲೆದೋರುವುದು ಅದರ ಆಭಾಸ. ಕಟ್ಟಕಡೆಗೆ ಕಾಣಿಸಿಕೊಂಡು, ಜನಗಳು ಹಾಡಿ ನಲಿಯುತ್ತಿರುವ ಬಡಹಾಡಂತೂ ಕವಿತ್ವವೇ ಅಲ್ಲ.

ಈ ಅಭಿಪ್ರಾಯಕ್ಕೆ ವಿರೋಧವಾಗಿ ಕವಿತ್ವದ ಮೂಲವನ್ನೂ, ಆದಿ ಚರಿತ್ರೆಯನ್ನೂ ಪರಿಶೋಧಿಸಿರತಕ್ಕವರು ಹೇಳುವುದೇನೆಂದರೆ -ಮೊದಲು ಹುಟ್ಟಿದುದು ಜನವಾಣಿ, ಅದು ಬೆಳೆದು, ಪರಿಷ್ಕೃತವಾಗಿ ವೃದ್ಧಿಯಾದುದು ಕವಿವಾಣಿ. ಜನವಾಣಿ ಬೇರು ಕವಿವಾಣಿ ಹೂವು. ಕಾಡುಜನರೂ, ಒಕ್ಕಲಿಗರೂ, ಹೆಂಗಸರೂ, ಮಕ್ಕಳೂ ಶಾಸ್ತ್ರ ಕಾವ್ಯಗಳ ಪರಿಚಯವೇ ಇಲ್ಲದ ಜನ ಸಾಮಾನ್ಯರೆಲ್ಲರೂ ಹಾಡಿನ ಮಟ್ಟನ್ನು ಎಂದರೆ ಅಷ್ಟು ಮಟ್ಟಿಗೆ ಛಂದಸ್ಸನ್ನು ಬಲ್ಲರು. ಹಿಂದಿನಿಂದ ಬಂದ ಹಾಡನ್ನು ತಲೆಮಾರಿನಿಂದ ಕಲಿತು ಹೇಳುವುದಲ್ಲದೆ, ಹೊಸ ಹಾಡನ್ನೂ ಕಟ್ಟಬಲ್ಲರು. ಆದಿಕಾಲದಲ್ಲಿ ಇನ್ನೂ ಕವಿತ್ವವು ಶಾಸ್ತ್ರವೂ ಶೈಶವದಶೆಯಲ್ಲಿದ್ದಾಗ, ಹಳ್ಳಿಯಲ್ಲಿ, ಹೊಲದ ಕಣದಲ್ಲಿ ಹಬ್ಬ ಹುಣ್ಣಿವೆಗಳಲ್ಲಿಯೂ ಸುಖದುಃಖದ ಸಂದರ್ಭಗಳಲ್ಲಿಯೂ ಜನರು ಸೇರಿ ತಮ್ಮ ರಸಭಾವಗಳನ್ನು ಹಾಡಿಕೊಂಡು ಕುಣಿಯುತ್ತಿದ್ದರು.''[೮]

ಜನರ ಬದುಕಿನಿಂದ ಹುಟ್ಟಿದ 'ಅನುಭವ'ವನ್ನು ವ್ಯಕ್ತಪಡಿಸುವ ಸಾಹಿತ್ಯವನ್ನು ನಿರಾಕರಿಸುವವರನ್ನು ದುಷ್ಕವಿಗಳೆಂದು ಕರೆಯುವುದಲ್ಲದೆ, ಬರಹ ಪರಂಪರೆಯು ಹೇಗೆ ಜನಪದರನ್ನು ನಿರ್ಲಕ್ಷಿಸಿದೆ ಎಂದು ಶ್ರೀಯವರು ವಿವರಿಸಲಾರಂಭಿಸುತ್ತಾರೆ. ಆ ಮೂಲಕ ಆಸ್ಥಾನ ಕಾವ್ಯವನ್ನು ಕುರಿತು ಪ್ರಶ್ನೆ ಎತ್ತುವುದೇ ವೈದಿಕ ಜಾನಪದ ಅಥವಾ ಶಿಷ್ಟ ಜಾನಪದಗಳ ಮುಖಾಮುಖಿಯೆಂದು ಕರೆಯುವುದಾದರೆ, ಶಿಷ್ಟಸಾಹಿತ್ಯದ ತಾಯಿಯಾಗಿ ಜನಪದವನ್ನು ವಿವರಿಸುತ್ತಾರೆ. ಹಾಗಾಗಿ ಬಿ.ಎಂ.ಶ್ರೀಯವರ ಸಂಸ್ಕೃತಿ ಸಾಹಿತ್ಯ ಚಿಂತನೆಗಳಲ್ಲಿ ಪರಂಪರೆಯನ್ನು ಇತ್ಯಾತ್ಮಕವಾಗಿ ನೋಡುವ (ಆದರೆ ಶಿಷ್ಟ ಸಾಹಿತ್ಯದ ಸಂಸ್ಕೃತದ ಬಲವನ್ನು ನಿರಾಕರಿಸಿ, ಜನ ಸಾಹಿತ್ಯವನ್ನು ಎತ್ತಿ ಹಿಡಿದು) ಪ್ರಯತ್ನ ಪಡುತ್ತಲೇ ಸರ್ವದಿಕ್ಕುಗಳಿಂದಲೂ ಬಂದುದನ್ನು ಸ್ವೀಕರಿಸಿ ಕನ್ನಡ ಸಂಸ್ಕೃತಿ ಕಾವೇರಿಯಂತೆ ಮುಂದುಂಬಿ ಚಲಿಸಬೇಕು ಎಂಬ ನಿಲುವು ಕಾಣುತ್ತದೆ. ಬಿ.ಎಂ.ಶ್ರೀಯವರ

ಅನೇಕ ರಾಜಕೀಯ ನಿಲುವುಗಳನ್ನು ಕುರಿತು ಪ್ರಶ್ನೆ ಎತ್ತಬಹುದು. ಆದರೆ ಅವರ ಸ್ವೀಕಾರಕಾರ್ಯ, ಜಗತ್ತಿನ ಸಂಸ್ಕೃತಿಗಳಲ್ಲಿ ಉತ್ತಮವಾದುದ್ದನ್ನು ಆಯ್ದು ಸಂಕರಗೊಳಿಸಿ ಕನ್ನಡ ಸಂಸ್ಕೃತಿಯನ್ನು ಕಟ್ಟಬೇಕು ಎಂಬ ನಿಲುವು, ಜನರ ಬದುಕನ್ನು, ವಿಶೇಷ ಆಸ್ಥೆಯಿಂದ ಅವರ ಕಾಯಿಲೆಗಳ ಮಧ್ಯೆಯೂ ಕರ್ನಾಟಕವನ್ನು ಸುತ್ತಿ ಅರ್ಥ ಮಾಡಿಕೊಳ್ಳಲು ಯತ್ನಿಸಿದ ರೀತಿ, ರಾಜಪ್ರಭುತ್ವದ ಜೊತೆಗಿದ್ದು ಪ್ರಜಾಪ್ರಭುತ್ವವಾದಿಯ ನಿಲುವುಗಳನ್ನು ಹೊಂದಿರುವುದು. ಜನರಲ್ಲಿಗೆ ಹೋಗಿ ಪಂಪನಿಂದ ಹಿಡಿದು ವಿದ್ಯುಚ್ಛಕ್ತಿ, ನಕ್ಷತ್ರಗಳ ಕುರಿತು ಭಾಷಣ ಮಾಡುವುದು ಮತ್ತು ಅವರಲ್ಲಿ ಗುಪ್ತವಾಗಿದ್ದ 'ಅತ್ಯುತ್ತಮ ಪ್ರಭುತ್ವಗಳು ಅತ್ಯುತ್ತಮ ಸಂಸ್ಕೃತಿ, ಸಾಹಿತ್ಯ ನಿರ್ಮಿಸುತ್ತವೆ' ಎಂಬ ನಿಲುವುಗಳಲ್ಲಿ ಅಪಾರ ವೈರುಧ್ಯಗಳಿದ್ದರೂ, ಅವರ 'ಒಳಗೊಳ್ಳುವ' ರಾಜಕೀಯ ಪ್ರಜ್ಞೆಯ, ಸಂಸ್ಕೃತಿ ಪ್ರಜ್ಞೆಯ ನಿಲುವುಗಳು ಸಾಕಷ್ಟು ಆರೋಗ್ಯಕರವಾದ ಕನ್ನಡ ರಾಷ್ಟ್ರೀಯ ಪ್ರಜ್ಞೆಯನ್ನು ನಿರ್ಮಿಸಲು ಪ್ರಯತ್ನಿಸಿವೆ ಎಂದು ಭಾವಿಸಬಹುದು.

### ೬.೪ ಸಂಸ್ಕೃತಿ ಕುರಿತಂತೆ ಶಂಬಾ ಜೋಶಿಯವರ ಚಿಂತನೆಗಳು

ಸಂಸ್ಕೃತಿ ವ್ಯಾಖ್ಯಾನವನ್ನು ದಮನಿತ ಸಮುದಾಯಗಳ ಜೀವನ ಕ್ರಮದ ಮೂಲಕ ನಿರ್ವಚಿಸಲು ಯತ್ನಿಸಿದ ಚಿಂತಕ ಶಂಬಾ ಜೋಶಿಯವರೆಂದು ಹೇಳಬಹುದು. ಶಂಬಾ ಆಧುನಿಕ ಚರಿತ್ರೆಯಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿ ಮೂಲೆ ಸೇರಿದ್ದಂತಹ ಸಮುದಾಯಗಳ ಜೀವನ ವಿಧಾನವನ್ನು ಅಧ್ಯಯನ ಮಾಡಿ, ಕರ್ನಾಟಕ ಮತ್ತು ಭಾರತೀಯ ಸಂಸ್ಕೃತಿ ಚಿಂತನೆಗೆ ಹೊಸ ಆಯಾಮವನ್ನು ಸೇರಿಸಲು ಪ್ರಯತ್ನಿಸಿದರು. 'ಸಂಸ್ಕೃತಿ ಎಂದರೆ ಜನರ ಜೀವನ ವಿಧಾನ' ಎಂಬ ಮಾನವಶಾಸ್ತ್ರೀಯ ವ್ಯಾಖ್ಯಾನವನ್ನು ಬಳಸಿಕೊಂಡು ಕರ್ನಾಟಕ ಮಹಾರಾಷ್ಟ್ರಗಳಲ್ಲಿರುವ 'ಪಶುಪಾಲಕ' ಜನಾಂಗ (ಹಟ್ಟಿಗಾರರು ಧನಗಾರರು) ಕಂದಮಿಳ ಸಂಸ್ಕೃತಿಯ ಆದಿಮ ಜನಾಂಗ ಎಂಬ ನಿಲುವನ್ನು ವ್ಯಕ್ತಪಡಿಸಿದರು. ರಾಷ್ಟ್ರೀಯತೆಯ ವಾಗ್ವಾದಗಳ ಸಮಯದಲ್ಲಿ ಶಂಬಾ ಜೋಶಿಯವರ ಚಿಂತನೆಯನ್ನು ಎಲ್ಲಿಟ್ಟು ನೋಡುವುದು ಎಂಬ ಸಮಸ್ಯೆ ಬರುತ್ತದೆ. ಏಕೆಂದರೆ ಶಂಬಾ ಬರೆಯುತ್ತಿದ್ದ ಸಂದರ್ಭದಲ್ಲಿ ಮುಖ್ಯವಾಗಿ ಮೂರು ಸಂಗತಿಗಳು ಅವರನ್ನು ತೀವ್ರವಾಗಿ ಕಲಕಿದಂತೆ ಕಾಣುತ್ತದೆ.

೧. ಕನ್ನಡದ ಅನನ್ಯತೆಯ ವಿಷಯ ಬಂದಾಗ ಎದುರಾದ ಕನ್ನಡ-ಮರಾಠಿ ಸಂಘರ್ಷ

೨. ಧರ್ಮದ ಅನನ್ಯತೆಯ ವಿಚಾರ ಬಂದಾಗ ಎದುರಾದ ಹಿಂದು ಮುಸ್ಲಿಮ ಸಂಘರ್ಷ

೩. ಭಾರತದ ಅಧಃಪತನವನ್ನು ನೆನೆದಾಗ ಕಂಡ ವೈದಿಕ ಶ್ರಮಣ ಧರ್ಮಗಳ ನಡುವಿನ ಸಂಘರ್ಷದ ನೆಲೆ.

ಮುಖ್ಯವಾಗಿ ಈ ಮೂರು ಅಂಶಗಳನ್ನಿಟ್ಟುಕೊಂಡು ಅವರ ಸಂಸ್ಕೃತಿ ಚಿಂತನೆಯನ್ನು ಚರ್ಚಿಸಬಹುದು. ಏಕೆಂದರೆ ಶಂಬಾರ ಸಂಸ್ಕೃತಿ ಕುರಿತ ಚಿಂತನೆಗಳು ಗೊಂಡಾರಣ್ಯವಿದ್ದಂತೆ ಕಾಣುತ್ತದೆ. ಅನೇಕ ಸಿಕ್ಕುಗಳ ಮೂಲಕ ಕೂಡಿರುವ, ಚಿಂತನೆಗಳನ್ನೂ ದಕ್ಕಿಸಿಕೊಳ್ಳಲು ಈವರೆಗಿನ ಅಧ್ಯಯನ ವಿಧಾನ ಬಳಸಿದರೆ ಸಾಕಾಗುವುದಿಲ್ಲ. ಇದು ಶಂಬಾರ ಚಿಂತನೆಗಳಿಗಿದ್ದ ಸಂವಹನ ಸಾಧ್ಯತೆಗಳ ಕುರಿತಾದ ಕೊರತೆಯೋ ಅಥವಾ

ಅಧ್ಯಯನಕಾರರ ಗೊಂದಲಗಳೊ ಅಂತೂ ಶಂಬಾರ ಚಿಂತನೆಗಳನ್ನು ವರ್ತಮಾನಕ್ಕೆ ನೋಡಲು ಬಗ್ಗಿಸಿ ನೋಡಲು ಕಷ್ಟಪಟ್ಟಿವೆ. ಏನೇ ಆದರೂ ಕಾಡಿನಿಂದ ಒಂದು ಹೊರೆ ಸೌದೆಯೋ, ಇಲ್ಲ ಸೊಪ್ಪನ್ನೋ ತರಲು ಸಾಧ್ಯವಷ್ಟೇ. ಅತಿ ಆಸೆಗೆ ಬಿದ್ದರೆ ಭಾರ ತಾಳಲಾರದೆ ಒಂದು ಹೆಜ್ಜೆ ಕೂಡ ಮುಂದಿಡಲಾರದೆ ಕುಸಿದು ಕೂರುವಂಥ ಸ್ಥಿತಿ ನಿರ್ಮಾಣವಾಗಬಹುದು.

ಸಾಮಾನ್ಯವಾಗಿ ಕಾಲಘಟ್ಟಗಳೆಂದು ವಿಂಗಡಿಸಿಕೊಂಡು ಯಾವ ಚಾರಿತ್ರಿಕ ಒತ್ತಡಗಳ ಘಟ್ಟದಲ್ಲಿ ಯಾವ ಘಟನೆಗಳಿಂದಾಗಿ ಚಿಂತಕ ತನ್ನ ಚಿಂತನೆಗಳನ್ನು ರೂಪಿಸಿದ್ದಾನೆ ಎಂದು ಗ್ರಹಿಸಲಾಗುತ್ತದೆ. ಆದರೆ ಶಂಬಾರ ಚಿಂತನೆಗಳ ಸಂಕೀರ್ಣತೆ ಎಂಥದೆಂದರೆ ಅವರಲ್ಲಿ ಆರಂಭದ ಕೃತಿಗಳಿಂದಲೆ ಕನ್ನಡ-ಸಂಸ್ಕೃತ, ಜಾನಪದ -ವೈದಿಕ, ಕರ್ನಾಟಕ-ಭಾರತ ಇತ್ಯಾದಿ ತುಯ್ದಾಟಗಳು ಏಕಮುಖವಾಗಿರುವುದಿಲ್ಲ, ಅತ್ಯಂತ ಸಂಕೀರ್ಣವಾಗಿ ಬಂಧಗೊಂಡಿರುತ್ತವೆ. ಆದರೂ ಆರಂಭದ ಬರೆಹಗಳಲ್ಲಿ ಮುಖ್ಯವಾಗಿ ಕನ್ನಡದ ನೆಲೆಯಿಂದ ಭಾರತದ ಸಂಸ್ಕೃತಿಗಳ ವಿಶ್ಲೇಷಣೆ ನಡೆಯುತ್ತದೆ.

೨. ಎರಡನೇ ಅಥವಾ ಕಡೆಯ ಘಟ್ಟದಲ್ಲಿ ಭಾರತದ ಸಂಸ್ಕೃತಿಗಳ ಮೂಲಕ ವಿಶ್ವಸಂಸ್ಕೃತಿಗಳ ಹಿಂದಿರುವ ಗಂಟು ಬಿಚ್ಚಲು ಪ್ರಯತ್ನಿಸಲಾಗುತ್ತದೆ. ಏನೇ ಆದರೂ ಮೊದಲನೆಯದಾಗಿ ಕನ್ನಡ ಮತ್ತು ಮರಾಠಿ ಭಾಷೆಗಳ ಸಂಸ್ಕೃತಿ ಸಂಘರ್ಷದಲ್ಲಿ ಶಂಬಾ ಕನ್ನಡ ಪಶುಪಾಲಕ ಸಮುದಾಯಗಳ ಚಲನೆಯ ದಿಕ್ಕನ್ನು ಹಿಡಿದು ಚಿಂತನೆಗಳನ್ನು ರೂಪಿಸಿದ್ದಾರೆ. ಸ್ಥಳನಾಮಗಳು, ಭಾಷೆ, ಕಸುಬು, ದೈವಗಳು ಆಚರಣೆಗಳು, ವಲಸೆ, ನೆಲೆಗಳು ಇತ್ಯಾದಿಗಳ ಮೂಲಕವೇ ಅವರ 'ಕಂನುಡಿಯ ಹುಟ್ಟು' 'ಮಹಾರಾಷ್ಟ್ರದ ಮೂಲ' ಕರ್ಣಾಟಕದ ವೀರಕ್ಷತ್ರಿಯರು, 'ಕಣ್ಮರೆಯಾದ ಕನ್ನಡ' 'ಎಡೆಗಳು ಹೇಳುವ ಕಂನಾಡ ಕತೆ' 'ಹಾಲುಮತದರ್ಶನ' ದಂತಹ ಚಿಂತನ ಗ್ರಂಥಗಳನ್ನು ರಚಿಸಿದ್ದಾರೆ. ಸೈಂಧವ ಸಂಸ್ಕೃತಿ (ಸಿಂಧೂ ನದಿ ತೀರದ್ದು)ಯಿಂದ ದಕ್ಷಿಣ ಭಾರತದ ತುದಿಯವರೆಗಿನ ಊರುಗಳ ಹೆಸರು, ಕನ್ನಡ ಶಬ್ದಗಳು ಅವರ ಆಚರಣೆಗಳ ಮೂಲಕ ಈ ಇಡೀ ಪ್ರದೇಶ ಒಂದೊಮ್ಮೆ ಕಂದಮಿಳ ಸಮುದಾಯಗಳು ನೆಲೆಸಿರಬಹುದೆಂದು ಊಹಿಸುತ್ತಾರೆ. ದಾಖಲೆ ಒದಗಿಸಲು ಪ್ರಯತ್ನಿಸುತ್ತಾರೆ. ಮಹಾರಾಷ್ಟ್ರದ ವಿಷಯಕ್ಕೆ ಬಂದರಂತೂ, ಇನ್ನಷ್ಟು ವ್ಯಗ್ರಗೊಳ್ಳುತ್ತಾರೆ. ಕನ್ನಡದ ಎದುರು ಮರಾಠಿಯನ್ನು ನಿರಾಕರಣ ಭಾವದಿಂದಲೇ ನೋಡುತ್ತಾರೆ.

ಶಂಬಾರ ಒಟ್ಟು ಚಿಂತನೆಗಳ ಆಳದಲ್ಲಿ ಒಳಗೊಳ್ಳುವ ಪ್ರಜ್ಞೆ ಕಡಿಮೆ ಕೆಲಸಮಾಡಿದೆ ಎನ್ನಿಸುತ್ತದೆ. ಅವರು ಅನ್ಯ ಭಾಷಿಕರ ವಿರುದ್ಧ ಮೇಲರಿಮೆ ಅನುಭವಿಸುತ್ತಾರೆ. ಅನ್ಯಧರ್ಮಗಳನ್ನು ಕೀಳಾಗಿ ನೋಡುತ್ತಾರೆ (ಅವರಿಗೆ ಆಪ್ತವಾಗುವ ವಿಚಾರಗಳೆಂದರೆ ವೇದಕಾಲದ 'ಕ್ಷಾತ್ರಗುಣ' ಮತ್ತು ವರ್ತಮಾನದಲ್ಲಿ ಬದುಕುವ 'ಐಹಿಕತೆ', ಅಲ್ಲಿ ಸಮಷ್ಟಿ ಜೀವನ ವಿಧಾನದ ಚಿಂತನೆಗಳಿವೆ ಎಂದು ಗ್ರಹಿಸುತ್ತಾರೆ). ಸಹಜವಾಗಿ ಮರಾಠಿ ಭಾಷಿಕರು ಆಕ್ರಮಣಕಾರಿಗಳು ಠಕ್ಕರು, ಚರಿತ್ರಹೀನರು ಎಂಬ ಭಾವನೆಗಳೇ ಅವರಲ್ಲಿ ಕೆಲಸ ಮಾಡುತ್ತವೆ. ಇಲ್ಲಿ ಏಕೀಕರಣದ ಕನ್ನಡ ರಾಷ್ಟ್ರೀಯ ಚಿಂತನೆಗೆ 'ಸಂಸ್ಕೃತಿ' ದೃಷ್ಟಿಯಿಂದ ಶಂಬಾ ಆಪ್ತರಾಗುತ್ತಾರೆ.

ಎರಡನೆಯದಾಗಿ ದೇಶವಿಭಜನೆಯ ಆಚೆ ಈಚೆಗಿನ ಇಸ್ಲಾಂ ಕುರಿತ ಗ್ರಹಿಕೆಗಳಲ್ಲಿ ಅಪಾರ ಅಸಹನೆಯನ್ನು ವ್ಯಕ್ತಪಡಿಸುತ್ತಾರೆ. ಮುಸ್ಲಿಂ ರಾಜರುಗಳು ಕ್ರೂರಿಗಳೂ, ಕನ್ನಡ ವಿರೋಧಿಗಳು ನಂಬಿಕೆ ದ್ರೋಹಿಗಳು

ಎಂಬರ್ಥದಲ್ಲಿ ಮಾತನಾಡುತ್ತಾರೆ. ಬಹುಮನಿ ಅರಸರು, ವಿಜಯನಗರದ ಅರಸರು, ಹೈದರ್, ಟಿಪ್ಪು, ಮೈಸೂರು ಅರಸರನ್ನು ಎದುರಾ ಬದುರು ನಿಲ್ಲಿಸಿ ಕನ್ನಡಪರ ಕನ್ನಡ ವಿರೋಧಿ ಎಂದು ಗ್ರಹಿಸುತ್ತಾರೆ. ರಜಪೂತರು ಮತ್ತು ಮೊಗಲರನ್ನು ನಿಲ್ಲಿಸಿ ನಂಬಿಕೆದ್ರೋಹಿಗಳೆಂದು ನಿರೂಪಿಸಲು ಯತ್ನಿಸುತ್ತಾರೆ:

"ಪ್ರಾಚೀನ ಕಾಲದಲ್ಲಿ ಆದ ಯುದ್ಧಗಳಲ್ಲಿ ಮಡಿದವರ ಸಂಬಂಧವಿಲ್ಲದ (ಮಹಾರಾಷ್ಟ್ರದಲ್ಲಿ) ವೀರಗಲ್ಲುಗಳಾಗಲಿ ಮಾಸ್ತಿ ಕಂಬಗಳಾಗಲಿ ಇಲ್ಲವೇ ಇಲ್ಲ. ಎತ್ತುರೊಟ್ಟಿಗೆದ್ದರೆ ನೇರವಾಗಿ ರಭಸದಿಂದ ಬಂದು ಇರಿಯುವುದೊಂದೆ ಅದಕ್ಕೆ ಗೊತ್ತು. ಆ ಇರಿತದಲ್ಲಿ ವಿರೋಧಿಯ ತಂತ್ರದ ಮೂಲಕ ತನ್ನ ಜೀವಕ್ಕೆ ಎರವಾಗಬೇಕಾದೀತೆಂಬ ಅರಿವೂ ಸಹ ಅದಕ್ಕೆ ಇರುವುದಿಲ್ಲ. ಇದೇ ಬಗೆಯ ಸರಳ ಸ್ವಭಾವದ, ಕವಡು ಅರಿಯದ ರಜಪೂತರು ಮುಸಲ್ಮಾನರ ಮಾಟ ಮೋಸಗಳನ್ನು ಅರಿಯದೆ ಆತ್ಮಘಾತವನ್ನು ಮಾಡಿಕೊಂಡರು."[೯]

ಈ ಅಭಿಪ್ರಾಯಕ್ಕೆ ಬರಲು ಶಂಬಾ ಆಧರಿಸಿರುವ ಆಕರ ವೀರಗಲ್ಲುಗಳು. ಅದನ್ನಿಟ್ಟುಕೊಂಡು ಕಟ್ಟುತ್ತಿರುವ ರೂಪಕದಲ್ಲಿ ಮರಾಠಿಯ ಅಸ್ತಿತ್ವವನ್ನು ನಿರಾಕರಿಸುವುದು ಒಂದು ಆಯಾಮವಾದರೆ ಕನ್ನಡಿಗರು ಸಾಧುಗಳು ಎತ್ತಿನಂತಹ ಮುಗ್ಧತೆಯುಳ್ಳವರು, ಹಾಗೆಯೇ ಪರಮ ಹಿಂದುಗಳೆಂದು ಕರೆಯಲಾಗುವ ರಜಪೂತರು. ಆದರೆ ಶತ್ರುಸ್ಥಾನದಲ್ಲಿರುವವರು ಮಾತ್ರ ಚಾಣಾಕ್ಷರೂ, ಮುಗ್ಧತೆಯನ್ನು ಉಪಯೋಗಿಸಿಕೊಂಡೇ ಅಂತಿಮವಾಗಿ ಆಕ್ರಮಿಸಿದವರು ಎಂಬ ಧೋರಣೆ ಇಲ್ಲಿ ಕಾಣುತ್ತದೆ. 'ವೀರಗಲ್ಲು', 'ಮಾಸ್ತಿಕಲ್ಲು'ಗಳೆಂಬ ಶಬ್ದಗಳೇ ಶಂಬಾರನ್ನು ಆಳವಾಗಿ ಕದಡಿ ಭಾವುಕವಾಗಿರುತ್ತವೆ. ಅವುಗಳ ಹಿಂದಿನ ಮೌಢ್ಯ, ಬಲಾತ್ಕಾರ, ಸೋತವರಿಗೆ ಕಾದಿರುತ್ತಿದ್ದ ಅಪಮಾನ, ವಿಧವೆಯಾದವಳಿಗೆ ಕಾದಿರುತ್ತಿದ್ದ ಅಪಮಾನ, ಪ್ರಭುತ್ವಧೋರಣೆ ಯಾವುದೂ ಮುಖ್ಯವಾಗದೆ ಎದುರಾಳಿಯ ಕುರಿತಾದ ದ್ವೇಷ ಮಾತ್ರ ಸಮರ್ಥವಾಗಿ ವ್ಯಕ್ತವಾಗುತ್ತಿರುತ್ತದೆ. ಮರಾಠಿಯನ್ನು ವಿರೋಧಿಸಲು ಕಟ್ಟಿದ ಕನ್ನಡಪರ ಚಿಂತನೆ ಮತ್ತು ಮುಸಲ್ಮಾನರನ್ನು ವಿರೋಧಿಸಲು ಹುಟ್ಟಿದ ಹಿಂದೂಪರ ಚಿಂತನೆ ಆರಂಭದಿಂದಲೇ ಕಾಣಿಸಿಕೊಳ್ಳುತ್ತದೆ. ಈ ಎರಡನ್ನೂ ಶಂಬಾ 'ಕನ್ನಡ ಸಂಸ್ಕೃತಿ' ನಿರ್ವಚನದಲ್ಲಿ 'ಅನ್ಯರು' ಎಂದು ಭಾವಿಸಿ 'ಹೊರಗಿಡುವ' ರಾಜಕಾರಣ ಮಾಡುತ್ತಾರೆ.

ಮೂರನೆಯದಾಗಿ ಭಾರತದ ಅಧಃಪತನವನ್ನು ವಿವರಿಸುವ ವಿಶ್ಲೇಷಣಾಕ್ರಮ. ಮೊದಲ ಎರಡು ಚಿಂತನೆಗಳಿಗಿಂತ ಮೂರನೆಯದಾದ ಈ ಚಿಂತನೆಯೇ ಅತ್ಯಂತ ಸಂಕೀರ್ಣವಾಗಿರುವುದು. ಏಕೆಂದರೆ ಶ್ರಮಣಧರ್ಮಗಳಾದ ಜೈನ-ಬೌದ್ಧ ಧರ್ಮಗಳಾದ ಜೈನ-ಬೌದ್ಧ ಧರ್ಮಗಳು ಮತ್ತು ಉಪನಿಷತ್ ಕಾಲದ ಅಂತ್ಯದಲ್ಲಿ ಕಾಣಿಸಿಕೊಂಡ ಇನ್ನಿತರ ವಿರಕ್ತ ಪಂಥಗಳೇ ಭಾರತದ ಅಧಃಪತನಕ್ಕೆ ಕಾರಣ ಎಂದು ಅವರು ಬರೆಯುತ್ತಾರೆ. "ಅಹಿಂಸಾಧರ್ಮ ಹಾಗೂ ಸಂನ್ಯಾಸಪಂಥ ಇವುಗಳ ಹೆಚ್ಚಳದಿಂದ ಆದ ಸಾಮಾಜಿಕ ಹಾಗೂ ರಾಷ್ಟ್ರೀಯ ಜೀವನದೊಳಗಿನ ಶೈಥಿಲ್ಯದ ಪ್ರಕ್ರಿಯೆಯೆಂದು? ಕ್ಷತ್ರಿಯರಲ್ಲಿ, ಸಾಮ್ರಾಜ್ಯ ಸ್ಥಾಪನೆಗಾಗಿ ದಿಗ್ವಿಜಯದ ಪ್ರೇರಣೆಯನ್ನೀವ ಈ ಅಶ್ವಮೇಧವನ್ನು ಮರಳಿ ಪ್ರಾರಂಭಿಸುವವನು, ಶುಂಗಮನೆತನದ ಸ್ಥಾಪಕನಾದ ಪುಷ್ಯಮಿತ್ರನೆ ಮೊದಲನೆಯವನೆಂದು ತೋರುತ್ತದೆ."[೧೦]

ವಿರಕ್ತ ಪಂಥಗಳು ಹಿಂಸೆಯನ್ನು ತಿರಸ್ಕರಿಸಿ ಜನತೆಯನ್ನು ಅಹಿಂಸೆ ಕಡೆಗೆ ತಿರುಗಿಸಿದ್ದಲ್ಲದೆ ಜೀವನ ವಿಮುಖಿ ಚಿಂತನೆ ಕಡೆಗೆ ತಿರುಗಿಸಿದರು. ಕ್ಷಾತ್ರವೃತ್ತಿ ಹಿಂದೆ ಬಿದ್ದಿತು. ಭಾರತವನ್ನು ಅಶೋಕ ನಿಃ ಕ್ಷತ್ರಿಯವಾಗಿಸಿದ ಎಂದೆಲ್ಲ ಅಭಿಪ್ರಾಯ ಪಡುತ್ತಾರೆ :

"ಔಪನಿಷಧಿಕ ವಿರಕ್ತಬ್ರಹ್ಮವಾದ ಹಾಗೂ ಜೈನಬೌದ್ಧ-ಸಂನ್ಯಾಸವಾದ ಇವುಗಳ ಹಿರಿಮೆ ಹೆಚ್ಚಳದ ಪರಿಣಾಮದಿಂದಾಗಿ ಸಮಾಜದಲ್ಲಿ 'ಗೃಹಸ್ಥಾಶ್ರಮ' ಎಂಬುದು, ... ಆಶಾಪಾಶ ಬದ್ಧ ಸಂಸಾರಿಕರ ಬಾಳುವೆ, ಕೀಳ್ಮಟ್ಟದ ಒಂದು ಜೀವನ ರೀತಿ ಎನಿಸತೊಡಗಿದ್ದು ಕಾಣುತ್ತದೆ. ಆದರೆ, ಶ್ರೌತ್ರ ಸ್ಮಾರ್ತ ಪರಂಪರೆಯು, ತನ್ನ ರೀತಿಯಲ್ಲಿ ಸಮಾಜ ಸುಧಾರಣೆಯ ಸಲುವಾಗಿ ತನ್ನ ಪ್ರಯತ್ನ ಮಾಡದೆ ಇರಲಿಲ್ಲ. ಈ ... ಸಂಸ್ಕರಣ ಹೊಂದಿದ ಮನುಸ್ಮೃತಿಯಿಂದ ಸಮಾಜ ಸುಧಾರಣೆಗಾಗಿ ಈ ಸಂಪ್ರದಾಯವು ಮಾಡಿದ ಪ್ರಯತ್ನಗಳನ್ನು ಅರಿತುಕೊಳ್ಳಬಹುದಾಗಿದೆ."[೧೧]

ಕ್ಷಾತ್ರತೇಜವನ್ನೂ ಒಪ್ಪಿ ಅವಿಮರ್ಶಾತ್ಮಕವಾಗಿ ಹೊರಡುವ ಶಂಬಾ, ಶ್ರುತಿ ಮತ್ತು ಸ್ಮೃತಿಕಾರರನ್ನು ಶ್ರಮಣ ಮತ್ತು ವಿರಕ್ತ ಪಂಥಗಳಿಗೆ ವಿರುದ್ಧ ನಿಲ್ಲಿಸಿ ಸಮಾಜಮುಖಿ ಮಾಡಲೆತ್ನಿಸುತ್ತಾರೆ. ಆದರೆ ಶಂಬಾ ಮುಖ್ಯರಾಗುವುದು 'ಶ್ರುತಿ' ಮತ್ತು 'ಸ್ಮೃತಿ'ಕಾರರ ಕುರಿತ ತರತಮ ನಿಲುವುಗಳಿಗಾಗಿ. ಈ ಕುರಿತು ಅವರ ಅಭಿಪ್ರಾಯ ಹೀಗಿದೆ.

"ಶ್ರಾತ-ಸ್ಮಾರ್ತ ಪರಂಪರೆಯ (ಸಮಾಜ) 'ಧರ್ಮ ಶಾಸ್ತ್ರಜ್ಞ' ಸ್ಮೃತಿಕಾರರೇ ಸರಿ. ಇವರ ಜನ್ಮಸಿದ್ಧ ಜಾತಿಯಗ್ರಹಿಕೆ, ಅಸ್ಪೃಶ್ಯರ ಬಗೆಗಿನ ತುಚ್ಛಭಾವನೆ, ನಿಜವಾದ ಬ್ರಾಹ್ಮಣ್ಯಕ್ಕಿಂತಲೂ, 'ಜಾತಿ' ಬ್ರಾಹ್ಮಣರ ಪಕ್ಷಪಾತ, ಇಂತಹ ಸಂಗತಿಗಳು ಆಕ್ಷೇಪವಾಗಿವೆ"[೧೨] ಅನೇಕಕಡೆ ಅವರ ಚಿಂತನೆಗಳಲ್ಲಿ ಬ್ರಾಹ್ಮಣ್ಯವನ್ನು ವಿರೋಧಿಸುವ ಭಾಗಗಳಿವೆ. ಅಶೋಕನ ಕ್ಷಾತ್ರ ಕುರಿತ ಹಿಂಜರಿಕೆಗಳಂತೆಯೇ ಬ್ರಾಹ್ಮಣರ ಭೇದಬುದ್ಧಿಯಿಂದ, ತರತಮಭಾವನೆಗಳಿಂದ ಹುಟ್ಟಿನಿಂದ ಬಂದ ಜಾತಿ ನಿರ್ಧಾರಣೆಗಳಿಂದ ಭಾರತ ಪರಕೀಯರ ಕೈವಶವಾಯಿತು ಎಂದು ವಿವರಿಸಲು ಅವರು ಪ್ರಯತ್ನಿಸುತ್ತಾರೆ. 'ಅಸಮಾನತೆ'ಯನ್ನು ವಿರೋಧಭಾವದಲ್ಲಿ ನೋಡುವ ಶಂಬಾ ಕನ್ನಡ ರಾಷ್ಟ್ರೀಯತೆಗೆ ಆಪ್ತ ಸಂಸ್ಕೃತಿ ಚಿಂತಕರಾಗುತ್ತಾರೆ.

ಮೇಲೆ ಗ್ರಹಿಸಲಾದ ಮೂರು ಮುಖ್ಯ ವಿಭಾಗೀಕರಣದ ಆಚೆಗೆ ಅನೇಕ ಕಡೆ ಬೆರಗು ಹುಟ್ಟಿಸುವಂಥ ಸಂಸ್ಕೃತಿ ಚಿಂತನೆಯ ಒಳನೋಟಗಳು ಕಾಣಿಸುತ್ತವೆ. ಅವುಗಳಲ್ಲಿ ಇಲ್ಲಿ ನೀಡಲಾದ ವಿವರಣೆಯಲ್ಲಿ ಸಂಸ್ಕೃತಿಯನ್ನು ವಿಕಾಸದ ಕಥನವೆಂತಲೂ, ಶಿಷ್ಟ-ಪ್ರತಿಷ್ಠಿತರ ಸಂಘರ್ಷದಲ್ಲಿ ತಲೆಯೆತ್ತುತ್ತದೆ ಎಂಬಂತೆಯೂ ಗ್ರಹಿಸಿದ್ದಾರೆ.

೧. "Struggle between elites' ಇಲ್ಲದೆ ' culture' (ಆಯಾಕಾಲದ ಶಿಷ್ಟರು ಪ್ರತಿಷ್ಠಿರು ಎಂಬವರೊಳಗಿನ ದ್ವಂದ್ವವು ಇಲ್ಲದೆ ಸಂಸ್ಕೃತಿಯು) ಗತಿಯನ್ನು ಪಡೆಯಲಾರದು. ಅವರ 'ಪ್ರಗತಿ' ಎಂಬುದು ಅಶಕ್ಯವಿತ್ತು ಎಂದು ಹೇಳಬಹುದು. 'ಸಂಸ್ಕೃತಿ' ಮತ್ತು 'ಅದು ಎಂದೂ ಬದಲಾಗದ್ದು' 'ಸನಾತನ' ಎಂಬ ಗ್ರಹಿಕೆ, ಚಾಲಿತ ಸ್ವರೂಪದ ಅನೈತಿಹಾಸ ನಂಬುಗೆ. ಸಂಸ್ಕೃತಿ ಎಂಬುದು 'ಇತಿಹಾಸ'ವಲ್ಲ, ನಿಜ. ಆದರೆ,

ಸಂಸ್ಕೃತಿಯು ಅವತರಿಸುವುದು.ಸಂ-ಸ್ಮೃತಿಯೊಳಗಿಂದ, 'ಸಂಸ್ಕೃತಿ' (Struggle) ಇಲ್ಲದೆ 'ಸಂಸ್ಕೃತಿ' ಅಭಿವ್ಯಕ್ತಿಯನ್ನು ಪಡೆಯಲಾರದು" [೧೩]

೨. ದನಗಾರಿಕೆಯ ಯುಗದಲ್ಲಿ 'ಗೋ'-ಪನು ಭೂ-ಪನಾಗಿದ್ದನು. ಮುಂದೆ ವಸ್ತ್ರಯುಗವು ಉದಯವಾಯ್ತು, ಚಾಡ, ಚೇದ, ಜೋಡ ಚಾಲುಕ್ಯರು ರಾಜರಾದರು. ಹತ್ತಿಯು ಹಿಂದೂ ದೇಶದ ಹೊರತು ಹೊರಗೆ ಎಲ್ಲಿಯೂ ಬೆಳೆಯುತ್ತಿದ್ದಿಲ್ಲ. ಕಾಂತಿ, ಪೈಠಣ, ಮಚ್ಚಲೀ ಪಟ್ಟಣಗಳು ಬಟ್ಟೆಗಳಿಗಾಗಿ ಬಹಳ ಪ್ರಖ್ಯಾತವಾಗಿದ್ದುವು. ಇಜಿಪ್ತ ಗ್ರೀಸದತ್ತಣಿಂದ ಅಗಣಿತ ಸಂಪತ್ತು ಹಿಂದೂ ದೇಶಕ್ಕೆ ಈ ವ್ಯಾಪಾರದ ಮೂಲಕವಾಗಿ ಬರುತ್ತಿತ್ತು. ಆಗ ಸಂಪತ್ತಿನ ತವರುಮನೆಯೆಂದರೆ ಚಾಡರೇ, ಆದುದರಿಂದ, ಇವರಿಗೆ ಸಂಬಂಧಪಟ್ಟ ಜನಾಂಗದ ಕಡೆಗೆ ರಾಜಕೀಯ ಸೂತ್ರಗಳೂ ಬಂದಿರುವುದು ಸಹಜವಾಗಿದೆ. ಒಮ್ಮೆ ಗೋಪನೇ ರಾಜನು; ಈ ಪಟ್ಟಕಾರ (ಹಟಕಾರ) ನೇ ಪಟ್ಟಾಧಿಕಾರಿ ಅರಸು. ಪಟ್ಟಕಾರರೆಂದರೆ ಚಾಡರು ಎಂದರೆ ಪೂರ್ವ ಸೂರಿಗಳ ಭಾಷೆಯಲ್ಲಿ ಯಾದವರು"[೧೪] .

೩. "ಒಕ್ಕಲತನದಲ್ಲಿ ಮೊದಲು ಹೊಲವಲ್ಲ! ತೋಟವನ್ನು ನೋಡಿ ತನ್ನ ಪ್ರೀತಿಯ ಗಿಡ ಗಂಟಿಯನ್ನು ನೆಟ್ಟು ಬೆಳೆಸುವ ಹದವು ತಿಳಿದ ಮೇಲೆ ಮುಂದೆ ಬರುಬರುತ್ತ ಒಕ್ಕಲತನದ ಬೆಳವಣಿಗೆಯಾಯಿತು. ಜಗತ್ತಿಗೆ ಈ ವಿದ್ಯೆಯನ್ನು ಮೊದಲು ತಂದ ಶ್ರೇಯಸ್ಸು ಗಂಡಸಿಗಿಲ್ಲ. ಮಾನವನ ಹೃದಯವನ್ನು ತಮ್ಮ ಆಕರ್ಷಣದಿಂದ ಕೃಷಿಮಾಡಿ ದಯಾ-ಪ್ರೀತಿಗಳ ಬೀಜವನ್ನು ಮೊದಲು ಬಿತ್ತಿದವರು ಹೆಂಗಸರು. ಭಾವಲೋಕದಂತೆ ಭೂಲೋಕದ ಕೃಷಿಯ ಆರಂಭಗಾರರೂ ಹೆಂಗಸರೇ."[೧೫]

ಮೇಲಿನ ಮೂರೂ ಭಾಗಗಳನ್ನು ಒಟ್ಟಿಗೆ ಉದ್ದೇಶಪೂರ್ವಕವಾಗಿ ಆರಿಸಿ ದಾಖಲಿಸಲಾಗಿದೆ.

ಸಂಸ್ಕೃತಿಯನ್ನು ವಿಕಾಸಗತಿಯಲ್ಲಿ ಯೋಚಿಸುವುದೇ ಪ್ರಗತಿ ಪರ ಆಯಾಮ. ಸಂಸ್ಕೃತಿ ಕುರಿತಂತೆ ವರ್ತಮಾನದ ಬಿಕ್ಕಟ್ಟುಗಳಿಗೆ ಉತ್ತರಿಸುವಾಗ ಕಾಣುವ ಶಂಬಾರಿಗೂ, ಸಂಸ್ಕೃತಿಯನ್ನು ಹರಿಯುವ ನದಿಯಂತೆ ಎಂದು ಗ್ರಹಿಸುವ ಶಂಬಾರಿಗೂ ಅಪಾರ ವ್ಯತ್ಯಾಸಗಳಿವೆ. ಈ ಬಿಕ್ಕಟ್ಟುಗಳು ಅವರ ಚಿಂತನಾಕ್ರಮದಲ್ಲೇ ಅಡಗಿವೆಯೆನ್ನಿಸುತ್ತದೆ. (ಸಮುದ್ರದೊಳಗೆ ಮುಳುಗಿದವರು ತಮಗೆ ಸಿಕ್ಕಿದ್ದನ್ನು ಹಿಡಿದು ತರಲು ಸಾಧ್ಯ. ಶಂಬಾಕೃತಿಗಳ ಅಧ್ಯಯನದ ಸಮಸ್ಯೆಯೂ ಅದೇ ಥರದ್ದು). ಹಿಂದೆ ವಿವರಿಸಿದ ಚಿಂತನೆಗಳಿಗಿಂತ ಮೇಲಿನ ವಿವರಗಳಲ್ಲಿ ಶಂಬಾ ಬೇರೆ ರೀತಿಯಲ್ಲಿ ಕಾಣಿಸಲಾರಂಭಿಸುತ್ತಾರೆ. ಸಂಸ್ಕೃತಿಯನ್ನು ಸಂಘರ್ಷದ ನಡುವೆ ಹುಟ್ಟುವ ಸಂಗತಿ ಎಂದು ಗ್ರಹಿಸುವಾಗ ಮತ್ತು ಆ ನಂತರದ ಎರಡೂ ಉಧೃತ ಭಾಗಗಳಲ್ಲೂ ಕಮ್ಯುನಿಸ್ಟ್ ಚಿಂತಕರಾದ 'ಮಾರ್ಕ್ಸ್' ಮತ್ತು ಏಂಗೆಲ್ಸ್‌ರ ಚಿಂತನೆಗಳ ಕತೆ ಕಾಣಿಸುತ್ತವೆ. ಸಮಾಜದ ವಿಕಾಸಗತಿಯಲ್ಲಿ ಅದರ ಅಗತ್ಯಗಳೂ ಬದಲಾಗುತ್ತವೆ. ಬದಲಾದ ಅಗತ್ಯಗಳಿಗನುಗುಣವಾಗಿ ಉತ್ಪಾದನಾಂಗಗಳು ಬದಲಾಗುತ್ತವೆ. ಉತ್ಪಾದನಾಂಗಗಳ ಮೇಲೆ ಯಜಮಾನಿಕೆ ಸ್ಥಾಪಿಸಿದವರು ಸಮಾಜದ ಯಜಮಾನರಾಗುತ್ತಾರೆ ಎಂಬ ಆದಿಮ ಗ್ರಹಿಕೆಯ ಎಳೆಯನ್ನು ಇಲ್ಲಿ ಗಮನಿಸಬಹುದಾಗಿದೆ. ಈ 'ಥಿಯರಿ'ಯ ಅಂತರ್ಯದಲ್ಲಿ ಬದಲಾದ ಸಮಾಜದ ಅಗತ್ಯಗಳಿಗೆ ಸ್ಪಂದಿಸದಿದ್ದವರು ಅಷ್ಟರಮಟ್ಟಿಗೆ ಅಪ್ರಸ್ತುತರಾಗುತ್ತಾರೆ ಎಂಬ ನಿಲುವು ಅವರಲ್ಲಿ ಇದ್ದ ಹಾಗೆ ಕಾಣುತ್ತದೆ.

ಶಂಬಾರ ಈ ನಿಲುವುಗಳನ್ನು ವಾಸ್ತವಕ್ಕೆ ಅನ್ವಯಿಸಿ ನೋಡಲು ಸಾಧ್ಯವೇ ಎಂಬ ಪ್ರಶ್ನೆ ಹುಟ್ಟುತ್ತದೆ. ಏಕೆಂದರೆ ಭಾರತದಲ್ಲಿ ಪ್ರಭುತ್ವದ ಪಲ್ಲಟಗಳು ಇಷ್ಟು ಸುಲಭವಾಗಿ ಸಂಭವಿಸಿಲ್ಲ ಎಂಬುದು ಚರಿತ್ರೆಯನ್ನು ಅಧ್ಯಯನ ಮಾಡಿದವರಿಗೆ ಅರ್ಥವಾಗುತ್ತದೆ. ಏಕೆಂದರೆ ಶ್ರಮಿಕ ಸಮುದಾಯಕ್ಕಿಂತ, ಸಂಗ್ರಾಹಕ ಸಮುದಾಯಗಳೇ ಭಾರತದ ರಾಜಕೀಯವನ್ನು ಬಲವಾಗಿ ನಿಯಂತ್ರಿಸಿವೆ ಎಂಬುದೂ ಅರ್ಥವಾಗುತ್ತದೆ.

'ಕೃಷಿ ಸಂಸ್ಕೃತಿ' ಹೆಣ್ಣಿನಿಂದ ಆರಂಭವಾಯಿತು ಎಂಬ ಶಂಬಾರ ನಿಲುವು ಪುರುಷ ಪ್ರಾಧಾನ್ಯತೆಯಲ್ಲಿ ನಂಬಿಕೆಯಿಟ್ಟ ಬಲಪಂಥೀಯರನ್ನು ಅಲುಗಾಡಿಸಬಲ್ಲ ಶಕ್ತಿ ಹೊಂದಿದೆ. ಇಂಥ ಕಡೆಗಳಲ್ಲಿ ಶಂಬಾರ ಸಂಸ್ಕೃತಿ ಚಿಂತನೆ ಕನ್ನಡ ರಾಷ್ಟ್ರೀಯತೆಗೆ ಸ್ವಲ್ಪಮಟ್ಟಿಗಾದರೂ ಹೆಗಲು ಕೊಡುವ ಸಂಗಾತಿಯಾಗುತ್ತದೆ.

**೬.೫ ಸಂಸ್ಕೃತಿ ಕುರಿತಂತೆ ಕುವೆಂಪುರವರ ಚಿಂತನೆಗಳು**

ಸಂಸ್ಕೃತಿ ಚಿಂತನೆ ಎನ್ನುವುದು, ಹೋರಾಟಗಾರ ಇಲ್ಲವೇ ವಿದ್ವಾಂಸರಿಗಿಂತ, ಸಮಾಜಮುಖಿಯಾದ ಸಾಹಿತಿ ಮತ್ತು ಚಿಂತಕರಲ್ಲಿ ರೂಪುಗೊಳ್ಳುವ ವಿಧಾನ ಬೇರೆಯಾಗಿರುತ್ತದೆ. ಬದುಕಿನ ಸೂಕ್ಷ್ಮಾತಿಸೂಕ್ಷ್ಮ ವಿವರಗಳಿಂದ ವಿವರಗಳು ಮೋಡದಂತೆ ದಟ್ಟೈಸಲಾರಂಭಿಸುತ್ತವೆ. ಜೊತೆಗೆ ಸಮಾಜದ ಅಗತ್ಯಗಳಿಗೆ ಅನುಗುಣವಾಗಿ ವ್ಯಾಖ್ಯಾನಿಸುವ ಕೆಲಸವೂ ನಡೆಯುತ್ತಿರುತ್ತದೆ. ಅನೇಕ ಸಾರಿ ಈ ಎರಡೂ ನೆಲೆಗಳು ಪರಸ್ಪರ ಡಿಕ್ಕಿ ಹೊಡೆಯುವ ಸಾಧ್ಯತೆ ಕೂಡ ಇರುತ್ತದೆ. ಕುವೆಂಪುರವರ ಸಂಸ್ಕೃತಿ ಚಿಂತನೆ, ಕನ್ನಡ ರಾಷ್ಟ್ರೀಯತೆಗೆ ಎಲ್ಲಿ ಪೂರಕವಾಗುತ್ತದೆ ಮತ್ತು ಎಲ್ಲಿ ಸವಾಲಾಗಿ ಕಾಣಿಸಲಾರಂಭಿಸುತ್ತದೆ ಎಂಬ ವೈರುಧ್ಯದ ನೆಲೆಯಿಂದ ಅಧ್ಯಯನಕ್ಕೆ ತೊಡಗಿದರೆ ಮೇಲಿನ ಸಂಗತಿಗಳು ಗೋಚರಿಸದೆ ಇರಲಾರವು. ಏಕೆಂದರೆ ಅವರು ತಮ್ಮ ಕಥನ ಸಾಹಿತ್ಯದಲ್ಲಿ ಅನೇಕ ಕಡೆ ಉದ್ದೇಶಪೂರ್ವಕವಾಗಿ ಕರ್ನಾಟಕ ಸಂಸ್ಕೃತಿಯನ್ನು, ಶ್ರಮಿಕ ಸಂಸ್ಕೃತಿಯನ್ನು ಪ್ರತಿಪಾದಿಸುತ್ತಿರುತ್ತಾರೆ. ಆದರೆ ಅವರ ಚಿಂತನ ಸಾಹಿತ್ಯದಲ್ಲಿ ಅಖಿಲ ಭಾರತೀಯ ಸಂಕೇತಗಳ ಮೂಲಕ ವಿವರಗಳನ್ನು ಮಂಡಿಸುತ್ತಾರೆ.

ಕುವೆಂಪುರವರ ಸಂಸ್ಕೃತಿ ಚಿಂತನೆಯನ್ನು ಮೊದಲು ಮಾಡಿಕೊಂಡಿರುವ ಮುಖ್ಯ ವಿಭಾಗಗಳಲ್ಲಿ ಇಟ್ಟುನೋಡುವುದಾದರೆ, ಅವರ ಚಿಂತನೆ ಕಲಾಕೇಂದ್ರಿತವಾದುದು ಮತ್ತು ನಿರ್ದಿಷ್ಟ ಆಲೋಚನಾ ಕ್ರಮಕ್ಕೆ ಸೇರಿದ್ದು ಎಂದು ಭಾವಿಸಬಹುದು. ಆ ಅರ್ಥದಲ್ಲಿ ಆಯ್ದು ನೈತಿಕ ಮೌಲ್ಯಗಳನ್ನು ಗೇಲಿಮಾಡುವುದರ ಜೊತೆಗೆ ಸಮುದಾಯ ಕೇಂದ್ರಿತ 'ಸರ್ವೋದಯ' ಮತ್ತು 'ಸಮಾನತೆಯ' ಆಧಾರದ ಮೇಲೆ ಹೊಸ 'ನೈತಿಕ' ಪರಿಭಾಷೆ ರೂಪಿಸಲು ತೊಡಗುತ್ತದೆ. ಅದು ಮಾನವ ಶಾಸ್ತ್ರೀಯ ವ್ಯಾಖ್ಯಾನವನ್ನು ಬಿಟ್ಟು ಕೊಡುತ್ತದೆ ಅಥವಾ ಗುಮಾನಿಯಿಂದ ನೋಡುತ್ತದೆ.

ಕುವೆಂಪುರವರ ಚಿಂತನೆಯನ್ನು ಸ್ವಲ್ಪ ಮಟ್ಟಿಗೆ ಸಂಕ್ಷೇಪಗೊಳಿಸಿ ಅವರೇ ಹೇಳಿದ ಮಾತುಗಳಲ್ಲಿ ನೋಡಬಹುದು : "ನಾನು ರಾಜ್ಯ ದೃಷ್ಟಿಯಿಂದ ಕರ್ನಾಟಕದವನು, ಭಾಷಾ ದೃಷ್ಟಿಯಿಂದ ಕನ್ನಡಿಗನು, ಆದರೆ ಸಂಸ್ಕೃತಿ ದೃಷ್ಟಿಯಿಂದ ಮತ್ತು ರಾಷ್ಟ್ರದೃಷ್ಟಿಯಿಂದ ಭಾರತೀಯನು. ನನ್ನ ಕರ್ನಾಟಕತ್ವ ಭಾರತೀಯತ್ವಕ್ಕೆ ಎಂದಿಗೂ ಎದುರು ನಿಲ್ಲುವುದಿಲ್ಲ."[೧೬] ಈ ನಿಲುವನ್ನು ಅವರು ಕೊನೆಯವರೆಗೂ ಬದಲಾಯಿಸಿದಂತೆ ಕಾಣುವುದಿಲ್ಲ. ಅವರ ಆರಂಭ ಕಾಲದ ರಚನೆಯಾದ ಕರ್ನಾಟಕ ರಾಷ್ಟ್ರಗೀತೆ (ನಾಡಗೀತೆ)ಯಲ್ಲಿಯೇ

ಕರ್ನಾಟಕದ ಸಂಗತಿಗಳು ಭಾರತೀಯ ಸಂಗತಿಗಳ ಜೊತೆಗೂಡಿ ಅಖಿಲ ಭಾರತೀಯವಾಗುತ್ತವೆ. ಅಂತಿಮವಾಗಿ ಭಾರತಕ್ಕೆ ಅಮೆರಿಕರ ರಾಜ್ಯಗಳ ಮಾದರಿಯಲ್ಲಿ 'ಫೆಡರಲ್ ವ್ಯವಸ್ಥೆ' ಅಗತ್ಯವೆಂದು, ಸೈಜ ಒಕ್ಕೂಟ ತತ್ವದ ಆಧಾರದ ಮೇಲೆ ರೂಪುಗೊಳ್ಳಬೇಕಾದ ಅವಶ್ಯಕತೆಯಿದೆ. ಕೇಂದ್ರವೆನ್ನುವುದು ಸೈನ್ಯ ಮುಂತಾದ ಸೀಮಿತ ಅಧಿಕಾರಹೊಂದಿದೆ, ಬಲಿಷ್ಠ ರಾಜ್ಯಗಳ ಅಗತ್ಯವಿದೆ ಎಂದು ಪ್ರತಿಪಾದಿಸುತ್ತಾರೆ. ಅದರ ಸಂಸ್ಕೃತಿ ವಿಚಾರದಲ್ಲಿ ಭಾರತಕ್ಕೆಲ್ಲ ಒಂದೇ ಸಂಸ್ಕೃತಿ ಎಂಬ ನಿಲುವು ಬದಲಿಸದೆ ಉಳಿಸಿಕೊಂಡಿದ್ದರು. ವೇದಗಳು, ಉಪನಿಷತ್ತುಗಳು ಮಹಾಕಾವ್ಯಗಳು, ಪುರಾಣಗಳು ಮುಂತಾದ ಸಂಸ್ಕೃತ ಪಠ್ಯಗಳೇ ಭಾರತದುದ್ದಕ್ಕೂ ಜನರನ್ನು ಬಂಧಿಸಿಟ್ಟಿರುವಲ್ಲಿ ಮತ್ತು ಅಖಿಲ ಭಾರತೀಯವಾಗಿಸುವಲ್ಲಿ ಕಾರಣವಾಗಿವೆ ಎಂದೇ ಕುವೆಂಪು ತಿಳಿದಿದ್ದರು.

"ಕನ್ಯಾಕುಮಾರಿಯಿಂದ ಹಿಮಾಲಯದವರೆಗೆ ಯಾವ ರಾಜ್ಯಕ್ಕೆ ಹೋಗಲಿ, ಯಾವ ಹಳ್ಳಿಗೆ ಹೋಗಲಿ, ಯಾವ ನಗರಕ್ಕೇ ಹೋಗಲಿ, ಈ ಮೂಲ ಸಂಸ್ಕೃತಿಯ ಐಕ್ಯತೆಯನ್ನು ಕಾಣುತ್ತೇವೆ. ಭಾಷೆಯಲ್ಲಿ ವೇಷಭೂಷಣಗಳಲ್ಲಿ ನಡೆನುಡಿಗಳಲ್ಲಿ ಆಚಾರ, ಬಹುಶಃ ಶಾರೀರಿಕ ವರ್ಣದಲ್ಲಿ ವ್ಯತ್ಯಾಸಗಳನ್ನು ಗಮನಿಸಬಹುದು. ಔತ್ತರೇಯ ದಾಕ್ಷಿಣಾತ್ಯ, ಆ ಜಾತಿ-ಈ ಜಾತಿ, ಆ ಮತ-ಈ ಮತ ಎಂಬ ಭೇದವಿಲ್ಲದೆ ವೇದೋಪನಿಷತ್ತು ಪುರಾಣೇತಿಹಾಸ ದರ್ಶನಗಳೂ, ಅಲ್ಲಿ ಪ್ರತಿಪಾದಿತವಾಗಿರುವ ಉದಾತ್ತ ತತ್ವಗಳೂ ಸರ್ವಜನಾದರಣೀಯವಾಗಿವೆ. ಅಲ್ಲಿ ಅಭಿವ್ಯಕ್ತಗೊಂಡಿರುವ ಮಹಾವ್ಯಕ್ತಿಗಳು ಸರ್ವಜನ ಗೌರವ ಭಾಜನರಾಗಿದ್ದಾರೆ. ಅಲ್ಲಿ ಕಾಣುವ ಆಧ್ಯಾತ್ಮಿಕ ವಿಚಾರದಲ್ಲಿ ಎಲ್ಲರೂ ಒಂದೇ ವಿಧವಾದ ಶ್ರದ್ಧಾಭಕ್ತಿ ಗೌರವವುಳ್ಳವರಾಗಿದ್ದಾರೆ. ಶ್ರೀಮದ್ರಾಮಯಣ ಅಥವಾ ಮಹಾಭಾರತ ಯಾವ ಭಾಷೆಯಲ್ಲಿಯೇ ಇರಲಿ ಅದು ಸಂಸ್ಕೃತವಾಗಲಿ, ಬಂಗಾಳಿಯಾಗಲಿ ತೆಲುಗಾಗಲಿ ತಮಿಳಾಗಲಿ ಕನ್ನಡವಾಗಲಿ ಅದನ್ನು ಓದಿದವರಲ್ಲಿ ಏಕರೀತಿಯವಾದ ಪೂಜ್ಯಭಾವನೆ ಮೂಡುತ್ತದೆ. ಯಾವ ಸೈನಿಕ ಶಕ್ತಿಯೂ ರಾಜಕೀಯ ಶಕ್ತಿಯೂ ಮಾಡಲಾರದ ಕೆಲಸವನ್ನು ರಕ್ಷಿಸಲಾರದ ಸಂಸ್ಕೃತಿ ಭಂಡಾರವನ್ನು ಮಹಾಕವಿಗಳು ಗಾಯಕವರೇಣ್ಯರು ಶಿಲ್ಪವೇತ್ತರು ಕಲಾಚಾರ್ಯರು ಮಾಡುತ್ತ ಬಂದಿದ್ದಾರೆ. ರಕ್ಷಿಸುತ್ತ ಬಂದಿದ್ದಾರೆ. ಹಾಗಾಗದಿದ್ದರೆ ಇಂದಿನ ಭೌಗೋಳಿಕ ಐಕ್ಯತೆ ಸಾಧ್ಯವಾಗುತ್ತಿರಲಿಲ್ಲ.

ಪ್ರಪಂಚದಲ್ಲಿ ಯಾವ ಸಮಯದಲ್ಲಿ ಏನು ಬೇಕಾದರೂ ಆಗಬಹುದು. ಎಂಥ ವಿನಾಶವಾದರೂ ಒದಗಬಹುದು. ಆದರೆ ಭರತಖಂಡದ ಸಾಂಸ್ಕೃತಿಕ ಐಕ್ಯತೆ ಮಾತ್ರ ಅವಿನಾಶಿ. ಈ ಸಂಸ್ಕೃತಿ ವಿಶೇಷವಾಗಿ ಸಂಸ್ಕೃತ ಭಾಷೆಯಲ್ಲಿ ರಕ್ಷಿತವಾಗಿ ಘನೀಭೂತವಾಗಿ ಇದೆ. ಅದು ೧೪ ಮುಖ್ಯ ಭಾಷೆಗಳ ಮೂಲಕ ಸಾಮಾನ್ಯ ಜನರೆಡೆಗೆ ಹರಿದು ಬರುತ್ತದೆ. ಸಂಸ್ಕೃತ ಭಾಷೆ ಸರೋವರ ಇದ್ದ ಹಾಗೆ. ೧೪ ಭಾಷೆಗಳು ಅಲ್ಲಿಂದ ಹೊಮ್ಮಿ ಕಾಲುವೆಗಳು ಕನ್ನಡದ ಕಾಲುವೆ, ಮರಾಠಿಕಾಲುವೆ ಇತ್ಯಾದಿ ಒಂದೇ ಗುಣದ ನೀರು ಬೇರೆ ಬೇರೆ ಕಾಲುವೆಗಳಲ್ಲಿ ಹರಿದು ಬೇರೆ ಬೇರೆ ಕ್ಷೇತ್ರಗಳನ್ನು ಅಭಿವೃದ್ಧಿಗೊಳಿಸುತ್ತಿದೆ. ಅಖಂಡತೆಯಲ್ಲಿ ಅಥವಾ ಏಕತ್ವದಲ್ಲಿ ಅನೇಕತ್ವವನ್ನೂ, ಅನೇಕತ್ವದಲ್ಲಿ ಏಕತ್ವವನ್ನೂ ಕಾಣುತ್ತೇವೆ. ಅನೇಕತ್ವ ಏಕತ್ವಕ್ಕೆ ವಿರುದ್ಧವಲ್ಲ. ಒಂದಕ್ಕೆ ಮತ್ತೊಂದು ರಕ್ಷಣೆಯಾಗುತ್ತದೆ, ಪೋಷಕವಾಗುತ್ತದೆ."

ಕುವೆಂಪುರವರ ಸಂಸ್ಕೃತಿ ಚಿಂತನೆಗಳು ಬಹುಪಾಲು ಭಾಷಣಗಳ ರೂಪದಲ್ಲೇ ಇವೆ. ಭಾಷಣಗಳ ಹಿಂದೆ ಕೆಲಸ ಮಾಡುವ ಒತ್ತಡಗಳು ಮತ್ತು ತನ್ನ ವ್ಯಕ್ತಿತ್ವದ ಜೊತೆಗೆ ಸಂಘರ್ಷ ಮಾಡುತ್ತ ಕಟ್ಟುವ ಕಥನ ಸಾಹಿತ್ಯದ ತುರ್ತುಗಳನ್ನು ಒಂದೇ ಎಂದು ಭಾವಿಸುವಂತಿಲ್ಲ. ಆದರೂ ಕುವೆಂಪುರವರ ಅನೇಕ ಬರಹಗಳಲ್ಲೂ ಮೇಲಿನ ಮಾತುಗಳಲ್ಲಿರುವ ಧ್ವನಿ ಅನುರಣಿತವಾಗುತ್ತಿರುತ್ತದೆ. ಕುವೆಂಪುರವರು ಈ ನಿರ್ಧಾರಕ್ಕೆ ಬರಲು ಬಹುಶಃ ಎರಡು ಕಾರಣಗಳು ಕೆಲಸಮಾಡಿರಬಹುದು.

೧. ಅವರು ತಮ್ಮ ಚಿಂತನೆಗಳನ್ನು ರೂಪಿಸಿಕೊಳ್ಳಲು ಬಹುಪಾಲು ಸಂಸ್ಕೃತ ಪಠ್ಯಗಳನ್ನೇ ಅಥವಾ ಇಂಗ್ಲಿಷ್ ಪಠ್ಯಗಳನ್ನು ಆಧಾರವಾಗಿಟ್ಟುಕೊಂಡರು.

೨. ಭೌತಿಕ ಭಾರತವನ್ನು ಸುತ್ತಿ ಜನಸಮುದಾಯಗಳ ಜೀವನರೀತಿಗಳನ್ನು ಅಭ್ಯಾಸ ಮಾಡಿರುವ ಸಾಧ್ಯತೆಗಳು ಕಡಿಮೆ ಇದೆ. ಒಂದು ವರ್ಗದ ಆಲೋಚನಾಕ್ರಮಗಳು ಕ್ರಿಯಾಶೀಲವಾಗಿರುವ ಲಿಖಿತ ದಾಖಲೆಗಳ ಅವಲಂಬನೆ ಕೂಡ ಆಧಾರವಾಗಿರಬಹುದು. ಅಥವಾ ಈ ಪಠ್ಯಗಳನ್ನು ವರ್ತಮಾನದ ಅಗತ್ಯಕ್ಕೆ ತಕ್ಕ ಹಾಗೆ ಮಾರ್ಪಡಿಸಿಕೊಳ್ಳುವ ಸುಧಾರಣಾವಾದಿ ನಿಲುವೂ ಕಾರಣವಾಗಿರಬಹುದು.

ಹಾಗಾಗಿಯೇ ಕುವೆಂಪು ಅವೈದಿಕ ದರ್ಶನಗಳ ಮೂಲಕ ವೈದಿಕ 'ಸಂಸ್ಕೃತಿ' ಅಥವಾ ಪಠ್ಯಗಳನ್ನು ನೋಡದೆ, ಆಧುನಿಕ ವೈಚಾರಿಕ ಪ್ರಜ್ಞೆಯ ಮೂಲಕ ನೋಡುತ್ತಾರೆ. ಈ ಆಧುನಿಕ ವೈಚಾರಿಕ ಪ್ರಜ್ಞೆ ನಾವು ಭಾವಿಸಿಕೊಂಡ ಹಾಗೆ ಪರಂಪರೆಯ ಪಠ್ಯಗಳನ್ನು ತಿರಸ್ಕೃತ ಮನೋಭಾವದಿಂದ ನೋಡುವಂತೆ ಪ್ರೇರೇಪಿಸದೆ ಪರಂಪರೆಯ ಮರುವ್ಯಾಖ್ಯಾನದ ಕಡೆಗೆ ಕುವೆಂಪು ಅವರನ್ನು ತಿರುಗಿಸಿರುವುದು ತುಸು ಕುತೂಹಲ ಹುಟ್ಟಿಸಬಹುದು. ಆದರೆ ಪಶ್ಚಿಮದ 'ಎನ್‌ಲೈಟನ್‌ಮೆಂಟ್' ಮತ್ತು 'ರೊಮ್ಯಾಂಟಿಕ್' ಪಂಥಗಳು ಮಾಡಿದ 'ಗತ' ಆಕೃತಿಗಳನ್ನು, ಜೀವನ ವಿಧಾನಗಳ ವರ್ತಮಾನಕ್ಕೆ ಮಾದರಿ ಎಂಬ ತಿಳಿವಳಿಕೆ ಭಾರತದ ಸಂಸ್ಕೃತಿ ಚಿಂತಕರ ಮೇಲೆ ಪ್ರಭಾವ ಬೀರಿದ್ದರೂ, ಅದು ಕುವೆಂಪು ಮುಂತಾದವರಿಗೆ ಪರಂಪರೆ ಎನ್ನುವುದು ದುಡಿಯುವ ಸಮುದಾಯಗಳ ಚೈತನ್ಯವನ್ನು ಕೊಂದುಹಾಕಲು ಪ್ರಯತ್ನಿಸಿವೆ ಎಂಬ ಎಚ್ಚರವನ್ನು ತಂದುಕೊಟ್ಟವು. ಹಾಗಾಗಿ ಕುವೆಂಪುರವರ ಸಂಸ್ಕೃತಿ ಚಿಂತನೆಗಳು ಅಸೂಕ್ಷ್ಮವಾಗದೆ, ಪರಂಪರೆಯನ್ನು ಸಮಸ್ತ ಸಮುದಾಯಗಳ ಆಧುನಿಕ ಅಗತ್ಯಗಳಿಗೆ ವ್ಯಾಖ್ಯಾನ ಮಾಡುವ ಆಸಕ್ತಿ ತೋರಿಸುತ್ತವೆ. ಅವೈದಿಕ ದರ್ಶನಗಳ ಆಧಾರದಿಂದ ಪರಂಪರೆಯ ವಾಗ್ವಾದಗಳನ್ನು ಅರಿಯುವ ಸಾಧ್ಯತೆ ಕುವೆಂಪುರಿಗೆ ಸಿಗಲಿಲ್ಲವೆ? ಸಿಕ್ಕಿದ್ದರೆ ಅವರ ಚಿಂತನೆಗಳ ಸ್ವರೂಪ ಹೇಗಿರುತ್ತಿತ್ತು ಎಂಬ ಕುತೂಹಲವಷ್ಟೇ ಹುಟ್ಟಲು ಸಾಧ್ಯ.

ಕುವೆಂಪುರವರು ಭಾಷೆಯನ್ನೂ ಕೂಡ ಸಂಸ್ಕೃತ ಮೂಲಕ್ಕೆ ಕೊಂಡುಹೋಗುತ್ತಾರೆ. ಶಂಬಾ ಕಂದಮಿಳ ಮೂಲಕ ಸಂಸ್ಕೃತವನ್ನು ಅರಿಯಲು, ವ್ಯಾಖ್ಯಾನಿಸಲು ಪ್ರಯತ್ನಿಸಿದರೆ ಕುವೆಂಪು ಪೂರಾ ತದ್ವಿರುದ್ಧ ದಿಕ್ಕಿನಿಂದ ಹೊರಡುತ್ತಾರೆ. ಹಾಗಾಗಿ ಅನೇಕ ಕಡೆಗಳಲ್ಲಿ ಸ್ವಲ್ಪ ಎಚ್ಚರ ತಪ್ಪಿದರೂ ಕುವೆಂಪುರ ಚಿಂತನೆಗಳನ್ನು ಬಲಪಂಥೀಯ ಚಿಂತನೆಗಳಿಗೆ ತುಸು ಹತ್ತಿರ ಎಂಬ ನಿಲುವಿಗೆ ತಲುಪಿಬಿಡಬಹುದು. ಭಗವದ್ಗೀತೆಯ ಕುರಿತ ಅವರ ಅಭಿಪ್ರಾಯಗಳನ್ನೇ ಉದಾಹರಣೆಯಾಗಿ ತೆಗೆದುಕೊಳ್ಳಬಹುದು :

"ಚಾತುರ್ವರ್ಣ್ಯಂ ಮಯಾ ಸೃಷ್ಟ್ಯಂ ಗುಣ ಕರ್ಮ ವಿಭಾಗಶಃ" ಎಂಬ ಗೀತಾ ವಾಕ್ಯಕ್ಕೆ ಸರಿಯಾದ ಅರ್ಥ ಮಾಡಿಕೊಂಡರೆ ವಿವಾದಕ್ಕೆಡೆಯಿಲ್ಲ. "ಮಯಾಸೃಷ್ಟಿ" ಎನ್ನುವುದು ಭಗವಂತನ ಮಾತು. ಭಗವಂತನದೇ

ಆದ ಸೃಷ್ಟಿಗೆ ಸಂಬಂಧಿಸಿದ್ದು. ಅಲ್ಲಿ ಹೇಳಿದ ಆ ಚತುರ್ವರ್ಣಗಳು ಮಾನವಕೃತವಾದ ಕೃತಕ ವಿಭಜನೆಯ ರೂಪಗಳಲ್ಲಿಲ್ಲ. ಅವು ಜೀವನದ ಸ್ವಭಾವ ಸ್ವಧರ್ಮನಿಷ್ಠವಾಗಿ ಗುಣ ಕರ್ಮ ರೂಪದಲ್ಲಿ ಮೂಡುವ ಸಹಜ ವಿಭಾಗ. ಈ ಮನುಜಕೃತವಲ್ಲದ ಆಕೃತಕವಾದ ವರ್ಣ ವ್ಯವಸ್ಥೆ ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ತನಗೆ ತಾನೇ ಇದ್ದೇ ಇರುತ್ತದೆ."[೧೮]

ಹೀಗೆ, ಆಧುನಿಕ ವಿಚಾರವಾದವು ಒಮ್ಮುಖವಾಗಿ ತಿರಸ್ಕರಿಸುವುದನ್ನು ಕುವೆಂಪು ಬಹಳ ಎಚ್ಚರಿಕೆಯಿಂದ ಗಮನಿಸುತ್ತಾರೆ. ಅವರ ಪ್ರಕಾರ ಗೀತೆ ಮುಂತಾದವು ಬ್ರಾಹ್ಮಣ ಪಠ್ಯಗಳಷ್ಟೇ ಅಲ್ಲ ಮನುಜ ಕುಲಕ್ಕೆ ಸೇರಿದುವು. ಬ್ರಾಹ್ಮಣ್ಯವಾದಿಗಳು ಈ ಪಠ್ಯಗಳನ್ನು ತಮ್ಮ ವರ್ಗ ಹಿತಾಸಕ್ತಿಗೆ ಅನುಗುಣವಾಗಿ ವ್ಯಾಖ್ಯಾನ ಮಾಡಿದರು. ಅಮೂರ್ತತೆ ಕಡೆಗೆ ತುಡಿಯುವ ವಿಚಾರಗಳನ್ನು ಮೂರ್ತವಾಗಿಸಿದರು ಎಂದು ಪ್ರತಿಪಾದಿಸುತ್ತಾರೆ. ವರ್ಣಾಶ್ರಮಧರ್ಮ ಹುಟ್ಟಿನ ಮೇಲೆ ತೀರ್ಮಾನಿಸಬೇಕೆಂದು ಹೇಳಿದ್ದಲ್ಲ. ಅವು ಜೀವನದ ಸ್ವಭಾವಗಳ ಕಡೆಗೆ ನಿರ್ದೇಶಿತವಾದ ಮಾತುಗಳು. ವ್ಯಕ್ತಿಯಲ್ಲೂ ಕುಟುಂಬದಲ್ಲೂ ಈ ಗುಣ ಸ್ವಭಾವಗಳನ್ನು ಕಾಣಬಹುದು ಎಂದು ಪ್ರತಿಪಾದಿಸುತ್ತಾರೆ. ಎಚ್ಚರಿಕೆಯಿಂದ ಗಮನಿಸಿದರೆ ಈ ಮರು ವ್ಯಾಖ್ಯಾನವು ಅವರ ಖಚಿತ ರಾಜಕೀಯ ಪ್ರಜ್ಞೆಯಿಂದಲೇ ರೂಪುಗೊಂಡದ್ದು. ಎಂದೂ ದೇವಸ್ಥಾನಗಳಿಗೆ ಹೋಗುವುದಿಲ್ಲವೆಂದು ಹಠತೊಟ್ಟ, ಜಾತಿ ವಿನಾಶವಾಗಬೇಕೆಂದು ಕರೆಕೊಟ್ಟ, ಜಾತಿ ಆಚರಣೆಗಳನ್ನು ಕೈಬಿಟ್ಟ, ಆಧುನಿಕ ಅಗತ್ಯಕ್ಕೆ ತಕ್ಕ ಹಾಗೆ 'ಸೆಕ್ಯುಲರ್' ಎನ್ನಬಹುದಾದ ದೇವರ ಕಲ್ಪನೆ ('ಇಂದಿನದೇವರು', 'ಹೂವುದೇವರು') ಮಂಡಿಸಿದ, ಉಪನಿಷತ್ ಚಿಂತನೆಗಳಿಂದ ಹುಟ್ಟಿದ 'ಧಿಯೋಯೋನಃ ಪ್ರಚೋದಯಾತ್' ಎಂಬ ಆತ್ಮಚೈತನ್ಯದ ಕಡೆಗೆ ಹೊರಟ ಕುವೆಂಪು ಎಲ್ಲಿಯೂ ಬಲಪಂಥೀಯರಿಗೆ ಹತ್ತಿರದವರಾಗುವುದಿಲ್ಲ. ಮತದ್ವೇಷ, ಧರ್ಮದ್ವೇಷಗಳನ್ನು ಬಿಟ್ಟು ಹಿಂದು-ಮುಸ್ಲಿಂ ಯಮಳ ನದಿಗಳ ಹಾಗೆ ಕೂಡಿ ಹರಿದ ಸಂಸ್ಕೃತಿಯೇ ಭಾರತ ಸಂಸ್ಕೃತಿ ಎಂಬ ಉದಾರ ಮಾನವತಾವಾದದ ನೆಲೆಗೆ ತಲುಪಿದ ಕುವೆಂಪು, ಪರಂಪರೆಯ ಪಠ್ಯಗಳನ್ನು ಕುರಿತು ಯಾಕೆ ಮರು ವ್ಯಾಖ್ಯಾನದ ಅಗತ್ಯವಿದೆ ಎಂದು ಪ್ರತಿಪಾದಿಸುತ್ತಾರೆ. 'ಸಂಸ್ಕೃತಿ ಕ್ರಾಂತಿ' (ಚೈನಾದ ರಾಜಕೀಯ ಕ್ರಾಂತಿಕಾರಿ ನಾಯಕ ಮಾವೋತ್ಸೆತುಂಗ್ ಬಳಸಿದ ಕಲ್ಚರಲ್ ರೆವಲ್ಯೂಷನ್) ಪರಿಭಾಷೆ ಬಳಸಿ ತರುಣ ಬರಹಗಾರರಿಗೆ ಕಲಾವಿದರನ್ನು ಕುರಿತು ೧೯೭೪ರಲ್ಲಿ ಮಾಡಿದ ಭಾಷಣದಲ್ಲಿ ಪರಂಪರೆಯನ್ನು ಅಜ್ಜಿಯ ಒಡವೆಗೆ ಬೇರೆ ಬೇರೆ ಆಕಾರ ಪಡೆದುಕೊಳ್ಳುತ್ತದೆ ಎಂಬುದು ಅವರ ಬಹುಪಾಲು ಚಿಂತನೆಗಳಿಗೆ ಹಿಡಿದ ಕನ್ನಡಿ.

ಆದರೆ ಸಮುದಾಯಗಳ ಚೈತನ್ಯಗಳಿಗೆ ಕುವೆಂಪು ತಮ್ಮ ಚಿಂತನೆಗಳಲ್ಲಿ ಎಲ್ಲಿ ಜಾಗಕೊಡುತ್ತಾರೆ ಎಂಬ ಪ್ರಶ್ನೆ ಅವರ ಸಂಸ್ಕೃತಿ ಚಿಂತನೆಯ ಸಂದರ್ಭದಲ್ಲಿ ಮತ್ತೆ ಮತ್ತೆ ಕಾಡುತ್ತದೆ. ಇವತ್ತಿನ ಜಾನಪದವನ್ನು ಕುರಿತು ವ್ಯಾಖ್ಯಾನಿಸುತ್ತಿರುವ ವಿದ್ವಾಂಸರು 'ಅವೈದಿಕ' ಎಂಬ ಕಾರಣಕ್ಕೆ ಭಾವಾವೇಶಕ್ಕೊಳಗಾಗುತ್ತಾರೆ. ಮಧ್ಯಮವರ್ಗದ ಬೇರುಗಳು ಅಲುಗಾಡುತ್ತಿರುವ ಸಂದರ್ಭದಲ್ಲಿ, ಪಶ್ಚಿಮದ ಎದುರು ಪೂರ್ವವನ್ನು ನಿಲ್ಲಿಸಿದಂತೆ, ಆಧುನಿಕ ಬಿಕ್ಕಟ್ಟುಗಳಿಗೆ ಅಂಚಿನ ಸಂಸ್ಕೃತಿಗಳ ಚೈತನ್ಯವನ್ನು ಕುರಿತು ಎದುರಾಬದುರು ನಿಲ್ಲಿಸಿ, 'ಬ್ರಾಹ್ಮಣ್ಯ'ದ ಎದುರು 'ದಮನಿತ' ಎಂದು ವ್ಯಾಖ್ಯಾನಿಸಿ ರೋಮ್ಯಾಂಟಿಕ್ ನೆಲೆಗೆ ತಲುಪುತ್ತಾರೆ. ಆದರೆ

ಕುವೆಂಪು ಅವರಿಗೆ ತನ್ನ ಸಮುದಾಯವೂ ಒಳಗೊಂಡಂತೆ ದುಡಿಯುವ ಸಮುದಾಯಗಳೆಲ್ಲ ತಾರತಮ್ಯವನ್ನು ಪ್ರತಿಪಾದಿಸುವ, ಮೌಢ್ಯದಿಂದ ತುಂಬಿಹೋಗಿರುವ ಸಂಗತಿ ತಿಳಿದಿರಲಿಲ್ಲವೆಂದಲ್ಲ. ಶೃಂಗೇರಿ ಧರ್ಮಸ್ಥಳಗಳು ಮಲೆನಾಡಿನ ಯುವಕರಲ್ಲಿ ಬಿತ್ತುತ್ತಿದ್ದ ಮೌಢ್ಯವನ್ನು ಕುವೆಂಪು ಉದ್ದಕ್ಕೂ ಅಸಹನೆಯಿಂದ ನೋಡುತ್ತಾರೆ. ಬೆಳಗಿನಿಂದ ಸಂಜೆಯವರೆಗೆ ಧಣಿಯ ಮನೆಯಲ್ಲಿ ದುಡಿದು ಸಂಜೆ ಭೂತದ ವೇಷ ಹಾಕುವ, ಧಣಿಯ ವಿರುದ್ಧ ಗೇಲಿ ಮಾಡುವ 'ಭೂತದಕೋಲ'ದ ಆಚರಣೆಗಳು ಬ್ರಾಹ್ಮಣ್ಯವೇ ಸೃಷ್ಟಿಸಿದ್ದೆಂದು ಕುವೆಂಪು ಭಾವಿಸಿದ್ದಂತಿದೆ. ಹಾಗಾಗಿಯೇ 'ಕಾನೂರು ಹೆಗ್ಗಡಿತಿ'ಯ 'ಬಲೀಂದ್ರ' ಹೋತಪ್ರಕರಣ ಕುವೆಂಪು ಮತ್ತು ಹೂವಯ್ಯ ಅವರಿಗೆ ಮೌಢ್ಯದ ಪ್ರಶ್ನೆಯಾಗಿ ಅಷ್ಟೇ ಅಲ್ಲದೆ ವೆಂಕಪ್ಪಯ್ಯ ಜೋಯಿಸರ ಎದುರು ಎರಡು ತತ್ವಗಳ ಅಸ್ತಿತ್ವದ ಪ್ರಶ್ನೆಯಾಗಿ ಭಾವಿಸಿದಂತೆ ಕಾಣುತ್ತದೆ.

ಕುವೆಂಪು ಅವರು, ತಾವು ನಂಬಿದ 'ಅದ್ವೈತ ತತ್ವ' 'ಸಮಾನತಾವಾದ' ಕುರಿತ ಆಸಕ್ತಿ, ಆಧುನಿಕ ಶಿಕ್ಷಣ, ಉಪನಿಷತ್ ಪ್ರಣೀತ 'ಧೀ' ಕಲ್ಪನೆ, ವಿವೇಕಾನಂದರ 'ಕ್ಷಾತ್ರ' ಪ್ರತಿಪಾದಕ ನಿಲುವುಗಳು ಮತ್ತು ತನ್ನ ಪರಿಸರದ, ದಟ್ಟ ವೈಯಕ್ತಿಕ ಜೀವನಾನುಭವಗಳೆಲ್ಲ ಸೇರಿ ರೂಪುಗೊಂಡ ಅತ್ಯಂತ ಸಂಕೀರ್ಣ ವ್ಯಕ್ತಿತ್ವದವರಾಗಿ ಕಾಣುತ್ತಾರೆ. ಹಾಗಾಗಿ ಅವರು ಪ್ರತಿಪಾದಿಸುತ್ತಿರುವ 'ನಾಯಕ'ರು, ಏಕಲವ್ಯ, ಶಂಬೂಕ, ಹೂವಯ್ಯ, ಮುಕುಂದಯ್ಯ ಅವರು ಏಕಾಂಗಿಯಾಗಿ ಹೋರಾಡುತ್ತಿರುವವರು, ಪ್ರಶ್ನಿಸುವವರು ಹಕ್ಕುಪ್ರತಿಪಾದನೆ ಮಾಡುವವರು. ಸಹಜವಾಗಿ ಅವರ ಮುಂದೆ ಬ್ರಾಹ್ಮಣವಾದಿಗಳಿದ್ದಾರೆ. ತರತಮ ವ್ಯವಸ್ಥೆಯನ್ನು ಪ್ರತಿಪಾದಿಸುವ ಚಿಂತನೆಗಳಿವೆ. ಕುವೆಂಪು ಅವರ ಎಲ್ಲ ಕೃತಿಗಳಲ್ಲೂ 'ಶರಣಾಗತಿ'ಯನ್ನು ವಿರೋಧಿಸುತ್ತಾರೆ. ಇದು ಎಲ್ಲ ಧೀಮಂತ ಚಿಂತಕರ ನಿಲುವು. ಸಾಕ್ರಟಿಸ್‌ನಿಂದ ಹಿಡಿದು ವಿವೇಕಾನಂದ, ಕುವೆಂಪುರವರೆಗೆ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕವಾಗಿ ಪ್ರಭುತ್ವ ಸೃಷ್ಟಿಸುವ ಎಲ್ಲ ಬಂಧನಗಳನ್ನು ವಿರೋಧಿಸುತ್ತಾರೆ. ಈ ವಿಚಾರದಲ್ಲಿ ಕರ್ನಾಟಕದ ಎರಡು ದೊಡ್ಡ ಸಾಂಸ್ಕೃತಿಕ ಚೇತನಗಳಾದ ಬಸವಣ್ಣ ಮತ್ತು ಕುವೆಂಪುರನ್ನು ಎಷ್ಟೋ ಸಂಗತಿಗಳಲ್ಲಿ ತೌಲನಿಕವಾಗಿ ನೋಡಿದಾಗ ಸಮಾನ ಅಂಶಗಳು ಕಾಣಿಸುತ್ತವೆ.

'ಸ್ಥಾವರವಾದದ್ದರ' ನಿರಾಕರಣೆ, ಜಂಗಮತತ್ವ ಪ್ರತಿಪಾದನೆ ಬ್ರಾಹ್ಮಣ್ಯದ ಎಲ್ಲ ಸಂಕೇತಗಳನ್ನು ಮುರಿಯಲು, ಮರು ವ್ಯಾಖ್ಯಾನಿಸಲು ಪ್ರಯತ್ನಿಸುವುದು ಇತ್ಯಾದಿಗಳ ದೊಡ್ಡ ಪಟ್ಟಿ ಬೆಳೆಸಬಹುದು. ಹಾಗಾಗಿ ಕುವೆಂಪು ಭಾರತೀಯ ಸಂಸ್ಕೃತಿ ಎಂಬರ್ಥದಲ್ಲಿ ಬಳಸುತ್ತಿರುವುದು ಅವರ ಸೃಜನಶೀಲ ಗಳಿಗೆಗಳಲ್ಲಿ, ಕಥನ ಸಾಹಿತ್ಯದಲ್ಲಿ ಕರ್ನಾಟಕದ ಪ್ರಜ್ಞೆಯನ್ನು ನಿರ್ಮಿಸುವುದು ಆಗಿರುತ್ತದೆ. ಅದು ವಿಶ್ವಮಾನವನಾಗಬೇಕಾದ ಅನಿವಾರ್ಯತೆಯನ್ನು ಹೇಳುತ್ತದೆ. ಬ್ರಾಹ್ಮಣ್ಯದ ಜೊತೆಗಿನ ಸಂಘರ್ಷ ಮತ್ತು ದುಡಿವ ಸಂಸ್ಕೃತಿಗಳ ಘನತೆಯ ಪ್ರತಿಪಾದನೆಯೇ ಕನ್ನಡ ರಾಷ್ಟ್ರೀಯತೆ ಸಾಂಸ್ಕೃತಿಕವಾಗಿ ಬಹುಮುಖ್ಯ ಆಯಾಮವಾಗಿ ಕಾಣಿಸುತ್ತದೆ.

ಇಷ್ಟೆಲ್ಲದರ ಮಧ್ಯೆ ಸಮುದಾಯಗಳ ಕುರಿತಾದ ಕುವೆಂಪುರವರ ಮಿತಿಗಳನ್ನು ಕಾಲ ಘಟ್ಟದ ಒತ್ತಡಗಳ ಹಿನ್ನೆಲೆಯಲ್ಲಿಯೇ ಗಮನಿಸುತ್ತದೆ. ಕುವೆಂಪು ನಿರ್ಮಾಣಕ್ಕೆ, ಕಟ್ಟುವಿಕೆಗೆ ಒತ್ತುಕೊಟ್ಟವರು. ಹಾಗಾಗಿ ಇವತ್ತಿನ ನಗರಕೇಂದ್ರಿತ, ಆಧುನಿಕ ಏಕಾಂಗಿತನದಿಂದ ಹುಟ್ಟಿರುವ ಸಮಸ್ಯೆಗಳನ್ನು ಶಂಬಾರ ಮೇಲಾಗಲಿ, ಕುವೆಂಪು ಅವರ ಮೇಲೆ ಹೇರಿ ವ್ಯಾಖ್ಯಾನಿಸುವುದು ಸ್ವಲ್ಪ ಕಸಿವಿಸಿಯ ವಿಷಯವೇ ಹೌದು. ಇದೆಲ್ಲದರ ನಡುವೆ

ಕುವೆಂಪುರವರ ವಿಷಾದದ ಈ ಮಾತುಗಳು ವರ್ತಮಾನಕ್ಕೆ ಕಿತ್ತು ಹೊತ್ತಿರುವ ಸಂದರ್ಭದಲ್ಲಿ ಸ್ವವಿಮರ್ಶೆಯ ಕಡೆಗೆ, ವಿವೇಕದ ಕಡೆಗೆ ತುಡಿಯುತ್ತವೆ.

"ಭಾರತ ಮಹಾಮಾನಸದಲ್ಲಿ ಆರ್ಷೇಯ ಸಂಸ್ಕೃತಿಯೊಡನೆ ಅನ್ಯಸಂಸ್ಕೃತಿಗಳು ಮಧುರವಾಗಿ ಕೂಡಿ, ಕೊಟ್ಟು, ಬೆಳೆದು ಬೆಳಗಿ ಬಾಳಿದುದನ್ನು ಅರಿಯದೆ ಹೋದುದು ನಿಜವಾಗಿಯೂ ನಮ್ಮ ನಾಡಿನ ದೌರ್ಭಾಗ್ಯ ವಿಚಾರಿಸಿ ನೋಡಿದರೆ ಒಂದು ರಾಷ್ಟ್ರದ ಇತಿಹಾಸದ ತಿರುಳಿರುವುದು ಅಲ್ಲಿ ಸಂಧಿಸಿದ ವಿವಿಧ ಜನಾಂಗಗಳ ಸಮರಸ ಜೀವನದಿಂದ ಹೊಮ್ಮುವ ಸಂಸ್ಕೃತಿಯ ಸಾರಸೌರಭದಲ್ಲಿ. "ಅಂತೆಯೆ ಭರತವರ್ಷವು ಇತಿಹಾಸಪೂರ್ವ ಕಾಲದಿಂದಲೂ ನಾನಾ ಜನಾಂಗಗಳ ನಾಗರಿಕತೆ ಸಭ್ಯತೆಗಳ ಸುಂದರ ಮಂದಾರವಾಗಿದೆ."[೧೯]

ಭಾರತ ಸಂಸ್ಕೃತಿಗಳೇ ಸಂಕರಶೀಲವಾದುವು, ಸಮನ್ವಯವನ್ನು ಪ್ರತಿಪಾದಿಸುವವು ಎಂಬ ಮಾತುಗಳು ಮತೀಯವಾದಿ ಸಂಸ್ಕೃತಿ ಚಿಂತಕರಿಗೆ ಮುಳ್ಳುಗಳಂತೆ ಕಾಣಿಸುತ್ತವೆ. ಆದರೆ 'ಜನಸಂಸ್ಕೃತಿ'ಗಳಲ್ಲಿ ನಂಬಿಕೆ ಇಟ್ಟವರಿಗೆ ಆಪ್ಯಾಯವಾಗುತ್ತವೆ. ಹಾಗಾಗಿ ಆರೋಗ್ಯಕರ ರಾಷ್ಟ್ರೀಯ ನಿಲುವು ಈ ರೀತಿಯ ಚಿಂತನೆಗಳನ್ನೇ ಬೇಡುತ್ತದೋ ಏನೋ.

**೬.೬ ಸಂಸ್ಕೃತಿ ಕುರಿತಂತೆ ಚಿದಾನಂದ ಮೂರ್ತಿಯವರ ಚಿಂತನೆಗಳು**

ಚಿದಾನಂದ ಮೂರ್ತಿಯವರ ಸಂಸ್ಕೃತಿ ಚಿಂತನೆಯನ್ನು ಮೊದಲ ಎರಡು ವಿಭಾಗಗಳ ಹಿನ್ನೆಲೆಯಲ್ಲಿ ನೋಡಬಹುದು. 'ಸಂಸ್ಕೃತಿ ಎಂದರೆ ಜೀವನ ವಿಧಾನ' ಎಂಬ ಗ್ರಹಿಕೆಯನ್ನು ಅವರು ಹೇಳುತ್ತಿದ್ದರೂ, ನಿರ್ದಿಷ್ಟ ಸಮುದಾಯದ ಜೀವನದ ನೈತಿಕ ಮೌಲ್ಯಗಳೆಂದು ಭಾವಿಸಿರುವ ಅಂಶಗಳನ್ನು ಆರಿಸಿ ಪೋಣಿಸುವ ಮತ್ತು ಪ್ರಭುತ್ವ ಸೃಷ್ಟಿಸಿರುವ 'ಕಲೆ', ಕೇಂದ್ರಿತವಾದ ಸಂಸ್ಕೃತಿ ಚಿಂತನೆ ಎಂದು ಅನುಕೂಲಕ್ಕೆ ಗುರುತಿಸಿ ಹೇಳಬಹುದು. ಚಿದಾನಂದ ಮೂರ್ತಿಯವರ 'ಸಂಸ್ಕೃತಿ ಚಿಂತನೆ'ಯನ್ನು ಎರಡು ಘಟ್ಟಗಳಾಗಿ ವಿಭಾಗಿಸಿ ನೋಡಬಹುದು. ೧. ಕನ್ನಡ ಸಂಸ್ಕೃತಿ, ನಮ್ಮ ಹೆಮ್ಮೆ ಬರೆದ ೧೯೮೭ರ ಆಸುಪಾಸಿನ ಘಟ್ಟ. ಈ ಚಿಕ್ಕಪುಸ್ತಕದಲ್ಲಿ ಅದುವರೆಗಿನ ಅವರ ಸಂಸ್ಕೃತಿ ಚಿಂತನೆಗಳ ಪ್ರಾತಿನಿಧಿಕ ಸ್ವರೂಪ ಕಾಣಬಹುದು.

೨. 'ವೀರಶೈವ ಧರ್ಮ ಮತ್ತು ಭಾರತೀಯಸಂಸ್ಕೃತಿ' (ಹಿಂದೂ-ಲಿಂಗಾಯತ) ಪುಸ್ತಕ ಬರೆದ '೨೦೦೦'ದ ಕಾಲಘಟ್ಟ.

ಈ ಹದಿಮೂರು-ಹದಿನಾಲ್ಕು ವರ್ಷಗಳಲ್ಲಿ ಅವರ ಸಂಸ್ಕೃತಿ ಚಿಂತನೆಗಳನ್ನು 'ಕನ್ನಡ ರಾಷ್ಟ್ರೀಯತೆ' ಚಿಂತನೆಯ ಹಿನ್ನೆಲೆಯಿಂದ ಪರಿಶೀಲಿಸಲಾಗಿದೆ. ಈ ಎರಡೂ ಕೃತಿಗಳಲ್ಲಿ ಮಂಡಿತವಾಗಿರುವ ಚಿಂತನೆಗಳಲ್ಲಿ ಅಪಾರ ವೈರುಧ್ಯಗಳನ್ನೂ, ಮೂಲಭೂತ ಸಾಮ್ಯಗಳನ್ನೂ ಗುರುತಿಸಲು ಸಾಧ್ಯ. ಮೊದಲ ಘಟ್ಟದಲ್ಲಿ ಕನ್ನಡ ಸಂಸ್ಕೃತಿ ಕುರಿತಾದ ಆರಾಧನಾ ನಿಲುವು ಕಾಣಿಸಿದರೆ, ಎರಡನೆಯದರಲ್ಲಿ ಭಾರತೀಯ ಸಂಸ್ಕೃತಿ ಕುರಿತಾದ ಪ್ರತಿಪಾದನೆ ಇದೆ.

೨. ಮೊದಲ ಪುಸ್ತಕಕ್ಕೆ ಬಳಕೆಯಾಗಿರುವ ಆಕರ ಚರಿತ್ರೆಗೆ ಸಂಬಂಧಿಸಿದವುಗಳು, ಎರಡನೆಯದರಲ್ಲಿ ವೈದಿಕ, ಸಂಸ್ಕೃತಿ ಕೇಂದ್ರಿತ ಪಠ್ಯಗಳು.

೩. ಆದರೆ ಈ ಎರಡೂ ಮಾದರಿಯ ಕೃತಿಗಳ ಸಮಾನ ಅಂಶಗಳು 'ಆತಂಕಕೇಂದ್ರಿತ' ಅನ್ಯದ ಕುರಿತಾದ ಭಯ ಮತ್ತು ಆಕ್ರಮಣಕಾರಿ ಧೋರಣೆಗಳೆಂದು ವ್ಯಾಖ್ಯಾನಿಸುವ ನಿಲುವುಗಳುಳ್ಳವು. ಮೊದಲನೆಯದರಲ್ಲಿ ತಮಿಳು ಪ್ರಧಾನವಾಗಿ ಅನ್ಯ ಭಾಷಿಕರು ಶತ್ರುವಿನ ಅಖಾಡದಲ್ಲಿ ಕಾಣಿಸುತ್ತಾರೆ. ಎರಡನೆಯದರಲ್ಲಿ ಅಪ್ಪಾನಿಯವರಿಗೆ ಬರೆದ ಪತ್ರದಲ್ಲಿ ಅವರೇ ಹೇಳಿರುವಂತೆ ಹಿಂದೂ ಸಮಾಜ ವೀರಶೈವ, ಒಕ್ಕಲಿಗ, ಬೇಡರ ಹೆಸರಲ್ಲಿ ವಿಘಟನೆಯಾದರೆ ಸಂಭವನೀಯ ಅಪಾಯಕ್ಕೆ ತಲೆ ಒಡ್ಡಿದಂತೆ. ಇಲ್ಲಿ ವೈಯಕ್ತಿಕ ಹಿತಾಸಕ್ತಿಗಳ ಜೊತೆಯಲ್ಲಿ ನಿಸ್ಸಂದೇಹವಾಗಿ ಅನ್ಯಧರ್ಮಗಳನ್ನು ಶತ್ರುನೆಲೆಯಲ್ಲಿಟ್ಟು ನೋಡುವ 'ಆತಂಕ' ಕಾಣಿಸುತ್ತದೆ. ಇಲ್ಲಿ ಅವರ ಸಂಸ್ಕೃತಿ ಚಿಂತನೆ 'ಪ್ಯಾನ್ ಇಂಡಿಯನ್' ಭಿತ್ತಿಗೆ ನೆಗೆದುಬಿಡುತ್ತದೆ.

೪. ಚಿಮೂ ಮೊದಲಘಟ್ಟದಲ್ಲಿ 'ಕನ್ನಡತ್ವ'ದ ಕಾರಣಕ್ಕಾಗಿ ಹಿಂದುತ್ವದ ಹೊಟ್ಟೆಯಲ್ಲಿ ತೊಡಕಾಗಿ ನಿಂತರೆ ಎರಡನೆಯ ಘಟ್ಟದಲ್ಲಿ ಅಪ್ಯಾಯಮಾನ ಮಿತ್ರರಾಗಿ ಕಂಗೊಳಿಸುತ್ತಾರೆ.

ಸಂಸ್ಕೃತಿಯಂಥ ಸಂಕೀರ್ಣ ಪರಿಕಲ್ಪನೆಗಳು ರೂಪುಗೊಳ್ಳುವುದೇ ವಾಸ್ತವ ಸಂಗತಿಗಳ ಒತ್ತಡದ ಹಿನ್ನೆಲೆಯಲ್ಲಿ ಎಂಬ ವಿವೇಕವನ್ನು ಅಧ್ಯಯನವೊಂದು ಬಿಟ್ಟುಕೊಟ್ಟರೆ ಅದು ಏಕಮುಖಿ ಸರಳರೇಖಾತ್ಮಕ ಚಲನೆಯಾಗಿಬಿಡುತ್ತದೆ. ಇಲ್ಲದಿದ್ದರೆ ಯಾವುದೇ ಗ್ರಹಿಕೆಯ ಹಿಂದೆ ಕೆಲಸ ಮಾಡುತ್ತಿರುವ ಚಾಲಕ ಶಕ್ತಿಗಳಾವುವು? ಎಂದು ಪ್ರಶ್ನೆ ಕೇಳಹೊರಟರೆ ಅದು ಸಂಕೀರ್ಣವೂ ಮತ್ತು ವೈರುಧ್ಯಗಳ ಕಥಾನಕವೂ ಆಗಬಲ್ಲುದಾಗಿ ತೋರುತ್ತದೆ. ಚಿದಾನಂದ ಮೂರ್ತಿಯವರ ನಿಲುವುಗಳನ್ನೂ ಸಹ ಈ ಎರಡನೇ ಕೋನದಿಂದ ಅರಿಯಲು ಯತ್ನಿಸಲಾಗಿದೆ. ಅವರ ಮೊದಲ ಘಟ್ಟದ ಚಿಂತನೆ ಹೀಗೆ ಸಾಗುತ್ತದೆ :

"ವಾಸ್ತವವಾಗಿ ಭಾರತೀಯ ಸಂಸ್ಕೃತಿಯೆಂಬುದು ಪ್ರತ್ಯೇಕವಾಗಿ ಇಲ್ಲ. ಕರ್ನಾಟಕ ಸಂಸ್ಕೃತಿ, ತಮಿಳು ಸಂಸ್ಕೃತಿ, ತೆಲುಗು ಸಂಸ್ಕೃತಿ ಮಹಾರಾಷ್ಟ್ರ ಸಂಸ್ಕೃತಿ ಅವೇ ಮೊದಲಾದ ಸದೃಶವೂ ಭಿನ್ನವೂ ಆದ ಸಂಸ್ಕೃತಿಗಳ ಸಮಷ್ಟಿರೂಪವೇ ಭಾರತೀಯ ಸಂಸ್ಕೃತಿ. ಈ ಬಿಡಿ ಸಂಸ್ಕೃತಿಗಳನ್ನು ಬೇರ್ಪಡಿಸಿ ಭಾರತೀಯ ಸಂಸ್ಕೃತಿ ಇಲ್ಲ ಎಂದರೆ, ಭಾರತೀಯ ಸಂಸ್ಕೃತಿಯನ್ನು ಪ್ರತ್ಯೇಕವಾಗಿ ನೋಡಲು ಸಾಧ್ಯವಿಲ್ಲ. ಇದರ ಅರ್ಥವೆಂದರೆ ಭಾರತದಲ್ಲಿ ಒಂದೊಂದು ಪ್ರಾಂತಕ್ಕೂ ವಿಶಿಷ್ಟ ಜೀವನ ವಿಧಾನವಿದೆ. ಆ ವಿಶಿಷ್ಟ ಸಂಸ್ಕೃತಿಯನ್ನು ಗುರುತಿಸುವುದು, ಪ್ರೀತಿಸುವುದು ಭಾರತೀಯ ಸಂಸ್ಕೃತಿಯನ್ನು ಪ್ರೀತಿಸಿದಂತೆಯೇ. ಉತ್ತರ ಪ್ರದೇಶದಂತಹ ಪ್ರಾಂತದ ಸಂಸ್ಕೃತಿಯೇ ಭಾರತದ ಸಂಸ್ಕೃತಿಯೆಂದೂ, ಸಂಸ್ಕೃತವೋ, ಹಿಂದಿಯೋ ಆ ಸಂಸ್ಕೃತಿಯ ಅಭಿವ್ಯಕ್ತಿಯೆಂದೂ ಭಾವಿಸುವುದು ಸಂಕುಚಿತ ದೃಷ್ಟಿಯೆಂಬಲ್ಲಿ ಅನುಮಾನವಿಲ್ಲ. ಭಾರತದ ಅಖಂಡತೆಯನ್ನು ಉಳಿಸಲು ಭಾರತದ ಎಲ್ಲ ಭಾಷೆಗಳಿಗೆ, ಎಲ್ಲ ಪ್ರಾದೇಶಿಕ ಸಂಸ್ಕೃತಿಗಳಿಗೆ ಸಮಾನ ಸ್ಥಾನ-ಮಾನ, ಗೌರವ, ಪ್ರೋತ್ಸಾಹಗಳು ದೊರಕುವುದು ಅಗತ್ಯವಾಗಿದೆ. ಕರ್ನಾಟಕ ಸಂಸ್ಕೃತಿಯನ್ನು ಪ್ರೀತಿಸುವುದು ರಾಷ್ಟ್ರಪ್ರೇಮದ ನಿಜವಾದ ಕುರುಹು ಎಂಬಲ್ಲಿ ಅನುಮಾನವಿಲ್ಲ."[೨೦]

ಚಿದಾನಂದಮೂರ್ತಿಯವರ ಸಂಸ್ಕೃತಿ ಕುರಿತಾದ ಕೆಲ ಒಳ್ಳೆಯ ಭಾಗಗಳಲ್ಲಿ ಇದೂ ಒಂದು ಎನ್ನಿಸುತ್ತದೆ. ಅತಿಯಾದ ಕೇಂದ್ರೀಕರಣದಿಂದಾಗಿ ರಾಜ್ಯಗಳೆನಿಸಿಕೊಂಡ ಘಟಕಗಳ ಅನನ್ಯತೆಯನ್ನು ನಿರಾಕರಿಸುತ್ತಿರುವ ಕೇಂದ್ರ ಸರ್ಕಾರದ ಅಥವಾ ಭಾರತ ಸರ್ಕಾರದ ನೀತಿಯನ್ನು ಪ್ರಶ್ನೆ ಮಾಡುತ್ತಿರುವ ನಿಲುವು ಇದು. ಅಖಿಲ

ಭಾರತೀಯವೆನ್ನುವ ಸಾಂಸ್ಕೃತಿಕ ಚಿಂತನೆಯನ್ನು ಪ್ರಶ್ನೆ ಮಾಡುವ ನಿಲುವಿನಲ್ಲಿ, ಭಾರತೀಯವೆನ್ನುವ ಒಂದು ಸಂಸ್ಕೃತಿ ಇಲ್ಲ. ಆದರೆ ಸಂಸ್ಕೃತಿ ಪದಗಳು ಇವೆ. ಹಾಗಾಗಿ ಅವುಗಳಿಗೆ ಸೂಕ್ತ ಸ್ಥಾನಮಾನ ಒದಗಿಸುವುದು ಪ್ರಭುತ್ವದ ಕರ್ತವ್ಯ. ಇಲ್ಲದಿದ್ದರೆ 'ಅಖಂಡತೆ' ಎಂಬುದು ಬರೀ ಶಬ್ದವಾಗಿ ಉಳಿಯುತ್ತದೆ ಎನ್ನುವುದನ್ನು ಚಿದಾನಂದ ಮೂರ್ತಿಯವರು ಪ್ರತಿಪಾದಿಸುತ್ತಿದ್ದಾರೆ. ಕನ್ನಡ ಸಂಸ್ಕೃತಿ ಎಂದರೆ ಅದರಲ್ಲಿ ಯಾರ್‍ಯಾರಿದ್ದಾರೆ ಎಂಬ ಪ್ರಶ್ನೆ ಹುಟ್ಟುತ್ತದೆ. ಅದಕ್ಕೆ ಚಿದಾನಂದ ಮೂರ್ತಿಯವರು "ಒಂದು ಸಂಸ್ಕೃತಿಯೆಂದರೆ ಆ ಜನಾಂಗದ ಜೀವನವಿಧಾನ. ಅದರ ಚರಿತ್ರೆ"[೨೧] ಎಂಬ ಮಾನವಶಾಸ್ತ್ರೀಯವಾದ ವ್ಯಾಖ್ಯೆಯನ್ನು ಮಂಡಿಸುತ್ತಾರೆ. ಮತ್ತು "ಭಾರತೀಯ ಸಂಸ್ಕೃತಿಯೆಂಬುದೊಂದು ಉಂಟು ಎಂದರೆ ಉಂಟು, ಇಲ್ಲ ಎಂದರೆ ಇಲ್ಲ. ಉಂಟು ಎಂದು ವಾದಿಸುವವರು ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ಕರ್ಮ ಸಿದ್ಧಾಂತ ಹಬ್ಬಿರುವುದನ್ನು ಎತ್ತಿ ತೋರಿಸಬಹುದು. ಆದರೆ ಇಲ್ಲಿ ಏಕತೆಗಿಂತ ವೈವಿಧ್ಯವೇ ಹೆಚ್ಚು. ಕಾಶ್ಮೀರದ ಜನರ ಉಡುಪು, ಬಂಗಾಲಿಗಳ ಉಡುಪು, ಕನ್ನಡಿಗರ ಉಡುಪು ಬೇರೆ ಬೇರೆ. ಆಹಾರ ವಿಧಾನಗಳಲ್ಲೂ ಸಾಕಷ್ಟು ಭೇದವಿದೆ. ಬುಡಕಟ್ಟಿನ ದೃಷ್ಟಿಯಿಂದ ನೋಡಿದರೆ ಹಲವು ಭಿನ್ನ ಜನಾಂಗಗಳು ಭಾರತದಲ್ಲಿ ಕಾಣಿಸುತ್ತವೆ. ಇಲ್ಲಿ ಹಿಂದೂ, ಮುಸಲ್ಮಾನ, ಕ್ರೈಸ್ತ, ಪಾರ್ಸಿ, ಸಿಖ್ ಇವೇ ಮೊದಲಾದ ಮತ ಧರ್ಮಗಳ ಅನುಯಾಯಿಗಳು ಇದ್ದಾರೆ."[೨೨]

ಕೇಂದ್ರದ ಚೌಕಟ್ಟನ್ನು ಪ್ರಶ್ನಿಸುವಾಗ ಮೂಡಿದ ಸಾಲುಗಳಿವು. ಇರುವುದರಲ್ಲಿ ಅನ್ಯಧರ್ಮಗಳ ಅಸ್ತಿತ್ವವನ್ನು ಒಪ್ಪಿದ ಸ್ಥಿತಿಯಲ್ಲಿ ಗ್ರಹಿಸುತ್ತಿದ್ದಾರೆ. ಜನರ ಜೀವನ ವಿಧಾನಗಳಲ್ಲಿ ಭಿನ್ನತೆಯಿದೆ. ಹಾಗಾಗಿ ಭಾರತೀಯ ಸಂಸ್ಕೃತಿ ಎಂಬುದು ಒಂದೇ ಅಲ್ಲ. ಹಲವು ಸಾಂಸ್ಕೃತಿಕ ಧಾರೆಗಳು ಕೂಡಿ ಭಾರತೀಯವೆಂದಾಗಿದೆ ಎಂದು ಅವರು ಪ್ರತಿಪಾದಿಸುತ್ತಿದ್ದಾರೆ. ಇಲ್ಲಿ ಚಿದಾನಂದಮೂರ್ತಿಯವರ ವ್ಯಾಖ್ಯಾನಗಳು ಹೆಚ್ಚು 'ಇನ್‌ಕ್ಲೂಸಿವ್' ಆಗಿ ಕನ್ನಡ ಪರವಾಗುತ್ತವೆ. ಅವು ಈಗಿನ 'ಹಿಂದುತ್ವ'ವೆಂಬ ಏಕರೂಪಿ ಆಗ್ರಹಕ್ಕಿಂತ ಭಿನ್ನವಾದ ನಿಲುವಾಗಿ ಕಾಣಿಸಿಕೊಳ್ಳುತ್ತವೆ. ಇಂತಹ ಕಡೆಗಳಲ್ಲಿ ಕನ್ನಡ ಸಮುದಾಯವೆಂಬ ಪ್ರಜ್ಞೆ ಕ್ರಿಯಾಶೀಲವಾಗಿರುತ್ತದೆ. ಆದರೆ ಇದೇ ನಿಲುವನ್ನು ಚಿ.ಮೂ ಅವರು ಬಹಳ ಹೊತ್ತು ಮುಂದುವರಿಸಲಾರರು. ಅವರು ಥಟ್ಟನೆ ಪ್ರಭುತ್ವಗಳ ಕಡೆಗೆ ತುಯ್ದು ಬಿಡುತ್ತಾರೆ :

"ಕರ್ನಾಟಕ ಸಂಸ್ಕೃತಿಗೆ ಎರಡೂವರೆ ಸಾವಿರ ವರ್ಷಗಳ ವೈಭವಯುತ ಚರಿತ್ರೆಯಿದೆ. ಇಲ್ಲಿ ಆಳಿದ ದೊರೆಗಳು ಭಾರತದಾದ್ಯಂತ ಮತ್ತು ಭಾರತದ ಹೊರಗೂ ಕರ್ನಾಟಕದ ಕೀರ್ತಿಯನ್ನು ಹಬ್ಬಿಸಿದರು. ಹರ್ಷನನ್ನು ಸೋಲಿಸಿದ ಇಮ್ಮಡಿ ಪುಲಿಕೇಶಿಯ ಆಸ್ಥಾನಕ್ಕೆ ಇರಾನಿನ ದೊರೆ ರಾಯಭಾರಿಯನ್ನು ಕಳಿಸಿಕೊಟ್ಟಿದ್ದ. ವಿಜಯನಗರದ ಕೃಷ್ಣದೇವರಾಯನ ಕೀರ್ತಿ ಹೊರದೇಶಗಳಿಗೂ ಹಬ್ಬಿತ್ತು. ಕನ್ನಡದ ದೊರೆಗಳ ಔದಾರ್ಯವೂ ಅಷ್ಟೇ ದೊಡ್ಡದು. ಕಂಚಿಯ ಪಲ್ಲವ ದೊರೆಗಳು ಚಾಲುಕ್ಯರನ್ನು ಸೋಲಿಸಿ ಬಾದಾಮಿಯನ್ನು ಸುಟ್ಟರು. ಆದರೆ ಅದೇ ಚಾಲುಕ್ಯವಂಶದ ದೊರೆ ವಿಜಯಾದಿತ್ಯನು ಮುಂದೆ ಪಲ್ಲವರನ್ನು ಸೋಲಿಸಿ ಕಂಚಿಯನ್ನು ವಶಪಡಿಸಿಕೊಂಡರು. ಅದನ್ನು ಸುಡದೆ ಅಲ್ಲಿನ ದೇವಾಲಯದ ಐಶ್ವರ್ಯವನ್ನು ಕಂಡು ಅದನ್ನು ಆ ದೇವಾಲಯಕ್ಕೇ ಬಿಟ್ಟುಕೊಡುತ್ತಾನೆ. ಈ ಔದಾರ್ಯ ಕನ್ನಡಿಗರಿಗೆ ಮಾತ್ರ ಸಾಧ್ಯ. ಕನ್ನಡಿಗರ ಶೌರ್ಯ ಪರಂಪರೆ ಭಾರತದಲ್ಲೆಲ್ಲಾ ಮನ್ನಿಸಲಾಗಿತ್ತು. ಕರ್ನಾಟಕದಲ್ಲಿರುವಷ್ಟು ವೀರಗಲ್ಲುಗಳು ಭಾರತದಲ್ಲಿ ಮತ್ತೆಲ್ಲೂ

ದೊರಕವು. ಚಾಲುಕ್ಯರ 'ಕರ್ನಾಟಕ ಬಲ' ಎಂಬ ಹೆಸರಿನ ಸೇನೆಯು ಇಡೀ ಭಾರತದಲ್ಲಿ ಅಜೇಯವೆಂದು ಪ್ರಖ್ಯಾತವಾಗಿತ್ತು. ಕರ್ನಾಟಕವು ಎಲ್ಲ ಮತಗಳಿಗೂ ಆಶ್ರಯವನ್ನು ಕೊಟ್ಟಿತ್ತು. ಶೈವ, ಬೌದ್ಧ, ವೈಷ್ಣವ, ಜೈನಗಳೆಂಬ ನಾಲ್ಕು ಮತಗಳು ಇಲ್ಲಿ ಆಶ್ರಯವನ್ನು ಪಡೆದು ಅಭಿವೃದ್ಧಿಯನ್ನು ಹೊಂದಿದುವು. ಕರ್ನಾಟಕವು ಪರಮತ ಸಹಿಷ್ಣುತೆಗೆ ಇನ್ನೊಂದು ಹೆಸರು."[೨೩]

ಹೀಗೆ ಸಾಗುತ್ತಾ ಹೋಗುತ್ತದೆ. ೮೦ ರ ದಶಕದ ಉತ್ತರಾರ್ಧ ಈ ಹಿಂದೆ ನೋಡಿದ ಹಾಗೆ ಭಾರತವು ನವವಸಾಹತುವಾದಕ್ಕೆ ಪೂರ್ವರಂಗವನ್ನು ನಿರ್ಮಿಸಿಕೊಳ್ಳುತ್ತಿರುವ ಸಂದರ್ಭ. ಬೆಂಗಳೂರಿನಂತಹ ನಗರಗಳ ಕಡೆಗೆ ಜಾಗತಿಕ ಬಂಡವಾಳ ಚಲನೆ ತೀವ್ರಗೊಂಡ ಕಾಲ. ಸಹಜವಾಗಿಯೇ ಕಟ್ಟಡ, ರಸ್ತೆ ಮುಂತಾದ ನಿರ್ಮಾಣ ಕೆಲಸದಿಂದ ಹಿಡಿದು ಕುಶಲಗಾರಿಕೆ ಬೇಡುವ, ಪ್ರಶ್ನಿಸದೆ ಕೆಲಸ ಮಾಡುವ ಕಾರ್ಮಿಕವರ್ಗವನ್ನೂ, ಬಂಡವಾಳಿಗ ವರ್ಗ ಬೇಡುತ್ತಿತ್ತು. ಸಹಜವಾಗಿಯೇ ಕನ್ನಡದ ನಿರುದ್ಯೋಗಿ ಯುವಕ ಯುವತಿಯರಲ್ಲಿ ಈ ವಿದ್ಯಮಾನ ತೀವ್ರವಾದ ಅಸಹನೆ ಹುಟ್ಟಿಸಿತು. ಈ ಸಂದರ್ಭದಲ್ಲಿ ನಾಡು-ನುಡಿಗಳ ಹೆಸರಲ್ಲಿ ಚಳುವಳಿಗಳು ಆರಂಭಗೊಂಡವು. ಈ ಮಧ್ಯಮ ಮತ್ತು ಕೆಳ ಮಧ್ಯಮ ವರ್ಗದ ಅರೆಶಿಕ್ಷಿತ ಸಮುದಾಯಗಳಿಗೆ ನಾಯಕತ್ವವನ್ನು ಚಿದಾನಂದ ಮೂರ್ತಿಯವರು ಸಿದ್ಧಾಂತ ರೂಪಿಸುತ್ತಾ ಒದಗಿಸಿದರು. ಅಸ್ಸಾಮಿನ ಯುವಕರ ಮಾದರಿಯನ್ನು ಕನ್ನಡದ ಹತಾಶ ಯುವಕರಿಗೆ ಮಾದರಿಯೆಂದು ತೋರಿಸಿ, ಅಸಹನೆಯನ್ನು ಅನ್ಯ ಭಾಷಿಕ ದುಡಿಯುವ ಸಮುದಾಯದ ಕಡೆ ತಿರುಗಿಸಲು ಪ್ರಯತ್ನಿಸಿದರು. ಆದರೆ ಎಲ್ಲೂ ಬಂಡವಾಳಿಗರನ್ನು ಗುರಿ ಮಾಡಿ ಸಿದ್ಧಾಂತ ರೂಪಿಸಲು ಪ್ರಯತ್ನಿಸಿದಂತೆ ಕಾಣುವುದಿಲ್ಲ.

ಮೇಲಿನ ಮಾತುಗಳನ್ನೇ ಪರಿಶೀಲಿಸುವುದಾದರೆ ಅವರು ಪ್ರಭುತ್ವದಿಂದ ಜನತೆಯನ್ನು ಬೇರ್ಪಡಿಸದೆ ನೋಡುತ್ತಾ ಹೋಗುತ್ತಾರೆ. ಅವರ ಸಂಸ್ಕೃತಿ ನಿರ್ವಚನೆ ಇಲ್ಲಿ ಆಯ್ದು ಕಟ್ಟುವ ವಿವರಗಳ ಕಡೆಗೆ ತಿರುಗುತ್ತದೆ. ಕಣ್ಮುಂದಿನ ವರ್ತಮಾನದ ಅಸಹನೆಗೆ ಉತ್ತರಕೊಡಲು 'ಗತ'ವನ್ನು ಸುಂದರವಾಗಿ ಆರಿಸಿದ ವಿವರಗಳ ಮೂಲಕ ಕಟ್ಟಲು ಈ ಸಿದ್ಧಾಂತ ಪ್ರಯತ್ನಿಸುತ್ತದೆ. ಕನ್ನಡದ್ದಾದ ಎಲ್ಲವೂ ಸುಂದರವಾದದ್ದು, ಉದಾರವಾದದ್ದು ವೀರಪ್ರಧಾನವಾದುದು ಮತ್ತು ಪ್ರಶ್ನಾತೀತವಾದದ್ದು. ಆದರೆ ಎದುರಾಳಿಗಳದ್ದು (ತಮಿಳು ಅರಸರೇ) ವಿಧ್ವಂಸಕ ಸ್ವರೂಪದ್ದು, ಆಕ್ರಮಣಕಾರಿಯಾದದ್ದು ಎಂದು ಹೇಳುತ್ತಲೇ ಸಮುದಾಯಗಳ ನಡುವಿನ ಶತ್ರುತ್ವ ಪುರಾತನಕಾಲದಿಂದಲೂ ಇದೆ ಎಂದು ಬಿಂಬಿಸಲು ಪ್ರಯತ್ನಿಸಲಾಗುತ್ತದೆ. ಪ್ರಭುತ್ವಗಳ ನಡುವಿನ ಸಂಘರ್ಷ ಎರಡು ಸಮುದಾಯಗಳ ನಡುವಿನ ಸಂಘರ್ಷವೂ ಆಗಿ ಮಾರ್ಪಾಟಾಗುತ್ತ ಹೋಗುತ್ತದೆ. ಅದಕ್ಕೆ ಪೂರಕವಾದ ಜನಪ್ರಿಯ ಕಥಾನಕ (ಸಿನಿಮಾ ಒಳಗೊಂಡು) ಕಟ್ಟಲು ಆರಂಭವಾಗುತ್ತದೆ. ಬಿರುಕುಗಳು ದೊಡ್ಡದಾಗುತ್ತಲೇ ಹೋಗುತ್ತವೆ. ಅಷ್ಟರಮಟ್ಟಿಗೆ ಆಳುವವರ್ಗಗಳು ಸುರಕ್ಷಿತವಾಗುತ್ತವೆ. ಚಿದಾನಂದ ಮೂರ್ತಿಯವರ ಪ್ರಭುತ್ವಗಳ ಅನುಕ್ರಮಣಿಕೆ ಕದಂಬರಿಂದ ಆರಂಭವಾಗುತ್ತದೆ. ಶಾತವಾಹನರಿಂದ ಅಲ್ಲ. ಈ ಚರಿತ್ರೆಯಲ್ಲಿ ಬಹುಮುಖಿ ರಾಜ್ಯಗಳ ಅರಸರು ಬರುವುದಿಲ್ಲ. ವಸಾಹತುಶಾಹಿ ವಿರುದ್ಧ ಹೋರಾಡಿ ಮಡಿದ ಹೈದರ್-ಟಿಪ್ಪು ಬರುವುದಿಲ್ಲ. ಅಥವಾ ಪ್ರಭುತ್ವದ ವಿರುದ್ಧ ಹೋರಾಡಿದ ಸಂಗೊಳ್ಳಿರಾಯಣ್ಣ, ಹಲಗಲಿ ಬೇಡರು ಇಲ್ಲವೆ ಕೊರ್ಲಾನಹಳ್ಳಿಯ ಹಿಂದೂ ಮುಸ್ಲಿಂ ಸಮುದಾಯಗಳಿಗೆ ಸೇರಿದ ಜನರು ಹೋರಾಡಿ ಮಡಿದ

ಚರಿತ್ರೆ ಮಾಯವಾಗಿ ಬಿಡುತ್ತದೆ. ಇಲ್ಲೆಲ್ಲ ಚಿದಾನಂದ ಮೂರ್ತಿಯವರ ಸಂಸ್ಕೃತಿ ಪ್ರಜ್ಞೆ ಎಕ್ಸ್‌ಕ್ಲೂಸಿವ್ ಆಗುತ್ತದೆ. ಆದರೆ ಅಖಿಲ ಭಾರತೀಯ ಚೌಕಟ್ಟನ್ನು ಪ್ರಶ್ನಿಸುತ್ತಿರುವುದರಿಂದ ಕನ್ನಡ ರಾಷ್ಟ್ರೀಯತೆಗೆ ಹತ್ತಿರದ್ದಾಗುತ್ತದೆ.

ಎರಡನೆಯ ಘಟ್ಟದಲ್ಲಿ 'ಹೊರಗಿಡುವ' ರಾಜಕಾರಣದ ಸ್ವರೂಪ ಬದಲಾಗುತ್ತಾ ಹೋಗುತ್ತದೆ. ಏಕೆಂದರೆ ಸಂಸ್ಕೃತಿ ಚಿಂತನೆಯ ಉದ್ದೇಶ ಬದಲಾಗಿದೆ. ಭಿತ್ತಿ ಬದಲಾಗಿದೆ. ಅದಕ್ಕೆ ಪೂರಕವಾದ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಚಿಂತನೆಗಳಲ್ಲಿ ವೈರುಧ್ಯಗಳು ಮತ್ತು ಸಂಕೀರ್ಣತೆಗಳು ಹುಟ್ಟಿಕೊಳ್ಳುವುದು ಈ ಸಂದರ್ಭದಲ್ಲೇ. ವೀರಶೈವಧರ್ಮ, ಭಾರತೀಯ ಸಂಸ್ಕೃತಿ (ಹಿಂದೂ-ಲಿಂಗಾಯತ) ಪುಸ್ತಕಕ್ಕೆ ಬರೆದ ಮುನ್ನುಡಿಯಲ್ಲಿ ತಮ್ಮ ಉದ್ದೇಶದ ಕುರಿತು ಹೀಗೆ ಹೇಳುತ್ತಾರೆ :

"ಕಾಶ್ಮೀರದಲ್ಲಿ ದುಷ್ಕರ್ಮಿಗಳಿಂದ ಕೊಲೆ ಆಸ್ಫೋಟಗಳಾದಾಗ ಎಲ್ಲ ವರ್ಗದ ಜನರೂ ಸಾಯುತ್ತಾರೆ. ಸಹಜವೇ ಆದರೂ ಅದೇ ದುಷ್ಕರ್ಮಿಗಳಿಂದ "ಒಂದು ವರ್ಗದ ಜನರನ್ನು" ಎಂದು ಯಾವುದನ್ನು ಸಮೂಹ ಮಾಧ್ಯಮಗಳು ಎಚ್ಚರವಹಿಸಿ ವರ್ಣಿಸುತ್ತವೆಯೋ ಆ ಹಿಂದೂ ಜನರ ಕೊಲೆಗಳಾದಾಗ ಆ ಬಗ್ಗೆ ಅಂತಾರಾಷ್ಟ್ರೀಯವಾಗಿ ದೊಡ್ಡ ಸುದ್ದಿ ಆಗುವುದಿರಲಿ, ಭಾರತದಲ್ಲೇ ಅದು ದೊಡ್ಡ ಸುದ್ದಿ ಆಗುವುದಿಲ್ಲ. ಹಾಗೆ ಕೊಲೆಯಾದವರು ಹಿಂದೂಗಳು ತಾನೇ "ಕಾಶ್ಮೀರ ಪಂಡಿತರು" ತಾನೇ! ದೌರ್ಜನ್ಯ ದೌರ್ಜನ್ಯವೇ, ಯಾವುದೇ ಧರ್ಮದವರ ಮೇಲೆ ದೌರ್ಜನ್ಯ ನಡೆದರೂ ಖಂಡನೀಯವೇ." [೨೪]

ಶತ್ರುವಿನ ಪರಿಧಿ ವಿಸ್ತರಿಸಿಕೊಳ್ಳುತ್ತದೆ. ಅನ್ಯಭಾಷಿಕರ ಎದುರು 'ಕರ್ನಾಟಕ ಸಂಸ್ಕೃತಿ' ಎದುರಿಗಿಟ್ಟರೆ, ಅನ್ಯ ಧಾರ್ಮಿಕರ ಎದುರು 'ಭಾರತೀಯ ಸಂಸ್ಕೃತಿ,' ನಿಲ್ಲಿಸುತ್ತಾರೆ. ಈ ಕೃತಿರಚನೆಯ ಉದ್ದೇಶ ಕೂಡ ವಿಚಿತ್ರವಾಗಿದೆ. ಲಿಂಗಾಯತ ಸಮುದಾಯದ ಕೆಲವು ಗುಂಪುಗಳು ಬೇರೆ ಬೇರೆ ಹಿತಾಸಕ್ತಿಗಳಿಂದ ವೀರಶೈವ, ಲಿಂಗಾಯತರು, ಹಿಂದುಗಳಲ್ಲ, ಜೈನ, ಬೌದ್ಧರಂತೆ ಬೇರೆಯೇ ಧರ್ಮ. ಹಾಗಾಗಿ ೨೦೦೧ರ ಭಾರತ ಜನಗಣತಿಯಲ್ಲಿ ವೀರಶೈವ/ಲಿಂಗಾಯತ ಎನ್ನುವುದನ್ನು ಧರ್ಮ ಎಂದು ಗುರುತಿಸಿ, ಬೇರೆಯಾಗಿ ದಾಖಲಿಸಬೇಕು ಎನ್ನುವುದಾಗಿದೆ. ಆದರೆ ಅದೇ ಸಮುದಾಯಕ್ಕೆ ಸೇರಿದ ಚಿದಾನಂದ ಮೂರ್ತಿಯವರು ಅವರೇ ಹೇಳುವ ಹಾಗೆ ಪಿಎಚ್.ಡಿ ಕೆಲಸದ ನಂತರ ಅತಿ ಹೆಚ್ಚು ಕಷ್ಟಪಟ್ಟು ಸಂಶೋಧನೆ ಮಾಡಿ ವೀರಶೈವರು ಹಿಂದೂಧರ್ಮದ ಭಾಗ ಎಂದು ಫಲಿತಾಂಶ ಘೋಷಿಸುತ್ತಾರೆ. ಈ ಕುರಿತು ೨೦೦೧ರ ಜನವರಿಯಲ್ಲಿ ಭಾರತದ ಗೃಹಮಂತ್ರಿಗಳಾಗಿದ್ದ ಎಲ್.ಕೆ.ಅಡ್ವಾನಿಯವರಿಗೆ ಪತ್ರ ಬರೆಯುತ್ತಾರೆ. ಜನಗಣತಿ ಶಾಖೆಯ ರಿಜಿಸ್ಟ್ರಾರ್‌ರಿಗೂ ಬರೆಯುತ್ತಾರೆ. ಈ ಕೃತಿಯಲ್ಲಿ 'ಭಾರತೀಯ ಸಂಸ್ಕೃತಿ' ಎನ್ನುವುದು ಪ್ರಶ್ನಾತೀತವಾದುದು. ಅದರ ಭಾಗವಾದ ಕರ್ಮಸಿದ್ಧಾಂತ, ವರ್ಣಾಶ್ರಮ ವ್ಯವಸ್ಥೆ, ನಿಷೇಧಗಳು ಇತ್ಯಾದಿಗಳೂ ಪ್ರಶ್ನಾತೀತವೇ. ಈ ನಿಲುವಿಗೆ ಆಧುನಿಕವಾದದ್ದನ್ನು ವ್ಯಂಗ್ಯವಾಗಿ ನೋಡುವ ಅಥವಾ ಟೀಕಿಸುವ ಆಯಾಮವಿದೆ.

ಚಿದಾನಂದ ಮೂರ್ತಿಯವರ ವೀರಶೈವವು ಹಿಂದೂ ಧರ್ಮದ ಭಾಗ ಎಂಬ ನಿಲುವನ್ನು ಒಂದೇ ಭಿತ್ತಿಯಲ್ಲಿ ಬೆಸೆಯುವುದು 'ಭಾರತೀಯ ಸಂಸ್ಕೃತಿ' ಎಂಬ ವಿಶಾಲಭಿತ್ತಿ. ಹಾಗಾಗಿ ವೀರಶೈವಕ್ಕಿಂತ ಶೈವ ಹಳೆಯದು. ಅದು ಹಿಂದೂಧರ್ಮದ ದರ್ಶನಗಳಲ್ಲಿ ಒಂದು ಬಸವಣ್ಣ ಅದರ ಸ್ಥಾಪಕನಲ್ಲ. ಅಥವಾ ರೇಣುಕನೂ

ಅಲ್ಲ. ಆದರೆ ವೀರಶೈವ/ಲಿಂಗಾಯತರ ಆಚಾರ ವಿಚಾರಗಳು ಹಿಂದೂ ಧರ್ಮದ ಲಕ್ಷಣಗಳ ವ್ಯಾಪ್ತಿಯಲ್ಲೇ ಇವೆ. ಎನ್ನುವುದಷ್ಟೇ ಅಲ್ಲದೆ ಬಸವಣ್ಣನನ್ನು ಒಳಗೊಂಡು ಅನೇಕ ವಚನಕಾರರು ಸಂಸ್ಕೃತ ವಾಙ್ಮಯಕ್ಕೆ ವಿರುದ್ಧವಾಗಿರಲಿಲ್ಲ ಎಂದು ಆರಿಸಿದ ವಚನಗಳನ್ನು ಉದಾಹರಿಸುತ್ತಾರೆ. "ಶಿವ ಧರ್ಮ ಕುಲೇ ಜಾತಃ ಪುನರ್ಜನ್ಮ ವಿವರ್ಜಿತಃ ಪಂಡಿತನಾಗಲಿ ಮೂರ್ಖನಾಗಲಿ ಸಂಚಿತಕರ್ಮ ಉಂಡಲ್ಲದೆ ಮಾಣದು ಪ್ರಾರಬ್ಧ ಕರ್ಮ ಭೋಗಿಸಿದ್ದಲ್ಲದೆ ಹೋಗದೆಂದು ಶ್ರುತಿ ಸಾರುತ್ತೈದಾವೆ ನೋಡಾ" ಅಸತ್ತೆ ಅಲಸಿದೊಡೆ ಮಾಣದು, ಬೇಸತ್ತೆ ಬೆಂಬಿದ್ದನೆಂದಡೆ ಮಾಣದು, ಏವೇನೇವೆನೆಂದಡೆ ಮಾಣದು, ಕಾಯದ ಕರ್ಮದ ಫಲ ಭೋಗವು!" ಎನ್ನುತ್ತಾನೆ ಬಸವ...... ಬಸವ, ಅಲ್ಲಮ ಅವರೇ ತಾವು ಬೇರೆ ಬೇರೆ ಭವಗಳಲ್ಲಿ ಬಂದವರೆಂಬುದನ್ನು ಸಾಂಕೇತಿಕವಾಗಿ ಹೇಳಿಕೊಂಡಿದ್ದಾರೆ. ಕರ್ಮಸಿದ್ಧಾಂತವನ್ನು ವೀರಶೈವ ಒಪ್ಪಿದೆ."[೨೫]

ತಮ್ಮ ಸಿದ್ಧಾಂತಕ್ಕೆ ಅನುಕೂಲವಾದದ್ದನ್ನು ಆರಿಸಿಕೊಂಡು ವ್ಯಾಖ್ಯಾನಿಸುವ ರಾಜಕೀಯ ಪ್ರಜ್ಞೆಗೆ ಬಸವಣ್ಣ ವರ್ಣಾಶ್ರಮ ಪದ್ಧತಿ ಬಗ್ಗೆ ನಂಬಿಕೆಯುಳ್ಳವನೂ, ಕರ್ಮಸಿದ್ಧಾಂತ ಒಪ್ಪಿದವನಾಗಿ ಕಾಣಿಸುತ್ತಾನೆ! ಚಿದಾನಂದ ಮೂರ್ತಿಯವರು ಭಾರತೀಯ ಸಂಸ್ಕೃತಿ ಹಿಂದೂ ಧರ್ಮ ಇವುಗಳ ನಡುವೆ ಬೆಸುಗೆ ಹಾಕಲು ಪ್ರಯತ್ನಿಸುತ್ತಿರುವುದೇಕೆ? ಎಂಬ ಪ್ರಶ್ನೆ ಹುಟ್ಟುತ್ತದೆ. ಅದರ ವಿಶಾಲ ನೆಲೆಯಲ್ಲಿ ಜಾಗತೀಕರಣ ಮತ್ತು ಕೋಮುವಾದಗಳು ಭಾರತವನ್ನು ಇಕ್ಕಳದಲ್ಲಿ ಸಿಕ್ಕಿಸಲು ಪ್ರಯತ್ನಿಸುತ್ತಿರುವ ಸಂದರ್ಭ ಅದು. ಈ ಎರಡರ ಫಲವಾಗಿ ಹಿಂದುತ್ವ ಪ್ರತಿಪಾದಿಸುವ ಏಕಸಂಸ್ಕೃತಿ ಪ್ರತಿಪಾದಿಸುವ ಬಲಪಂಥೀಯ ಸರ್ಕಾರ ಅಧಿಕಾರಕ್ಕೆ ಬಂದಿದೆ. ಅದು ಅನ್ಯಧರ್ಮಗಳನ್ನು ವಿರೋಧಿಸುತ್ತದೆ. ಅವುಗಳ ದಮನ ಅದರ ಅಜೆಂಡಾ ಆಗಿದೆ. ಚಿದಾನಂದ ಮೂರ್ತಿಯವರ ಅನ್ಯಧರ್ಮಗಳ ಕುರಿತಾದ ನಿಲುವು ಅದಕ್ಕೆ ಹೊಂದಿಕೆಯಾಗುವಂತಿದೆ. ಹಾಗಾಗಿ ವೀರಶೈವವು ಹಿಂದೂಧರ್ಮದ ಕಕ್ಷೆಯಿಂದ ಆಚೆಗೆ ಸಿಡಿದರೆ, ಹಿಂದೂಧರ್ಮ ದುರ್ಬಲವಾಗಿ ಶತ್ರುಗಳಿಗೆ ಅನುಕೂಲವಾಗುತ್ತದೆ ಎಂಬುದು ಸಿದ್ಧಾಂತ. ಹಾಗಾಗಿ ಭಾರತೀಯ ಸಂಸ್ಕೃತಿ ಎಂಬ ವ್ಯಾಖ್ಯಾನ ಇಲ್ಲಿ ಎಷ್ಟು ಹುಸಿಯಾದುದ್ದೆಂದರೆ ಅವರು ಎಷ್ಟೇ ಜಾಣತನದಿಂದ ಎಚ್ಚರಿಕೆಯಿಂದ ರಚನೆಯೊಳಕ್ಕೆ ತುಂಬಲು ಪ್ರಯತ್ನಿಸುವಾಗ ಆಚೆಗೆ ಹಾರಿ ಹೋಗುತ್ತಿರುತ್ತದೆ. ಈ ಸಿದ್ಧಾಂತದ ನಿಜವಾದ ನೆಲೆ ಇದು :

"ದಾವಣಗೆರೆ ಪ್ರದೇಶದ ಸಾದರು ಜನನ, ಮದುವೆ, ಹಬ್ಬ, ಸಾವು ಇವುಗಳಿಗೆ ಹುಟ್ಟು ಜಂಗಮರನ್ನೇ ಕರೆಯುತ್ತಿದ್ದರು. ಆರ್ಥಿಕವಾಗಿ ಸಾಂಘಿಕವಾಗಿ ದುರ್ಬಲರಾಗಿದ್ದ ಜಂಗಮರು ಪೌರೋಹಿತ್ಯವನ್ನೇ ಅವಲಂಬಿಸಿ ಬದುಕಬೇಕಿತ್ತು. ಇಪ್ಪತ್ತನೇ ಶತಮಾನದ ಆರಂಭದ ದಶಕಗಳಲ್ಲಿ ವೀರಶೈವರಲ್ಲಿ ಸ್ವಲ್ಪ ಅಕ್ಷರಸ್ಥರೆಂದರೆ ಬಡವರೆಂದೆರ ಹಳ್ಳಿಗಳಲ್ಲಿ ಬಹುತೇಕ ಜಂಗಮರೇ. ನಾಲೆಗಳಲ್ಲಿ ಅವರು ಕೆಲವರು ಉಪಾಧ್ಯಾಯರಾಗಿರುತ್ತಿದ್ದರು. ಸಾದರ ಆರ್ಥಿಕ ಪ್ರಾಬಲ್ಯ, ಜಂಗಮರ ಧಾರ್ಮಿಕ ಸ್ಥಾನ ಪ್ರಾಬಲ್ಯ ಇವು ಒಂದನ್ನೊಂದು ನಿಯಂತ್ರಿಸುತ್ತಿದ್ದುವು. ಈ ಮಧ್ಯೆ ಆದ ಒಂದು ದೊಡ್ಡ ಬೆಳವಣಿಗೆಯೆಂದರೆ ತಮ್ಮ ಜಂಗಮರನ್ನು ತಾವೇ ರೂಪಿಸಿಕೊಳ್ಳಲು ನಡೆಸಿದ ಸಾದರ ಪ್ರಯತ್ನ. ಅದು ಸಿರಿಗೆರೆ ಮಠವನ್ನು ಪ್ರಬಲಗೊಳಿಸಿದ ಶ್ರೀ ಶಿವಕುಮಾರ ಸ್ವಾಮಿಗಳ ಪ್ರಯತ್ನದ ಫಲವೆಂದರೂ ತಪ್ಪಲ್ಲ. ಸಾದರಲ್ಲಿಯೇ ಹೊಸದಾಗಿ "ಜಂಗಮ ಅಯ್ನೋರು" ಆದರು. ಕ್ರಮೇಣ ಹುಟ್ಟು ಜಂಗಮರನ್ನು ತಮ್ಮ ಮನೆಗಳಿಗೆ ಕರೆಯುವುದನ್ನು

ಬಿಟ್ಟು ಸಾದರು ತಮ್ಮ ಜಂಗಮರನ್ನು, "ಸಾದರ ಜಂಗಮ" ರನ್ನು ("ಹೊಸ ಅಯ್ಯ" ನವರನ್ನು) ತಮ್ಮ ಮನೆಗಳಿಗೆ ಆಹ್ವಾನಿಸಲು ಆರಂಭಿಸಿದರು........ ಇದರ ಫಲವಾಗಿ ಕೆಲವು ಹುಟ್ಟು ಜಂಗಮರ ಜೀವನ ನಿರ್ವಹಣೆ ಹಿಂದಿಗಿಂತ ಕಷ್ಟವಾಯ್ತು."[೨೬]

ಕಳೆದ ಇಡೀ ಶತಮಾನದ ಲಿಂಗಾಯತ ಸಮಾಜಗಳ ಸಮಾಜಶಾಸ್ತ್ರವನ್ನು ಮುಂದಿಡುತ್ತಿದ್ದಾರೆ. ವೈಯಕ್ತಿಕ ನೆಲೆಗಳಿಂದ ಅಥವಾ ಹಿತಾಸಕ್ತಿಗಳಿಂದ ಹೊರಟ ಸಿದ್ಧಾಂತವು ಇಡೀ ದೇಶದ ಕುರಿತಾದ ಸಿದ್ಧಾಂತದ ಮೇಲೆ ಹೇಗೆ ಪ್ರಭಾವ ಬೀರಬಲ್ಲರೆಂಬುದಕ್ಕೆ ಈ ಭಾಗ ಉತ್ತಮ ಸಾಕ್ಷಿ. ಚಿದಾನಂದ ಮೂರ್ತಿಯವರಿಗೆ ವರ್ತಮಾನದಲ್ಲಿ ಸಂಭವಿಸುತ್ತಿರುವ ಬದಲಾವಣೆಗಳು, ಲಿಂಗಾಯತರಲ್ಲಿ ಪುರೋಹಿತ ಶಾಹಿಗಳಾಗಿದ್ದ ಜಂಗಮ ಸಮುದಾಯದ ಬಿಕ್ಕಟ್ಟುಗಳಿಗೆ 'ಗತ' ಸುಂದರವಾಗಿತ್ತು ಎನ್ನಿಸಿದೆ. ತಮ್ಮ ಸಿದ್ಧಾಂತಗಳನ್ನು ಅದಕ್ಕೆ ಪೂರಕವಾಗಿ ಕಟ್ಟಲು ಅವರು ಪ್ರಯತ್ನಿಸುತ್ತಾರೆ. ಕುವೆಂಪುರಿಗೆ 'ಗತ'ವೆನ್ನುವುದು ತರತಮಗಳಿಂದ ತುಂಬಿದ್ದು ಎನ್ನಿಸಿದ್ದರಿಂದ ಭವಿಷ್ಯದ ಬದುಕು ಹಾಗಾಗದಿರಲಿ ಎಂಬ ನೆಲೆಯಿಂದ 'ಸಮಾನತೆ'ಯ ಸಿದ್ಧಾಂತ ಕಟ್ಟುತ್ತಾರೆ. ಹಾಗಾಗಿ 'ಗತ' ವೈಭವ ಕೇಂದ್ರಿತವಾದ 'ಹಿಂದುತ್ವ' ಸಿದ್ಧಾಂತವು ತನ್ನ ಸಿದ್ಧಾಂತಕ್ಕೆ ಹೊಂದಿಕೆಯಾಗುತ್ತದೆ ಎಂದ ಕೂಡಲೇ ನೇರ ಅದರ ತೆಕ್ಕೆಗೆ ಜಾರಿಬಿಡುತ್ತಾರೆ. 'ಗತ'ದ ವೈಭವ ಪ್ರತಿಷ್ಠಾಪಿಸಬೇಕೆಂದರೆ 'ವರ್ತಮಾನದ' ಎಲ್ಲವನ್ನು ತಿರಸ್ಕರಿಸಬೇಕು. ಹಾಗಾಗಲು ಹುಸಿ ಶತ್ರುವನ್ನು ಸೃಷ್ಟಿಸಿ ಅಥವಾ ಕಲ್ಪಿಸಿ ಸಮಾಜವನ್ನು ಅಧೀರತೆ ಕಡೆಗೆ ಒಯ್ಯಬೇಕು ಎಂಬುದೇ ಮತೀಯವಾದಿ ಸಂಸ್ಕೃತಿ ಚಿಂತನೆಯ ಮುಖ್ಯ ಗಮನ. ಸಮಾಜಗಳಲ್ಲಿರುವ ಈ ತಲ್ಲಣವನ್ನು ನಿತ್ಯ ಕಾಪಾಡಿಕೊಂಡು ಮಾರುಕಟ್ಟೆಯ ಮೇಲೆ ಯಜಮಾನಿಕೆ ಸ್ಥಾಪಿಸುವುದೇ ವಸಾಹತುಶಾಹಿಗಳ ಆಸಕ್ತಿ. ಹಾಗಾಗಿ ಈ ಎರಡು ಚಿಂತನೆಗಳು ಏಕೀಭವಿಸಿ ಚಿದಾನಂದಮೂರ್ತಿಯಂಥ ಚಿಂತನೆಗಳು ರೂಪುಗೊಳ್ಳುತ್ತಿರುತ್ತವೆ. ಈ ಚಿಂತನೆಯ ಮೂಲಾಧಾರವೇ ಶತ್ರು ಕಲ್ಪನೆಯನ್ನು ದಟ್ಟವಾಗಿಸುತ್ತಾ ಹೋಗುವುದು.

### ೬.೨ ಸಂಸ್ಕೃತಿ ಕುರಿತಂತೆ ಕರ್ನಾಟಕ ವಿಮೋಚನಾರಂಗದ ನಿಲುವುಗಳು

'ಸಂಸ್ಕೃತಿ' ಎನ್ನುವುದು ಬರೀ ಭಾವನಾತ್ಮಕ ವಿಚಾರವಲ್ಲ. ಅದು 'ರಾಜಕೀಯ ವಿಶ್ಲೇಷಣೆಗಳ ಪರಿಭಾಷೆ ಎನ್ನುವುದನ್ನು ಕರ್ನಾಟಕ ವಿಮೋಚನಾರಂಗ ರೂಪಿಸಿರುವ 'ಸಂವಿಧಾನ'ದಲ್ಲಿ ಗುರುತಿಸಬಹುದು. ಏಕೆಂದರೆ ತೊಂಬತ್ತರ ದಶಕ ಜಾಗತಿಕ ತಲ್ಲಣಗಳನ್ನು ಹುಟ್ಟಿಸಿದ ಕಾಲಘಟ್ಟ. ಭಾರತದ ಪ್ರಭುತ್ವ ಜನತೆಯನ್ನು ಸಾಮಾಜಿಕ, ಆರ್ಥಿಕ, ರಾಜಕಾರಣ, ಸಾಂಸ್ಕೃತಿಕ ಮುಂತಾದ ಬದಲಾವಣೆಗಳಿಗೆ ಕೇಳದೆ, ಒಪ್ಪಲಾಯಿತು. ಅಷ್ಟೇ ಅಲ್ಲದೆ ಸಂವಿಧಾನದಲ್ಲಿ ಹೇಳಲಾಗಿರುವ "ಸಾರ್ವಭೌಮ" ಪದವನ್ನು, ಪರಿಕಲ್ಪನೆಯನ್ನು ಒತ್ತೆ ಇಟ್ಟಿತೆಂದೂ ಇಲ್ಲಿನ ಚಿಂತನೆಗಳಲ್ಲಿ ಕ.ವಿ.ರಂ. ಗುರುತಿಸುತ್ತದೆ. ಹಾಗಾಗಿ ಇಲ್ಲಿ 'ಅನ್ಯ' ಎಂಬುದರ ಕುರಿತಾದ ವ್ಯಾಖ್ಯಾನ ಬದಲಾಗುತ್ತದೆ. ಇಲ್ಲಿ ನಿರ್ದಿಷ್ಟ ಜನರ ಹಿತಾಸಕ್ತಿಗೆ ಬದಲಾಗಿ ನಿರ್ದಿಷ್ಟ ಆಲೋಚನಾ ಕ್ರಮಗಳು ಸಂಸ್ಕೃತಿಯನ್ನು ಹೆಚ್ಚು 'ಸ್ಟ್ರಾಟಜಿಕ್' ಆಗಿ ಗ್ರಹಿಸಲು ಪ್ರಯತ್ನಿಸುತ್ತವೆ. ಈ ಚಿಂತನಾ ಕ್ರಮದಲ್ಲಿ 'ಅನ್ಯ' ಎಂಬುದು ಸಮುದಾಯಗಳನ್ನು ಕುರಿತಾದದ್ದಲ್ಲ. ಮಾರುಕಟ್ಟೆಯ ಹಿತಾಸಕ್ತಿಗಳಿಗೆ ಕೊಳ್ಳೆ, ಹೊಡೆಯಲು

ಸೃಷ್ಟಿಸಿದ ಜೀವನಕ್ರಮವೆಂಬುದಾಗಿ ಗ್ರಹಿಸಲಾಗುತ್ತದೆ. ಹಾಗಾಗಿ ಇಲ್ಲಿ 'ಶತ್ರು'ವಿನ ವ್ಯಾಖ್ಯಾನ ನಿರ್ದಿಷ್ಟ ಆಲೋಚನೆಗಳ ಕಡೆಗೆ ತಿರುಗುತ್ತದೆ. ನೇರವಾಗಿ ಹೇಳುವುದಾದರೆ 'ಸಾಮ್ರಾಜ್ಯಶಾಹಿ' ಎಂಬುದು ವಿಶಾಲ ಭಿತ್ತಿಯಲ್ಲಿ ಶತ್ರುವಾಗಿ ಪರಿಗಣಿತವಾಗುತ್ತದೆ. ಹಾಗಾಗಿ ಅದರ ಜೊತೆ ಬರುವ ದಮನಕಾರಿ 'ಸಾಂಸ್ಕೃತಿಕ' ಅಂಶಗಳನ್ನು ವಿರೋಧಿಸುವುದಾಗಿ ಈ 'ಸಂವಿಧಾನ'ದಲ್ಲಿ ಹೇಳಿಕೊಳ್ಳುತ್ತದೆ. ಆದ್ದರಿಂದ ಪಕ್ಕದ ತಮಿಳರು, ತೆಲುಗರು, ಮರಾಠಿ, ಮಲಯಾಳಿಗಳು ಮತ್ತು ಧಾರ್ಮಿಕ ಅಲ್ಪಸಂಖ್ಯಾತರು ಶತ್ರುಗಳಾಗದೆ ತನ್ನ ಹಾಗೆಯೇ ಕಷ್ಟದಲ್ಲಿರುವವರು, ಬಿಕ್ಕಟ್ಟಿನಲ್ಲಿರುವವರು ಎಂದು ಭಾವಿಸುತ್ತದೆ. ಹಾಗಾಗಿ ಅತಿ ದೊಡ್ಡ ಶತ್ರುವಿನ ವಿರುದ್ಧ ಪ್ರತಿಭಟಿಸಬೇಕಾದ್ದರಿಂದ ಈ ಅಕ್ಕಪಕ್ಕದ ಕಷ್ಟದಲ್ಲಿರುವ ಸಮುದಾಯಗಳನ್ನು ಸೋದರರು ಎಂದು ಭಾವಿಸುತ್ತದೆ. ಮತೀಯವಾದಿ ನಿಲುವುಗಳು ಯಾವುದನ್ನು ಶತ್ರುವೆಂದು ಭಾವಿಸುತ್ತವೆಯೋ, ಅದೇ ಸಮುದಾಯಗಳು ಇಲ್ಲಿ ಸಂಗಾತಿಯಾಗಿ ಪರಿವರ್ತನೆಯಾಗುತ್ತವೆ. ಆದ್ದರಿಂದ ಮತೀಯವಾದಿ, ಬಲಪಂಥೀಯ ಚಿಂತಕರಿಗೆ ಈ ಸಮುದಾಯಗಳ ವಿರುದ್ಧದ ದ್ವೇಷ ಕಾರುವ ನಿಲುವುಗಳನ್ನು 'ಸಿದ್ಧಾಂತಮಾಡಿ' ಹೇಳುವಾಗ, ಕಷ್ಟದಲ್ಲಿರುವ ಸಂಗಾತಿ, ಸಹೋದರ ಎಂದು ಭಾವಿಸುವ ಸಿದ್ಧಾಂತವನ್ನು ಮತ್ತು ಅದನ್ನು ರೂಪಿಸುವವರನ್ನು ದುಷ್ಟರು, ಎಂಬಂತೆ ಚಿತ್ರಿಸಲಾಗುತ್ತದೆ. ಜಾಗತಿಕ ಮಾರುಕಟ್ಟೆ ಶತ್ರುಗಳು ಕೂಡ ತನ್ನನ್ನು ಗುರಿಮಾಡದ ನಿಲುವುಗಳ ವಿರುದ್ಧ ಭಿನ್ನ ಭಿನ್ನ ರೀತಿಯಲ್ಲಿ ಪ್ರತಿಕ್ರಿಯಿಸುತ್ತದೆ. ಅದರಲ್ಲಿ ಮತೀಯವಾದಿ ಚಿಂತಕರ ಚಿಂತನೆಗಳಿಗೆ ಅಧಿಕೃತತೆಯ ಮೊಹರು ಹಾಕುವುದೂ ಸೇರಿದೆ.

ಕ.ವಿ.ರಂ.ನಲ್ಲಿ ಕೂಡ ಸಾಂಸ್ಕೃತಿಕವಾಗಿ ರಾಷ್ಟ್ರವನ್ನು ಪರಿಭಾವಿಸುವ ಕ್ರಮವೊಂದಿದೆ. ಪರಂಪರೆಯನ್ನೂ ಪುನಾರಚಿಸುವ ಚಿಂತನ ಕ್ರಮವೊಂದಿದೆ. ಇಲ್ಲಿ ಕೂಡ ಪರಂಪರೆಯಿಂದ ಆಯ್ದು ತನಗೆ ಬೇಕಾದ ವಿವರಗಳನ್ನು ಜೋಡಿಸಲಾಗುತ್ತದೆ. ಮತೀಯವಾದಿ ಚಿಂತಕರು ಮಾಡುವ ತಂತ್ರಗಳನ್ನು ಇಲ್ಲಿಯೂ ಬಳಸಲಾಗುತ್ತದೆ. ಆದರೆ ಅದು ಅಂತಿಮವಾಗಿ ಸಂಕುಚಿತತೆಯ ಪರಿಧಿಯಾಚೆಗೆ ವಿಸ್ತರಿಸಿಕೊಳ್ಳಲು ಬಯಸುತ್ತದೆ. ಎಲ್ಲ ಜಾತಿ, ಧರ್ಮ, ಭಾಷೆಗಳಲ್ಲಿನ 'ದಮನಿತ'ರಿಗೆ ಸಮಾನತೆ ತರುವುದು ತನ್ನ ಆಶಯ ಎಂದು ಪ್ರತಿಪಾದಿಸುತ್ತದೆ. ಹಾಗಾಗಿ ಪರಂಪರೆಯಿಂದ, ಚರಿತ್ರೆಯಿಂದ ಆ ರೀತಿಯ ವಿವರಗಳನ್ನು ಅದು ಆರಿಸಿಕೊಳ್ಳುತ್ತದೆ. ಇದಕ್ಕೆ ಅನೇಕ ಕಾರಣಗಳಿವೆ. ವಚನ ಚಳುವಳಿ, ತನ್ನ ಆಶಯಗಳಿಗೆ ಹತ್ತಿರವೆಂದು ಕ.ವಿ.ರಂ. ಗುರುತಿಸುತ್ತದೆ. ಹಾಗೆಯೇ ಹರಿದಾಸರು, ಸರ್ವಜ್ಞ, ರನ್ನ ಪ್ರಭುತ್ವ ವಿರೋಧಿ, ಬ್ರಾಹ್ಮಣ್ಯವಿರೋಧಿ ನಿಲುವುಗಳಿಗಾಗಿ, ಭಾಷೆಯನ್ನು ಸುಧಾರಿಸಿ ಕಾರಣಗಳಿಗಾಗಿ ಆಪ್ತವೆಂದು ಅದು ಪರಿಭಾವಿಸುತ್ತದೆ. ಬಲಪಂಥೀಯರು ಪೈ ಪಾಸುಮಾಡುವ ಅಥವಾ ತಿರುಚುವ ಈ ಪಂಥಗಳ ಜೊತೆಗೆ ಪ್ರಭುತ್ವದಲ್ಲಿ ವಸಾಹತುವಾದದ ವಿರುದ್ಧ ಹೋರಾಡಿದ್ದಕ್ಕಾಗಿ ಹೈದರ್-ಟಿಪ್ಪು ಒಳಗೊಂಡು ಧರ್ಮ ಮರೆತು, ಜಾತಿ ಮರೆತು ಹೋರಾಡಿದವರನ್ನು ಆರಿಸಿಕೊಂಡು ತನ್ನ ಪರಂಪರೆಗೆ ವಾರಸುದಾರರಿವರು ಎಂಬಂತೆ ವ್ಯಾಖ್ಯಾನಿಸುತ್ತದೆ. ಸಮಸ್ಯೆಯೇನೆಂದರೆ ಪರಂಪರೆಯಲ್ಲಿನ ಗೀ ನೆನಪುಗಳಲ್ಲಿ ಅನೇಕ ಬಾರಿ ಪುರುಷಾಧಿಪತ್ಯ ಸ್ಥಾಪಿಸುವ, ಜಾತಿವ್ಯವಸ್ಥೆ ತರವಾಗಿರುವಂತೆ ಕಾಣುವ ಅಥವಾ ಇನ್ನಿತರೆ ಅನಾರೋಗ್ಯಕರವಾದ ನಿಲುವುಗಳನ್ನು ಕ್ರಮ ತನ್ನ 'ಗೆಲ್ಲುವ ತಂತ್ರ'ದ ಕಾರಣಕ್ಕಾಗಿ

ಬಳಸಿಕೊಳ್ಳುತ್ತದೆ. ಇಲ್ಲಿ ಪರಂಪರೆ ಎನ್ನುವುದು ಸರಳರೇಖಾತ್ಮಕವೂ ಮತ್ತು ಸಂಕೀರ್ಣತೆಗಳನ್ನು ಬಿಟ್ಟುಕೊಟ್ಟ ತರ್ಕವಾಗಿಯೂ ಗೋಚರಿಸುತ್ತದೆ.

ಆದರೆ ಆದಿಮ ಮಾರ್ಕ್ಸ್‌ವಾದದಲ್ಲಿ ನಂಬಿಕೆ ಇಟ್ಟ ಎಡಪಂಥೀಯ ಚಿಂತನೆಗಿಂತ ಈ ಸಂಘಟನೆಯ ಚಿಂತನೆಗಳು ಭಿನ್ನವಾಗಿವೆ. ಆದಿಮ ಮಾರ್ಕ್ಸ್‌ವಾದದಲ್ಲಿ 'ಸಂಸ್ಕೃತಿ' ಪರಿಕಲ್ಪನೆಯನ್ನು 'ದ್ವಿತೀಯ ಸ್ತರ'ದ ಪರಿಭಾಷೆಯನ್ನಾಗಿ ನೋಡಲಾಗುತ್ತದೆ. ಪ್ರಾಥಮಿಕ ಸ್ತರದಲ್ಲಿ ರಾಜಕೀಯ ಆರ್ಥಿಕತೆ ಈ ಪ್ರಾಥಮಿಕ ಸ್ತರ ಬದಲಾದರೆ ಮಾತ್ರ ದ್ವಿತೀಯಸ್ತರ ಬದಲಾಗುತ್ತದೆ ಎಂಬ ಜಡ ಚಿಂತನೆ ಇಲ್ಲಿ ಸಮುದಾಯಗಳ ಚೈತನ್ಯವನ್ನು ಗೌರವಿಸಬೇಕು ಮತ್ತು ಮನ್ನಣೆ ನೀಡಬೇಕು ಎಂದ ಕೂಡಲೇ ಬದಲಾಗಿ ಬಿಡುತ್ತದೆ. ಈ ಕುರಿತ ಕ.ವಿ.ರಂ. ನಿಲುವುಗಳಿವು :

“ಜನಪದರ ಜೀವನದಲ್ಲಿ ಉಳಿದು ಬಂದಿರುವ ಆಚರಣೆಗಳು, ಹಬ್ಬಗಳು, ಪ್ರಾಚೀನ ಸಾಹಿತ್ಯ, ಸಾಮಾಜಿಕ ನಂಬುಗೆಗಳು ಈ ಎಲ್ಲಾ ವಿಷಯಗಳನ್ನು ಜೀವಂತ ಜಿಜ್ಞಾಸೆಯ ಮೂಲಕ ಪರಿಶೀಲಿಸುತ್ತಾ ಅವು ಒಟ್ಟಾರೆ ಜನಸಮೂಹಗಳ ಹಿತಾಸಕ್ತಿಗೆ ನೀಡುವ ಸೇವೆಯನ್ನು ಪರಿಗಣಿಸಿ ರಕ್ಷಿಸುತ್ತಾ ಅವು ಜನವಿರೋಧಿಯಾಗಿದ್ದಾಗ ವಿನಾಶಗೊಳಿಸುತ್ತಾ ಮುನ್ನಡೆಯಬೇಕು. ನಮ್ಮ ರಾಷ್ಟ್ರೀಯತಾ ವಿಮೋಚನಾ ಹೋರಾಟವು ಹೇಗೆ ತನ್ನ ಸ್ವರೂಪದಲ್ಲಿ ರಾಷ್ಟ್ರೀಯವೂ ಸ್ವಭಾವದಲ್ಲಿ ಅಂತರಾಷ್ಟ್ರೀಯವೂ ಆಗಿರುತ್ತದೋ ಹಾಗೆಯೇ ನಮ್ಮ ಸಂಸ್ಕೃತಿಯೂ ಸಹ ತನ್ನ ಸ್ವರೂಪದಲ್ಲಿ ಸ್ಥಳೀಯವೂ ಅದರ ಹೃದಯದಲ್ಲಿ ವಿಶ್ವಜನೀಯವೂ ಆಗಿರುವ ಹಾಗೆ ಹೊಸ ಪ್ರಜಾ ಸಂಸ್ಕೃತಿಯನ್ನು ನಿರ್ಮಿಸುವುದು.”[೨೭]

ಸಂಸ್ಕೃತಿ ಚಿಂತನೆ ಮಾಡುವಾಗ ಕುವೆಂಪುರವರ ಅನೇಕ ಶಬ್ದಗಳು ಇಲ್ಲಿ ಅನುರಣಿತವಾಗುತ್ತವೆ. ವಿಶ್ವ ಜನನೀಯ, ವಿಶ್ವಸಂಸ್ಕೃತಿ ಇವೆಲ್ಲ ಆ ಥರದವು. ಆದರೆ ಕುವೆಂಪುರವರು ಈ ಸಾಧ್ಯತೆಯನ್ನೇ ಬಿಟ್ಟು ಕೊಡುತ್ತಾರೆ. ಮೌಢ್ಯತೆಯನ್ನು ಪ್ರತಿಪಾದಿಸುವ ಅಂಶಗಳನ್ನು ಬಿಟ್ಟು ಪ್ರಗತಿಪರವಾದ ಸಮುದಾಯಪರವಾದ ಅಂಶಗಳನ್ನು ಕಟ್ಟಿಕೊಳ್ಳುವುದು, ಉಳಿಸಿಕೊಳ್ಳುವುದು ಎಂಬ ವಿವೇಕ ಕನ್ನಡದ ಚಿಂತನಶೀಲ ಪರಂಪರೆಗೆ ತೊಂಬತ್ತರ ದಶಕದಲ್ಲಿ ಹುಟ್ಟಿದಂತೆ ಕಾಣುತ್ತದೆ.

“ಪ್ರಸ್ತುತ ನಮ್ಮ ಸಂಸ್ಕೃತಿಯ ಮೂಢ ನಂಬಿಕೆಗಳು, ಹಣೆಯಬರಹ, ಪುನರ್ಜನ್ಮ, ಕರ್ಮ, ಪಾಪ -ಪುಣ್ಯ, ಜಾತಿ ಮೇಲು ಕೀಳು, ಮಹಿಳೆಯನ್ನು ಕೀಳಾಗಿ ನೋಡುವುದು, ಹತಾಶೆ, ಮೇಲಿನವರ ಬಳಿ ಗುಲಾಮರಂತಿರುವುದು, ಕೆಳಗಿನವರ ಬಳಿ ದರ್ಪ ಚಲಾಯಿಸುವುದು, ಡಾಂಭಿಕತೆ, ಯಾರನ್ನೋ, ನಾನೇ ಉದ್ಧರಿಸಿದೆ ಎಂಬ ಭಾವನೆ ಮುಂತಾದುವೆಲ್ಲ ನಮ್ಮ ಸಮಾಜದ ಊಳಿಗಮಾನ್ಯ ವ್ಯವಸ್ಥೆಯಿಂದ ನಮ್ಮ ಮೇಲೆ ಎರಗಿದ ಸಾಂಸ್ಕೃತಿಕಾಂಶಗಳಾಗಿವೆ. ಅದೇ ಸಮಯದಲ್ಲಿ ಜೀವನದ ಎಲ್ಲಾ ಆಯಾಮಗಳನ್ನು ಕೇವಲ ಆರ್ಥಿಕ ಲೆಕ್ಕಾಚಾರದ ಸಂಬಂಧವಾಗಿ ನೋಡುವ ಅಸಹ್ಯ ವ್ಯಾಪಾರೀತನ ಜನರನ್ನು ಅಮಾನವೀಯ ಯಾಂತ್ರಿಕ ಜೀವಿಗಳನ್ನಾಗಿಸುವುದು, ಸಮಾಜದ, ಪ್ರಕೃತಿಯ ಪ್ರತಿಯೊಂದನ್ನೂ ತನ್ನ ಐಷಾರಾಮಕ್ಕೋಸ್ಕರ ಮಿತಿಯಿಲ್ಲದೆ ಬಳಸುವ ಅನುಭೋಗಿ ಸ್ವಭಾವ, ಅನುಕರಣ ಪ್ರವೃತ್ತಿ, ಅನೈತಿಕ ಲೈಂಗಿಕ ಸಂಬಂಧಗಳನ್ನು ಕೆರಳಿಸುವ ಅಶ್ಲೀಲತೆ ಹಾಗೂ ದೇಹವನ್ನು ಪ್ರದರ್ಶನದ ಸರಕಾಗಿಸುವ ಉಡುಪು-ತೊಡಪು ಇತ್ಯಾದಿಗಳು

ಸಾಮ್ರಾಜ್ಯಶಾಹಿಯ ಅಡಿಯಾಳುತನದಲ್ಲಿರುವುದರಿಂದ ಆ ಸಾಂಸ್ಕೃತಿಕಾಂಶಗಳಾಗಿ ನಮ್ಮನ್ನು ಆವರಿಸಿವೆ. ಇವೆರಡರ ಅಸಹ್ಯ ಮಿಶ್ರಣವಾಗಿ ಇಂದಿನ ನಮ್ಮ ಸಂಸ್ಕೃತಿಯೆಂಬುದಿದೆ.

ಈ ಸಂಸ್ಕೃತಿಯು ಆಳುವ ವರ್ಗಗಳ ಸಂಸ್ಕೃತಿಯಾದ್ದರಿಂದ ಇದೇ ಪ್ರಧಾನ ಸಂಸ್ಕೃತಿಯಾಗಿ ಕಂಡು ಬರುತ್ತದೆ. ಆದರೆ ಇದರ ನಡುವೆಯೂ ಅಲ್ಪಸ್ವಲ್ಪ ಪರಿವರ್ತಿತ ರೀತಿಯಲ್ಲಿ ಇನ್ನೂ ಪೂರ್ಣ ಪ್ರಭಾವಕ್ಕೆ ಒಳಗಾಗದೆ ಜನರ ಸಂಸ್ಕೃತಿಯ ಜನಪರ ಅಂಶಗಳು ಅಲ್ಲಲ್ಲಿ ಉಸಿರಾಡುತ್ತಿವೆ. ಇನ್ನು ನಮ್ಮ ಪರಂಪರೆಯು ನಮಗೆ ಒದಗಿಸಿದೆ. ಇನ್ನು ಸಾಮ್ರಾಜ್ಯಶಾಹಿ ಊಳಿಗಮಾನ್ಯ ಅಂಶಗಳು ನಾಶಮಾಡಲು ಬಿಡದೆ ರಕ್ಷಿಸಬೇಕು ಹಾಗೂ ಈಗಾಗಲೇ ಅಲ್ಪಸ್ವಲ್ಪ ಪ್ರಭಾವಕ್ಕೊಳಗಾಗಿರುವ ಅಂಶಗಳನ್ನು ಜರಡಿಯಾಡಿಸಿ ಅವುಗಳ ಜನ ವಿರೋಧಿತನವನ್ನು ತೊಳೆದು ರಕ್ಷಿಸಬೇಕು. ಇವುಗಳ ಜೊತೆಗೆ ಮನುಷ್ಯ ಜಾತಿಯ ಮುನ್ನಡೆಯಲ್ಲಿ ಬದುಕುತ್ತಿರುವ ಪ್ರಜಾತಾಂತ್ರಿಕ ಆಶಯಗಳ, ಸಮಾನತಾ ಮೌಲ್ಯಗಳ, ವಿಶ್ವಪ್ರಜ್ಞೆ ವೈಚಾರಿಕತೆ ಮುಂತಾದ ಹೊಸ ಜನಪರ ವಿಷಯಗಳನ್ನು ನಮ್ಮ ಸ್ಥಳೀಯ ಜನಪರ ಸಂಸ್ಕೃತಿಯೊಂದಿಗೆ ಜೋಡಿಸಿಕೊಳ್ಳಬೇಕು.''[೨೮]

ಕನ್ನಡದಲ್ಲಿ, ಪರಂಪರೆಯಿಂದ ಬಂದ ಸಮುದಾಯ ಸಾಂಸ್ಕೃತಿಕ ಲಕ್ಷಣಗಳನ್ನು ಕುವೆಂಪು ರೀತಿ ಸಂಪೂರ್ಣ ತಿರಸ್ಕರಿಸುವುದನ್ನಾಗಲಿ ಅಥವಾ ಮಧ್ಯಮವರ್ಗ ಕೇಂದ್ರಿತ ಜಾನಪದ ವಿದ್ವಾಂಸರುಗಳಂತೆ ಅವಿಮರ್ಶಾತ್ಮಕವಾಗಿ ನೋಡದೆ 'ಜನಪರ' ಹಾಗೂ ಜನವಿರೋಧಿಗಳೆಂದು ವಿಭಾಗಿಸಿ, ಬೇಕಾದ್ದನ್ನು ಉಳಿಸಿಕೊಳ್ಳುವ ಆಕಾಂಕ್ಷೆ ಇಲ್ಲಿ ವ್ಯಕ್ತಪಡಿಸುತ್ತದೆ. ಆದರೆ ವಾಸ್ತವದಲ್ಲಿ ಹಾಗೆ ಪ್ರಜ್ಞಾವಲಯಕ್ಕೆ ಸಂಬಂಧಿಸಿದ ಅಂಶಗಳನ್ನು ಕಲ್ಲುಮರಳಿನ ಹಾಗೆ ಜರಡಿಯಾಡಿಸಲು ಸಾಧ್ಯವೇ? ಎನ್ನುವ ಪ್ರಶ್ನೆ ಕೂಡ ಹುಟ್ಟುತ್ತದೆ. ಜೊತೆಗೆ ಈ ಚಿಂತನೆ ಧಾರೆಯಲ್ಲಿ ಸಾಮ್ರಾಜ್ಯಶಾಹಿ ಸಂಸ್ಕೃತಿಯನ್ನು, ವ್ಯಾಪಾರಿ ಸಂಸ್ಕೃತಿಯೆಂದೂ ಸರಕು ಸಂಸ್ಕೃತಿ ಎಂದೂ ವ್ಯಾಖ್ಯಾನಿಸಿ ವಿರೋಧ ಮಾಡುವುದು ಕಾಣುತ್ತದೆ. ಆದರೆ ಕುವೆಂಪು ಮೊದಲಾದ ಕನ್ನಡ ಚಿಂತಕರು ಆಳುವ ಸಂಸ್ಕೃತಿಗಳಿಂದಲೂ ಜನಪರ ಅಂಶಗಳು ಸಿಕ್ಕರೆ ಸ್ವೀಕರಿಸುವುದರಲ್ಲಿ ತಪ್ಪಿಲ್ಲ ಎನ್ನುವ ಧೋರಣೆ ವ್ಯಕ್ತಪಡಿಸುತ್ತಾರೆ.

ಆದರೂ ಕರ್ನಾಟಕದ ಸಿದ್ಧ, ಸೂಫಿ, ನಾಥ, ದತ್ತ, ಅವಧೂತ, ಆರೂಢ ಮುಂತಾದ ಪರಂಪರೆಗಳನ್ನು ಅವೈದಿಕ ಮತ್ತು ಸ್ವಭಾವದಲ್ಲಿ ಅನೇಕ 'ಸಮಾನತೆ' ಅಂಶಗಳನ್ನು ಒಳಗೊಂಡಿವೆ ಎಂಬ ಕಾರಣಕ್ಕೆ ಗೌರವಿಸಬೇಕು ಮತ್ತು ಉಳಿಸಿಕೊಳ್ಳಬೇಕು ಎಂದು ಕವಿರಂ ತನ್ನ ಆಶಯ ವ್ಯಕ್ತಪಡಿಸುತ್ತದೆ. ಇದರ ಜೊತೆಗೆ ತುಳು, ಕೊಡವ ಸಂಸ್ಕೃತಿಗಳ ಅನನ್ಯತೆಯನ್ನು ಕನ್ನಡ ಸಂಸ್ಕೃತಿಯನ್ನು ಪ್ರತಿಪಾದಿಸುತ್ತ ದಮನಿಸದಂತೆ ಹಾಗೂ ಅನನ್ಯತೆಯನ್ನು ಪ್ರತಿಪಾದಿಸುವುದಾಗಿ ಹೇಳುತ್ತದೆ.

ಕೋಮುವಾದವನ್ನು ಎಲ್ಲಾ ಸಮುದಾಯಗಳ ದುಡಿಯುವವರ ಶತ್ರು ಎಂದು ವ್ಯಾಖ್ಯಾನಿಸುವುದಲ್ಲದೆ ಇಲ್ಲಿನ ಸಮುದಾಯಗಳ ಸಂಕಲಶೀಲ ಸಂಸ್ಕೃತಿಯನ್ನು ಗೌರವಿಸುತ್ತದೆ. ಈ ಕಡೆಗಳಲ್ಲೆಲ್ಲ ಕುವೆಂಪುರವರ ವಿಚಾರಗಳು ಬೆಳೆದ ಕೊಂಡಿ ಎನ್ನಿಸಿದರೆ ಆಶ್ಚರ್ಯವಿಲ್ಲ. ಒಟ್ಟಾರೆ ಕನ್ನಡ ರಾಷ್ಟ್ರೀಯತೆಗೆ, ಜನಪರ ಸಂಸ್ಕೃತಿಯ ಅವಶ್ಯಕತೆಯನ್ನು ಪ್ರತಿಪಾದಿಸುತ್ತವೇ, ಪರಂಪರೆಯಲ್ಲಿನ ಜನಪರ ಅಂಶಗಳನ್ನು ಮಾನ್ಯ ಮಾಡುತ್ತದೆ.

### ೬.೮ ಚಿಂತನೆಗಳ ತೌಲನಿಕ ಸಮೀಕ್ಷೆ

ರಾಷ್ಟ್ರೀಯತೆಗಳನ್ನು ಚರ್ಚಿಸುವಾಗ ಎಲ್ಲಾ ರೀತಿಯ ರಾಜಕೀಯ ಸಿದ್ಧಾಂತಗಳೂ ಸಹ ಒಂದು 'ರಾಷ್ಟ್ರೀಯ ಚಾರಿತ್ರ್ಯ' ವನ್ನು ಮತ್ತು 'ರಾಷ್ಟ್ರೀಯ ಮಾನಸ'ವನ್ನು ನಿರ್ಮಿಸಲು ಯತ್ನಿಸುತ್ತಿರುವಂತೆ ಕಾಣುತ್ತವೆ. ಆಳುವ ವರ್ಗಗಳ ಅಥವಾ ಸಮುದಾಯಗಳ ಹಿತಾಸಕ್ತಿಗಳನ್ನು ಆಧರಿಸಿಯೇ ಇವುಗಳು ನಿರ್ಮಾಣವಾಗುತ್ತವೆ ಎನ್ನುವುದನ್ನು ಮರೆಯಲಾಗದು. ಹತ್ತೊಂಬತ್ತನೆಯ ಶತಮಾನದ ಅರ್ಧದಿಂದಲೇ = dÉjaNjÔu àÛj ಈ ಕ್ರಿಯೆ ವಸಾಹತು ಆಡಳಿತವನ್ನು ವಿರೋಧಿಸುವುದಕ್ಕೆ ಮತ್ತು ಸಮರ್ಥಿಸುವುದಕ್ಕೆ ಬಳಕೆಯಾದಂತೆ ಕಾಣುತ್ತದೆ. ಇವುಗಳನ್ನು ಆಧರಿಸಿಯೇ ರಾಷ್ಟ್ರಗಳ ನಿರ್ಮಾಣಗಳು ಮತ್ತು ರಾಷ್ಟ್ರೀಯತಾ ಚಿಂತನೆಗಳು ನಡೆದಿರುವಂತೆ ಕಾಣುತ್ತದೆ. ಹಾಗಾಗಿಯೇ ಸಂಸ್ಕೃತಿ ಚಿಂತನೆಯನ್ನು ರಾಜಕೀಯ ಚಿಂತನೆ ಎಂದು ಪರಿಭಾವಿಸಲಾಗುತ್ತಿದೆ.

ಮೇಲೆ ಚರ್ಚಿಸಿದ ಹಾಗೆ ಆಳುವ ವರ್ಗಗಳ ಹಿತಾಸಕ್ತಿಗಳಿಗೆ ಅನುಗುಣವಾಗಿ ರೂಪಿಸಲೆತ್ನಿಸುವ ಈ ಪರಿಕಲ್ಪನೆಗೆ ಎರಡು ಮುಖ್ಯ ಆಯಾಮಗಳಿವೆ. ಒಂದು ತಾನು ಪ್ರತಿಪಾದಿಸುತ್ತಿರುವ ಚಾರಿತ್ರ್ಯ ಅಥವಾ ಮನಸ್ಸಿನ ಕಲ್ಪನೆಗೆ ಪೂರಕವಾಗಿರುವವರನ್ನು ಒಳಗೊಳ್ಳಲು ಯತ್ನಿಸುವುದು. ಎರಡು, ಪೂರಕವಾಗಿಲ್ಲದವರನ್ನು ಅಥವಾ ತನ್ನ ಹಿತಾಸಕ್ತಿಗೆ ವಿರುದ್ಧವಾಗಿರುವವನ್ನು ಹೊರಗಿಡುವ ಪ್ರಯತ್ನ ಮಾಡುವುದು.

ಜಾಗತಿಕ ಸ್ವರೂಪದ್ದಾದ ಈ ವಿಧಾನಗಳು ಕನ್ನಡದಲ್ಲಿ ಸಹ ಚರ್ಚಿತಗೊಂಡಿದೆ. ಅಧ್ಯಾಯದುದ್ದಕ್ಕೂ ಗಮನಿಸಿದ ಹಾಗೆ ಎರಡು ಅತಿರೇಕದಂತೆ ಕಾಣಿಸುವ ನಿಲುವುಗಳು ಕ್ರಿಯಾಶೀಲವಾಗಿವೆ. ದುಡಿಯುವ ಭಾಷಿಕ ಸಮುದಾಯಗಳು ರಾಷ್ಟ್ರೀಯ ಸಂಸ್ಕೃತಿಯನ್ನು ನಿರ್ಮಿಸುತ್ತವೆ ಎನ್ನುವುದು ಒಂದಾದರೆ ಮತ್ತೊಂದು ದುಡಿಯುವ ಸಮುದಾಯಗಳಿಗೆ ಸಂಸ್ಕೃತಿ ಎನ್ನುವುದೇ ಇಲ್ಲ, ಇರುವ ಸಂಸ್ಕೃತಿ ಮುಂದುವರಿದ ಸಮುದಾಯಗಳ ಹಿತಾಸಕ್ತಿಯನ್ನು ರಕ್ಷಿಸಲು ಹುಟ್ಟಿದೆ ಎಂದು ಭಾವಿಸಿ ರೂಪಿತಗೊಂಡಂತಿದೆ. ಮೊದಲಿನ ಚಿಂತನೆಗೆ ಕಳೆದ ಶತಮಾನದ ಕಡೆಯಲ್ಲಿ ಹುಟ್ಟಿದ ಚಿಂತನೆಯು ತುಸು ಜತೆಯಲ್ಲಿಯೇ ಸಾಗುವಂತೆ ಕಾಣುತ್ತದೆ. ಉತ್ಪಾದನಾಂಗ ಮತ್ತು ಉತ್ಪಾದನಾ ವಿಧಾನಗಳನ್ನು ಆಧರಿಸಿ ಚರ್ಚಿಸಲಾಗಿರುವ ಈ ಚಿಂತನೆಗಳು ಸ್ವಭಾವದಲ್ಲಿ ಅಪಾರ ವ್ಯತ್ಯಾಸಗಳನ್ನು ಹೊಂದಿವೆ. ಒಂದು ಸ್ವಭಾವದಲ್ಲಿ ಅರಾಜಕ ( ಅರಾಜಕತೆಯು ಸಿದ್ಧಾಂತವೆ ಎನ್ನುವ ನಂಬಿಕೆಯಿಂದ) ವಾದದ್ದಾದರೆ ಎರಡು, ಎಡಪಂಥೀಯ ವಿಚಾರಗಳಿಂದ ಪ್ರೇರಿತವಾದದ್ದು. ಇದು ಆಳುವ ವರ್ಗಗಳ ಸಂಸ್ಕೃತಿಯನ್ನು 'ಅನೈತಿಕ'ವೆಂದು ವ್ಯಾಖ್ಯಾನಿಸಲು ಪ್ರಯತ್ನಿಸುತ್ತದೆ. ( ಸಾಮ್ರಾಜ್ಯಶಾಹಿ ಮತ್ತು ವರ್ಣಾಧಾರಿತ ಸಂಸ್ಕೃತಿಗಳನ್ನು ನೈತಿಕ ಅನೈತಿಕ ಎನ್ನುವ ಪರಿಭಾಷೆಯಲ್ಲಿ ಚರ್ಚಿಸುವ ಎಡಪಂಥೀಯ ವಿಧಾನವೇ ಆಶ್ಚರ್ಯಕರವಾದುದು) ಅಂತಿಮವಾಗಿ ಇವುಗಳು ಉತ್ಪಾದಕ ಸಮುದಾಯಗಳ ಪರ ವಕಾಲತ್ತು ವಹಿಸಿದಂತೆ ಕಾಣುತ್ತವೆ.

ಆದರೆ ಎರಡನೆಯ ಚಿಂತನ ಧಾರೆ ಕನ್ನಡದಲ್ಲಿ ತುಸು ಬಲಿಷ್ಠವಾದುದು. ಉತ್ಪಾದಕ ಸಮುದಾಯಗಳಿಗೆ ಸಂಸ್ಕೃತಿಯೇ ಇಲ್ಲ ಎನ್ನುವ ನಿಲುವಿನೊಂದಿಗೆ ಇದು ಚಿಂತನೆಗೆ ತೊಡಗಿದಂತೆ ಕಾಣಿಸುತ್ತದೆ. ಅದಕ್ಕಾಗಿ

ಪರಂಪರೆಯಲ್ಲಿನ ಉತ್ತಮ ಅಂಶಗಳನ್ನು ಮತ್ತು ಆಧುನಿಕ ವಿಚಾರವಾದವನ್ನು ಎಚ್ಚರದಿಂದ ಬೆಸೆದು ಹೊಸದೊಂದು ರಾಷ್ಟ್ರೀಯ ಸಂಸ್ಕೃತಿಯನ್ನು ಕಟ್ಟಲು ಪ್ರಯತ್ನಿಸುತ್ತದೆ. ಸ್ವಭಾವದಲ್ಲಿ ಸಮನ್ವಯತೆಯನ್ನು ಮತ್ತು ಸಂಕರಶೀಲತೆಯನ್ನು ಪ್ರತಿಪಾದಿಸುವ ಮೂಲಕ ದ್ವೇಷರಹಿತವಾದ ಸಂಸ್ಕೃತಿಯನ್ನು ಅರ್ಥಾತ್ ರಾಷ್ಟ್ರೀಯ ಚಾರಿತ್ರ್ಯ (ಮನಸ್ಸು)ವನ್ನು ನಿರ್ಮಿಸುವ ವಿಶಾಲ ಭಿತ್ತಿಯನ್ನು ಅದು ಬಯಸುತ್ತದೆ. ಇದಕ್ಕೆ ತುಸು ಪೂರ್ವದಲ್ಲಿ ಆಳುವ ಸಂಸ್ಕೃತಿಗಳ ಉತ್ತಮ ಅಂಶಗಳನ್ನು ಆರಿಸಿ ತನ್ನದರ ಜತೆಯಲ್ಲಿ ಪೋಷಿಸಿಕೊಳ್ಳುವ ವಿಧಾನವು ಕಾಣುತ್ತದೆ. ಭಾವಿಸಿ ನೋಡಿದರೆ ಇವೆರಡೂ ಬೆಸೆದುಕೊಂಡಿರುವ ಸರಪಣಿಯಂತೆ ಕಾಣುತ್ತವೆ.

ಇವುಗಳ ನಡುವೆಯೇ ಇತ್ತೀಚೆಗೆ ಪ್ರಬಲವಾಗಿರುವಂತೆ ಕಾಣುವ ಮುಂದುವರಿದ ವರ್ಗಗಳ ಚಾರಿತ್ರ್ಯವನ್ನು ಎಲ್ಲರೂ ಮಾನ್ಯ ಮಾಡಬೇಕೆಂದು ಪ್ರಯತ್ನಿಸುವಂತೆ ಕಾಣುವ ಚಿಂತನೆಯು ಕ್ರಿಯಾಶೀಲವಾಗಿರುವಂತಿದೆ. ಕನ್ನಡದ ಪ್ರಧಾನ ಚಿಂತನ ಧಾರೆಯು ಜೀವ ವಿರೋಧಿಯೆಂದು ಭಾವಿಸಿ ವಿರೋಧಿಸಿರುವುದನ್ನು ಈ ಚಿಂತನ ಧಾರೆಯು ಸಮರ್ಥಿಸಲು ಪ್ರಯತ್ನಿಸುತ್ತದೆ. ಆ ಅರ್ಥದಲ್ಲಿ ಅನೇಕ ಸಂಸ್ಕೃತಿಗಳನ್ನು ಹೊರಗಿಡಲು ಬಯಸುತ್ತದೆ. ಅಂತಿಮವಾಗಿ ತನ್ನದೇ ಅಳ್ವಿಕೆಯನ್ನು ಸಮರ್ಥಿಸುತ್ತದೆ.

**ಕೊನೆ ಟಿಪ್ಪಣಿಗಳು**

೧. ಜಿ.ರಾಜಶೇಖರ, ಕರ್ನಾಟಕ ಸಂಸ್ಕೃತಿ ಚಿಂತನೆ (ಸಂ) ಎಂ.ಸರಸ್ವತಿ, ಆರ್. ವಸಂತಕುಮಾರ್, ಪು. ೨೧

೨. ಕೆ.ರಾಘವೇಂದ್ರರಾವ್, ಕರ್ನಾಟಕ ಏಕೀಕರಣದ ನಾಲ್ವರು ಚಿಂತಕರು (ಅನು) ಆರ್ಯ, ಪು. ೧೦೫

೩. ಆಲೂರು ವೆಂಕಟರಾವ್, ಕರ್ನಾಟಕತ್ವದ ವಿಕಾಸ, ಪು. ೧೯೫

೪. ಅದೇ ಪುಟ, ೭೮

೫. ಅದೇ ಪುಟ, ೧೧

೬. ಬಿ.ಎಂ.ಶ್ರೀಕಂಠಯ್ಯ, ಶ್ರೀ ಸಾಹಿತ್ಯ ಸಂಪುಟ, ಕಾಣಿಕೆ ಪದ್ಯದಿಂದ, ಪುಟ, ೫೯

೭. ಡಾ.ರಹಮತ್ ತರೀಕೆರೆಯವರು ಅನುವಾದಿಸಿರುವ, ಗೂಗಿ ವಾ ಥಿಯಾಂಗೊರವರ 'ವಸಾಹತು ಪ್ರಜ್ಞೆ ಮತ್ತು ವಿಮೋಚನೆ' ಎಂಬ ಬರೆಹದಿಂದ ಪುಟ, ೧೧

೮. ಬಿ.ಎಂ.ಶ್ರೀಕಂಠಯ್ಯ, ಶ್ರೀಸಾಹಿತ್ಯ ಸಂಪುಟ, 'ಗರತಿ ಹಾಡುಗಳು' ಕುರಿತ 'ಜನಪದ ಸಾಹಿತ್ಯ'ವೆಂದು ಬರೆದ ಬರೆಹದಿಂದ ಪುಟ, ೩೪೭

೯. ಶಂಬಾ ಜೋಶಿ, ಶಂಬಾ ಸಂಪುಟ ೧, 'ಕಣ್ಮರೆಯಾದ ಕನ್ನಡ' ಪುಸ್ತಕದಿಂದ, ಪುಟ, ೨೮

೧೦. ಶಂಬಾ ಜೋಶಿ, ಶಂಬಾ ಕೃತಿ ಸಂಪುಟ-೩, ಕರ್ನಾಟಕ ಸಂಸ್ಕೃತಿ ಪೂರ್ವ ಪೀಠಿಕೆ, ಪುಟ, ೪೪೩

೧೧. ಅದೇ ಪುಟ, ೩೩೩

೧೨. ಅದೇ ಪುಟ, ೩೩[illegible]

೧೩. ಅದೇ ಪುಟ, [illegible]

೧೪. ಶಂಬಾ ಜೋಶಿ, ಶಂಬಾ ಕೃತಿಸಂಪುಟ-೧, ಕರ್ನಾಟಕದ ವೀರಕ್ಷತ್ರಿಯರು ಕೃತಿಯಿಂದ, ಪುಟ, ೩೪

೧೫. ಅದೇ ಪುಟ, ೨೫೭

೧೬. ಕುವೆಂಪು, ಕುವೆಂಪು ಸಮಗ್ರ ಗದ್ಯ ಸಂಪುಟ-೨ (ಸಂ) ಕೆ.ಸಿ.ಶಿವಾರೆಡ್ಡಿ, 'ಕರ್ನಾಟಕ ಇಟ್ಟಹೆಸರು ಕೊಟ್ಟ ಮಂತ್ರ' ಚಿಂತನೆಯಿಂದ, ಪುಟ, ೫೦೬

೧೭. ಅದೇ 'ಕರ್ನಾಟಕದ ಕಲ್ಯಾಣ' ೧೯೫೬ರ ಕನ್ನಡ ರಾಜ್ಯೋತ್ಸವ ಸಂದರ್ಭದಲ್ಲಿ ಮೈಸೂರಿನ ಪುರಸಭೆಯ ಮೈದಾನದಲ್ಲಿ ಮಾಡಿದ ಭಾಷಣದಿಂದ, ಪುಟ, ೬೪೯

೧೮. ಅದೇ, ಎಸ್.ಶ್ರೀಕಂಠಯ್ಯನವರ 'ಭಾರತೀಯ ಸಂಸ್ಕೃತಿ' ಪುಸ್ತಕಕ್ಕೆ ಬರೆದ ಮುನ್ನುಡಿಯಿಂದ, ಪುಟ, ೭೯೨

೧೯. ಅದೇ, ಅಬ್ಬಾಸ್ ಷೂಸ್ತ್ರಿಯವರು ಬರೆದು ಬಿ.ಎಂ.ಶ್ರೀಯವರು ಅನುವಾದಿಸಿದ 'ಇಸ್ಲಾಂ ಸಂಸ್ಕೃತಿ' ಕೃತಿಯ ಮುನ್ನುಡಿಯಿಂದ, ಪುಟ, ೭೬೭

೨೦. ಡಾ.ಎಂ.ಚಿದಾನಂದಮೂರ್ತಿ, ಕನ್ನಡ ಸಂಸ್ಕೃತಿ: ನಮ್ಮ ಹೆಮ್ಮೆ, ಪು. ೨೮-೨೯

೨೧. ಅದೇ ಪುಟ, ೨೯

೨೨. ಅದೇ ಪುಟ, ೨೮

೨೩. ಅದೇ ಪುಟ, ೨೯-೩೦

೨೪. ಡಾ.ಎಂ.ಚಿದಾನಂದಮೂರ್ತಿ, ಚಿದಾನಂದ ಸಮಗ್ರ ಸಂಪುಟ ೫, ವೀರಶೈವಧರ್ಮ, ಭಾರತೀಯ ಸಂಸ್ಕೃತಿ (ಹಿಂದೂ -ಲಿಂಗಾಯತ) ಮುನ್ನುಡಿಯಿಂದ

೨೫. ಅದೇ ಪುಟ, ೫೫೮

೨೬. ಅದೇ ಪುಟ, ೪೫೫

೨೭. ಕರ್ನಾಟಕ ವಿಮೋಚನಾ ರಂಗ, ಪ್ರಣಾಳಿಕೆ ಹಾಗೂ ಸಂವಿಧಾನ ಪುಟ. ೫೬

೨೮. ಅದೇ ಪುಟ. ೫೬

ಅಧ್ಯಾಯ ೭

# ಸಮಾರೋಪ

೭.೧ ಅಧ್ಯಯನದ ಮುಖ್ಯ ಫಲಿತಗಳು

೭.೨ ಅಧ್ಯಯನದ ಸಂದರ್ಭದಲ್ಲಿ ಎದುರಾದ ತೊಡಕು ಮತ್ತು ಬಿಡಿಸಿಕೊಂಡ ಬಗೆ

೭.೩ ಉಳಿದಿರುವ ಅಧ್ಯಯನ ಸಾಧ್ಯತೆಗಳು

# ಸಮಾರೋಪ

ಮೇಲಿನ ಐದೂ ಅಧ್ಯಾಯಗಳಲ್ಲಿ 'ಭಾಷೆ', 'ಧರ್ಮ', 'ಚರಿತ್ರೆ', 'ಸಂಸ್ಕೃತಿ', 'ಭೂಪ್ರದೇಶ'ಗಳೆಂಬ ಪರಿಕಲ್ಪನೆಗಳು ರಾಷ್ಟ್ರೀಯತಾ ನಿರ್ವಚನದಲ್ಲಿ ಅತ್ಯಂತ ಮುಖ್ಯಪಾತ್ರ ವಹಿಸುತ್ತವೆ ಎನ್ನುವುದನ್ನು ಚರ್ಚಿಸಲಾಯಿತು. ಆಧುನಿಕೋತ್ತರ ಸಂದರ್ಭದಲ್ಲಿ ಪ್ರಧಾನವೆಂದು ಗ್ರಹಿಸಿ ಚರ್ಚಿಸಲಾಗುತ್ತಿರುವ ಈ ಪರಿಕಲ್ಪನೆಗಳನ್ನು ಕನ್ನಡದ ಚಿಂತಕರು, ಜಗತ್ತಿನ ದೊಡ್ಡ ಚಿಂತಕರುಗಳಿಗಿಂತ ಯಾವರೀತಿಯಲ್ಲೂ ಕಡಿಮೆಯಿಲ್ಲದಂತೆ ಚರ್ಚಿಸಿದ್ದಾರೆ ಎನ್ನುವ ಸಂಗತಿ ಅತಿ ಮುಖ್ಯವಾದುದು. ಕನ್ನಡದ ಈ ಧೀಮಂತ ಚಿಂತಕರು ಇಂಗ್ಲೀಷಿನಲ್ಲಿ ಬರೆದಿಲ್ಲ ಅನ್ನುವ ಕಾರಣಕ್ಕೊ, ಅಥವಾ ಹೆಚ್ಚಿನವರ ಚಿಂತನೆಗಳು ಅನ್ಯಭಾಷೆಗಳಿಗೆ ಅನುವಾದಗೊಂಡು ಹೋಗಿಲ್ಲ ಎನ್ನುವ ಕಾರ್ಣಕ್ಕೋ, ಇವರನ್ನು ದೊಡ್ಡ ಚಿಂತಕರು ಮತ್ತು ಮೀಮಾಂಸಕರು ಎಂದು ಗುರುತಿಸಲಾಗದಿರುವುದು ಕನ್ನಡದ ಮಟ್ಟಿಗೆ ದುರಂತವೇ ಸರಿ. ಕೀನ್ಯಾದೇಶದ ಸಾಮ್ರಾಜ್ಯಶಾಹಿ ವಿಶ್ಲೇಷಕ ಮತ್ತು ಜನಪರ ಚಿಂತಕರಾದ 'ಗೂಗಿ ವಾಥಿಯಾಂಗೊ'ರು 'ಅಧಿಕಾರಸ್ಥ ಭಾಷೆಯಾದ ಇಂಗ್ಲಿಷನ್ನು ಬಿಟ್ಟು ತನ್ನ ಜನರ ಭಾಷೆಯಲ್ಲಿ ಬರೆಯುತ್ತೇನೆ' ಎಂದು ಘೋಷಿಸಿದ್ದಾರೆ. ಆದರೆ ಕುವೆಂಪು 'ಹಿಂದಿ', 'ಇಂಗ್ಲಿಷ್' ಭಾಷೆಗಳ ಸಾಮ್ರಾಜ್ಯ ಶಾಹಿ ಅಧಿಕಾರಸ್ಥ ಗುಣವನ್ನು ಕಳೆದ ಶತಮಾನದ ನಾಲ್ಕು ಮತ್ತು ಐದನೇ ದಶಕಗಳಲ್ಲಿ ವಿಶ್ಲೇಷಿಸಿದ್ದಾರೆ ಮತ್ತು ವಿರೋಧಿಸಿದ್ದಾರೆ. ಕುವೆಂಪು ಕೂಡ ಇಂಗ್ಲಿಷ್ ಭಾಷೆಯಲ್ಲಿ ಬರಹ ಆರಂಭಿಸಿದವರು, ನಿಧಾನಕ್ಕೆ ತಿರಸ್ಕರಿಸಿ ಜನರ ಭಾಷೆಯ ಕಡೆಗೆ ತಿರುಗಿದವರು ಎನ್ನುವುದನ್ನು ನೆನಸಿಕೊಂಡರೆ, ಗೂಗಿಯವರಿಗಿಂತ ಕುವೆಂಪು ಕಡಿಮೆಯಲ್ಲ ಎನ್ನುವುದು ಅರ್ಥವಾಗುತ್ತದೆ.

ವಿಚಿತ್ರವೆಂದರೆ ಕನ್ನಡದ ಈ ದೊಡ್ಡ ಚಿಂತಕರುಗಳು ಪರಂಪರೆಯನ್ನು ನಿರಾಕರಿಸದೆ, ವೈದಿಕ ದರ್ಶನಗಳಾದ ದ್ವೈತ, ಅದ್ವೈತಗಳನ್ನು ಮತ್ತು ಆಧುನಿಕತೆ, ವೈಚಾರಿಕತೆಗಳನ್ನು ಸುಂದರವಾಗಿ ಬೆಸೆದು ಅವು ಜನಪರ ಆಶಯಗಳಾಗುವಂತೆ ಮಾಡಿದ್ದಾರೆ. ಅವುಗಳನ್ನು ಜಗತ್ತಿನ ಚಿಂತನೆಗಳ ಮಟ್ಟಿಗೆ ಕಟ್ಟಿ ನಿಲ್ಲಿಸಿದ್ದಾರೆ. ಹಟ್ಟಿಕಾರರು, ಧನಗಾರರು ಎಂಬ ದಮನಿತ ಸಮುದಾಯಗಳನ್ನು ಮತ್ತು ಸ್ಥಳೀಯ ಪ್ರಭುತ್ವಗಳ ವಿಶ್ಲೇಷಣೆ ಮಾಡುತ್ತಲೇ ರಾಷ್ಟ್ರಕಟ್ಟುವ, ವಿಶ್ವಮಾನವ ದರ್ಶನಗಳ ಸೃಜಿಸುವ ಮಹಾಶಕ್ತಿಯನ್ನು ಕನ್ನಡದ ಚಿಂತಕರು ಹೊಂದಿದ್ದಾರೆ. ಗೂಗಿ, ಗ್ರಾಮ್‌ಶಿ, ಚೊಂಸ್ಕಿ, ಬಿ.ಆಂಡರ್‌ಸನ್, ಆಶೀಶ್‌ನಂದಿ, ಪಾರ್ಥಾಚಟರ್ಜಿ, ರಾಜರಾಮ ಮೋಹನ ರಾಯ್, ರವೀಂದ್ರನಾಥ್ ಠಾಗೂರ್, ಡಿ.ಡಿ.ಕೋಶಾಂಬಿ, ರಾಹುಲ ಸಾಂಕೃತ್ಯಾಯನ, ದೇವಿಪ್ರಸಾದ್ ಚಟ್ಟೋಪಾಧ್ಯಾಯ, ಬಿಪಿನ್‌ಚಂದ್ರ, ರೋಮಿಲಾಥಾಪರ್, ಜಿ.ಎನ್.ದೇವಿ, ವಂದನಾಶಿವ ಮುಂತಾದ ಜಾಗತಿಕ ಚಿಂತಕರನ್ನು ಓದಿರುವ ಯಾರಿಗಾದರೂ ಕನ್ನಡದ ಈ ಚಿಂತಕರು ಸಹ ವಿಶ್ವ ಚಿಂತಕರೆ ಎಂದು ತಿಳಿಯುತ್ತದೆ. ಪ್ರಸ್ತುತ ಸಂಪ್ರಬಂಧದಲ್ಲಿ ನಾವೇ ಚಿಂತಕರ ಬಗ್ಗೆ ಒಂದು ನಿಲುವಿಗೆ ಬರಲಾಗಿದೆ ಮತ್ತು ಅಧ್ಯಯನದ ಸಂದರ್ಭದಲ್ಲಿ ದೊರೆತ ಫಲಿತಗಳನ್ನು ಮಂಡಿಸಲಾಗಿದೆ.

## ೭.೧. ಅಧ್ಯಯನದ ಮುಖ್ಯ ಫಲಿತಗಳು

ಕಳೆದ ಇಡೀ ಶತಮಾನದಲ್ಲಿ ನಡೆದು ಹೋದ ವಿದ್ಯಮಾನಗಳ ಬೆಳಕಿನಲ್ಲಿ, ವರ್ತಮಾನದ ಭೀಕರ ರಾಷ್ಟ್ರೀಯತಾ ತಲ್ಲಣಗಳನ್ನು ವಿಶ್ಲೇಷಿಸಲು ಕನ್ನಡದ ಮೊದಲ ತಲೆಮಾರಿನ ನಾಲ್ವರು ಚಿಂತಕರು ಮತ್ತು ಎರಡನೆ ತಲೆಮಾರಿಗೆ ಸೇರಿದ ಒಬ್ಬ ಚಿಂತಕರು ಹಾಗೂ ರಾಷ್ಟ್ರೀಯತೆ ಕುರಿತು ಆಧುನಿಕ ಚರ್ಚೆ ಹುಟ್ಟು ಹಾಕಿದ ಒಂದು ಸಂಘಟನೆಯನ್ನು ಪ್ರಾತಿನಿಧಿಕವಾಗಿಟ್ಟುಕೊಂಡು ಅಧ್ಯಯನ ಮಾಡಲಾಯಿತು. ಈ ಸಂದರ್ಭದಲ್ಲಿ, ಈ ಚಿಂತಕ ಮತ್ತು ಚಿಂತನೆಗಳನ್ನು ಸರಳೀಕರಿಸಿ ಏಕಮುಖವಾಗಿ ಗ್ರಹಿಸುವಂತಿಲ್ಲ. ಏಕೆಂದರೆ ಯಾವುದೇ ಚಿಂತನೆಗಳು ಹುಟ್ಟುವುದೇ ಬೇರೆ ಬೇರೆ ಚಾರಿತ್ರಿಕ ಒತ್ತಡದ ಫಲವಾಗಿ.

೨. ಕನ್ನಡದಲ್ಲಿ ನಡೆದಿರುವ ರಾಷ್ಟ್ರ-ರಾಷ್ಟ್ರೀಯತಾ ಚಿಂತನೆಗಳು ಪಶ್ಚಿಮದಂತೆ ಏಕಕೇಂದ್ರಿತವಲ್ಲ. ಬಂಡವಾಳವಾದದ ಜೊತೆಗೆ ಜನ್ಮ ತಳೆದ 'ರಾಷ್ಟ್ರ'ವೆಂಬ ಪರಿಕಲ್ಪನೆಯ ಸ್ತರವೊಂದು ಸಂಪೂರ್ಣ ಬದಲಾದ ಹಾಗೆ ಊಳಿಗಮಾನ್ಯತೆಯಿಂದ ಬಂಡವಾಳವಾದಕ್ಕೆ ನೆಗೆತಕಂಡಿತು. ಹಾಗಾಗಿ ಅಲ್ಲಿ ರೂಪುಗೊಂಡ ಚಾರಿತ್ರಿಕ ಸನ್ನಿವೇಶಗಳು, ಸಾಮಾಜಿಕ ಸಂಗತಿಗಳು ಭಿನ್ನವಾದ 'ರಾಷ್ಟ್ರ' ಪರಿಕಲ್ಪನೆಯ ಚರ್ಚೆಯನ್ನು ಹುಟ್ಟುಹಾಕಿದವು.

ಆದರೆ ಭಾರತದಂತಹ ಅರೆ ಊಳಿಗಮಾನ್ಯ, ಅರೆಬಂಡವಾಳವಾದಿ, ಅರೆ ವಸಾಹತುಶಾಹಿ ಅಂಶಗಳು ಮತ್ತು ಬಹುದೇವತೆ, ಬಹುಭಾಷೆ, ಬಹುಧರ್ಮ, ಅಸಂಖ್ಯ ಜಾತಿ, ಸ್ತ್ರೀ-ಪುರುಷ ತರತಮ ಇತ್ಯಾದಿ ಅತ್ಯಂತ ಸಂಕೀರ್ಣವಾದ ಬಹುಮುಖೀ ಆಯಾಮಗಳುಳ್ಳ ರಾಷ್ಟ್ರಕ್ಕೆ ಪಶ್ಚಿಮದ ಮಾದರಿಯ ರಾಷ್ಟ್ರಕಲ್ಪನೆ 'ಅಪ್ರಸ್ತುತ' ಎನ್ನುವ ಮಹಾ ಎಚ್ಚರದಿಂದಲೇ ಕನ್ನಡದ ಚಿಂತಕರು ಪರಿಕಲ್ಪನೆಗಳನ್ನು ರೂಪಿಸಿದ್ದಾರೆ. ಸಹಜವಾಗಿಯೆ ನಿರಂತರವಾಗಿ ಬದಲಾಗುತ್ತಿರುವ ಚಾರಿತ್ರಿಕ ಒತ್ತಡಗಳ ಪರಿಣಾಮವಾಗಿ ಅವರ ಚಿಂತನೆಗಳಲ್ಲೂ ಪರಿಳಿತಗಳಿವೆ. ಅವು ಅಸಹಜ ಚಲನೆಗಳೇನಲ್ಲ. ಸಹಜವಾಗಿ ಸಂಭವಿಸುವ ವೈರುಧ್ಯಗಳನ್ನು ಬಿಟ್ಟುಕೊಟ್ಟರೆ ಅಧ್ಯಯನ ಸರಳೀಕೃತವಾಗುತ್ತದೆ.

೩. ಕನ್ನಡದ ಚಿಂತನೆಗಳಲ್ಲಿ ಸಾಹಿತ್ಯಕ ರಾಜಕಾರಣವೊಂದು ತೀವ್ರವಾಗಿ ಕ್ರಿಯಾಶೀಲವಾಗಿದೆ. ಕೆಲವು ಪ್ರಕಾರ (genre)ಗಳ ಕುರಿತು ಅಪಾರ ನಿರ್ಲಕ್ಷ್ಯವನ್ನು, ತಿರಸ್ಕಾರ ಮನೋಭಾವವನ್ನು ವ್ಯಕ್ತಪಡಿಸಲಾಗಿದೆ ಎನ್ನಿಸುತ್ತದೆ. ಇದಕ್ಕೆ ಆರಂಭಿಕ ಕಾಲದಲ್ಲಿದ್ದ ಕನ್ನಡದ ಓದುಗವರ್ಗದ ಸಾಂಪ್ರದಾಯಿಕ ಮನೋಭಾವವೂ ಕಾರಣವಿರಬಹುದು. ಹಾಗಾಗಿ ಅನೇಕ ಮುಖ್ಯ ಚಿಂತಕರನ್ನು ತಮ್ಮ ನಿರ್ಲಕ್ಷ್ಯದ ಮೂಲಕವೇ ಹತ್ಯೆ ಮಾಡಲಾಗಿದೆ. ಒಬ್ಬನೇ ಚಿಂತಕನಲ್ಲಿ ಅಷ್ಟೊಂದು ಅಪಾಯಕಾರಿ ಸ್ವರೂಪವಿಲ್ಲದ ಕಥನ ಸಾಹಿತ್ಯ (ಬೇಕಾದ ಹಾಗೆ ವ್ಯಾಖ್ಯಾನ ಮಾಡುವ ಅಗಾಧತೆಯ ಕಾರಣಕ್ಕೆ)ವನ್ನು ಮುಂದುಮಾಡಿ, ಉಳಿದ ಪ್ರಕಾರಗಳನ್ನು ನಿರ್ಲಕ್ಷಿಸಲಾಗಿದೆ. ಆದರೆ ಕುವೆಂಪು, ಕಾರಂತರಂತಹ ಚಿಂತಕರು ಕಥನ ಸಾಹಿತ್ಯವನ್ನಷ್ಟೇ ಸೃಜಿಸಿದವರಲ್ಲ. ಆಧುನಿಕ ಅಗತ್ಯಗಳಿಗೆ ಬೇಕಾದ 'ಮಹಾಮಾನವನನ್ನು' ಜನರಲ್ಲಿ ನಿರ್ಮಿಸಲು ಅವರು ಪ್ರಯತ್ನಿಸಿದ್ದಾರೆ. ಉದಾಹರಣೆಗೆ, ವಿಜ್ಞಾನ, ತಂತ್ರಜ್ಞಾನ, ಖಗೋಳಶಾಸ್ತ್ರ, ಸಾಪೇಕ್ಷ ಸಿದ್ಧಾಂತ, ಅದ್ವೈತ, ಆಧ್ಯಾತ್ಮ ಸಮಾಜಶಾಸ್ತ್ರ, ಭಾಷೆ, ಚರಿತ್ರೆ, ಧರ್ಮ, ಕೀಟಗಳು, ಕಾಡುಗಳು, ನದಿಗಳು, ಪಕ್ಷಿಗಳು, ಪರಿಸರ, ಲಿಂಗ

ರಾಜಕೀಯ, ದೇವರು, ವಿಶ್ವಮಾನವತೆ, ಆಧುನಿಕರಾಜಕಾರಣ ಗುರುತಿಸುತ್ತಾ ಹೋದರೆ ಪಟ್ಟಿಗೆ ಕೊನೆಯಿರುವುದಿಲ್ಲ. ಅವರ ಚಿಂತನೆಗಳೆಲ್ಲ ಸಂಗ್ರಹಗೊಳ್ಳುತ್ತಿರುವ ಇವತ್ತಿನ ಸಂದರ್ಭದಲ್ಲಿ ಸಾವಿರಾರು ಪುಟಗಳ ಬೃಹತ್ ಸಂಪುಟಗಳೇ ದಂಗುಬಡಿಸುತ್ತವೆ. ಕುಲೀನ ವರ್ಗಗಳಿಂದ ಬಂದ ವಿಮರ್ಶಕರು ಮತ್ತು ಓದುಗವರ್ಗ ನಮ್ಮ ಚಿಂತಕರನ್ನು ಕುಬ್ಜಗೊಳಿಸಿಬಿಟ್ಟಿವೆ.

ಮೌಢ್ಯದ, ಪುರೋಹಿತಶಾಹಿಯ ಪುರೋಗಾಮಿತನವನ್ನು ರಚನಾತ್ಮಕವಾಗಿ ತಿರಸ್ಕರಿಸಿದ ಈ ಚಿಂತಕರನ್ನು ಓದುಗ ವರ್ಗದ ಸಂಕುಚಿತತೆಯ ಕಾರಣಕ್ಕಾಗಿ, ಕನ್ನಡ ವಿದ್ವತ್ ಲೋಕ ಸಾಕಷ್ಟನ್ನು ಕಳೆದುಕೊಂಡಿದೆ. ಯುರೋಪಿನ ಸಹನಶೀಲ ಗುಣದಿಂದಾಗಿ ಅಥವಾ ಟೀಕೆಯನ್ನು ಸಹಿಸುವ ಗುಣದಿಂದ ಸಾಕ್ರಟೀಸ್ (ಪ್ರಭುತ್ವ ಕೊಂದರೂ ಕೂಡ) ಜಾನ್ಸನ್, ರಸ್ಕಿನ್, ಕಾರ್ಲ್‌ಮಾರ್ಕ್ಸ್, ಸಾರ್ತ್ರ್, ಥೊರೋ ಮತ್ತು ಅಸಂಖ್ಯಾತ ಚಿಂತಕರು ಬೆಳೆಯಲು ಸಾಧ್ಯವಾಯಿತು. ಆದರೆ ಅಷ್ಟೇ ದೊಡ್ಡ ಶಕ್ತಿಯಿರುವ ಶಂಬಾ, ಕುವೆಂಪು, ಕಾರಂತ, ಹರ್ಡೇಕರ್ ಮಂಜಪ್ಪ, ಪಂಡಿತ ತಾರಾನಾಥ, ಶಂಕರಮೊಕಾಶಿ ಪುಣೇಕರ ಮುಂತಾದ ಚಿಂತಕರು ಏಕಾಂಗಿಗಳಾಗಿಬಿಟ್ಟರು ಎನ್ನುವುದು ಈ ಅಧ್ಯಯನದ ಸಂದರ್ಭದಲ್ಲಿ ಅರಿವಾಗಿದೆ.

೪. ಮೇಲಿನ ವಿವರ ಆಕೃತಿಗೆ ಸಂಬಂಧಪಟ್ಟುದಾದರೆ ವಸ್ತುವಿಗೆ ಸಂಬಂಧಪಟ್ಟಂತೆ ಸಹ ಇದೇ ರೀತಿಯ ಅಸಡ್ಡೆ ವ್ಯಕ್ತವಾಗಿದೆ. ಸಾಹಿತ್ಯವನ್ನು ನೈತಿಕ ಮೌಲ್ಯಗಳ ದೃಷ್ಟಿಯಿಂದ ಪರಿಭಾವಿಸುವ, ಮನರಂಜನೆಗಾಗಿ ಹುಟ್ಟಿದ್ದೆಂದು ಗ್ರಹಿಸುವ ಲಘು ಮನೋಭಾವ ಇವತ್ತಿಗೂ ಬದಲಾಗಿಲ್ಲ. ಆದರೆ ಸಾಹಿತ್ಯ ಚಿಂತನೆಗಳ ಗಹನತೆಯನ್ನು ಅವಲೋಕಿಸಿದರೆ, ಅವು ನಾಡು-ನುಡಿ ಕಟ್ಟುವಲ್ಲಿ ವ್ಯಕ್ತಗೊಂಡಿರುವ ರೂಪವೇ ಅನ್ಯಾದೃಶವಾದುದು. ಅನುಭವಗಳ ಧಾರೆ ಕತೆ, ಕಾದಂಬರಿ, ಕಾವ್ಯಗಳಲ್ಲಿ ರೂಪುತಳೆದು ರಾಷ್ಟ್ರೀಯತೆಯ ಕಲ್ಪನೆ ಸಂಕೀರ್ಣವಾಗಿ, ಜಟಿಲವಾಗಿ ರಾಜಕೀಯ ತತ್ತ್ವಜ್ಞಾನ ವ್ಯಕ್ತವಾಗಿದೆ. ಇದು ರಾಜಕೀಯ ಸಿದ್ಧಾಂತಿಗಳ, ತತ್ತ್ವಜ್ಞರ ರಾಜಕೀಯ ಪಠ್ಯಗಳಿಗಿಂತ ಭಿನ್ನವಾದುವುಗಳು. ಆದರೆ ಕನ್ನಡದ ವಿದ್ವತ್ ಲೋಕ ಹೀಗೆ ಪರಿಭಾವಿಸದಿರುವುದು ಸಹ ಅಪಾರ ಅಂಗವೈಕಲ್ಯಕ್ಕೆ ಕಾರಣವಾಗಿದೆ ಎಂದು ತಿಳಿಯುತ್ತದೆ.

೫. ಕನ್ನಡದ ಚಿಂತನಾ ಪರಂಪರೆಗೆ ಇನ್ನೊಂದು ದೊಡ್ಡ ತಡೆ 'ನವ್ಯ ಸಾಹಿತ್ಯ ಚಳವಳಿ'ಯ ಕಾವ್ಯನಿಷ್ಠ ರೂಪನಿಷ್ಠ, 'ಶೈಲಿನಿಷ್ಠ' ನಿಷ್ಠತೆಗಳಿಂದ ಉಂಟಾಯಿತೆಂದು ಅನ್ನಿಸುತ್ತದೆ. ನವ್ಯರಲ್ಲಿ ಚಿಂತನೆಗಳೇ ಇರಲಿಲ್ಲವೆಂದಲ್ಲ, ಆದರೆ ವಸಾಹತುಶಾಹಿ ಸಂದರ್ಭದಲ್ಲಿ ಬದುಕುಕಟ್ಟುವ, ರಾಷ್ಟ್ರಕಟ್ಟುವ ಬಿಕ್ಕಟ್ಟುಗಳನ್ನು ನವ್ಯರು ಎದುರಿಸಲಿಲ್ಲ. ಅವರಲ್ಲಿ 'ಪಿತೃ ಹತ್ಯೆ'ಯ ಮೂಲಕವೇ ಹೊಸದನ್ನು ಸೃಷ್ಟಿಸಬೇಕೆಂಬ ವ್ಯಕ್ತಿವಾದಿ ಚಿಂತನೆಗಳು ಪ್ರಧಾನವಾದುವು. ಹಿಂದಿನ ಸಮುದಾಯಕೇಂದ್ರಿತ ಚಿಂತನೆಗಳ 'ಅಜೆಂಡಾ', ನವ್ಯರಿಂದ ಗೇಲಿಗೊಳಗಾದಂತೆ ಕಾಣಿಸುತ್ತದೆ. ಆದರೆ ಲಂಕೇಶ್, ತೇಜಸ್ವಿ, ಅನಂತಮೂರ್ತಿ ಮುಂತಾದವರು ತಮ್ಮ ಮಾಗಿದ ದಿನಗಳಲ್ಲಿ ತಮ್ಮ ಪೂರ್ವ ಸೂರಿಗಳ ಸಮುದಾಯ ಕೇಂದ್ರಿತ ಚಿಂತನಾ ಪರಂಪರೆಗೆ ವಾರಸುದಾರರಾಗಲು ಪ್ರಯತ್ನಪಟ್ಟರು. ನವ್ಯದವರ ಪರಂಪರೆಯನ್ನು ಕುರಿತ ತಿರಸ್ಕಾರ, ಪ್ರತಿಮಾಲೋಕದ ಅತಿ ಆರಾಧನೆಯ ಗದ್ದಲ ಇತ್ಯಾದಿಗಳನ್ನು ವಿರೋಧಿಸಿದ ಬೇಂದ್ರೆಯವರೂ ಅಂತಿಮವಾಗಿ ಪ್ರತಿಮಾ ಲೋಕದ ಕಡೆಗೇ ನಡೆದರು. ಶಂಬಾ ಜೋಶಿಯವರು ಸಹ ಸಮುದಾಯಗಳನ್ನು ಕುರಿತ ಸಂಶೋಧನೆಗೂ ಸಂಕೇತಶಾಸ್ತ್ರದ

ಜೊತೆಗೆ ಇದೇ ಮಾದರಿಯನ್ನು ಬಳಸಿದರು. ಹಾಗಾಗಿ ಕನ್ನಡದ ಸಮುದಾಯ ಕೇಂದ್ರಿತ ಚಿಂತನೆಗಳ ಚಾರಿತ್ರಿಕ ನಿರಂತರತೆಗೆ ಬಿದ್ದ ತಡೆಯ ದುರಂತಗಳು ಈ ಅಧ್ಯಯನದ ಸಂದರ್ಭದಲ್ಲಿ ಅರಿವಿಗೆ ಬಂದಿವೆ.

೬. ಕನ್ನಡದ ಚಿಂತಕರುಗಳೆಲ್ಲ ಮಹಾಕನಸುಗಾರರು. ಎಲ್ಲರೂ ತಮ್ಮ ತಮ್ಮ ವ್ಯಾಪ್ತಿಯಲ್ಲಿಯೆ ಆದರ್ಶ ಸಮಾಜವ, ರಾಷ್ಟ್ರದ ಕುರಿತು ಕನಸುತ್ತಾರೆ ಮತ್ತು ಚರಿತ್ರೆಯ ವಿಶ್ಲೇಷಣೆ ಮಾಡುತ್ತಾರೆ. ಅಲ್ಲಿಂದ ಬೇಕಾದ್ದನ್ನು ಆರಿಸಿ ತಮಗೆ ಬೇಕಾದ ಹಾಗೆ ಕಟ್ಟಿ ವರ್ತಮಾನವನ್ನು ವಿಶ್ಲೇಷಿಸುತ್ತಾರೆ. ನಾಳಿನ ಸಮಾಜ ಹೀಗಿರಬೇಕು ಎಂದು ತಮ್ಮ ಕೃತಿ ಚಿಂತನೆಗಳಲ್ಲಿ ಅಘೋಷಿತ ಪ್ರಣಾಳಿಕೆಯೊಂದನ್ನು ಮಂಡಿಸುತ್ತಾರೆ. ಆಲೂರರು 'ವಿಕಾಸ'ದ ಪರಿಭಾಷೆಯಲ್ಲಿ ರಾಷ್ಟ್ರವನ್ನು ಪರಿಭಾವಿಸುತ್ತಾರೆ. ಬಿ.ಎಂ.ಶ್ರೀ ಕನ್ನಡ ಮಾತು ತಲೆಯೆತ್ತುವ ಬಗೆ ಹೇಗೆ? ಅದನ್ನು ಕಟ್ಟುವುದು ಹೇಗೆ? ಎಂದು ಚಿಂತಿಸುತ್ತಾರೆ. ಕುವೆಂಪುರಲ್ಲಿಯಂತೂ 'ಆಗುವಿಕೆ' ಎನ್ನುವ ಪದ ಅಸಂಖ್ಯಾತ ಸಾರಿ ಬಳಕೆಯಾಗುತ್ತದೆ. 'ಆಗು ಆಗು ಆಗು' ಎನ್ನುವುದು ಒಂದು ಪ್ರಕ್ರಿಯೆಯನ್ನು ಸೂಚಿಸುವ ಕ್ರಿಯಾಪದ ಅದು. ಬಹಳ ಸ್ಪಷ್ಟವಾಗಿ "ನಾನಳಿವೆ, ನೀನಳಿವೆ, ನಮ್ಮೆಲುವುಗಳ ಮೇಲೆ ಮೂಡುತಿದೆ ನವಭಾರತ ಲೀಲೆ" ಎನ್ನುವಲ್ಲಿ ಅವರ ಭವಿಷತ್ತಿನ ಕಲ್ಪನೆ ಕಾಣುತ್ತದೆ. ಇಲ್ಲಿನ 'ನವ ಭಾರತ ಲೀಲೆ'ಯನ್ನು 'ನವ ಕರ್ನಾಟಕ ಲೀಲೆ' ಎಂದೂ ಓದಿಕೊಳ್ಳಬಹುದು. ಮನುಷ್ಯನಾಗಿ ಗೊತ್ತು 'ನಾನಳಿಯುತ್ತೇನೆ' ಎಂದು. ಆದರೆ ಕಟ್ಟುವ ಚಿಂತನೆಗಳು ಭವಿಷ್ಯದ ಜನಾಂಗ ಸುಖವಾಗಿರಲಿ, ನಾಳಿನ ಕರ್ನಾಟಕ, ಭಾರತಗಳಷ್ಟೇ ಅಲ್ಲ ವಿಶ್ವದ ಜನ ಸಮುದಾಯ ಕೂಡ ನೆಮ್ಮದಿಯಾಗಿರಲಿ ಎನ್ನುವ ಕನಸು ಅದು. ಕರ್ನಾಟಕ ವಿಮೋಚನಾರಂಗವು ಕೂಡ ವಿಮೋಚನೆ ಕುರಿತು ಮಾತನಾಡುತ್ತದೆ. ಆದರೆ, ಚಿದಾನಂದ ಮೂರ್ತಿಯವರು ಮಾತ್ರ 'ಸಂಸ್ಕೃತಿ ನಮ್ಮ ಹೆಮ್ಮೆ ಎನ್ನುವ ಅತಿ ಅಭಿಮಾನಕ್ಕೆ ಸಿಲುಕುತ್ತಾರೆ. ಅಷ್ಟೇ ಅಲ್ಲದೆ 'ಗತ'ಮುಖಿಯಾಗುತ್ತಾರೆ. ಇಲ್ಲಿನ ನಿಲುವುಗಳೇ ಅವರು ಯಾವ ರಾಷ್ಟ್ರವನ್ನು ಕನಸುತ್ತಿದ್ದಾರೆ ಎನ್ನುವುದನ್ನು ಸೂಚಿಸುತ್ತದೆ.

ಮೇಲಿನ ಫಲಿತಗಳ ಜೊತೆಗೆ, ಮನುಷ್ಯ ಕುಲವನ್ನು ಮುನ್ನಡೆಸುತ್ತಿರುವ ಮುಖ್ಯ ಪರಿಕಲ್ಪನೆಗಳಾದ ಧರ್ಮ, ಸಂಸ್ಕೃತಿ, ಚರಿತ್ರೆ, ಭಾಷೆ, ಭೂಪ್ರದೇಶ-ಗಡಿ ಚಿಂತನೆಗಳನ್ನು ಅಧ್ಯಯನ ಮಾಡುವಾಗ ದಕ್ಕಿದ ಒಳನೋಟಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗುವುದು.

೭. 'ಧರ್ಮ' - ಇವತ್ತಿನ ಸಂಘರ್ಷಗಳನ್ನು ಪರಿಭಾವಿಸಿಕೊಂಡು ಕನ್ನಡದ ಚಿಂತಕರು ಹೇಗೆ ಗ್ರಹಿಸುತ್ತಾರೆ ಎನ್ನುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಪರಿಶೀಲಿಸಲಾಗಿದೆ. ಜಾತ್ಯತೀತ ಸಮಾಜ ಮತ್ತು 'ದಾಸನೀಶನಾಗುವ' ಪ್ರಜೆಯೆ ಪ್ರಭುವಾಗುವ ವಿಚಿತ್ರ ಪಲ್ಲಟಗಳ ಸ್ಥಿತಿಯಲ್ಲಿ ನಮ್ಮ ಚಿಂತಕರು ಧರ್ಮವನ್ನು ಕುರಿತು ಚಿಂತನೆ ನಡೆಸಿದ್ದಾರೆ. ಹೊಸ ಕಾಲದ ಅಗತ್ಯಕ್ಕೆ ತಕ್ಕುದಾದ ರೀತಿಯಲ್ಲಿ ಪರಂಪರೆಯಲ್ಲಿನ ಧರ್ಮ ಪರಿಕಲ್ಪನೆಯನ್ನು ತಮ್ಮ ವಿಭಿನ್ನ ನಿಲುವುಗಳಲ್ಲಿ ಮಂಡಿಸುತ್ತಾರೆ. ಅದಕ್ಕೆ ತಮ್ಮ ಹಿನ್ನೆಲೆಗಳೂ ಮತ್ತು ಚಾರಿತ್ರಿಕ ಒತ್ತಡಗಳೂ ಕಾರಣವಾಗಿವೆ ಎಂದು ಭಾವಿಸಬಹುದು. ಮೊದಲ ತಲೆಮಾರಿನ ಚಿಂತಕರಲ್ಲಿ 'ಧರ್ಮ'ವು ಸರ್ವ ಜನರ ಏಳಿಗೆಗೆ ಪೂರಕವಾಗಬೇಕೆಂಬ ಬಯಕೆಯಿದೆ. 'ಎದೆಯದನಿಗೂ ಮಿಗಿಲು ಶಾಸ್ತ್ರ ವಿದೆಯೇನು?' ಎಂದು

ಪ್ರಶ್ನಿಸುವಾಗ ಅದು ಮನುಷ್ಯಧರ್ಮವಾಗಬೇಕು. ಹಳೆಯ ಕಾಲದ ತರತಮಗಳನ್ನು, ಜಡತೆಯನ್ನು ನಿರಾಕರಿಸಬೇಕು, ಹೊಸ ಕಾಲಕ್ಕೆ ಅದು ತಲೆಬಾಗಬೇಕು ಎನ್ನುವ ನಿಲುವು ಇಲ್ಲಿ ಕಾಣಿಸುತ್ತದೆ. ಇಲ್ಲಿ ಅನ್ಯಧರ್ಮಗಳ ಕುರಿತಾದ 'ಸಹನೆ' ದೊಡ್ಡ ಮಟ್ಟದಲ್ಲಿ ಗೋಚರಿಸುತ್ತದೆ. ದೇಶ ವಿಭಜನೆಯಂಥ ಮತೀಯ ಸಂಘರ್ಷದ ಹೊತ್ತಿನಲ್ಲೂ ಇಲ್ಲಿನ ಬಹುಪಾಲು ಚಿಂತಕರು ತಮ್ಮ ಮಾನಸಿಕ ಸ್ಥಿಮಿತವನ್ನು ಕಳೆದುಕೊಳ್ಳದೆ, ಸಾಮರಸ್ಯವಾದಿ, ಸಂಕರಶೀಲತೆಯ ಸ್ವರೂಪವನ್ನು ಪ್ರತಿಪಾದಿಸುತ್ತಾರೆ. ಕೆಲವು ಚಿಂತಕರು ಅನ್ಯಧರ್ಮಗಳು ರಾಷ್ಟ್ರಕ್ಕೆ ತೊಡಕು ಎಂತಲೂ, ಆತಂಕಕಾರಿ ಎಂಬಂತೆಯೂ ಪ್ರತಿಪಾದಿಸಿದ್ದಾರೆ. ಆದರೆ ಪ್ರಧಾನಧಾರೆಯ ಚಿಂತಕರು ಮಾತ್ರ ಧಾರ್ಮಿಕ ಬಹುತ್ವವನ್ನು ಪ್ರತಿಪಾದಿಸುತ್ತಾರೆ. ಆಧುನಿಕ ರಾಷ್ಟ್ರವೊಂದು ಅನ್ಯರನ್ನು ಹೇಗೆ ಪರಿಭಾವಿಸುತ್ತದೆ ಎನ್ನುವ ಆಧಾರದ ಮೇಲೆ ಅದರ 'ಕಲ್ಯಾಣ ಗುಣ' ಅರ್ಥವಾಗುತ್ತದೆ ಎಂದು ಭಾವಿಸಿದ್ದಾರೆ. ಆಶ್ಚರ್ಯವೆಂದರೆ ಬಹುಪಾಲು ಕನ್ನಡ ಚಿಂತಕರು 'ಪ್ರಧಾನ ಧರ್ಮಗಳನ್ನು ಮಾತ್ರ ಧರ್ಮ' ಎನ್ನುವ ಪಶ್ಚಿಮದ ಚಿಂತನೆಗಳನ್ನು ಒಪ್ಪಿ ಚಿಂತನೆ ನಡೆಸುತ್ತಾರೆ. ಹಾಗಾಗಿ ಜನಸಮುದಾಯಗಳ ಆಚರಣೆಗಳ ಕುರಿತು ದಿವ್ಯ ನಿರ್ಲಕ್ಷ್ಯವಹಿಸುತ್ತಾರೆ. ಕೆಲವೊಮ್ಮೆ ಜನಸಮುದಾಯಗಳ ಆಚರಣಾಲೋಕವನ್ನು ಕುತೂಹಲದಿಂದ ನೋಡುತ್ತಿದ್ದರೂ, ಅವುಗಳನ್ನು ಪ್ರಧಾನ ಧರ್ಮದ ಪೆಟ್ಟಿಗೆಯಲ್ಲಿ ಕೂರಿಸುವ ಪ್ರಯತ್ನ ಮಾಡಲಾಗಿದೆ. ಆದರೆ ಶತಮಾನದ ಕಡೆಯ ದಶಕದಲ್ಲಿ ಹುಟ್ಟಿದ ಚಿಂತನ ಧಾರೆಯೊಂದು ಭಾರತದಲ್ಲಿ ಅಸಂಖ್ಯಾತ ಧರ್ಮಗಳಿವೆ, ಅವುಗಳ ಅಸ್ತಿತ್ವದ ಪ್ರತಿಪಾದನೆಯೆ ಕೋಮುವಾದದಂತಹ 'ದುಷ್ಟ' ವ್ಯಾಖ್ಯಾನಗಳಿಗೆ ಉತ್ತರ ಎಂದು ಭಾವಿಸುತ್ತದೆ. 'ಆಧ್ಯಾತ್ಮಿಕ', 'ಸಂಕರಶೀಲ', 'ಆತಂಕಿತ', 'ಪರ್ಯಾಯವಾದ'ಗಳ ಧಾರ್ಮಿಕ ಆಯಾಮಗಳಿಂದಾಗಿ, ರಾಷ್ಟ್ರೀಯತಾ ಚಿಂತನೆಯಲ್ಲಿ ಧರ್ಮವು ಬಹುರೂಪಿಯಾಗಿ ವ್ಯಾಖ್ಯಾನಗೊಳ್ಳುತ್ತಿದೆ ಎನ್ನುವುದನ್ನು ಅಧ್ಯಯನದುದ್ದಕ್ಕೂ ಕಾಣಲಾಯಿತು.

೮. ಚರಿತ್ರೆ, ಸೃಜನಶೀಲ ಚಿಂತಕರನ್ನು, ಚಳುವಳಿಗಾರರನ್ನು, ಚಳುವಳಿಯನ್ನು ಸಂಶೋಧಕರನ್ನು ಒಳಗೊಂಡ ಈ ಅಧ್ಯಯನದಲ್ಲಿ ಚರಿತ್ರೆಗೆ ಬಹಳ ಹಿಂದೆಯೆ 'ವಿಶ್ವ ಒಪ್ಪುವ ವ್ಯಾಖ್ಯಾನ' ಕೊಡಲು ಕನ್ನಡ ಚಿಂತಕರು ಪ್ರಯತ್ನಿಸಿದ್ದಾರೆ. ಚರಿತ್ರೆ ಎನ್ನುವುದು ಪಠ್ಯಪುಸ್ತಕಗಳ ಮಾದರಿಯದ್ದಲ್ಲ. ಗತ ಘಟನೆಗಳನ್ನು ಕ್ರಮಬದ್ಧವಾಗಿ ಜೋಡಿಸುವುದು ಇತಿಹಾಸವಲ್ಲ. ಬದಲಿಗೆ ಎಲ್ಲ ಸಂರಚನೆಗಳಿಗೂ, ಜ್ಞಾನಸ್ವರೂಪಗಳೂ ಚರಿತ್ರೆಯನ್ನು ಹೊಂದಿವೆ. ಮತ್ತು ವರ್ತಮಾನದ ತಲ್ಲಣಗಳಿಗೆ ಒದಗದಿದ್ದರೆ ಅದು ಇತಿಹಾಸವೇ ಅಲ್ಲ ಎನ್ನುವ ಸೈದ್ಧಾಂತಿಕ ಮಟ್ಟದಲ್ಲಿ ಕನ್ನಡದ ದೊಡ್ಡ ಚಿಂತಕರು ಚಿಂತಿಸಿದ್ದಾರೆ. ಜೊತೆಗೆ ಪುರಾಣ ಮತ್ತು ಚರಿತ್ರೆಯನ್ನು ಬೇರ್ಪಡಿಸದೆ ಅವೆರಡನ್ನೂ ಏಕೀಭವಿಸಿ 'ಅಖಂಡದರ್ಶನ'ವೆಂದು ಪರಿಭಾವಿಸಿ ನೋಡಲಾಗಿದೆ. ಚರಿತ್ರೆ ಎನ್ನುವುದು ಪ್ರಭುತ್ವಗಳ ಕಥನ ಎಂಬ ಮತೀಯವಾದಿ, ಅನುಕ್ರಮಣಿಕೆ ಮಾದರಿಯ ವಸಾಹತುವಾದಿ ಚಿಂತನೆಯ ಜೊತೆಗೆ ಚರಿತ್ರೆಯನ್ನು 'ಜನತೆಯೇ ನಿರ್ಮಿಸುತ್ತಾರೆ' ಎನ್ನುವ ಎಡಪಂಥೀಯ ಚಿಂತನೆಗಳು ಕನ್ನಡದಲ್ಲಿ ಒಟ್ಟಿಗೆ ಕ್ರಿಯಾಶೀಲವಾಗಿವೆ. ಜನ ಸಮುದಾಯಗಳ ಚಲನೆಯ ಮೂಲಕವೇ ರಾಷ್ಟ್ರದ ಚರಿತ್ರೆ ಕಟ್ಟುವ ಕಾರ್ಯದಲ್ಲಿ ತೊಡಗುವ ಸಂಶೋಧನೆಯೂ ಜೊತೆ ಜೊತೆಯಲ್ಲಿಯೇ ಕ್ರಿಯಾಶೀಲವಾಗಿವೆ. ಇವುಗಳ ಜೊತೆಗೆ 'ರಾಜ'ನನ್ನು ಉಳಿಸಿಕೊಂಡು ಇಂಗ್ಲೆಂಡ್ ಮಾದರಿಯ ಫೆಡರಲ್ ಆದ ಪ್ರಜಾಪ್ರಭುತ್ವವಾದಿ

ರಾಷ್ಟ್ರ ನಿರ್ಮಿಸುವ ಆಶಯ ಹೊತ್ತ ಚಿಂತನೆಯೂ ಇದೆ. ಹೊಸ ವ್ಯವಸ್ಥೆಗೆ ಅನುಗುಣವಾದ ಹೊಸ ವ್ಯವಸ್ಥೆ ನಿರ್ಮಿಸುವ, ಜನಪರ ಆಶಯಗಳುಳ್ಳ, ಚರಿತ್ರೆಯಲ್ಲಿ, ಪುರಾಣಗಳಲ್ಲಿ ನಿರ್ಲಕ್ಷ್ಯಕ್ಕೊಳಗಾಗಿರುವ ದಮನಿತ ಪರವಾದ ಇತಿಹಾಸದ ಅನುಸಂಧಾನವೊಂದು ಕಡೆ ನಡೆಯುತ್ತಿರುತ್ತದೆ. ಏಕಕಾಲಕ್ಕೆ ಶೂದ್ರವಾದಿ, ಪ್ರಜಾಪ್ರಭುತ್ವವಾದಿ, ಮತೀಯವಾದಿ, ಪುರಾಣವಾದಿ, ಎಡಪಂಥೀಯ, ಜನಕೇಂದ್ರಿತ, ವಸಾಹತುವಾದಿ ಚರಿತ್ರೆಯ ವ್ಯಾಖ್ಯಾನಗಳೆಲ್ಲ ಕನ್ನಡದ ಈ ಆರು ಚಿಂತನಧಾರೆಗಳಲ್ಲಿ ಹರಿಯುತ್ತಿವೆ.

೯. ಭಾಷೆ -ಆಶ್ಚರ್ಯವೆನಿಸುವಷ್ಟರ ಮಟ್ಟಿಗೆ ಕನ್ನಡದ ಈ ಆರೂ ಚಿಂತನಧಾರೆಗಳು ಕನ್ನಡಪರವಾಗಿವೆ. ಆದರೆ ಅಧಿಕಾರಸ್ಥ ಭಾಷೆಯನ್ನು ಕುರಿತಂತೆ ಮಾಡುವ ವ್ಯಾಖ್ಯಾನ ಮಾತ್ರ ಬದಲಾಗುತ್ತಿರುತ್ತದೆ. ಕೆಲವರಿಗೆ 'ಇಂಗ್ಲಿಷ್' ಅಧಿಕಾರಸ್ಥ ಭಾಷೆಯಾಗಿ ಕಾಣುತ್ತದೆ. ಕೆಲವರು ಅದು ಕನ್ನಡ ಕಟ್ಟಲು ಪೂರಕವೆಂಬಂತೆ ನೋಡುತ್ತಾರೆ. 'ಸಂಸ್ಕೃತ'ವು ಪ್ರಾಚೀನ ವಿದ್ವಾಂಸರ ಭಾಷೆಯಾಗಿದ್ದರಿಂದ ಅದನ್ನು ನಿರ್ಲಕ್ಷಿಸುವಂತಿಲ್ಲವೆಂದು ಕೆಲವರು ಪ್ರತಿಪಾದಿಸುತ್ತಾರೆ. ಇನ್ನೂ ಕೆಲವರಿಗೆ ಹಿಂದಿಯ ಹೇರಿಕೆ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಸಾಮ್ರಾಜ್ಯಶಾಹಿ ಮನೋಭಾವದಂತೆ ಕಾಣಿಸುತ್ತದೆ. ಸಂಪರ್ಕ ಭಾಷೆಯಾಗಿ 'ಇಂಗ್ಲಿಷ್' ಇರಲಿ ಎನ್ನುವ ಬಹುತೇಕರು ಅದು ಹೇರಿಕೆಯಾಗಬಾರದು, ಜನ ಭಾಷೆಗಳ ಕುತ್ತಿಗೆ ಹಿಚುಕುವಂತಾಗಬಾರದು ಎನ್ನುತ್ತಾರೆ. ಹಿಂದಿಯನ್ನು ಬಹುತೇಕರು ವಿರೋಧಿಸುತ್ತಾರೆ. ಕುತೂಹಲವೆಂದರೆ ರಾಷ್ಟ್ರವೊಂದರ ಏಕರೂಪಿತನಕ್ಕೆ ಅಗತ್ಯವಾದ 'ಪ್ರಮಾಣೀಕೃತ ಭಾಷೆ'ಯ ಅಗತ್ಯವನ್ನು ಬಹುತೇಕರು ಪ್ರಸ್ತಾಪಿಸುತ್ತಾರೆ. ಕರ್ನಾಟಕದ ಒಳಗೇ ಇರುವ ಇನ್ನಿತರೆ ಮಾತೃಭಾಷಿಕರ ತುಷ್ಟಿ-ಪುಷ್ಟಿಯನ್ನು ಕೆಲವರು ಪ್ರತಿಪಾದಿಸುತ್ತಾರೆ. ಕೆಲವರು ಆ ವಿಚಾರವನ್ನೇ ಮರೆತು, ನಿರ್ಲಕ್ಷಿಸುತ್ತಾರೆ, ಇನ್ನೂ ಕೆಲವರು ಅಸಹನೆಯಿಂದ ನೋಡುತ್ತಾರೆ. ಜನಭಾಷೆಗಳ ಮೂಲಕವೇ ತಮ್ಮ ಸೈದ್ಧಾಂತಿಕ ಚೌಕಟ್ಟನ್ನು ರೂಪಿಸಲೆತ್ನಿಸುವವರು ಅಧಿಕಾರಸ್ಥ ಭಾಷೆಯಾದ ಸಂಸ್ಕೃತ ಮತ್ತು ಹಿಂದುಸ್ತಾನಿಗಳು ತನ್ನಿಂದ ಪದಗಳನ್ನು ಸ್ವೀಕರಿಸಿವೆ. ಹಾಗಾಗಿ ನನ್ನ ಭಾಷೆ ನಿನಗಿಂತ ಕಡಿಮೆಯಲ್ಲ ಎನ್ನುವ ಸ್ವಾಭಿಮಾನ ಮೆರೆಯುತ್ತಾರೆ. ನೆರೆ ಭಾಷೆಗಳ ಕುರಿತಂತೆ ಕೆಲವು ಚಿಂತಕರು ಅಸಹನೆ ವ್ಯಕ್ತಪಡಿಸುತ್ತಾರೆ. ಕೆಲವರಿಗೆ ಮರಾಠಿ ಆಕ್ರಮಣಕಾರಿಭಾಷೆಯಾಗಿ ಕಂಡರೆ, ಕೆಲವರು ತಮಿಳನ್ನು, ಉರ್ದುವನ್ನು ಆಕ್ರಮಣಕಾರಿಗಳ ಸ್ಥಾನದಲ್ಲಿಟ್ಟು ವ್ಯಾಖ್ಯಾನಿಸುತ್ತಾರೆ. ಆದರೆ ನೆರೆ ಭಾಷಿಕರೂ ನಮ್ಮಂತೆಯೆ ಅಧಿಕಾರಸ್ಥ ಭಾಷಾ ರಾಜಕಾರಣದಲ್ಲಿ ಶೋಷಿತರೆ, ಹಾಗಾಗಿ ಶೋಷಿತರು ಸಮಾನ ವೇದಿಕೆಯಲ್ಲಿರುವುದರಿಂದ ಶತ್ರುಗಳಾಗಿ ನೋಡದೆ, ಸಾಮ್ರಾಜ್ಯಶಾಹಿ ವಿರುದ್ಧ ಹೋರಾಟ ಕಟ್ಟಬೇಕು ಎನ್ನುವ ನಿಲುವಿನವರೆಗೆ ಚಿಂತನೆಗಳು ನಡೆದಿವೆ. ತಾವು ಬದುಕುತ್ತಿರುವ ಪ್ರದೇಶ, ತನ್ನ ಸಿದ್ಧಾಂತ, ಹಿತಾಸಕ್ತಿ ಇತ್ಯಾದಿಗಳೆಲ್ಲವೂ ಸಂಕೀರ್ಣ ರೂಪದಲ್ಲಿ ವ್ಯಕ್ತಗೊಂಡು ಭಾಷಾ ಚಿಂತನೆಗಳು ರೂಪುಗೊಂಡಿವೆ. ಇದು ರಾಷ್ಟ್ರೀಯತೆಯ ದೃಷ್ಟಿಯಿಂದ ಅತ್ಯಂತ ಮುಖ್ಯವಾದ ಬಹುತ್ವವಾದಿ ಆಯಾಮ ಎನ್ನುವುದು ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಹೊಳೆದ ಸಂಗತಿಯಾಗಿದೆ.

೧೦. ಸಂಸ್ಕೃತಿ 'ರಾಷ್ಟ್ರೀಯತೆ' ಎನ್ನುವ ಪರಿಕಲ್ಪನೆ ಆರ್ಥಿಕ ರಾಜಕೀಯ ನೆಲೆಗಟ್ಟಿನ ಮೇಲೆ ಅಷ್ಟೇ ಅಲ್ಲದೆ, ಸಾಂಸ್ಕೃತಿಕತೆಯ ಆಧಾರದ ಮೇಲೆ ಕೂಡ ನಿರ್ವಚನೆಗೊಳ್ಳುತ್ತದೆ. ಮೊದಲನೆಯದಕ್ಕಿಂತ ಮುಖ್ಯವಾಗಿ, ಎರಡನೆಯ ವ್ಯಾಖ್ಯಾನವು ಭಾರತದಂತಹ ಬಹುತ್ವವುಳ್ಳ ರಾಷ್ಟ್ರಗಳಲ್ಲಿ

ಕ್ರಿಯಾಶೀಲವಾಗಿರುತ್ತದೆ. ಸ್ವಭಾವದಲ್ಲಿ ಎಷ್ಟೇ ಉದಾರಿಯಾಗಿದ್ದರೂ, ಥಟ್ಟನೆ ಬಲಪಂಥೀಯರ ತಟ್ಟೆಗೆ ಹೋಗಿ ಕೂತುಬಿಡುವ ಸ್ವರೂಪವೂ ಇದಕ್ಕಿದೆ. ಕನ್ನಡದಲ್ಲಿ ಕಡೆಯ ಚಿಂತನಧಾರೆಯನ್ನು ಬಿಟ್ಟರೆ ಉಳಿದೆಲ್ಲವೂ ಸಾಂಸ್ಕೃತಿಕ ನಡೆವಳಿ-ನುಡಿವಳಿಗಳ ಆಧಾರದ ಮೇಲೆ ರಾಷ್ಟ್ರವನ್ನು ಪರಿಗ್ರಹಿಸಲು ಪ್ರಯತ್ನಿಸುತ್ತವೆ. ಸಾಂಸ್ಕೃತಿಕ ರಾಷ್ಟ್ರೀಯತೆ ಎಂದ ಕೂಡಲೆ 'ಹಿಂದೂ ರಾಷ್ಟ್ರೀಯತೆ' 'ಅಖಂಡ ರಾಷ್ಟ್ರೀಯತೆ' ಎಂದು ಥಟ್ಟನೆ ಪ್ರಜ್ಞೆಗೆ ದಕ್ಕುವಂತಾಗಿರುವ ಇಂದಿನ ಸಂಕುಚಿತ ರಾಜಕಾರಣದ ಮಧ್ಯೆ ಕನ್ನಡ ಚಿಂತಕರು 'ಸ್ವ'ದ ನೆಲೆಯಿಂದ ನೋಡಲು ಪ್ರಯತ್ನಿಸುತ್ತಾರೆ. 'ಕನ್ನಡ ಸಂಸ್ಕೃತಿ', 'ಕರ್ನಾಟಕ ಸಂಸ್ಕೃತಿ' ಎನ್ನುವುದೊಂದಿದೆ ಎನ್ನುವುದನ್ನು ನಮ್ಮ ಚಿಂತಕರು ನಿರಾಕರಿಸುವುದಿಲ್ಲ. ಬದಲಾಗಿ ಕನ್ನಡ ಸಂಸ್ಕೃತಿಯನ್ನು ಪ್ರತಿಪಾದಿಸುತ್ತಾರೆ. ಕೆಲವೊಮ್ಮೆ ಕನ್ನಡ ಮತ್ತು ಭಾರತ ಸಂಸ್ಕೃತಿಗಳು ಈ ಚಿಂತಕರಲ್ಲಿ ಏಕೀಭವಿಸಿಕೊಳ್ಳುತ್ತವೆ, ಇನ್ನೂ ಕೆಲವು ಸಾರಿ ಎರಡೂ ಅಖಾಡಗಳಲ್ಲೂ ಇವು ಕಾಣಿಸಿಕೊಳ್ಳುತ್ತವೆ. ಕನ್ನಡ ಸಂಸ್ಕೃತಿ ಭಾರತೀಯ ಸಂಸ್ಕೃತಿಗೆ ತನ್ನ ಅದ್ವಿತೀಯ ಕೊಡುಗೆ ಸಲ್ಲಿಸಿದೆ ಎಂದು ಭಾವಿಸುತ್ತದೆ. ಕನ್ನಡ ಸಂಸ್ಕೃತಿ ನಮ್ಮ ಹೆಮ್ಮೆ ಎಂದು ಬೀಗುತ್ತಲೆ ಬದಲಾದ ಪರಿಸ್ಥಿತಿಯಲ್ಲಿ ಭಾರತೀಯ ಸಂಸ್ಕೃತಿಯ ಅಂಕಣದಲ್ಲಿ ಠಳಾಯಿಸಲು ಪ್ರಾರಂಭಿಸುತ್ತದೆ. ದಮನಿತ ಸಮುದಾಯಗಳ ನೆಲೆಯಿಂದ ಕನ್ನಡ, ಕರ್ನಾಟ ಸಂಸ್ಕೃತಿಯನ್ನು ನಿರ್ವಚಿಸಲು ಪ್ರಯತ್ನಿಸುತ್ತದೆ. ಅದೂ ಅಂತಿಮವಾಗಿ ಭಾರತೀಯ ಸಂಸ್ಕೃತಿ, ವಿಶ್ವಸಂಸ್ಕೃತಿಯ ಪ್ರತಿಪಾದನೆಗೆ ನಿಲ್ಲುತ್ತದೆ.

ಕೆಲವು ಚಿಂತಕರು ಧರ್ಮವನ್ನು ಸಂಸ್ಕೃತಿ ಎಂದು ಪರಿಭಾವಿಸುತ್ತಾರೆ. ಇಲ್ಲಿ ಸಂಸ್ಕೃತಿಯ ಸಂಕರಶೀಲ ಗುಣವನ್ನು ಪ್ರತಿಪಾದಿಸಲಾಗುತ್ತದೆ. ದುಡಿಯುವ ವರ್ಗಗಳ ಸಂಸ್ಕೃತಿಯನ್ನು ಮೇಲ್ಮುಖ ಚಲನೆಯಾಗಿಯೂ ಮತ್ತು ಆಳುವ ವರ್ಗಗಳ ಸಂಸ್ಕೃತಿಯನ್ನು ಅಪಸಂಸ್ಕೃತಿ ಅಥವಾ ಕೆಳಮುಖ ಚಲನೆಯ ಕಡೆಗೆ ತಿರುಗಿಸಿ ದಾರ್ಶನಿಕ ಸಮನ್ವಯತೆಯನ್ನು ಪ್ರತಿಪಾದಿಸಲಾಗುತ್ತದೆ. ಇಲ್ಲಿ ಇಡೀ ಆಧುನಿಕ ಭಾರತದ ರಾಷ್ಟ್ರ ನಿರ್ಮಾಣದ ಸಂದರ್ಭದಲ್ಲಿ ಎದುರಾದ ಬಿಕ್ಕಟ್ಟುಗಳು ಕ್ರಿಯಾಶೀಲಗೊಳ್ಳುತ್ತವೆ.

ಕೆಲವೊಮ್ಮೆ ತನ್ನ ಸಂಸ್ಕೃತಿಯ ಕುರಿತಾದ ಹೆಮ್ಮೆ ಅನ್ಯದ ಕುರಿತಾದ ದ್ವೇಷವಾಗಿಯೂ ಕೆಲಸ ಮಾಡುತ್ತಿರುತ್ತದೆ. 'ಪ್ರಭುತ್ವ'ವಾದಿ ನೆಲೆಯಲ್ಲಿ ಕೆಲಸ ಮಾಡುವ ಈ ನಿಲುವು 'ಅತ್ಯುತ್ತಮ ಪ್ರಭುತ್ವ ಅತ್ಯುತ್ತಮ ಸಂಸ್ಕೃತಿಯನ್ನು ನಿರ್ಮಿಸುತ್ತದೆ ಎನ್ನುವ ನಿಲುವಿನಲ್ಲಿ ನೋಡುತ್ತದೆ. ಸಾಮ್ರಾಜ್ಯಶಾಹಿ ಸಂಸ್ಕೃತಿ ದುಡಿವ ಸಮುದಾಯಗಳ ಆರ್ಥಿಕ ತಲ್ಲಣಗಳಿಗೆ ಕಾರಣವಾಗಿದೆ. ಮಾರುಕಟ್ಟೆಯನ್ನು ಕೇಂದ್ರವಾಗಿರಿಸಿಕೊಂಡಿರುವ ಈ ಸಂಸ್ಕೃತಿ ಮನುಷ್ಯ ಸಂಬಂಧಗಳನ್ನು ಧ್ವಂಸ ಮಾಡುತ್ತಿದೆ. ಹೆಣ್ಣನ್ನು ಸರಕಾಗಿ ನೋಡುತ್ತದೆ ಇತ್ಯಾದಿಯಾಗಿ ಗ್ರಹಿಸುತ್ತದೆ.

ಹಾಗಾಗಿ ಪ್ರಭುತ್ವವಾದಿ, ನೈತಿಕವಾದಿಯಾದ ಸಂಸ್ಕೃತಿ ಮೀಮಾಂಸೆ ಕುಲೀನ ವರ್ಗಗಳ ಆಯ್ದು ಮೌಲ್ಯಗಳನ್ನಷ್ಟೆ ಸಂಸ್ಕೃತಿ ಎಂದು ಬಿಂಬಿಸಲು ಪ್ರಯತ್ನಿಸುತ್ತದೆ. ಕೆಲವನ್ನು ಹೊರಗಿಟ್ಟು ನೋಡುತ್ತದೆ. ತನ್ನ ವರ್ಗ ಹಿತಾಸಕ್ತಿಗೆ ಅನುಗುಣವಾಗಿ ಕೆಲವನ್ನು ಒಳಗೊಳ್ಳಲು ಪ್ರಯತ್ನಿಸುತ್ತದೆ.

ಸಂಸ್ಕೃತಿಯೆಂದರೆ 'ಜನರ ಜೀವನಕ್ರಮ' ಎಂದು ಮಾನವಶಾಸ್ತ್ರೀಯ ವ್ಯಾಖ್ಯಾನ ಮಾಡುವ ಚಿಂತನೆ ಮಾರ್ಕ್ಸ್ ಆಲೋಚನಾ ವಿಧಾನ ಎಂದು ನೋಡುವ ಸಂಸ್ಕೃತಿ ಚಿಂತನೆ. ಕಲೆಯನ್ನು ಕೇಂದ್ರದಲ್ಲಿಟ್ಟು ನೋಡುವ

ಸಂಸ್ಕೃತಿ ವ್ಯಾಖ್ಯಾನಗಳು ಮೇಳೈಸಿಯೆ, ಸಂಸ್ಕೃತಿ ಚಿಂತನೆ ನಡೆಯುತ್ತಿದೆ. ಕರ್ನಾಟಕ ಸಂಸ್ಕೃತಿಗಳು ಮತ್ತು ಭಾರತೀಯ ಸಂಸ್ಕೃತಿಗಳ ನಡುವಿನ ಹೊಯ್ದಾಟಗಳಲ್ಲಿಯೇ ಕನ್ನಡ ರಾಷ್ಟ್ರೀಯತಾ ಚಿಂತನೆ ರೂಪುಗೊಂಡಿದೆ ಎನ್ನುವುದು ಈ ಅಧ್ಯಯನದಲ್ಲಿ ತಿಳಿದು ಬರುತ್ತದೆ.

೧೧. ಭೂಪ್ರದೇಶವು ರಾಷ್ಟ್ರೀಯತೆಗಳ ಚರ್ಚೆಯಲ್ಲಿ ಅತ್ಯಂತ ಮೂರ್ತ ಸ್ವರೂಪದ ಪರಿಕಲ್ಪನೆಯಾಗಿದೆ. ರಾಷ್ಟ್ರೀಯತೆಯೆನ್ನುವುದು 'ನಿರ್ದಿಷ್ಟ ಭೂಪ್ರದೇಶವನ್ನು ಆರಂಭಕ್ಕೆ ಕಲ್ಪಿಸಿಕೊಂಡೆ ಉಳಿದ ಸಂಗತಿಗಳನ್ನು ಆಯ್ದುಕೊಳ್ಳಲು ಆರಂಭಿಸುತ್ತದೆ. ಕಲ್ಲು-ಮಣ್ಣುಗಳಿಂದ ಭೌತರೂಪದಲ್ಲಿ ಇರುವ ನೆಲ ರಾಷ್ಟ್ರವಾಗುವ ರಾಷ್ಟ್ರೀಯತೆಯಾಗುವ ಸಂದರ್ಭದಲ್ಲಿ 'ಪವಿತ್ರ'ವಾಗತೊಡಗುತ್ತದೆ. ಅದಕ್ಕೆ ಅಮೂರ್ತ ಸಂಗತಿಗಳನೇಕವು ಬಂದು ಕೂಡಿಕೊಳ್ಳಲಾರಂಭಿಸುತ್ತವೆ. ತನ್ನ ಗಡಿಯಾಚೆ ಇರುವವರನ್ನು ಶತ್ರುವೆಂದು ಕಲ್ಪಿಸಿಕೊಂಡು ತನ್ನ ಸದಸ್ಯರನ್ನು ಸಂಘಟಿಸಬಯಸುತ್ತದೆ. ಅನ್ಯರ ವಲಸೆ ಆಕ್ರಮಣಕಾರಿಯಾಗಿ ಕಂಡು ಆತಂಕಿತಗೊಳ್ಳುತ್ತದೆ. ಅದನ್ನು ಹಿಂಸಾತ್ಮಕವಾಗಿಯಾದರೂ ಸರಿ ನಿವಾರಿಸಿಕೊಳ್ಳಲೆತ್ನಿಸುತ್ತದೆ. ಕನ್ನಡದ ಸಂದರ್ಭದಲ್ಲಿ ಪ್ರಸ್ತುತ ಪ್ರಧಾನವಾಗಿ ಕ್ರಿಯಾಶೀಲವಾಗಿರುವ ಈ ಮೇಲಿನ ಸಂಗತಿಯೇ ಉಳಿದ ಕಡೆಗಳಲ್ಲೂ ಕ್ರಿಯಾಶೀಲವಾಗಿದೆ. ಆದರೆ ಕನ್ನಡ ರಾಷ್ಟ್ರೀಯತೆಯ ಮಟ್ಟಿಗೆ ಇದೊಂದೆ ಅಲ್ಲ ಭಿನ್ನ ಭಿನ್ನ ಧಾರೆಗಳೂ ಇವೆ. ಕನ್ನಡತನವೆಂಬುದನ್ನು ಭಾವನೆ ಮತ್ತು ಪ್ರಜ್ಞೆ ಎರಡೂ ಪಾತಳಿಗಳ ಮೇಲೆ ಕಲ್ಪಿಸಿ ಅದನ್ನು ಜಗದ್ವ್ಯಾಪಿಯಾಗಿ ಕಲ್ಪಿಸುವ ಧಾರೆಯೊಂದಿದೆ. ಈ ಚಿಂತನ ಧಾರೆಯಲ್ಲಿ ತನ್ನತನವನ್ನು ಬಿಟ್ಟುಕೊಡದ, ನೆಲೆಸಿರುವ ನೆಲದ ಭಾವನೆಗಳನ್ನು ಗೌರವಿಸುವ, ಸಂಪೂರ್ಣವಾಗಿ ಲೀನವಾಗದ ಆತ್ಮಗೌರವ ಎತ್ತಿ ಹಿಡಿಯುವ 'ಅದ್ವೈತ'ವಾಗಿ ಕೆಲಸ ಮಾಡುತ್ತದೆ. ಸಹಜವಾಗಿಯೇ ತನ್ನ ನೆಲದಲ್ಲಿರುವ 'ಅನ್ಯ'ವನ್ನು ಈ ಚಿಂತನಧಾರೆ ದ್ವೇಷಿಸುವುದಿಲ್ಲ. ಅಲ್ಲದೆ ತನ್ನ ರಾಷ್ಟ್ರೀಯತೆಯ ಜೊತೆಗೆ ಇರುವ ಇನ್ನಿತರ ರಾಷ್ಟ್ರೀಯತೆಗಳ ಹಕ್ಕುಗಳನ್ನು ಎತ್ತಿಹಿಡಿಯುವ ಚಿಂತನಧಾರೆಯೂ ಕನ್ನಡದಲ್ಲಿದೆ. 'ಅನ್ಯ'ವನ್ನು ತನ್ನೊಳಗೆ 'ತಾದಾತ್ಮ್ಯ' ಹೊಂದಬೇಕೆಂದು ಆಗ್ರಹಿಸುವ ಧಾರೆಯೂ ಇದೆ.

ಇವುಗಳೆಲ್ಲದರ ಜೊತೆಗೆ ವಸಾಹತುಶಾಹಿ ಮತ್ತು ಪ್ರಧಾನ ಆಳುವ ವರ್ಗಗಳ ಹಿತಾಸಕ್ತಿಗಳಿಂದ ಗಡಿ ಮುಂತಾದ 'ನೆಲ ಕೇಂದ್ರಿತ' ಬಿಕ್ಕಟ್ಟುಗಳು ಕ್ರಿಯಾಶೀಲವಾಗಿವೆ. ತನ್ನಂತೆಯೇ ದಮನಕ್ಕೊಳಗಾಗಿರುವ ಸೋದರ ರಾಷ್ಟ್ರೀಯತೆಗಳ ಸಮುದಾಯಗಳು ಶತ್ರುಗಳಲ್ಲ ಎನ್ನುವ ಮತ್ತು ಗಡಿ ಸಮಸ್ಯೆಯನ್ನು ವೈಜ್ಞಾನಿಕವಾಗಿ ಬಗೆಹರಿಸಿಕೊಳ್ಳಬೇಕೆಂದು ಸೂತ್ರವನ್ನು ಮಂಡಿಸುವ ಚಿಂತನಧಾರೆಯು ಕ್ರಿಯಾಶೀಲವಾಗಿದೆ. ಎಲ್ಲ ಚಿಂತನ ಧಾರೆಗಳೂ ತಮ್ಮ ನೆಲವನ್ನು ಪವಿತ್ರವೆಂದು ಬಣ್ಣಿಸುತ್ತವೆ ಮತ್ತು 'ವಿಶಿಷ್ಟ' ವಾಗಲೆತ್ನಿಸುತ್ತವೆ. ಆ ಮೂಲಕವೇ 'ವಿಶ್ವಾತ್ಮಕ'ವಾಗಲು ಬಯಸುತ್ತವೆ. ಇದು ರಾಷ್ಟ್ರೀಯತೆಯ ಚರ್ಚೆಯಲ್ಲಿ ಮೂಲ ಅಧ್ಯಾಯ ಎನ್ನುವ ಅರಿವು ಈ ಅಧ್ಯಯನದಲ್ಲಿ ಫಲಿಸಿದೆ.

೧೨. ಸಾಹಿತ್ಯದ ರಾಜಕಾರಣದ ಜೊತೆಗೆ ಶಂಬಾ ಜೋಶಿಯವರಂಥ ವಿದ್ವಾಂಸರು, ಚಳುವಳಿಗೆ [illegible] ಪ್ರತಿಪಾದಿಸಿದರು. ದುಡಿಯುವ ಸಮುದಾಯಗಳ, ಅವೈದಿಕ ಸಮುದಾಯಗಳನ್ನು ಅಧ್ಯಯನ

ಮಾಡಿದರು. ವಿದ್ವಾಂಸರುಗಳಿಗೆ ಆಕರ್ಷಕವಾದ ಚಿಂತನೆಯನ್ನು ರೂಪಿಸಿದರು. ಆದರೆ ಪಂಡಿತರಲ್ಲದ ವಿಶಾಲ ಜನ ಸಮುದಾಯಗಳ ಜೊತೆಗೆ ಅವರಿಗೆ ಸಂವಾದ ಸಾಧ್ಯವಾಗದೆ ಹೋಯಿತು. ಜನಪರ ಚಳುವಳಿ ಮತ್ತು ಶಂಬಾರ ನಡುವೆ ಬೌದ್ಧಿಕ ಕಂದರ ಏರ್ಪಟ್ಟಿದ್ದು ಕನ್ನಡ ಚಿಂತನ ಲೋಕಕ್ಕೆ ದೊಡ್ಡ ದುರಂತ. ಇದಕ್ಕೆ ಬಹುಶಃ ಶಂಬಾ ಜೋಶಿಯವರು ತಮ್ಮ ವಿದ್ವತ್ತನ್ನು ವರ್ತಮಾನದ ಅಗತ್ಯಕ್ಕೆ ಮಂಡಿಸದೇ ಹೋದದ್ದು ಮತ್ತು 'ಗತಕೇಂದ್ರಿತ ವೈಭವಗಳಲ್ಲಿ ಮೈ ಮರೆತದ್ದು ಕಾರಣವೆನ್ನಿಸುತ್ತದೆ. ಜೊತೆಗೆ ಅವರು ತಮ್ಮ ವಿಚಾರಗಳನ್ನು ಹೇಳುವುದಕ್ಕೆ ಅನುಸರಿಸಿದ ಜಟಿಲ ವಿಧಾನವು ಸಂವಹನ ತೊಡಕುಗಳನ್ನು ನಿರ್ಮಿಸಿತು ಎನ್ನುವುದು ಅರಿವಿಗೆ ಬರುತ್ತದೆ.

೧೩. ಆಧುನಿಕ ಕನ್ನಡದ ಚಿಂತಕರು ನಿರಂತರವಾಗಿ 'ಅನ್ಯ' ಪ್ರಭಾವಗಳಿಗೆ ಮುಕ್ತರಾಗಿದ್ದಾರೆ. ಕುವೆಂಪು 'ಅದ್ವೈತ ತತ್ವ'ದಿಂದ, ಯುರೋಪಿನ ವಿಚಾರವಾದದಿಂದಲೂ ಉಪನಿಷತ್ತಿನ 'ಧೀ' ಕಲ್ಪನೆಯಿಂದಲೂ ರಷ್ಯಾದ ಸಮಾನತಾ ವಾದದಿಂದಲೂ ಪ್ರಭಾವಿತರಾಗಿದ್ದರು. ಬಿ.ಎಂ.ಶ್ರೀಯವರಂತೂ ಎಲ್ಲ ವಿಚಾರಗಳಿಗೂ ಮುಕ್ತರಾಗಿದ್ದರು. ಶಂಬಾ ಯುರೋಪಿನ ಜ್ಞಾನಶಾಖೆಗಳಿಂದ ಪ್ರಭಾವಿತರಾಗಿದ್ದರು. ಆದರೆ ಈ ಪ್ರಭಾವಗಳು ನಕಲಾಗದೆ, 'ಕನ್ನಡತ್ವಕ್ಕೆ' ಪೂರಕವಾಗಿ ಸ್ಥಳೀಯಗೊಂಡು ಮರುಹುಟ್ಟು ಪಡೆದಿವೆ. ತಮ್ಮ ಎದುರಿನ ಸಮಾಜದ ಅಗತ್ಯಗಳಿಗೆ ಎಲ್ಲೆಲ್ಲಿ ಸಾಧ್ಯವೋ ಅಲ್ಲಿಂದ 'ವಿಟಮಿನ್ನು'ಗಳನ್ನು ತಂದು ಪೋಷಿಸುವ ಕೆಲಸ ಮಾಡುವುದರ ಜೊತೆಗೆ ತನ್ನ ಸ್ವಂತಿಕೆಯನ್ನು ಬೆಸೆದು 'ವಿಶ್ವತತ್ವಗಳನ್ನು' ರೂಪಿಸಿದ್ದಾರೆ. ಹೋಮರ್, ವಾಲ್ಮೀಕಿಗಳನ್ನು ಏಕೀಭವಿಸುತ್ತಲೇ ತಾನೂ ಅದೇ ನೆಲೆಗೇರಲು ಹಂಬಲಿಸುತ್ತಾರೆ. ಡಾಂಟೆ ಮಿಲ್ಟನ್ನರ ಜೊತೆ ವ್ಯವಹರಿಸುವಾಗಲೂ, ಕನ್ನಡತನವನ್ನು ಬಿಟ್ಟು ಕೊಡುವುದಿಲ್ಲ ಎನ್ನುವುದು ಅಧ್ಯಯನದ ಸಂದರ್ಭದಲ್ಲಿ ಸಿಕ್ಕ ಫಲಿತ.

೧೪. ರಾಷ್ಟ್ರೀಯತೆಯಂಥ ಅತ್ಯಂತ ಅಮೂರ್ತವಾದ ಚಿಂತನೆಗಳನ್ನು ಅಶೀಶ್‌ನಂದಿ, ಜಿ.ಎನ್.ದೇವಿ, ಪಾರ್ಥಚಟರ್ಜಿ ಮುಂತಾದವರು ಜಾಗತಿಕ ಭಾಷೆಗಳಲ್ಲಿ ಚರ್ಚಿಸುತ್ತಿದ್ದಾರೆ. ಆದರೆ ನಮ್ಮ ಕನ್ನಡದ ಹೆಚ್ಚಿನ ಚಿಂತಕರು ತಮ್ಮ ಭಾಷೆಯಲ್ಲಿಯೇ ಸಾಮಾನ್ಯ ಜನಕ್ಕೂ ದಕ್ಕಬಲ್ಲ ಸಂವಹನ ಸಾಧ್ಯತೆಗಳನ್ನು ಹುಡುಕಿದರು ಎನ್ನುವುದು ಕನ್ನಡ ಭಾಷೆಯ ಮಟ್ಟಿಗೂ ದೊಡ್ಡ ಫಲಿತವಾಗಿದೆ.

೧೫. ಅತ್ಯಂತ ಮುಖ್ಯವಾದ ಸಂಗತಿಯೆಂದರೆ, ಚಾರಿತ್ರಿಕ ಸಂಗತಿಗಳು ನಿರ್ಮಿಸಿರುವ ಸಂಕೀರ್ಣತೆಗಳನ್ನು ಸರಳವಾಗಿ ಒಪ್ಪಲು ಅಥವಾ ತಿರಸ್ಕರಿಸಲು ಸಾಧ್ಯವಿಲ್ಲ. ತಮಗೆ ಬೇಕಾದ ಹಾಗೆ ಜನಪರ ಅಥವಾ ಪ್ರತಿಗಾಮಿ ನಿಲುವು ಎಂದು ಅವನ್ನು ಸರಳೀಕರಿಸಿ ವಿವರಿಸಲು ಸಾಧ್ಯವಿಲ್ಲ ಎನ್ನುವ ಅರಿವು ಕನ್ನಡದ ಚಿಂತನ ಧಾರೆಗಳನ್ನು ಅನುಸಂಧಾನ ಮಾಡುವಾಗ ಹುಟ್ಟಿದೆ.

**೭.೨ ಅಧ್ಯಯನದ ಸಂದರ್ಭದಲ್ಲಿ ಎದುರಾದ ತೊಡಕುಗಳು ಮತ್ತು ಬಿಡಿಸಿಕೊಂಡ ರೀತಿ**

ಅಜ್ಞಾತ ಲೋಕಗಳತ್ತ ನಡೆಯುವ ಎಲ್ಲ ಬಗೆಯ ಪ್ರಯಾಣಗಳಂತೆಯೇ ಬೌದ್ಧಿಕ ಪ್ರಯಾಣ ಕೂಡ ಅನೇಕ ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಎದುರಿಸಿ ಗುರಿ ಸೇರಿದಾಗ ಮಾತ್ರ ಅದನ್ನು ಮೀರಿದ

ರೀತಿಯನ್ನು ನೆನಪಿಸಿಕೊಂಡಾಗ ಆಶ್ಚರ್ಯದ ಜೊತೆಗೆ ವಿಶ್ಲೇಷಣೆಯು ಹುಟ್ಟುತ್ತದೆ. ಈ ಅಧ್ಯಯನದಲ್ಲಿ ಕೂಡ ಅದೇ ಅನುಭವಗಳಾಗಿವೆ.

೧. ರಾಷ್ಟ್ರ-ರಾಷ್ಟ್ರೀಯತೆಗಳೆಂಬ ಪರಿಕಲ್ಪನೆಗಳೂ ಸ್ವಭಾವದಲ್ಲಿ ಅಗಾಧವಾಗಿರುತ್ತವೆ. ಈ ಅಗಾಧ ಸ್ವರೂಪಿಯಾದ ವಿದ್ಯಮಾನವನ್ನು ಕನ್ನಡದ ಚಿಂತನಧಾರೆಗಳ ನೆರವಿನಿಂದ ವಿಶ್ಲೇಷಿಸಲು ಪ್ರಯತ್ನ ಪಡಲಾಗಿದೆ. ಇಲ್ಲಿ ಪರಿಕಲ್ಪನೆಗಳನ್ನು ರೂಪಿಸಿಕೊಳ್ಳುವಾಗ ಚಿಂತನೆಗಳ ಸಾವಯುವ ಶಿಲ್ಪ ಮುಕ್ಕಾಗುವ ತೊಡಕು ಬಂದೇ ಬರುತ್ತದೆ. ಆದರೆ ಚಿಂತನೆಯ ಅಂತರ್ಯದಲ್ಲಿ ಹರಿಯುತ್ತಿರುವ ತಂತುವನ್ನು ಹಿಡಿದು ಬೆಸೆಯಲು ಪ್ರಯತ್ನಿಸುವ ಮೂಲಕ ಈ ತೊಡಕನ್ನು ಬಗೆಹರಿಸಿಕೊಳ್ಳಲಾಗಿದೆ.

೨. ಕನ್ನಡದ ಚಿಂತಕರ ಮೂಲಕ ರಾಷ್ಟ್ರೀಯತೆಯನ್ನು ಅಧ್ಯಯನ ಮಾಡುವಾಗ, ಚಿಂತಕರುಗಳು ೪೦-೫೦ ವರ್ಷಗಳ ತಮ್ಮ ಬೌದ್ಧಿಕ ಚಟುವಟಿಕೆಗಳ ಅವಧಿಯಲ್ಲಿ ಅನೇಕ ಏರಿಳಿತಗಳನ್ನು ಎದುರಿಸುತ್ತಾರೆ. ಚಾರಿತ್ರಿಕ ಒತ್ತಡಗಳು ರೂಪಿಸುವ ತೊಡಕುಗಳು ಹೇಗಿರುತ್ತವೆ ಎಂದರೆ, ಚಿಂತಕರು ತಾವೇ ಬರೆದದ್ದನ್ನು ಸಮರ್ಥಿಸುವ, ನಿರಾಕರಿಸುವ, ಭಿನ್ನ ನಿಲುವು ತಾಳುವ ಅಥವಾ ತಮ್ಮ ನಿಲುವುಗಳಲ್ಲೇ ಪರಸ್ಪರ ಘರ್ಷಣೆಗಳನ್ನು ಸೃಷ್ಟಿಸುವ ಅಪಾರ ವೈರುಧ್ಯಗಳನ್ನು ಹೊಂದಿದ್ದಾರೆ. ಅಧ್ಯಯನದ ಮಟ್ಟಿಗೆ ಇದು ಮಹಾ ತೊಡಕು.

ಆದರೆ ವೈರುಧ್ಯಗಳು ಸಹಜ, ಅವುಗಳನ್ನು ನಿರಾಕರಿಸಲು ಸಾಧ್ಯವಿಲ್ಲ ಎಂದು ಭಾವಿಸಲಾಯಿತು. ಸಮಾಜವೂ ಜಟಿಲ, ಕೆಲವೊಮ್ಮೆ ಚಿಂತಕರೆ ತಮ್ಮ ವಿಚಾರಗಳನ್ನು ಅಭಿವ್ಯಕ್ತಿಸುವ ಕ್ರಮದಲ್ಲಿ ದೌರ್ಬಲ್ಯಗಳಿವೆ ಮತ್ತು ಕಾಲಘಟ್ಟದ ಒತ್ತಡ ಈ ಮೂರು ಅಂಶಗಳನ್ನೂ ಒಂದು ಚೌಕಟ್ಟಿಗೆ ತಂದು ವಿವರಿಸುವುದು ಕಷ್ಟ. ಈ ಸಂದರ್ಭಗಳಲ್ಲಿ ಮಾರ್ಕ್ಸ್‌ವಾದಿ ಕ್ರಮವಾದ ದ್ವಂದ್ವಾತ್ಮಕ ಅಧ್ಯಯನ ವಿಧಾನವನ್ನು ಬಳಸಿ, ವೈರುಧ್ಯಗಳನ್ನು ಬಿಟ್ಟುಕೊಡದೆ ಅಧ್ಯಯನ ಮಾಡಲಾಗಿದೆ.

೩. ಅಧ್ಯಯನದ ಸಂದರ್ಭದಲ್ಲಿ ಎದುರಾದ ಇನ್ನೊಂದು ತೊಡಕು 'ಬರಹ ಬಾಹುಳ್ಯತೆ' ಮತ್ತು ಚಿಂತಕರ ಬಾಹುಳ್ಯತೆ ಕುರಿತದ್ದು. ರಾಷ್ಟ್ರೀಯತೆ ಎಂಬ ಪರಿಕಲ್ಪನೆಯನ್ನಿಟ್ಟು ಅಧ್ಯಯನಕ್ಕೆ ತೊಡಗಿದರೆ, ಕನ್ನಡದ ಒಬ್ಬೊಬ್ಬ ಚಿಂತಕರೇ ಒಂದು ಅಧ್ಯಯನದ ವಸ್ತುವಾಗುತ್ತಾರೆ. ಅವರ ಬರವಣಿಗೆಗಳೂ ಸಾವಿರಾರು ಪುಟಗಳಷ್ಟಿವೆ. ಕೆಲವು ಚಿಂತಕರಂತೂ ಅರಾಜಕ ನಿಲುವುಗಳನ್ನು (ಅರಾಜಕತೆಯೂ ಒಂದು ರಾಜಕೀಯ ಸಿದ್ಧಾಂತವೇ) ಹೊಂದಿದವರಾಗಿದ್ದಾರೆ. ಈ ತೊಡಕನ್ನು ಪರಿಕಲ್ಪನೆಗಳನ್ನು ರೂಪಿಸಿಕೊಂಡು ಅಧ್ಯಯನ ಮಾಡುವುದರ ಮೂಲಕ ನಿವಾರಿಸಿಕೊಳ್ಳಲಾಯಿತು.

೪. ಕನ್ನಡದ ಚಿಂತಕರುಗಳು ತಾವು ರಾಷ್ಟ್ರ-ರಾಷ್ಟ್ರೀಯತೆಗಳಿಗೆ ಪೂರಕವಾಗಿ ಬರೆಯುತ್ತಿದ್ದೇವೆಂದು ಘೋಷಿಸಿಕೊಂಡು ಬರೆಯುತ್ತಿಲ್ಲ. ಚರಿತ್ರೆಯ ಬೇರೆ ಬೇರೆ ವಿದ್ಯಮಾನಗಳಿಗೆ ಸ್ಪಂದಿಸಿ ಚಿಂತಿಸಿದ್ದಾರೆ. ಹಾಗಾಗಿ ಅತ್ಯಂತ ವಿಸ್ತಾರವಾದ ಅವರ ಚಿಂತನೆಗಳನ್ನು ಈ ರೀತಿಯ ಪರಿಕಲ್ಪನೆಗಳನ್ನಿಟ್ಟುಕೊಂಡು ಅಧ್ಯಯನ ಮಾಡುವುದೇ ದೊಡ್ಡ ತೊಡಕು. ಆದರೆ ಈ ವಿಸ್ತಾರ ವೈವಿಧ್ಯಗಳು ಕಲ್ಯಾಣ ರಾಷ್ಟ್ರ (ಬಹುತೇಕ ಸಾರಿ)ದ ಕಲ್ಪನೆಯನ್ನಿಟ್ಟುಕೊಂಡೇ ರೂಪಿಸಲಾಗಿದೆ ಎನ್ನುವ ವಿವೇಕದಿಂದ ಬಗೆಹರಿಸಿಕೊಳ್ಳಲಾಗಿದೆ.

## ೭.೩ ಹೆಚ್ಚಿನ ಅಧ್ಯಯನ ಸಾಧ್ಯತೆಗಳು

`ರಾಷ್ಟ್ರೀಯತೆ` ಎನ್ನುವ `ಪರಿಕಲ್ಪನೆ` ಕುರಿತು ಕನ್ನಡದಲ್ಲಿ ಹೆಚ್ಚಿನ ಕೆಲಸಗಳು ನಡೆದಿಲ್ಲ. ಇರುವ ಅಧ್ಯಯನಗಳೂ ಕೂಡ 'ಕಥನ ಸಾಹಿತ್ಯ'ವನ್ನು ಪ್ರಧಾನವಾಗಿ ಆಧರಿಸಿ ನಡೆದಿರುವಂತಹವು.

ಇದು ಅಪಾರ ವ್ಯಾಪ್ತಿಯುಳ್ಳ ವಿಷಯವಾದ್ದರಿಂದ ಮತ್ತು ಜನಜೀವನವನ್ನು ನೇರವಾಗಿ ಪ್ರಭಾವಿಸುತ್ತಿರುವುದರಿಂದ ಹೆಚ್ಚು ಅಧ್ಯಯನಗಳು ನಡೆಯುವ ಅಗತ್ಯವಿದೆ. ಕನ್ನಡದ ಚಿಂತನೆಗಳು ಮುಖ್ಯವಾಗಿ ಸಮಾಜಾಧಾರಿತ ಚಿಂತನೆಗಳು. ಬದುಕನ್ನು ಕಟ್ಟುವ ವಿಶಾಲಾರ್ಥದಲ್ಲಿ ರಾಷ್ಟ್ರ ಕಟ್ಟುವ ಚಿಂತನೆಗಳಿವು. ಪ್ರಸ್ತುತ ಅಧ್ಯಯನದಲ್ಲಿ ಕನ್ನಡದ ಮೊದಲ ತಲೆಮಾರಿನ ಸಾಹಿತಿ ಚಿಂತಕರನೇಕರನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಲಿಲ್ಲ. ಉದಾಹರಣೆಗೆ ಹರ್ಡೇಕರ ಮಂಜಪ್ಪ, ಡಿ.ವಿ.ಜಿ., ಮಾಸ್ತಿ, ಪಂಡಿತ ತಾರಾನಾಥ, ಮುಂತಾದವರನ್ನು ಒಳಗೊಳ್ಳಲು ಆಗಲಿಲ್ಲ. ಜೊತೆಗೆ ಒಬ್ಬ ಮಹಿಳಾ ಚಿಂತಕಿಯ ದೃಷ್ಟಿಯಿಂದ ರಾಷ್ಟ್ರ-ರಾಷ್ಟ್ರೀಯತೆಯನ್ನು ನೋಡಿದರೆ ಅಧ್ಯಯನ ಏನಾಗುತ್ತಿತ್ತು ಎನ್ನುವ ಕುತೂಹಲ ಈ ಅಧ್ಯಯನದಲ್ಲಿ ಕಡೆಗೂ ಉಳಿದಿದೆ. ಏಕೆಂದರೆ ಆಕೆಗೆ ದಿನನಿತ್ಯದ ಬದುಕಿನ ಅವಮಾನದ ಸಂಗತಿಗಳು, ಅಸ್ತಿತ್ವವನ್ನೇ ನಿರಾಕರಿಸುವ ಪ್ರಶ್ನಿಸುವ ಸಂಗತಿಗಳು, ಆಕೆಗೆ ರಾಷ್ಟ್ರ ಕಲ್ಪನೆಯನ್ನೇ ಪ್ರಶ್ನಿಸುವ ಅಥವಾ ರಾಷ್ಟ್ರವೇ ತನ್ನ ಪಾಲಿಗಿಲ್ಲ ಎನ್ನುವ ಅನುಭವ ಕೊಟ್ಟಿರುತ್ತವೆ. ಇದನ್ನು ಕೆಲಮಟ್ಟಿಗೆ ತಿರುಮಲಾಂಬ ಅವರಲ್ಲಿ ಕಾಣಬಹುದು. 'ದಲಿತ' 'ಮುಸ್ಲಿಂ', 'ಆದಿವಾಸಿ' 'ಬಂಡಾಯ' 'ನವ್ಯ' 'ಆಧುನಿಕೋತ್ತರ' 'ಪರಿಸರಕೇಂದ್ರಿತ' ಚಿಂತಕರ ಚಿಂತನೆಗಳನ್ನು ಆಧರಿಸಿ ರಾಷ್ಟ್ರೀಯತೆಯ ಅಧ್ಯಯನ ನಡೆಸುವ ಸಾಧ್ಯತೆಗಳು ಕನ್ನಡದಲ್ಲಿ ಇನ್ನೂ ತೆರೆದುಕೊಳ್ಳಬೇಕಿದೆ. ಈ ಕೆಲವು ಚಿಂತಕರನ್ನು ಹಾಗೂ ಚಿಂತನೆಯ ಆಯಾಮಗಳನ್ನು ಸದರಿ ಅಧ್ಯಯನ ಒಳಗೊಳ್ಳಲು ಆಗಲಿಲ್ಲ. ಅಗಾಧ ವ್ಯಾಪ್ತಿಯ ಈ ಪರಿಕಲ್ಪನೆಯ ಮೂಲಕ ಕನ್ನಡದ ಒಬ್ಬೊಬ್ಬ ಚಿಂತಕರನ್ನು ಆಧರಿಸಿ ಬೇರೆ ಬೇರೆ ಅಧ್ಯಯನ ನಡೆಸಬಹುದಾಗಿದೆ. ಇದಕ್ಕೆ ಬೇಕಾದ ತ್ರಾಣವು ಕನ್ನಡ ಚಿಂತಕರಿಗೆ ಮತ್ತು ಚಿಂತನೆಗಳಿಗಿದೆ.

# ಗ್ರಂಥ ಸೂಚಿ

## ಅ. ಪ್ರಾಥಮಿಕ ಆಕರಗಳು

### ೧. ಕನ್ನಡದಲ್ಲಿ

- ಆಲೂರ ವೆಂಕಟರಾಯರು, ೧೯೫೭, ಕರ್ನಾಟಕತ್ವದ ವಿಕಾಸ, ನವಜೀವನ ಗ್ರಂಥ ಭಂಡಾರ, ಧಾರವಾಡ, ೧೯೫೭

- ಆಲೂರ ವೆಂಕಟರಾಯರು, ೧೯೫೧, ಮಧ್ವಸಿದ್ಧಾಂತ ಪ್ರವೇಶಿಕೆ, ನವಜೀವನ ಗ್ರಂಥ ಭಂಡಾರ, ಧಾರವಾಡ, ೧೯೫೧

- ಕರ್ನಾಟಕ ವಿಮೋಚನಾ ರಂಗ, ೧೯೯೧, ಪ್ರಣಾಳಿಕೆ ಹಾಗೂ ಸಂವಿಧಾನ, ರಾಜ್ಯಸಮಿತಿ, ಬೆಂಗಳೂರು, ೧೯೯೪.

- ಕುವೆಂಪು, ೧೯೪೪, ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ, ಕುವೆಂಪು ಸಮಗ್ರ ಗದ್ಯ ಸಂಪುಟ ೨, (ಸಂ.) ಡಾ. ಕೆ. ಸಿ. ಶಿವಾರೆಡ್ಡಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

- ಕುವೆಂಪು, ೧೯೪೪, ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ, ಕುವೆಂಪು ಸಮಗ್ರ ಗದ್ಯ ಸಂಪುಟ- ೨, (ಸಂ.) ಡಾ. ಕೆ. ಸಿ. ಶಿವಾರೆಡ್ಡಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

- ಕುವೆಂಪು, ೧೯೬೪, ಷಷ್ಠಿ ನಮನ, ಕುವೆಂಪು ಸಮಗ್ರ ಗದ್ಯ ಸಂಪುಟ-೨, (ಸಂ.) ಡಾ. ಕೆ. ಸಿ. ಶಿವಾರೆಡ್ಡಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

- ಕುವೆಂಪು, ೧೯೭೧, ಮನುಜಮತ ವಿಶ್ವಪಥ, ಕುವೆಂಪು ಸಮಗ್ರ ಗದ್ಯ ಸಂಪುಟ-೨, (ಸಂ.) ಡಾ. ಕೆ. ಸಿ. ಶಿವಾರೆಡ್ಡಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

- ಕುವೆಂಪು, ೧೯೭೬, ವಿಚಾರ ಕ್ರಾಂತಿಗೆ ಆಹ್ವಾನ, ಕುವೆಂಪು ಸಮಗ್ರ ಗದ್ಯ ಸಂಪುಟ-೨, (ಸಂ.) ಡಾ. ಕೆ. ಸಿ. ಶಿವಾರೆಡ್ಡಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

- ಕುವೆಂಪು, ೧೯೬೬, ಶ್ರೀ ಕುವೆಂಪು ಭಾಷಣಗಳು ಭಾಗ ೧, ಕುವೆಂಪು ಸಮಗ್ರ ಗದ್ಯ ಸಂಪುಟ-೨, (ಸಂ.) ಡಾ. ಕೆ. ಸಿ. ಶಿವಾರೆಡ್ಡಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

- ಕುವೆಂಪು, ೧೯೭೬, ಶ್ರೀ ಕುವೆಂಪು ಭಾಷಣಗಳು ಭಾಗ ೨, ಕುವೆಂಪು ಸಮಗ್ರ ಗದ್ಯ ಸಂಪುಟ-೨, (ಸಂ.) ಡಾ. ಕೆ. ಸಿ. ಶಿವಾರೆಡ್ಡಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

- ಕುವೆಂಪು, ೧೯೩೪- ೧೯೮೫ , ಹಿನ್ನುಡಿ ಮುನ್ನುಡಿ, ಕುವೆಂಪು ಸಮಗ್ರ ಗದ್ಯ ಸಂಪುಟ-೨, (ಸಂ.) ಡಾ. ಕೆ. ಸಿ. ಶಿವಾರೆಡ್ಡಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

- ಕುವೆಂಪು, ೧೯೩೩, ಪಾಂಚಜನ್ಯ (ಕವಿತಾ ಸಂಕಲನ), ಕುವೆಂಪು ಸಮಗ್ರ ಕಾವ್ಯ ಸಂಪುಟ-೧, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

- ಕುವೆಂಪು, ೧೯೪೪, ಕೋಗಿಲೆ ಮತ್ತು ಸೋವಿಯಟ್ ರಷ್ಯಾ (ಕವಿತಾ ಸಂಕಲನ), ಕುವೆಂಪು ಸಮಗ್ರ ಕಾವ್ಯ ಸಂಪುಟ-೧, ವಿಶ್ವವಿದ್ಯಾಲಯ, ಹಂಪಿ, ೨೦೦೦

- ಚಿದಾನಂದ ಮೂರ್ತಿ ಎಂ. ೧೯೮೭, ಕನ್ನಡ ಸಂಸ್ಕೃತಿ : ನಮ್ಮ ಹೆಮ್ಮೆ, ಕನ್ನಡ ಶಕ್ತಿಕೇಂದ್ರ ಬೆಂಗಳೂರು, ೧೯೯೮

- ಚಿದಾನಂದ ಮೂರ್ತಿ ಎಂ. ೨೦೦೩, ಕರ್ನಾಟಕ-ನೇಪಾಳ ಸಾಂಸ್ಕೃತಿಕ ಸಂಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

- ಚಿದಾನಂದ ಮೂರ್ತಿ ಎಂ. ೨೦೦೦, ವೀರಶೈವ ಧರ್ಮ ಮತ್ತು ಭಾರತೀಯ ಸಂಸ್ಕೃತಿ (ಹಿಂದೂ-ಲಿಂಗಾಯತ) ಚಿದಾನಂದ ಸಮಗ್ರ ಸಂಪುಟ ೫ (ಬಸವಣ್ಣ: ಕರ್ನಾಟಕ: ಭಾರತ) ಸಪ್ನಾ ಬುಕ್ ಹೌಸ್ ಬೆಂಗಳೂರು, ೨೦೦೪

- ಚಿದಾನಂದ ಮೂರ್ತಿ ಎಂ. ೧೯೮೫, ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ, ಚಿದಾನಂದ ಸಮಗ್ರ ಸಂಪುಟ ೫, ಸಪ್ನಾ ಬುಕ್ ಹೌಸ್ ಬೆಂಗಳೂರು, ೨೦೦೪

- ಜಯಪ್ರಕಾಶ ಬಂಜಗೆರೆ ೨೦೦೦, ಕನ್ನಡ ರಾಷ್ಟ್ರೀಯತೆ ೨೦೦೦., ಕ್ರಾಂತಿ ಸಿರಿ ಪ್ರಕಾಶನ, ಬೆಂಗಳೂರು, ೨೦೦೦

- ಜೋಶಿ, ಶಂಬಾ, ೧೯೬೭ ಕರ್ನಾಟ ಸಂಸ್ಕೃತಿಯ ಪೂರ್ವ ಪೀಠಿಕೆ, ಶಂಬಾ ಕೃತಿ ಸಂಪುಟ - ೩ (ಕರ್ನಾಟ ಸಂಸ್ಕೃತಿ) (ಸಂ.) ಮಲ್ಲೇಪುರಂ ಜಿ. ವೆಂಕಟೇಶ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೯

- ಜೋಶಿ, ಶಂಬಾ, ೧೯೬೦ ಹಾಲುಮತ ದರ್ಶನ, ಶಂಬಾ ಕೃತಿ ಸಂಪುಟ - ೩, (ಕರ್ನಾಟ ಸಂಸ್ಕೃತಿ) (ಸಂ.) ಮಲ್ಲೇಪುರಂ ಜಿ. ವೆಂಕಟೇಶ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೯

- ಜೋಶಿ, ಶಂಬಾ, ೧೯೩೩ ಕಣ್ಮರೆಯಾದ ಕನ್ನಡ, ಶಂಬಾ ಕೃತಿ ಸಂಪುಟ - ೧, (ಕಂನಾಡು ಕರ್ನಾಟ) (ಸಂ.) ಮಲ್ಲೇಪುರಂ ಜಿ. ವೆಂಕಟೇಶ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೯

- ಜೋಶಿ, ಶಂಬಾ, ೧೯೩೭ ಕರ್ನಾಟಕದ ವೀರ ಕ್ಷತ್ರಿಯರು, ಶಂಬಾ ಕೃತಿ ಸಂಪುಟ - ೧, (ಕಂನಾಡು ಕರ್ನಾಟ) (ಸಂ.) ಮಲ್ಲೇಪುರಂ ಜಿ. ವೆಂಕಟೇಶ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೯

- ಜೋಶಿ, ಶಂಬಾ, ೧೯೩೯ ಕನ್ನಡದ ನೆಲೆ, ಶಂಬಾ ಕೃತಿ ಸಂಪುಟ - ೨, (ಕಂನಡ ಕಂನುಡಿ) (ಸಂ.) ಮಲ್ಲೇಪುರಂ ಜಿ. ವೆಂಕಟೇಶ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೯

- ಜೋಶಿ, ಶಂಬಾ, ೧೯೪೭ ಎಡೆಗಳು ಹೇಳುವ ಕಂನಾಡ ಕಥೆ, ಶಂಬಾ ಕೃತಿ ಸಂಪುಟ - ೨, (ಕಂನಡ ಕಂನುಡಿ) (ಸಂ.) ಮಲ್ಲೇಪುರಂ ಜಿ. ವೆಂಕಟೇಶ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೯

- ಜೋಶಿ, ಶಂಬಾ, ೧೯೩೭ ಕಂನುಡಿಯ ಹುಟ್ಟು, ಶಂಬಾ ಕೃತಿ ಸಂಪುಟ - ೨, (ಕಂನಡ ಕಂನುಡಿ) (ಸಂ.) ಮಲ್ಲೇಪುರಂ ಜಿ. ವೆಂಕಟೇಶ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೯

- ಜೋಶಿ, ಶಂಬಾ, ೧೯೭೫ ಭಾಷೆ ಮತ್ತು ಸಂಸ್ಕೃತಿ, ಶಂಬಾ ಕೃತಿ ಸಂಪುಟ - ೪, (ಭಾರತೀಯ ಸಂಸ್ಕೃತಿ) (ಸಂ.) ಮಲ್ಲೇಪುರಂ ಜಿ. ವೆಂಕಟೇಶ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೯

- ಜೋಶಿ, ಶಂಬಾ, ೧೯೪೮ ಯಕ್ಷಪ್ರಶ್ನೆ ಅಥವಾ ಬರಲಿರುವ ಸಮಾಜ, ಶಂಬಾ ಕೃತಿ ಸಂಪುಟ - ೬, (ಸಂಸ್ಕೃತಿ - ಸಾಹಿತ್ಯ ) (ಸಂ.) ಮಲ್ಲೇಪುರಂ ಜಿ. ವೆಂಕಟೇಶ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೯

- ನಾಗರಾಜ ಡಿ.ಆರ್., ೧೯೯೬, ಸಾಹಿತ್ಯ ಕಥನ, ಅಕ್ಷರ ಪ್ರಕಾಶನ ಹೆಗ್ಗೋಡು, ೧೯೯೬

- ಶ್ರೀಕಂಠಯ್ಯ ಬಿ.ಎಂ. ೧೯೪೮, ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ. (ಸಂ.) ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೩

- ಶ್ರೀಕಂಠಯ್ಯ ಬಿ.ಎಂ. ೧೯೪೩, ಹೊಂಗನಸುಗಳು (ಸ್ವತಂತ್ರ ಕವಿತೆಗಳು) (ಸಂ.) ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೩

- ಶ್ರೀಕಂಠಯ್ಯ ಬಿ.ಎಂ., ೧೯೨೧, ಇಂಗ್ಲಿಷ್ ಗೀತೆಗಳು, (ಅನುವಾದಿತ ಕವಿತೆಗಳು) (ಸಂ.) ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೩

- ಶ್ರೀಕಂಠಯ್ಯ ಬಿ.ಎಂ. ೧೯೨೯, ಅಶ್ವತ್ಥಾಮನ್ (ನಾಟಕ) (ಸಂ.) ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೩

## ಆ. ಪೂರಕ ಆಕರಗಳು

- ಅನಂತಮೂರ್ತಿ ಯು.ಆರ್. ೨೦೦೨, ಕನ್ನಡ - ಕರ್ನಾಟಕ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨

- ಕನ್ನಡ ಸಾಹಿತ್ಯ ಪರಿಷತ್ತು ,೧೯೪೧ ಸಂಭಾವನೆ (ರಾಜಸೇವಾಸಕ್ತ ಬೆಳ್ಳೂರು ಮೈಲಾರಯ್ಯ ಶ್ರೀಕಂಠಯ್ಯನವರಿಗೆ ಅವರ ಶಿಷ್ಯರೂ ಮಿತ್ರರೂ ಒಪ್ಪಿಸಿದ ಪ್ರಬಂಧಗಳ ಸಂಪುಟ.) ಬೆಂಗಳೂರು, ೨೦೦೩

- ಕರ್ನಾಟಕ ವಿಮೋಚನಾ ರಂಗ (ಸಂ.) ೧೯೯೩, ಭಾರತದಲ್ಲಿ ರಾಷ್ಟ್ರೀಯತೆಗಳ ಸಮಸ್ಯೆ ವಿಚಾರ ಸಂಕಿರಣದ ಪ್ರಬಂಧಗಳು, ಬೆಂಗಳೂರು, ೧೯೯೩

- ಕೊಸಾಂಬಿ ಡಿ.ಡಿ., ಪುರಾಣ ಮತ್ತು ವಾಸ್ತವ, (ಅನು.) ವೇಣುಗೋಪಾಲ ಬಿ.ಎಸ್., ಶೈಲಜಾ, ಚಿಂತನ, ಶಿರಸಿ, ೨೦೦೩

- ಗಿರಡ್ಡಿ ಗೋವಿಂದರಾಜ , ೨೦೦೧, (ಸಂ.) ಕನ್ನಡ ನವೋದಯ ಕಾವ್ಯ ಮಂಗಳೂರು ಕೇಂದ್ರ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧

- ಗೂಗಿ ವಾ ಥಿಯಾಂಗೊ, ೧೯೮೧, ವಸಾಹತು ಪ್ರಜ್ಞೆ ಮತ್ತು ವಿಮೋಚನೆ (ಅನು) ರಹಮತ್ ತರೀಕೆರೆ, ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್, ಬೆಂಗಳೂರು, ೧೯೯೬

- ಗೋಪಾಲರಾವ್ ಎಚ್.ಎಸ್. ೧೯೯೬, ಕರ್ನಾಟಕ ಏಕೀಕರಣ ಇತಿಹಾಸ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೬

- ಚಂದ್ರಶೇಖರ ಎಸ್. ೨೦೦೪, ಏಕೀಕರಣ ಒಂದು ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೪

- ಚಂದ್ರಶೇಖರ್ ಎಸ್. ೨೦೦೦, ದಕ್ಷಿಣ ಭಾರತ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ (ಅನು) ಸಿ. ನಾಗಣ್ಣ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೦

- ಚಿದಾನಂದಮೂರ್ತಿ ಎಂ. ೧೯೮೭, ಕರ್ನಾಟಕ ಸಂಸ್ಕೃತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೩

- ದೇವುಡು, ೧೯೩೪ ಕರ್ನಾಟಕ ಸಂಸ್ಕೃತಿ, ೧೯೮೮, ಶಾರದಾ ಪ್ರಕಾಶನ, ಬೆಂಗಳೂರು, ೧೯೮೮

- ನಾಗರಾಜ ಡಿ.ಆರ್. ೧೯೮೭, ಶಕ್ತಿಶಾರದೆಯ ಮೇಳ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೮೭

- ನಾಗರಾಜ ಡಿ.ಆರ್. ೧೯೮೩, ಅಮೃತ ಮತ್ತು ಗರುಡ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೮

- ನಾಗರಾಜ ಡಿ.ಆರ್. ೨೦೦೨, ಸಂಸ್ಕೃತಿ ಕಥನ (ಸಂ.) ಅಗ್ರಹಾರ ಕೃಷ್ಣಮೂರ್ತಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨

- ನಾಯಕ ಜಿ.ಎಚ್. ೧೯೮೮, ನಿಜದನಿ, ಅಕ್ಷರ ಪ್ರಕಾಶನ ಹೆಗ್ಗೋಡು, ೧೯೮೮

- ಫಣಿರಾಜ್ ಕೆ., ೨೦೦೩, ಆಂಟೋನಿಯೊ ಗ್ರಾಮ್ಸಿ, ಅಭಿನವ ಪ್ರಕಾಶನ, ಬೆಂಗಳೂರು, ೨೦೦೩

- ಬರಗೂರು ರಾಮಚಂದ್ರಪ್ಪ, ೨೦೦೧, ಸಂಸ್ಕೃತಿ : ಶ್ರಮ ಮತ್ತು ಸೃಜನಶೀಲತೆ, ಅಂಕಿತ ಪ್ರಕಾಶನ, ಬೆಂಗಳೂರು, ೨೦೦೧

- ಮಲ್ಲೇಪುರಂ ಜಿ. ವೆಂಕಟೇಶ, (ಸಂ.) ೧೯೯೨ ಶಂಬಾ ಕೃತಿ ಸಮೀಕ್ಷೆ ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೯೨

- ಮಲ್ಲೇಪುರಂ ಜಿ. ವೆಂಕಟೇಶ, (ಸಂ.) ೧೯೯೭ ಶಂಬಾ ಜೋಶಿಯವರ ಆಯ್ದ ಲೇಖನಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೭

- ಮಲ್ಲೇಪುರಂ ಜಿ. ವೆಂಕಟೇಶ, ೨೦೦೧. ಶಂಬಾ ಜೋಶಿ ಸಾಹಿತ್ಯ ಅಕಾಡೆಮಿ, ನವದೆಹಲಿ, ೨೦೦೧

- ಮಾಸ್ತಿ, ೧೯೩೧, ಕರ್ನಾಟಕದ ಜನತೆಯ ಸಂಸ್ಕೃತಿ, ಜೀವನ ಕಾರ್ಯಾಲಯ, ಬೆಂಗಳೂರು, ೧೯೭೩

- ಮೂರ್ತಿರಾವ್ ಎ.ಎನ್., ೧೯೭೪, ಬಿ.ಎಂ. ಶ್ರೀಕಂಠಯ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯

- ರವಿಕುಮಾರ್ ನ. (ಸಂ.) ೧೯೯೯, ದೇಶೀದರ್ಶನಗಳು, ಅಭಿನವ, ಬೆಂಗಳೂರು, ೧೯೯೯

- ರಹಮತ್ ತರೀಕೆರೆ, ೧೯೯೬, ಮರದೊಳಗಣ ಕಿಚ್ಚು, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೬

- ರಹಮತ್ ತರೀಕೆರೆ, (ಸಂ.) ೨೦೦೪, ಕನ್ನಡ ಮಾತು ತಲೆ ಎತ್ತುವ ಬಗೆ, ಕನ್ನಡ ಸಾಹಿತ್ಯ ಮೀಮಾಂಸೆ ಸಂಪುಟ ೧, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

- ರಹಮತ್ ತರೀಕೆರೆ, ೨೦೦೪, ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೨೦೦೪
- ರಹಮತ್ ತರೀಕೆರೆ, ೨೦೦೭, ಕನ್ನಡ ಸಂಶೋಧನೆ ತಾತ್ವಿಕ ವಿಚಾರ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೭

- ರಹಮತ್ ತರೀಕೆರೆ, ೨೦೦೭. ಇಂಗ್ಲಿಷ್ ಗೀತೆಗಳು : ಸಾಂಸ್ಕೃತಿಕ ಮುಖಾಮುಖಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

- ರಾಘವೇಂದ್ರ ರಾವ್ ಕೆ. ೨೦೦೫, ಕರ್ನಾಟಕ ಏಕೀಕರಣದ ನಾಲ್ವರು ಚಿಂತಕರು, (ಅನು) ಆರ್ಯ, ಮನೋಹರ ಗ್ರಂಥಮಾಲಾ ಧಾರವಾಡ, ೨೦೦೫

- ರಾಜಾರಾಮ ಹೆಗಡೆ, (ಸಂ.) ೨೦೦೪, ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪

- ವೆಂಕಟೇಶ ಸಾಂಗಲಿ, ೧೯೭೦, ಆಲೂರ ವೆಂಕಟರಾಯರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯

- ಶಿವರುದ್ರಪ್ಪ ಜಿ.ಎಸ್. (ಸಂ.) ೧೯೮೫, ಶ್ರೀನಿಧಿ, ಬಿ.ಎಂ.ಶ್ರೀ. ಜನ್ಮ ಶತಮಾನೋತ್ಸವ ನೆನಪಿನ ಸಂಪುಟ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೮೫

- ಶಿವರುದ್ರಪ್ಪ ಜಿ.ಎಸ್.,(ಸಂ.) ೧೯೮೮, ರಾಷ್ಟ್ರೀಯತೆ ಮತ್ತು ಆಧುನಿಕ ಕನ್ನಡ ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೮

- ಶ್ರೀನಿವಾಸ ಮೂರ್ತಿ ಕಾ.ವೆಂ. (ಸಂ.)೧೯೮೮, ಕನ್ನಡ ಸಾಹಿತ್ಯ ಮತ್ತು ಕರ್ನಾಟಕತ್ವ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೮

- ಶ್ರೀನಿವಾಸ ಮೂರ್ತಿ ಕಾ.ವೆಂ. ೨೦೦೦, ಕನ್ನಡ ಪರ ಚಿಂತನೆ ಮತ್ತು ಪರಂಪರೆ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೦

- ಸರಸ್ವತಿ ಎಂ. ವಸಂತ ಕುಮಾರ್ ಆರ್. (ಸಂ.) ೨೦೦೫, ಸಂಸ್ಕೃತಿ ಚಿಂತನೆ, ಶ್ರೀ ಭಗವಾನ್ ಮಹಾವೀರಜೈನ್ ಕಾಲೇಜು, ಬೆಂಗಳೂರು, ೨೦೦೫

- ಸುಬ್ಬಣ್ಣ ಕೆ.ವಿ. ೨೦೦೦, ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೦

- ಹರ್ಡೇಕರ ಮಂಜಪ್ಪ ೧೯೨೧, ಭಾರತೀಯರ ದೇಶಭಕ್ತಿ (ಸಂ.) ಗ.ಸ. ಹಾಲಪ್ಪ, ಮಂಜಪ್ಪನವರ ಸಮಗ್ರ ಕೃತಿಗಳ ಸಂಗ್ರಹ, ಹರ್ಡೇಕರ ಮಂಜಪ್ಪ ಸ್ಮಾರಕ ಗ್ರಂಥಮಾಲೆ, ಧಾರವಾಡ, ೧೯೬೬

## ೩. ಲೇಖನಗಳು

- ಚಿದಾನಂದಮೂರ್ತಿ ಎಂ. ೨೦೦೪ ನಾಲ್ಕನೆಯ ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಭಾಷಣ, (ಚಿಕ್ಕಮಗಳೂರು ೧೨ -೧೪ ಏಪ್ರಿಲ್ ೧೯೯೬) (ಸಂ.) ಚಿದಾನಂದ ಸಮಗ್ರ ಸಂಪುಟ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೪

- ಜೋಶಿ ಶಂಬಾ ೧೯೯೭, ಹಿಂದೂ ಮುಸಲ್ಮಾನರ ತೊಡಕು (೧೯೨೭) (ಸಂ.)ಮಲ್ಲೇಪುರಂ ಜಿ. ವೆಂಕಟೇಶ, ಶಂಬಾ ಜೋಶಿಯವರ ಆಯ್ದ ಲೇಖನಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೭

- ಜೋಶಿ ಶಂಬಾ ೧೯೯೭, ಹಿಂದೂ ಎಂಬ ಸಮಾಜ ಇದೆಯೇ? ಆಗಬೇಕೆ?(೧೯೪೭)(ಸಂ.)ಮಲ್ಲೇಪುರಂ ಜಿ. ವೆಂಕಟೇಶ, ಶಂಬಾ ಜೋಶಿಯವರ ಆಯ್ದ ಲೇಖನಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೭

- ನಾಗರಾಜ ಡಿ.ಆರ್. ೧೯೯೬, ರಾಷ್ಟ್ರೀಯತೆಯ ಪರಿಕಲ್ಪನೆ ಕೆಲವು ಟಿಪ್ಪಣಿಗಳು (೧೯೮೮) (ಸಂ.) ಸಾಹಿತ್ಯ ಕಥನ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೬

- ನಾಗರಾಜ ಡಿ.ಆರ್. ೧೯೯೬, ಕನ್ನಡ ರಾಷ್ಟ್ರೀಯತೆಯ ಸ್ವರೂಪ (೧೯೯೨) (ಸಂ.) ಸಾಹಿತ್ಯ ಕಥನ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೬

- ನಾಗರಾಜ ಡಿ.ಆರ್. ೨೦೦೨, ಮಣ್ಣಿನ ಪವಿತ್ರೀಕರಣ, (೧೯೯೩) ಸಂಸ್ಕೃತಿ ಕಥನ (ಸಂ.) ಅಗ್ರಹಾರ ಕೃಷ್ಣಮೂರ್ತಿ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨

- ನಾಗರಾಜ ಡಿ.ಆರ್. ೨೦೦೨, ಆತಂಕಿತ ಹಿಂದೂ ಮತ್ತು ಕುಪಿತ ರೈತ (೧೯೯೯) ಸಂಸ್ಕೃತಿ ಕಥನ (ಸಂ.) ಅಗ್ರಹಾರ ಕೃಷ್ಣಮೂರ್ತಿ, ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨

- ನಾಯಕ ಜಿ. ಎಚ್. ೧೯೮೮, ಬಿ.ಎಂ.ಶ್ರೀ ಕಾವ್ಯ (ಸಂ.) ನಿಜದನಿ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೮೮

- ವಿನಯಲಾಲ್ ಮತ್ತು ಆಶೀಶ್ ನಂದಿ (ಸಂ.)೨೦೦೭,ಭೂಪಟಗಳು, ಹೊಸಶತಮಾನಕ್ಕೆ ಹೊಸ ಪರಿಭಾಷೆಗಳು ಶಂಕರನ್ ಕೃಷ್ಣ (ಅನು) ಜಸವಂತ್ ಜಾಧವ್, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೭

- ಶಿವರಾಮಕಾರಂತ, ೧೯೯೫, ಆಧುನಿಕ ರಾಷ್ಟ್ರಗಳ ಸಾಂಸ್ಕೃತಿಕ ಸಮಸ್ಯೆ (೧೯೮೬) ಶಿವರಾಮಕಾರಂತರ ಲೇಖನಗಳು ಸಂಪುಟ-೬ (ಸಂ.) ಮಾಲಿನಿ ಮಲ್ಯ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ, ಮಂಗಳೂರು, ೧೯೯೫

## ೨. ಇಂಗ್ಲಿಷ್ ಕೃತಿಗಳು


- Anderson, Benedict, 1983, Imagined communities, Verso, London, 1991

- Chatterjee, Abhas, 1972, The concept of Hindu nation, Voice of India, New Delhi , 2003

- Choudhary C. Nirad, 1951, The Auto biography of an unknown Indian, Jaico publishing house, Bombay, 1951

- Delanty G., Mohony.O. Patrick, 2002, Nationalism and social theory, Sage Publications, New Delhi, 2002

- Fishman A. Joshua, 1972, Language and nationalism, Two Integrated essays, New bury house publishers, Massachusetts, 1972

- Ghosh, Sunithi Kumar, 1995, India and the Raj, R.U.P.E. Bombay, 1995

- Lenin V.I., 1986, On national liberation and social emancipation, Progress publishers, 1986

- Loomba, Ania, 1998, Colonialism/ Post Colonialism, Routledge Publications, London, 1998

- R.U.P.E. 1988, Indian national congress How Indian How national ? R U P E Bombay, 1988

- Stalin J.V., 1972, Marxism and problems of linguistics, Foreign languages press, Peking, 1972

- Tagore, Rabindranath, 1917, Nationalism, Rupa publications, New Delhi, 2002

- Vijay Poonacha Thambanda 2003, Journal of Karnataka Studies, (No-1, November -2003 April - 2004 ) Kannada University, Hampi, 2003

- Williams, Raymond, 1976, From Key words, Fontana press, London, 1976

ಅನುಬಂಧ - ೧. ಮಲ್ಲೇಪುರಂ ಜಿ. ವೆಂಕಟೇಶ ಇವರು ಸಂಪಾದಿಸಿದ ಶಂಬಾ ಕೃತಿ ಸಂಪುಟ ೧ರಲ್ಲಿನ, ಮಹಾರಾಷ್ಟ್ರದ ಮೂಲ ಅಥವಾ ಮೂಲ - ಮಹಾರಾಷ್ಟ್ರ ಎಂಬ ಕೃತಿಯಲ್ಲಿ ಪುಟ ೬೪ ರಲ್ಲಿ ಈ ನಕ್ಷೆಯಿದೆ.



ಅನುಬಂಧ - ೨. ಡಾ. ಎಚ್.ಎಸ್. ಗೋಪಾಲರಾವ್ ಇವರ ಕರ್ನಾಟಕ ಏಕೀಕರಣ ಇತಿಹಾಸ ಎಂಬ ಕೃತಿಯ ಪುಟ ಸಂಖ್ಯೆ ೪೦೨ ರಿಂದ ೪೦೭ರವರೆಗಿನ ನಕ್ಷೆಗಳಿವು. ಈ ನಕ್ಷೆಗಳಿಗೆ ಇವತ್ತಿನ ಸಂದರ್ಭದಲ್ಲಿ ಐತಿಹಾಸಿಕ, ಸಾಂಸ್ಕೃತಿಕ, ರಾಜಕೀಯ ಮಹತ್ವವಿದೆ ಎಂಬ ಕಾರಣಕ್ಕಾಗಿ ಬಳಸಿಕೊಳ್ಳಲಾಗಿದೆ.



ಅನುಬಂಧ - ೨. ಡಾ. ಎಚ್.ಎಸ್. ಗೋಪಾಲರಾವ್ ಇವರ ಕರ್ನಾಟಕ ಏಕೀಕರಣ ಇತಿಹಾಸ ಎಂಬ ಕೃತಿಯ ಪುಟ ಸಂಖ್ಯೆ ೪೦೩ರ ನಕ್ಷೆ



ಅನುಬಂಧ - ೨. ಡಾ. ಎಚ್.ಎಸ್. ಗೋಪಾಲರಾವ್ ಇವರ ಕರ್ನಾಟಕ ಏಕೀಕರಣ ಇತಿಹಾಸ ಎಂಬ ಕೃತಿಯ ಪುಟ ಸಂಖ್ಯೆ ೪೦೪ರ ನಕ್ಷೆ



ಅನುಬಂಧ - ೨. ಡಾ. ಎಚ್.ಎಸ್. ಗೋಪಾಲರಾವ್ ಇವರ ಕರ್ನಾಟಕ ಏಕೀಕರಣ ಇತಿಹಾಸ ಎಂಬ ಕೃತಿಯ ಪುಟ ಸಂಖ್ಯೆ ೪೦೫ರ ನಕ್ಷೆ

# ಹಿರಿಯರು ನಿರೀಕ್ಷಿಸಿದ ಕರ್ನಾಟಕ



ಅನುಬಂಧ - ೨. ಡಾ. ಎಚ್.ಎಸ್. ಗೋಪಾಲರಾವ್ ಇವರ ಕರ್ನಾಟಕ ಏಕೀಕರಣ ಇತಿಹಾಸ ಎಂಬ ಕೃತಿಯ ಪುಟ ಸಂಖ್ಯೆ ೪೦೬ರ ನಕ್ಷೆ



